# ಅವರವರ ಭಕುತಿಗೆ

ಪ್ರಧಾನ ಸಂಪಾದಕರು:
ನಳಿನಿ ಮೈಯ
ಸಹ ಸಂಪಾದಕರು:
ಸುಮತಿ ಮುದ್ದೇನಹಳ್ಳಿ
ಕಾವ್ಯಾ ನಾಗರಕಟ್ಟೆ



ಕನ್ನಡ ಸಾಹಿತ್ಯ ರಂಗ,
ನ್ಯೂ ಜೆರ್ಸಿ

## ನಳಿನಿ ಮೈಯ

ಶ್ರೀಮತಿ ನಳಿನಿ ಮೈಯ ಅವರು ಡೇರಿಯನ್, ಇಲಿನಾಯ್‌ನಲ್ಲಿ ಪತಿ ಸುಬ್ರಾಯ ಮೈಯ ಅವರೊಡನೆ ನೆಲೆಸಿದ್ದಾರೆ. ವೃತ್ತಿಯಲ್ಲಿ ಆಕ್ಯುಪೇಶನಲ್ ಥೆರಪಿಸ್ಟ್ ಆಗಿದ್ದವರು. ಈಗ ನಿವೃತ್ತರಾಗಿದ್ದಾರೆ. 'ಮರೀಚಿಕೆ ಮತ್ತು ಇತರ ಕಥೆಗಳು' ಎಂಬ ಕಥಾ ಸಂಕಲನವನ್ನು ಪ್ರಕಟಿಸಿದ್ದಾರೆ. ಶಿಕಾಗೊ ನಗರದ ವಿದ್ಯಾರಣ್ಯ ಕನ್ನಡ ಕೂಟದ ಸಕ್ರಿಯ ಸದಸ್ಯೆ. ಕೂಟದ 'ಸಂಗಮ' ಪತ್ರಿಕೆಯ ಸಂಪಾದಕಿಯಾಗಿದ್ದರು. ಕನ್ನಡ ಸಾಹಿತ್ಯ ರಂಗದ ಅನೇಕ ಪುಸ್ತಕಗಳಿಗೆ ಸಂಪಾದಕ ಸಲಹಾ ಮಂಡಳಿಯಲ್ಲಿದ್ದು ಸೇವೆ ಮಾಡಿದ್ದಾರೆ. 'ಕಾರಂತ ಚಿಂತನ' ಮತ್ತು 'ಬೇಂದ್ರೆ ಅಂದ್ರೆ' ಪುಸ್ತಕಗಳಿಗೆ ಮಾನ್ಯ ನಾಗ ಐತಾಳರ ಜೊತೆ ಸಹಸಂಪಾದಕಿಯಾಗಿದ್ದರು. ಕನ್ನಡ ಸಾಹಿತ್ಯ ರಂಗದ ಕಾರ್ಯಕಾರಿ ಸಮಿತಿಯ ಉಪಾಧ್ಯಕ್ಷರಾಗಿದ್ದಾರೆ. ಕನ್ನಡ ಸಾಹಿತ್ಯ ರಂಗದ ಎಂಟನೆಯ ಪ್ರಕಟಣೆ 'ಅವರವರ ಭಕುತಿಗೆ' ಗ್ರಂಥದ ಮುಖ್ಯ ಸಂಪಾದಕಿಯಾಗಿದ್ದಾರೆ.

## ಸುಮತಿ ಮುದ್ದೇನಹಳ್ಳಿ

ಒಹಾಯೋ ರಾಜ್ಯದಲ್ಲಿ ವಾಸ. ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ, ಮಾನಸಿಕ ಆರೋಗ್ಯ ಚಿಕಿತ್ಸೆಯಲ್ಲಿ ಇನ್ನೊಂದು ಸ್ನಾತಕೋತ್ತರದ ವ್ಯಾಸಂಗ ನಡೆಯುತ್ತಿದೆ. ಮಯೂರ, ಪ್ರಜಾವಾಣಿ, ವಿಜಯಕರ್ನಾಟಕದಲ್ಲಿ ಅನುವಾದಗಳು, ವಿಚಾರಗಳು ಪ್ರಕಟಣೆಯಾಗಿವೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕುವೆಂಪು ಭಾಷಾ ಭಾರತಿ ಪ್ರಾಧಿಕಾರಕ್ಕೆ ಕೆಲವು ಕನ್ನಡ ಕವನಗಳನ್ನು ಇಂಗ್ಲಿಷಿಗೆ ಅನುವಾದಿಸಿದ್ದಾರೆ. 'Her Poems' ಎಂಬ ಹೆಸರಿನ ಪ್ರಾಧಿಕಾರದ ಸಂಕಲನದಲ್ಲಿ ಈ ಭಾಷಾಂತರಗಳು ಅಚ್ಚಾಗಿವೆ. ಸದರಿ ಸಂಸ್ಥೆಗೆ, ಪೂರ್ಣಚಂದ್ರ ತೇಜಸ್ವಿಯವರ ಮೂರು ಪ್ರಬಂಧಗಳನ್ನು ಕನ್ನಡದಿಂದ ಇಂಗ್ಲಿಷಿಗೆ ಅನುವಾದಿಸಿದ್ದಾರೆ– ಈ ಪ್ರಬಂಧಗಳು: ಜನತಾದಳ ನಾಶವಾಗಿದ್ದೇಕೆ; ನಮಸ್ಕಾರ – ಈ ಟಿವಿ ಮತ್ತು ತೇಜಸ್ವಿ ಕಂಡಂತೆ ಜಾಗತೀಕರಣ.

## ಕಾವ್ಯಾ ನಾಗರಕಟ್ಟೆ

೧೯೮೮ರಲ್ಲಿ ಜನನ. ಬಿಎಸ್ಸಿ ನಂತರ ಕರ್ನಾಟಕ ವಿವಿಯಿಂದ ಆರು ಚಿನ್ನದ ಪದಕಗಳೊಂದಿಗೆ ಪತ್ರಿಕೋದ್ಯಮ ಎಂ.ಎ ಪದವಿ. ಸದ್ಯಪತಿಯೊಡನೆ ಅಮೆರಿಕಾದ ನ್ಯೂಜೆರ್ಸಿಯಲ್ಲಿ ವಾಸ. **ಮೊದಲ ಕವನಸಂಕಲನ 'ಧ್ಯಾನಕ್ಕೆ ತಾರೀಖಿನ ಹಂಗಿಲ್ಲ'ಕ್ಕೆ ೨೦೧೪ರ ಕೇಂದ್ರ ಸಾಹಿತ್ಯ ಅಕಾಡಮಿಯ 'ಯುವ ಪುರಸ್ಕಾರ', ಯುವ ಬರಹಗಾರರಿಗೆ ನೀಡುವ ೨೦೧೨ರ ಟೋಟೋ ಪುರಸ್ಕಾರ, ಕ್ರೈಸ್ಟ್** ಕಾಲೇಜು ಡಾ. ಬೆಂದ್ರೆ ಕವನ ಸ್ಪರ್ಧೆಯಲ್ಲಿ ಆರು ವರ್ಷ ಹಾಗೂ ಸಂಚಯದಲ್ಲಿ ಮೂರು ಬಾರಿ ಕಾವ್ಯ ಬಹುಮಾನ. ಅಕ್ಕ ಸಮ್ಮೇಳನ ೨೦೧೪ ಕಥಾಸ್ಪರ್ಧೆಯಲ್ಲಿ ಪ್ರಥಮ. ಬಳ್ಳಾರಿಯ ರಂಗತೋರಣ ವಿದ್ಯಾರ್ಥಿ ನಾಟಕೋತ್ಸವದಲ್ಲಿ ರಂಗ ಬಹುಮಾನ, ದೆಹಲಿಯಲ್ಲಿ ನಡೆದ ಆಲ್ ಇಂಡಿಯಾ ಯಂಗ್ ರೈಟರ್ಸ್ ಮೀಟ್‌ನಲ್ಲಿ 'ಇಶ್ಯುಸ್ ಆಫ್ ನ್ಯೂ ಫಿಕ್ಷನ್' ಪ್ರಬಂಧ ಮಂಡನೆ.

'ಪುನರಪಿ' ಮೊದಲ ಕಾದಂಬರಿ. ಈ ಕೃತಿಗೆ ಗುಲ್ಬರ್ಗ ಜಿಲ್ಲೆಯ ಸೇಡಂನ ಅಮ್ಮ ಪ್ರಶಸ್ತಿ, ೨೦೧೫ನೇ ಸಾಲಿನ ಬೇಂದ್ರೆ ಗ್ರಂಥ ಬಹುಮಾನ, ರತ್ನಮ್ಮಹೆಗ್ಗಡೆ ಗ್ರಂಥ ಬಹುಮಾನಗಳು ದೊರೆತಿವೆ. ಇವರ ಎರಡನೆಯ ಕವನಸಂಕಲನ 'ಜೀನ್ಸು ತೊಟ್ಟ ದೇವರು' ಅಚ್ಚಿನಲ್ಲಿದೆ.

# ಅವರವರ ಭಕುತಿಗೆ

## ಭಕ್ತಿ ಕುರಿತ ನುಡಿಚಿಂತನೆಗಳು

ಪ್ರಧಾನ ಸಂಪಾದಕರು

**ನಳಿನಿ ಮೈಯ**

ಸಹ ಸಂಪಾದಕರು

**ಸುಮತಿ ಮುದ್ದೇನಹಳ್ಳಿ**

**ಕಾವ್ಯಾ ನಾಗರಕಟ್ಟೆ**



**ಕನ್ನಡ ಸಾಹಿತ್ಯ ರಂಗ**

ಯು.ಎಸ್.ಎ.

**AVARAVARA BHAKUTIGE** — Edited by Nalini Maiya, Sumati Muddenahalli, Kaavya Kadame Nagarakatte. Published by **Kannada Sahitya Ranga,** USA.

First Impression: 2017 Pages: 416 Price: Rs. 400/- 10 $

Paper Used: 70 GSM N. S. Maplitho

Size: Demy 1/8 Copies: 1000

ಬಳಸಿರುವ ಕಾಗದದ ಗುಣಮಟ್ಟ: ೭೦ ಜಿಎಸ್ಎಂ ಎನ್ಎಸ್ ಮ್ಯಾಪ್‌ಲಿಥೊ

ಪುಸ್ತಕದ ಆಕಾರ: ೧/೮ ಡೆಮಿ (ಅಷ್ಟದಳ)

© ಕನ್ನಡ ಸಾಹಿತ್ಯ ರಂಗ

ಮೊದಲನೆಯ ಮುದ್ರಣ: ೨೦೧೭

ಪುಟಗಳು: ೪೧೬

ಬೆಲೆ: ನಾಲ್ಕು ನೂರು ರೂಪಾಯಿಗಳು

No part of this publication may be reproduced in whole or in part or stored in a retrieval system or transmitted in any form or by any means, electronic, mechanical or photo copying or otherwise without written permission from publisher / author.

**FOR COPIES CONTACT**
**ABHINAVA**
17/18–2, 1st Main, Marenahalli,
Vijayanagara, Bengaluru - 560 040.
Ph: 9448804905, 080-23505825.
email: abhinavaravi@gmail.com

ಪುಟ ವಿನ್ಯಾಸ: ಶ್ರೀಧರ್

ಮುಖಪುಟ ವಿನ್ಯಾಸ : ಗುರುಪ್ರಸಾದ್ ಎಂ. ಆರ್.

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು–೧೮
ದೂರವಾಣಿ: ೨೬೬೧೩೧೨೩, ೨೬೬೧೮೭೫೨

ಶಬ್ದಕೋಶದ ಹಿಂದಿನ ನಿಶ್ಶಬ್ದ ಸ್ಫೂರ್ತಿ
**ಶತಾಯುಷಿ ಡಾ. ಜಿ. ವೆಂಕಟಸುಬ್ಬಯ್ಯ ಅವರಿಗೆ**
ಅಮೆರಿಕಾದ ಕನ್ನಡ ಸಾಹಿತ್ಯ ರಂಗದ ಸಮರ್ಪಣೆ

**ನಳಿನಿ ಮೈಯ**
ಪ್ರಧಾನ ಸಂಪಾದಕರು

**ಮೈ. ಶ್ರೀ. ನಟರಾಜ**
ಕಸಾರಂ ಕಾರ್ಯಕಾರೀ ಸಮಿತಿಯ ಅಧ್ಯಕ್ಷರು

**ನಾಗ ಐತಾಳ**
ಕಸಾರಂ ಆಡಳಿತ ಮಂಡಳಿಯ ಅಧ್ಯಕ್ಷರು
ಮತ್ತು
**ವತ್ಸ ಕುಮಾರ್**
ಪ್ರಾಯೋಜಕರು

# 'ಭಕ್ತಿ' ಎಂಬ ಜೀವರಸ

ಇದೊಂದು ಅಪೂರ್ವ ಸಂದರ್ಭ. ಇಲ್ಲಿ ಪೂರ್ವ-ಪಶ್ಚಿಮ ಸೇರಿದಂತಿದೆ. ಪ್ರಾಚೀನ-ನೂತನ ಸೇರಿದಂತಿದೆ. ಕನಸು ಮತ್ತು ವಾಸ್ತವ ಸೇರಿದಂತಿದೆ. ಆಧುನಿಕ ನಾಗರಿಕತೆಯ ಕೇಂದ್ರವಾದ ಪಶ್ಚಿಮದ ಅಮೆರಿಕೆಯ ಪೂರ್ವಭಾಗದ ಈ ಬೋಸ್ಟನ್ ನಗರದಲ್ಲಿ, ಪೂರ್ವಭಾರತದಲ್ಲಿ ಅರಳಿದ್ದ ಪ್ರಾಚೀನ ನಾಗರಿಕತೆಯೊಂದರ ಜೀವಾಳವಾದ "ಭಕ್ತಿ" ಎಂಬ ಸಂವೇದನೆ ಮತ್ತೆ ನಮ್ಮಲ್ಲಿ ಅರಳಿಕೊಳ್ಳಲನುವಾಗುವಂತೆ ನಾವು ಇಲ್ಲಿ ಸೇರಿದ್ದೇವೆ-ಒಂದೆ ಕುಟುಂಬದ ಮಂದಿಯಂತೆ. ಕನಸು ಮತ್ತು ವಾಸ್ತವ ಸೇರಿದಂತಿದೆ ಎಂದೆ. ಪ್ರಾಚೀನ ಮತ್ತು ನೂತನರನ್ನು ಒಂದುಗೂಡಿಸುವುದು "ವೇದ"ಗಳ ಕನಸಾಗಿತ್ತು ಎಂದರೆ ಆಶ್ಚರ್ಯಪಡಬೇಡಿ. ಮನುಕುಲದ ಅತ್ಯಂತ ಪ್ರಾಚೀನ ವಾಙ್ಮಯವಾದ ಋಗ್ವೇದದ ಮೊದಲ ಋಕ ನಲ್ಲಿ "ಪೂರ್ವಿಕ" ಮತ್ತು "ನೂತನ" ಎಂಬ ಎರಡು ಪದಗಳೂ ಬಂದಿವೆ. "ಅಗ್ನಿ! ಪೂರ್ವೇಭಿಃ ಋಷಿಭಿಃ ಈಡ್ಯಃ ನೂತನೈಃ ಉತ" -ನಮ್ಮ "ಪೂರ್ವಜ"ರಿಂದ ಸ್ತುತ್ಯನಾದ ಅಗ್ನಿ, ಈಗ "ನೂತನ"ರಿಂದಲೂ ಸ್ತುತ್ಯನಾಗುವುದಕ್ಕೆ ಯೋಗ್ಯನಿದ್ದಾನೆ ಎಂಬ ಅದ್ಭುತವಾದ ಆಶಂಸೆ ಇಲ್ಲಿದೆ!

ಯೋಚಿಸಿನೋಡಿ, ಲಭ್ಯವಿರುವ ಅತ್ಯಂತ ಪ್ರಾಚೀನವಾದ ವಾಙ್ಮಯವಿದು-ವೇದ. ಈ ಅರ್ಥದಲ್ಲಿ ಮನುಕುಲದ ಮೊದಲ ಮಾತು. ಮೊದಲ ಆಶಯ. ಈ ಆಶಯ "ಪೂರ್ವಿಕ" ಮತ್ತು "ನೂತನ"ರನ್ನು ಬೆಸೆಯುವ ಆಶಯವಾಗಿದೆ! ಈ ಮಾತಿನ ಮೂಲಕ ಸೃಷ್ಟಿಯೇ ತನ್ನ ಆಶಯವನ್ನು ಪ್ರಕಟಿಸಿಕೊಳ್ಳುತ್ತಿದೆ ಎನ್ನಬಹುದು. "ಸೃಷ್ಟಿ" ಎಂದರೆ ಒಂದು ಬೆಸುಗೆ ಎಂಬ ಆಶಯ!

ಪ್ರಾಚೀನ-ನೂತನ ಎಂಬ ಕಾಲಭೇದಗಳು, ಪೂರ್ವ-ಪಶ್ಚಿಮ ಎಂಬ ದೇಶಭೇದಗಳು, ಬಿಳಿ-ಕಂದು-ಕಪ್ಪು ಎಂಬ ವರ್ಣಭೇದಗಳು, ಗಂಡು-ಹೆಣ್ಣು ಎಂಬ ಲಿಂಗಭೇದಗಳು, ಮಾರ್ಗ-ದೇಸಿ, ಶಾಸ್ತ್ರೀಯ- ಜಾನಪದ ಎಂಬ ಸಾಂಸ್ಕೃತಿಕ ಭೇದಗಳು, ಸಾವಿರಾರು ಭಾಷೆಗಳ ನುಡಿಭೇದ-ನಡೆಭೇದಗಳು, ನಾಮ-ರೂಪಗಳು ಇವೆಲ್ಲವೂ ಒಂದರೊಳಗೊಂದು ಹೆಣೆದುಕೊಂಡಿವೆ; ಬೆಸೆದುಕೊಂಡಿವೆ ಎಂಬ ಮಹಾನ್ ಆಶಯ!

ಇಂಥ ಮಹಾನ್ ಆಶಯವೊಂದು 'ಮಾತಿ'ಗೆ ಅದರಲ್ಲೂ 'ಮೊತ್ತಮೊದಲ ಮಾತಿಗೆ' ಹೊಳೆದದ್ದಾದರೂ ಹೇಗೆ? ನಾಗರಿಕತೆ ಇನ್ನೂ ಬೆಳೆಯದೆ ಇದ್ದಾಗ?

ಇನ್ನೂ ಕಣ್ತೆರೆಯದೆ ಇದ್ದ ಕಾಲದಲ್ಲಿ? ಅಂದರೆ ಮಾತು ಹೊರ ಜಗತ್ತನ್ನು ನೋಡಿ ಹೊರನೋಟದಿಂದ ಇಂಥ ಆಶಯವನ್ನು ತಿಳಿದುಕೊಳ್ಳಲಾಗದ ಕಾಲದಲ್ಲಿ? ಇತಿಹಾಸಪೂರ್ವ ಕಾಲದಲ್ಲಿ?–ಮಾತಿಗೆ ತನ್ನನ್ನು ಕುರಿತ ಒಳನೋಟದಿಂದಲೇ ಈ ಆಶಯ ಹೊಳೆಯಿತು! ತಾನು ಈ ಸೃಷ್ಟಿಯೊಳಗಣ 'ಅನುಸೃಷ್ಟಿ' ಎಂದು ಹೊಳೆಯುವುದಕ್ಕೆ, ತಾನು ಈ ಸೃಷ್ಟಿಯ ಅವಿಭಾಜ್ಯ ಅಂಗ ಎಂದು ಹೊಳೆಯುವುದಕ್ಕೆ ಒಂದೇ ಒಂದು ಒಳನೋಟ, ಮಿಂಚಿನಂಥ ಒಂದು ಹೊಳಹು–ಸಾಕು. ತಾನು ಈ ಸೃಷ್ಟಿಯೊಳಗಣ ಸೃಷ್ಟಿ ಎಂದು ಹೊಳೆದ ಕ್ಷಣದಲ್ಲಿ ಮಾತಿಗೆ ಸೃಷ್ಟಿಯ ಇಂಗಿತವೇನು ಎಂದು ಮನವರಿಕೆಯಾಯಿತೆನ್ನಬಹುದು. ತನ್ನ ಅನುಭವವೇ ತನ್ನ ಮನವರಿಕೆ! ತನ್ನ ಅನುಭವವೆಂದರೆ–ಈ ಸೃಷ್ಟಿಯ ಜೊತೆ ತಾನು ಬೆಸೆದುಕೊಂಡಿದ್ದೇನೆ ಎನ್ನುವುದು ತನ್ನ ಅನುಭವ–ಮಾತಿಗೆ. ಈ ಅನುಭವವೇ, ಅದು ಸೃಷ್ಟಿಯ ಎಲ್ಲೆಡೆಯೂ ತಾನು ಮನವರಿಕೆ ಮಾಡಿಕೊಂಡ ಸತ್ಯ!

ಈ ಅರ್ಥದಲ್ಲೇ, ಪೌರಾಣಿಕವಾಗಿ, ಸೃಷ್ಟಿಕರ್ತನನ್ನು ಬ್ರಹ್ಮ ಎಂದು ಕರೆಯುವರು. ಮಾತಿನ ಮತ್ತು ಸಕಲ ಕಲೆಗಳ ಅಧಿದೇವತೆಯನ್ನು "ಸರಸ್ವತಿ" ಎಂದು ಕರೆದು ಸರಸ್ವತಿಯು ಬ್ರಹ್ಮನ ಮಡದಿ–ಮನೆಯಾಕೆ ಎಂದು ಕರೆಯುವರು. ಬ್ರಹ್ಮನ ಇಂಗಿತವನ್ನು ಸರಸ್ವತಿಯು ಪ್ರಕಟಿಸುವಳು–ಅದಕ್ಕಾಗಿಯೇ ಸರಸ್ವತಿ ಸೃಷ್ಟಿಯಾದುದು ಎನ್ನುವರು. ಮಾತಿಗೆ ತನ್ನ ಅರಿವು ಬಂದಕ್ಷಣದಲ್ಲಿ ಅದು ಸೃಷ್ಟಿಯ ಅರಿವನ್ನೇ ಪ್ರಕಟಿಸುವುದು. ತನ್ನ ಅರಿವು ಬಂದ ಕ್ಷಣ ಮಾತಿಗೆ ಹೊಸ ಹುಟ್ಟು! ಹೊಸ ಹುಟ್ಟೆಂದರೆ ಅದು ಶಿಶಿರ ಕಳೆದು ನವವಸಂತದ ಉದಯ!

ಅಮೆರಿಕೆಯಲ್ಲಿರುವ ಕನ್ನಡ ಸಾಹಿತ್ಯರಂಗದ ಅಧ್ಯಕ್ಷರಾದಿಯಾಗಿ ನನ್ನ ಹಿರಿ–ಕಿರಿಯ ಸ್ನೇಹಿತರು, ವಸಂತ ಸಾಹಿತ್ಯೋತ್ಸವವನ್ನು ಆಚರಿಸುತ್ತಿದ್ದೀರಿ. ಆಚರಿಸುತ್ತಿದ್ದೇವೆ. ಸಾಹಿತ್ಯವೆಂದರೆ 'ಮಾತು'. ವಸಂತವೆಂದರೆ ಹೊಸ ಚಿಗುರು. ಹೊಸ ಟಿಸಿಲು. ಹೊಸ ಜೀವ. 'ಕಸಾರಂ' (ಕನ್ನಡ ಸಾಹಿತ್ಯರಂಗ) ಎಂಬುದನ್ನು "ಕಾಸಾರಂ" ಎಂದು ಓದಿಕೊಳ್ಳುವುದು ನನಗೆ ಇಷ್ಟ. 'ಕಾಸಾರ' ಎಂದರೆ ಸರೋವರ. ಹಿಮಕರಗಿದ ಅಚ್ಚ ತಿಳಿನೀರಿನ ಅಚ್ಛೋದ ಸರೋವರ. "ಸರಸಿ" ಎಂದರೂ ಸರೋವರ. ಸರಸವಾದ ಮಾತುಗಳನ್ನಾಡುವ ಜೀವ ಎಂದೂ ಅರ್ಥ! ಮಾತಿಗೆ ರಸ ಒದಗುವುದು ಮಾತು "ತಿಳಿ"ಯಾದಾಗ. ಪಾರದರ್ಶಕವಾದಾಗ. ತನ್ನೊಳಗನ್ನು ಪ್ರತಿಫಲಿಸುವಾಗ. ತನ್ನೊಳಗನ್ನು ತೆರೆದಿಟ್ಟಾಗ. ಪ್ರತಿಫಲನವು ಬೆಳಕಿನ ಸಹಜಸ್ವಭಾವವಾಗಿದೆ. ಮಾತೆನ್ನುವುದು ಬೆಳಕೂ ಆಗಿದೆ. ಆದುದರಿಂದಲೇ ಮಾತು "ಸ್ಫಟಿಕದ ಶಲಾಕೆ" ಯಂತಿರಬೇಕು ಎನ್ನುವರು ಬಸವಣ್ಣ. "ಜ್ಯೋತಿರ್ಲಿಂಗ" ಎನ್ನುವರು ಮಾತನ್ನು ಅಲ್ಲಮಪ್ರಭು. "ವಚನ ರಚನೋದ್ಧಾರೆ" ಎಂದು ಸರಸ್ವತಿಯನ್ನು ಬಣ್ಣಿಸುವನು ಕುಮಾರವ್ಯಾಸ. ತನ್ನ ರಚನೆಯ

ಅರಿವು ಪಡೆದ ಮಾತು ತಾನು ಉದ್ಧಾರವಾಗಿ ಕೇಳುಗರನ್ನೂ ಉದ್ಧರಿಸಬಲ್ಲುದು-ಎನ್ನುವುದು ಈ ಬಣ್ಣನೆಯ ಅರ್ಥ. ಇಂಥ ಸರಸ್ವತಿಯನ್ನು "ಸರ್ವಶುಕ್ಲಾ ಸರಸ್ವತೀ" ಎನ್ನುವರು. ಸರಸ್ವತಿ ಮೈಯೆಲ್ಲ-ಬೆಳಕಿನ ಮೈ ಎಂದಂತೆ. ಅಷ್ಟೇಕೆ? ವೇದದಲ್ಲಿ "ಅಗ್ನಿ" ಎಂದಾಗ, ಅದು ಅರಣಿಮಥನ ಮಾಡಿ ಪಡೆದ ಕಿಡಿ ಹೊತ್ತಿ ತಮ್ಮೆದುರು ಉರಿಯುತ್ತಿರುವ "ಬೆಂಕಿ" ಮಾತ್ರವಲ್ಲ, "ಅಗ್ನಿ" ಎಂದರೆ ಮಾತೂ ಹೌದು! "ವಾಗಗ್ನಿ:" ಎಂದರು. "ಅಗ್ನಿರ್ವಾಗ್ ಭೂತ್ವಾ ಮುಖಂ ಪ್ರಾವಿಶತ್" ಅಗ್ನಿಯೇ "ವಾಕ್" ಆಗಿ ವಿರಾಟ್ ಪುರುಷನ ಮುಖದಲ್ಲಿ ನೆಲೆಯಾಯಿತು-ಎಂದರು. ಅಗ್ನಿ ಎಂದರೆ ಬೆಳಕಲ್ಲವೆ? "ಮಾತು" ಕೂಡಾ ಬೆಳಕೇ. ಅಗ್ನಿಯು ನಾವೆರೆದ ಹವಿಸ್ಸನ್ನು ದೇವತೆಗಳಿಗೆ ಒಯ್ದು ಮುಟ್ಟಿಸಬಲ್ಲನೆಂದರು. 'ಹವ್ಯವಾಹನ'ನೆಂದು ಅಗ್ನಿಯನ್ನು ಕರೆದರು. ಹೀಗೆ ಕರೆದಾಗ, ಮನುಷ್ಯರ ಮಾತು ದೇವತೆಗಳನ್ನು ಮುಟ್ಟಬಲ್ಲುದು ಎನ್ನುವ ಒಳನೋಟದ ಅರ್ಥವನ್ನು ಸೂಚಿಸಿದರು. ಹೀಗೆ ಸೂಚಿಸುವಾಗ, ಮಾತು, ಮನುಷ್ಯರನ್ನೂ ದೇವತೆಗಳನ್ನೂ ಬೆಸೆಯಬಲ್ಲುದು ಎಂಬ ಅಪೂರ್ವ ಗ್ರಹಿಕೆಯನ್ನು ಮಂಡಿಸಿದರು! ಈ ಹಿನ್ನೆಲೆಯಲ್ಲಿ 'ಪೂರ್ವಿಕ' ಮತ್ತು 'ನೂತನ' ಎಂಬ ಪದಗಳನ್ನು ನೋಡಿದರೆ, ಪೂರ್ವಿಕರೆಂದರೆ ದೇವತೆಗಳು ನೂತನರೆಂದರೆ ಮನುಷ್ಯರು ಎಂಬ ಹೊಸ ಅರ್ಥ ಹೊಳೆಯುವುದು. ಮನುಷ್ಯರೆಲ್ಲರೂ ನೂತನರು. ದೇವತೆಗಳೆಲ್ಲರೂ ಪೂರ್ವಿಕರು. ದೇವತೆಗಳನ್ನು ಮನುಷ್ಯರನ್ನೂ ಬೆಸೆಯಬೇಕೆಂದಿರುವ ಮಾತು, ನೂತನರಾದ ಮನುಷ್ಯ ಸಮುದಾಯ-ವನ್ನು ಬೆಸೆಯುವುದಿಲ್ಲವೆ? ವೇದವೆಂದರೆ ಹಳೆಯ ಮಾತು! "ಪಳ ನುಡಿ" ಎಂದೇ ವೇದಕ್ಕೆ ಹಳೆಗನ್ನಡದಲ್ಲಿ ಕರೆದಿದ್ದಾರೆ. ಇಂಥ ವೇದಕ್ಕೆ, ತಾನು 'ನೂತನ'ವಾಗಿ ನೂತನರಾದ ಮನುಷ್ಯರನ್ನು ಮುಟ್ಟುವ ಹಂಬಲ! ಯಾವುದೋ ಒಂದು ದಿನ-ತನ್ನೊಳಗಿನ ವಸಂತೋದಯದ ದಿನ ಪುಲಕಿತಗೊಂಡು ವೇದ ಈ ಮಾತನ್ನು ನುಡಿದಿರಬೇಕು!

ಮಾತು "ತಿಳಿ"ಯಾದಾಗ ಅಲ್ಲಿ ಬೆಳಕಿನ ಚಮತ್ಕಾರಗಳು ನಡೆಯುವವು. "ತಿಳಿ"ಎಂದಾಗ ಸ್ವಚ್ಛವೂ ಹೌದು. "ತಿಳುವಳಿಕೆ"ಯೂ ಹೌದು. ಇವೆರಡೂ ಪರಸ್ಪರ ಬೆಸೆದುಕೊಂಡಿರುವ ಅವಸ್ಥೆಗಳು. ಮಾತು-ತಿಳಿಯಾಗದೆ ಮನಸ್ಸು ತಿಳಿಯಾಗದು. ಮನಸ್ಸು ತಿಳಿಯಾಗದೆ ಅಲ್ಲಿ ಹೊಸ ಹೊಳಹು ಹೊಳೆಯದು. ತಿಳುವಳಿಕೆ ಎಂದರೆ ಹೊಳಹು. ಈಟಛು ಒಳನೋಟದಿಂದ ಪಡೆಯುವ ಅರಿವು. ಬರಿಯ ಸಿದ್ಧ ಮಾಹಿತಿಗಳಲ್ಲ. ರಾಗ-ದ್ವೇಷಗಳ ಸಮರ್ಥನೆಗಳಲ್ಲ. 'ಹೊಳಹು' ಎನ್ನುವುದು ವಸಂತಾಗಮನದಂತೆ! ಅದೊಂದು ಜೀವದಾಯಕವಾದ ಉಲ್ಲಾಸದ ಚಿಗುರು!

ಈ 'ಬಾಸ್ಟನ್' ನಗರದಲ್ಲಿ ವಸಂತ ಸಾಹಿತ್ಯೋತ್ಸವವನ್ನು ತಾವು ನಡೆಯಿಸುತ್ತಿದ್ದೀರಿ. ಬಾಸ್ಟನ್, ವಿಖ್ಯಾತ ಕವಿ; ಅನುಭಾವಿ; ಕ್ರಾಂತಿಕಾರಿ ಖಲೀಲ್ ಗಿಬ್ರಾನ್ ನೆಲೆಸಿದ್ದ ನಗರ ಎಂದು ನೆನಪು ಮಾಡಿಕೊಳ್ಳುವುದು ನನಗೆ ತುಂಬ ಸಂತೋಷ. ನೂರ ಇಪ್ಪತ್ತು

ವರ್ಷಗಳಿಗೂ ಹಿಂದೆ ಗಿಬ್ರಾನ್, ಕೆಲವು ವರ್ಷಗಳ ಕಾಲ ಇಲ್ಲಿದ್ದ. ಅದೊಂದು ಬಗೆಯ ಅನಿರ್ವಚನೀಯ ಉದ್ವಿಗ್ನತೆಯಲ್ಲಿ ಬದುಕಿದ್ದ ಗಿಬ್ರಾನ್, ತನ್ನ "ಮನುಜಗೀತೆ" ಎಂಬ ಕವಿತೆಯಲ್ಲಿ "ನೆಮ್ಮದಿಯ ನಾಡು ಭಾರತದಿಂದ ನಾನು ವಿವೇಕವನ್ನು ಪಡೆದೆ" ಎಂಬ ಸಾಲುಗಳನ್ನು ಬರೆದಿದ್ದಾನೆ. ಅವನ ಉದ್ವಿಗ್ನತೆಯನ್ನೂ ಅದರ ನಡುವೆಯೇ ಈ ಸಾಲನ್ನೂ ನೆನೆಯುವುದು ನನ್ನೊಳಗನ್ನು ಅರ್ಥಪೂರ್ಣವಾಗಿಸಲು ನನಗೆ ಮುಖ್ಯವೆನಿಸುತ್ತದೆ. ಉದ್ವಿಗ್ನ ಗಿಬ್ರಾನ್ ನೂತನ ಮನುಷ್ಯನಾಗಿದ್ದ. ಪೂರ್ವಭಾರತವನ್ನು ನೆನೆಯುತ್ತಿದ್ದ!

ಅಗಲಿಕೆ ಮತ್ತು ಬಿಟ್ಟಗಲಿ ಬಂದುದರ ಉತ್ಕಟ ನೆನವರಿಕೆ–ಮನುಷ್ಯ ಜೀವನದ ಮೂಲಪಾಡಾಗಿದೆ ಎಂದು ಅನಿಸುತ್ತದೆ. ಇದು ಮನುಷ್ಯರಿಗೆ ಮಾತ್ರ ಸೀಮಿತವಲ್ಲದ, ಸಹಜ ನೈಸರ್ಗಿಕ ವಿದ್ಯಮಾನವೂ ಹೌದು. ಹಕ್ಕಿಗಳು ಅನುಕೂಲವಾದ ಪರಿಸರವನ್ನು ಹುಡುಕಿಕೊಂಡು ಕಡಲುಗಳನ್ನು ದಾಟಿ, ಖಂಡಗಳನ್ನು ದಾಟಿ ವಲಸೆ ಹೋಗುತ್ತವೆ. ಹಾಗೆ ವಲಸೆ ಹೋದರೂ ತಾವು ಬಿಟ್ಟು ಬಂದ ಪರಿಸರವನ್ನು ನೆನೆಯುತ್ತಲೇ ಇರುತ್ತವೆ. ಆದುದರಿಂದಲೇ ಮರಳಿ ತಮ್ಮ ಮೂಲನೆಲೆಗೆ ಹಾರಿಹೋಗುತ್ತದೆ. ಹಕ್ಕಿಗಳ ಮನದಾಳದಲ್ಲಿ, ಅವುಗಳ ಅಸಂಖ್ಯ ಜೀವಕೋಶಗಳಲ್ಲಿ ಈ ಮೂಲಸ್ಮೃತಿ ಹುದುಗಿರುತ್ತದೆ. ಇದನ್ನೊಪ್ಪಿದರೆ ಈ ಹಕ್ಕಿಗಳು ದೈಹಿಕವಾಗಿ ಮಾತ್ರ ತಮ್ಮ ಮೂಲ ಪರಿಸರವನ್ನು ಅಗಲಿ ಬಂದಿವೆ; ಅಷ್ಟೆ. ತಮ್ಮ ಒಳಮನದಲ್ಲಿ ಅವು ಎಂದೂ ತಮ್ಮ ಮೂಲನೆಲೆಯನ್ನು ಅಗಲಿರಲಿಲ್ಲ–ಎಂದು ತಿಳಿಯುತ್ತದೆ. ಇಲ್ಲೊಂದು ಚಮತ್ಕಾರವಿದೆ. ಅಗಲದೆ–ದೈಹಿಕವಾಗಿ ಅಗಲದೆ– ನೆನೆಯುವುದು ಸಾಧ್ಯವಿಲ್ಲ. ನೆನೆಯದೆ ಮರಳುವುದು ಸಾಧ್ಯವಿಲ್ಲ. ನೆನೆಯದೆ ಭಾವ ಜೀವನವಿಲ್ಲ. ನೆನೆಯದೆ ನಮ್ಮ ಭಾವಜೀವನದ ಅರಿವು ನಮಗೇ ಉಂಟಾಗುವುದಿಲ್ಲ! ಅಕ್ಕ ಮಹಾದೇವಿ ತಾನು ತನ್ನ ಚೆನ್ನಮಲ್ಲಿಕಾರ್ಜುನನನ್ನು ನೆನೆವ ಬಗೆಯನ್ನು ಹೀಗೆ ಹೇಳುತ್ತಾಳೆ. "ಹಿಂಡನಗಲಿದ ಸಲಗ ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯಾ ನಿಮ್ಮ" ಎನ್ನುತ್ತಾಳೆ. ಅದ್ಭುತವಾದ ಉಪಮೆ ಇದು. ತನ್ನ ವಿಂಧ್ಯ, ತನ್ನ ಹಿಂಡು, ತಾನು–ಇವೆಲ್ಲ ಅಖಂಡವಾಗಿ ಒಂದಾಗಿತ್ತು. ಅಖಂಡತೆಯ ಆ ಭಾವದಲ್ಲಿ ತಾನು ಬೇರೆ, ತನಗೊಂದು ಬೇರೆಯೇ ಆದ ವ್ಯಕ್ತಿತ್ವವಿದೆ ಎಂಬ ಭಾವನೆಯೇ ಉಂಟಾಗಿರಲಿಲ್ಲ. ಅದೊಂದು ಮುಗ್ಧ ಬಾಲ್ಯವಾಗಿತ್ತು. ಯಾವುದೋ ಕಾರಣದಿಂದ ಹಿಂಡನ್ನು ಆನೆ ಅಗಲಿತು. ಅಗಲಿದ ಆನೆಗೆ ಆ ಅಗಲಿಕೆಯ ಕಾರಣದಿಂದಾಗಿಯೇ ತನ್ನ ಪ್ರತ್ಯೇಕವಾದ ವ್ಯಕ್ತಿತ್ವದ ಅರಿವು, ತಾನು ಒಂಟಿ–ಏಕಾಂಗಿ ಎಂಬ ಅರಿವು, ಈ ಒಂಟಿತನ ಅಸಹಜವಾದದ್ದು; ವಿಲಕ್ಷಣವಾದದ್ದು ಎಂಬ ಅರಿವು, ಅಪಾಯಕಾರಿಯೂ ಆದದ್ದು ಎಂಬ ಅರಿವು– ಇವೆಲ್ಲ ಉಂಟಾಗಿವೆ. ಆಗ ಅಗಲಿಬಂದ ತನ್ನ ವಿಂಧ್ಯದ ನೆನಪು ಉತ್ಕಟವಾಗಿ ಒಳಗಿಂದ ಒತ್ತರಿಸಿ ಬಂದಿದೆ.

ಬದುಕಿನಲ್ಲಿ ಅಗಲುವಿಕೆ ಅನಿವಾರ್ಯವೆನ್ನಬಹುದು. ಅಥವಾ ಬದುಕೆಂದರೇ ಅಗಲಿಕೆ ಎನ್ನಬಹುದು. ಹೊಕ್ಕುಳ ಬಳ್ಳಿ ತುಂಡರಿಸಿ ಮಗು ಬೇರ್ಪಡಲೇಬೇಕು. ಬೇರ್ಪಟ್ಟು ತನ್ನ ಪ್ರತ್ಯೇಕ ಅಸ್ತಿತ್ವವನ್ನೂ ಅದರ ಯಾತನೆಯನ್ನೂ ಅನುಭವಿಸಲೇಬೇಕು. ಯಾತನೆಯ ಕಾರಣದಿಂದಲೇ ಈ ಅನುಭವವು ಸಂದೇಹಾಸ್ಪದವಾಗಿಯೂ ಪ್ರಶ್ನಾರ್ಹವಾಗಿಯೂ, ಜಿಜ್ಞಾಸೆಗೆ ಯೋಗ್ಯವಾಗಿಯೂ ಕಾಣಿಸುವುದು. ಅಗಲಿಕೆಯ ನೋವು ತೀವ್ರವಾದಂತೆ ತಾನು ಯಾವುದರಿಂದ ಅಗಲಿ ಬಂದೆನೋ ಅದರ ನೆನಪೂ ಅಷ್ಟೇ ತೀವ್ರವಾಗಿ ಮೇಲೇಳುವುದು. ಇದೊಂದು ಸೋಜಿಗ! ಅಗಲಿಕೆಯ ನೋವು ಅಗಲಿಬಂದುದರ ನೆನಪನ್ನು ಉದ್ಬುದ್ಧಗೊಳಿಸುವ ಸೋಜಿಗ! ನಮ್ಮೊಳಗೇ ನಡೆಯುವ ಈ ಸೋಜಿಗವನ್ನು "ಭಕ್ತಿ" ಎನ್ನುವೆವು.

ಅಕ್ಕಮಹಾದೇವಿ ತನ್ನ ಅಂತರಂಗದ ಅವಸ್ಥೆಯನ್ನು ಹೇಳಿಕೊಳ್ಳುತ್ತಿದ್ದಾಳೆ. ತನ್ನ ಇಷ್ಟದೈವ ಚೆನ್ನಮಲ್ಲಿಕಾರ್ಜುನನಲ್ಲಿ ತನ್ನೊಳಗನ್ನು ತೋಡಿಕೊಳ್ಳುತ್ತಿದ್ದಾಳೆ. ಚೆನ್ನನ್ನು ನೆನೆದರೆ ಸಾಲದು. ಹೇಗೆ ನೆನೆಯುತ್ತಿದ್ದೇನೆ ಎಂದು ಕೂಡ ಹೇಳಬೇಕು. ನೆನವರಿಕೆಯ ಠಿಡಿoಭಿಜ ಅನ್ನೇ ಅವನ ಮುಂದಿಡಬೇಕು! ಮನೋದೈಹಿಕ ಯಂತ್ರವನ್ನೇ ಅವನಿಗೆ ಮೀಸಲು ಮಾಡಬೇಕು. ನಿನ್ನನ್ನು ನೆನೆಯುತ್ತಿದ್ದೇನೆ ಎಂದು ಹೇಳುತ್ತಲೇ ಅವನನ್ನು ನೆನೆಯಬೇಕು. ಮಾತು-ಮನಸ್ಸು ಒಂದಾದಾಗ ಆ ಮಾತಿಗೆ ಕಾವ್ಯದ ಗುಣ ಒದಗಿ ಬರುವ ಸೋಜಿಗವೊಂದು ಕೂಡ ನಡೆಯುವುದು! ತೋಡಿಕೊಳ್ಳುವ ಮಾತಿಗೆ ಕಾವ್ಯದ ಗುಣ! ಇಷ್ಟದೈವದ ಮುಂದೆ ಆಡುವ ಮಾತಿಗೆ ಕಾವ್ಯದ ಗುಣ! ಲೋಕದ ಮುಂದೆ ಯಾವುದೋ ವ್ಯವಹಾರಕ್ಕಾಗಿ ಆಡುವ ಮಾತಿಗಿಲ್ಲದ ಕಾವ್ಯದ ಗುಣ! "ಭಕ್ತಿ" ಮತ್ತು "ಕಾವ್ಯ"- ಹತ್ತಿರ ಇವೆ!

ಅಕ್ಕ, ಲೋಕದ ಜೊತೆ ಮಾತಾಡುತ್ತಿಲ್ಲ. ನಿಜ. ಆದರೆ ಲೋಕ, ತನ್ನ ಅವಸ್ಥೆಯನ್ನು ತನ್ನ ಇಷ್ಟದೈವಕ್ಕೆ ಮನವರಿಗೆ ಮಾಡಿಕೊಡುವಲ್ಲಿ ಅನುಕೂಲವಾಗಿ ಒದಗಿಬಂದಿದೆ ಅಕ್ಕನಿಗೆ. "ಹಿಂಡನಗಲಿದ ಸಲಗ ತನ್ನ ವಿಂಧ್ಯವ ನೆನೆವಂತೆ"- ಎನ್ನುವುದು ಲೋಕ, ಅಕ್ಕನಿಗೆ ಒದಗಿಸಿದ ಉಪಮಾನವಲ್ಲವೆ? ಅಂದರೆ ತನ್ನ ಒಳಗಿನ ನಿಜ ತನಗೆ ತಿಳಿದಾಗ, ಲೋಕದ ನಿಜವೂ ತಿಳಿದುಬರುವುದು. ಅದುವರೆಗೆ-ತನ್ನ ನಿಜ ತನಗೆ ತಿಳಿಯದವರೆಗೆ- ಲೋಕದ ನಿಜವೂ ತಿಳಿದುಬರುವುದಿಲ್ಲ. ತಿಳಿದುಬಂದಾಗ, ತನ್ನ ಅವಸ್ಥೆಯನ್ನು ಮಾತ್ರ ಅಲ್ಲ, ಲೋಕದ ಆಂತರಿಕ ಅವಸ್ಥೆಯನ್ನೂ ತನ್ನ ಮಾತಿನಿಂದ ತೋಡಿಕೊಂಡಂತೆಯೇ ಆಗುವುದು. ತನ್ನ ಮಾತು, ಲೋಕದ ಪರವಾಗಿ ತಾನು ಆಡುತ್ತಿರುವ ಮಾತೂ ಹೌದು! "ಭಕ್ತಿ", ಲೋಕಕ್ಕೆ ಸ್ಪಂದಿಸುವ ಬಗೆ ಇದು. "ಭಕ್ತಿ"ಗೆ ಲೋಕ ಸ್ಪಂದಿಸುವುದೇನೂ ಅಚ್ಚರಿಯಲ್ಲ!

ನಮ್ಮ ಕನ್ನಡಿಗರಂತೂ "ಭಕ್ತಿ"ಗೆ ಸ್ಪಂದಿಸುವುದು–ಅವರು ಎಲ್ಲಿಯೇ ನೆಲೆಸಿರಲಿ–ಅವರ ನಾಡಿಯ ಮಿಡಿತದಲ್ಲೇ ಇರುವಂಥದು ಎಂದು ನನಗನ್ನಿಸುವುದು. ನಾಡಿಯ ಮಿಡಿತ ಮಾತ್ರವಲ್ಲ, "ಭಕ್ತಿ"ಯು ಕನ್ನಡನಾಡಿನ ಮಿಡಿತವೂ ಹೌದು. "ಭಕ್ತಿ"ಯನ್ನು ಕುರಿತೇ ಇರುವ ಉದ್ಗ್ರಂಥವಾದ "ಭಾಗವತ"ದಲ್ಲಿ ಈ ಬಗೆಗೆ ಒಂದು ಕಥೆಯೇ ಇದೆ. ಕಥೆ ಹೀಗೆ: ನಾರದನೊಮ್ಮೆ ಮರ್ತ್ಯಲೋಕದಲ್ಲಿ ಅಲೆದಾಡುತ್ತಿದ್ದನಂತೆ. ಇದು ಬಹಳ ಒಳ್ಳೆಯ ಲೋಕವೆಂದು ನಾರದನಿಗೆ ಯಾರೋ ಹೇಳಿದ್ದರು. ಆದರೆ ಇಲ್ಲಿಗೆ ಇಳಿದು ಬಂದು ನೋಡಿದರೆ: ಶಾಂತಿಯ ಮಾತೇಕೆ? ಮನಸ್ಸಿಗೆ ಸಂತೋಷವೇ ಇಲ್ಲವಾಗಿದೆ. ಅದೇಕೆಂದರೆ–ಹೊಟ್ಟೆಯ ಪಾಡು; ಅದಕ್ಕಾಗಿ ಏನು ಮಾಡಲೂ ಹೇಸದ ಮಂದಿ! ನಡೆಯೆಲ್ಲ ಕಪಟ! ನುಡಿಯೆಲ್ಲ ತೋರಿಕೆ! ಒಂದು ಮಾತಿನಲ್ಲಿ ಹೇಳುವುದಾದರೆ–ಇಲ್ಲಿ ಎಲ್ಲವೂ ಮಾರಾಟದ ಸಾಮಗ್ರಿಯಾಗಿಬಿಟ್ಟಿದೆ! ಯಾವುದೆಲ್ಲ ಮಾರಲಾಗದೋ ಅದೆಲ್ಲವೂ "ಧರ್ಮ"ವೂ ಇಲ್ಲಿ ಮಾರಾಟದ ಸಾಮಗ್ರಿ! ಇದೇನಪ್ಪ ಕಲಿಯುಗ! ಎಂದುಕೊಂಡು ಚಿಂತಾಕ್ರಾಂತನಾಗಿ ಅಲೆಯುತ್ತಿದ್ದಾಗ ಯಮುನಾನದಿಯ ಬಳಿ ಒಂದು ದೃಶ್ಯ.

ಒಬ್ಬಾಕೆ ತರುಣಿ ನಿರ್ವಿಣ್ಣಳಾಗಿ ಕುಳಿತಿದ್ದಾಳೆ. ಅವಳ ಪಕ್ಕದಲ್ಲಿ ಇಬ್ಬರು ಮುದುಕರು ಪ್ರಜ್ಞೆ ಕಳೆದುಕೊಂಡು ಬಿದ್ದಿದ್ದಾರೆ. ಈ ತರುಣಿಯಾದರೋ ಏನೇನೋ ಉಪಚಾರಗಳನ್ನು ಮಾಡುತ್ತ ಮುದುಕರಿಗೆ ಪ್ರಜ್ಞೆ ಮರುಕಳಿಸುವುದನ್ನು ಕಾಯುತ್ತಿದ್ದಾಳೆ ಆದರೆ ಪ್ರಜ್ಞೆ ಮರುಕಳಿಸುತ್ತಿಲ್ಲ. ತರುಣಿ ಗೋಳಿಡುತ್ತಿದ್ದಾಳೆ. ಸುತ್ತ ಮಂದಿ ನೆರೆದಿದ್ದಾರೆ.

ನಾರದ ತರುಣಿಯ ಬಳಿ ಬಂದ. ಏನಿದೆಲ್ಲ? ನೀನು ಯಾರು? ತರುಣಿ ಹೇಳಿದಳು: ನಾನು "ಭಕ್ತಿ". ಈ ಇಬ್ಬರು ನನ್ನ ಮಕ್ಕಳು. "ಜ್ಞಾನ" ಮತ್ತು "ವೈರಾಗ್ಯ". ನಾವು ಚೆನ್ನಾಗಿಯೇ ಇದ್ದೆವು. ಆದರೆ ಅದೇನೋ ಕಲಿಕಾಲದ ಪ್ರಭಾವ ಇರಬೇಕು. ನಾವು ಮೂವರೂ ಚೈತನ್ಯಗುಂದಿ ಗತಯೌವನರಾಗಿ ಮುಪ್ಪಾದೆವು. ಹಾಗೇ ಅಲೆಯುತ್ತ ವೃಂದಾವನಕ್ಕೆ ಬಂದೆವು. ವೃಂದಾವನ–ಕೃಷ್ಣ ನಡೆದಾಡಿದ ನೆಲ. ಕೃಷ್ಣ ಭಕ್ತಿಯಿಂದ ಉನ್ಮತ್ತರಾದ ಗೋಪಿಕೆಯರ ಹೆಜ್ಜೆ–ಗುರುತುಗಳನ್ನು ಹೊತ್ತ ನೆಲ. ಅಲ್ಲಿಗೆ ಬಂದಂದಿನಿಂದ ನಾನು ಮರಳಿ ತಾರುಣ್ಯವನ್ನು ಪಡೆದೆ. ಆದರೆ ಈ ನನ್ನ ಮಕ್ಕಳಿಗಾದರೋ ಕಳೆದುಹೋದ ಯೌವನ ಇನ್ನೂ ಮರಳಿ ಬಂದಿಲ್ಲ. ಹೀಗಾಗಿ ತಾಯಿ ತರುಣಿ–ಮಕ್ಕಳು ಮುದುಕರು ಎನ್ನುವ ವಿಪರೀತ ಸ್ಥಿತಿಯೊಂದು ಉಂಟಾಗಿದೆ. ಇದು ಕಲಿಯುಗದ ಪ್ರಭಾವವೇ ಇರಬೇಕು. ಈ ಸ್ಥಿತಿ ಕಳೆದೀತು ಹೇಗೆ ಎಂದು ಹಗಲಿರುಳೂ ಚಿಂತಿಸುತ್ತಿದ್ದೇನೆ. ನೀವು ದೊಡ್ಡವರು, ನಮಗೊಂದು ದಾರಿ ತೋರಿಸಿ–ಎಂದಳು.

ಹೀಗೆ ಹೇಳುತ್ತಿರುವ ಸಂದರ್ಭದಲ್ಲಿ ತನ್ನ ಇತಿವೃತ್ತವನ್ನಾಕೆ ತೋಡಿಕೊಂಡಳು. ಅದು ಹೀಗೆ:

**"ಉತ್ಪನ್ನಾ ದ್ರಾವಿಡೇದೇಶೇ ವೃದ್ಧಿಂ ಕರ್ಣಾಟಕೇಗತಾ। ಕ್ವಚಿನ್ ಕ್ವಚಿನ್ ಮಹಾರಾಷ್ಟ್ರೇ ಗುರ್ಜರೆ ಜೀರ್ಣತಾಂಗತಾ"**

"ದ್ರಾವಿಡದೇಶದಲ್ಲಿ (ತಮಿಳುನಾಡು) ನಾನು ಹುಟ್ಟಿದೆ. ನಾ ದ್ರಾವಿಡಕನ್ಯೆ; "ಭಕ್ತಿ". ಬೆಳೆದುದೆಲ್ಲ ಕನ್ನಡದ ನೆಲದಲ್ಲಿ. ಮಹಾರಾಷ್ಟ್ರದಲ್ಲೇನೋ ನಾನು ಅಲ್ಲಲ್ಲಿ ನಲಿದಾಡಿದ್ದುಂಟು. ಆದರೆ ಗುಜರಾತಿನ ನೆಲದಲ್ಲಿ ನನಗೆ ಮುಪ್ಪು ಆವರಿಸಿಬಿಟ್ಟಿತ್ತು."

ಇದು ಭಾರತೀಯ ಮನಸ್ಸು ಇತಿಹಾಸವನ್ನು ಕಥೆ ಮಾಡುವ ಬಗೆ!

ನಿಜಕ್ಕಾದರೆ ಭಕ್ತಿಯಿಂದ ಪರಿಪ್ಲುತವಾದ ಕೀರ್ತನೆಗಳು ನಮಗೆ ಮೊದಲು ದೊರಕುವುದು ತಮಿಳುನಾಡಿನ ಆಳ್ವಾರುಗಳು ಮತ್ತು ನಾಯನ್ಮಾರುಗಳದು. ಶೈವ; ವೈಷ್ಣವ ಭಕ್ತಿಮಾರ್ಗದ ಮೂಲಸೆಲೆಗಳಿವು. ಆದುದರಿಂದಲೇ ಕ್ರಿ.ಶ. ಹತ್ತನೆಯ ಶತಕದಲ್ಲಿ ತಮಿಳುನಾಡಿನಲ್ಲಿ ಕಾಣಿಸಿಕೊಂಡ ಆಚಾರ್ಯ ರಾಮಾನುಜರು ಆಳ್ವಾರುಗಳ ಪರಂಪರೆಯನ್ನು ತಮ್ಮದೆಂದೇ ಭಾವಿಸಿ, ಆ ಪರಂಪರೆಯಲ್ಲಿ ತಮ್ಮನ್ನು ಗುರುತಿಸಿಕೊಂಡರು. ಆಳ್ವಾರುಗಳ ದೇಸೀ ತಮಿಳು ಕೀರ್ತನೆಗಳನ್ನು ವೇದತುಲ್ಯವಾಗಿ ಭಾವಿಸಿದರು. ಅವುಗಳನ್ನು ದಿವ್ಯಪ್ರಬಂಧ ಎಂದು ಕರೆದರು. ವೇದ-ಶಾಸ್ತ್ರಗಳು ಮತ್ತು ಈ ದಿವ್ಯ ಪ್ರಬಂಧಗಳು ಇವೆರಡೂ ಸೇರಿ ಉಭಯ-ವೇದಾಂತ ಎಂದು ಸ್ಥಾಪಿಸಿದರು. ವೇದದ ಮೊದಲ ಆಶಯ-ಪೂರ್ವಿಕ ಮತ್ತು ನೂತನ ಒಂದಾಗಬೇಕೆನ್ನುವ ಆಶಯ ಹೀಗೆ "ಭಕ್ತಿ"ಯ ಮೂಲಕ ಈಡೇರಿತು. ಭಕ್ತಿಯು ತನ್ನ ತೀವ್ರತೆಯಿಂದಾಗಿಯೇ- ತನಗೆ ತಿಳಿಯದೆಯೇ ಕ್ರಾಂತಿಯ ಬೀಜವೊಂದನ್ನು ಹೊತ್ತದ್ದು ಸಮಾಜದ ಅರಿವಿಗೆ ಬಂತು.

ಕನ್ನಡನಾಡಿನಲ್ಲಿ-ಶೈವ; ವೈಷ್ಣವ ಭಕ್ತಿಯ ಎರಡು ಪರಂಪರೆಗಳೂ ಬೆಳೆದವು. ಮೇಲುಕೋಟೆಯ ಸುತ್ತಮುತ್ತ ಆಳ್ವಾರುಗಳ ತಮಿಳು ದಿವ್ಯಪ್ರಬಂಧಗಳು ಕೇಳತೊಡಗಿದವು. ಆಚಾರ್ಯ ಶಂಕರರು ಶೃಂಗೇರಿಗೆ ಬಂದಿದ್ದರೆನ್ನುವುದು ಪೀಠವೊಂದನ್ನು ಸ್ಥಾಪಿಸಿದ್ದರೆನ್ನುವುದು ಈಗ ಇತಿಹಾಸ. ಶಂಕರರು ಜ್ಞಾನ-ಮಾರ್ಗವಾದರೂ ಅವರು "ಭಕ್ತಿ"ಯ ಮಹತ್ತ್ವವನ್ನು ಮನಗಂಡವರೇ. ಭಕ್ತಿಯ ಪ್ರತಿಪಾದಕರೇ. "ಸೌಂದರ್ಯ ಲಹರೀ" ಎಂಬ ಶಂಕರರಿಂದ ರಚಿತವಾದ ದೇವೀ ಸ್ತೋತ್ರವಂತೂ ತಾಯಿಯನ್ನು ಕೂಗಿ ಕರೆದ ಮಗುವಿನ ಆರ್ತಕರೆಯಂತಿದೆ. ಕರಾವಳಿಯ ತುಳುನಾಡಿನ ಆಚಾರ್ಯ ಮಧ್ವರು ಭಕ್ತಿಯಿಂದಲೇ "ಜ್ಞಾನ" ಎಂದು ಘೋಷಿಸಿದವರು. ಅಂಥ ಜ್ಞಾನದಿಂದ ಮತ್ತೆ ಭಕ್ತಿಯೇ ಬೆಳೆಯುತ್ತದೆ ಎಂದವರು. "ಭಕ್ತ್ಯಾ ಜ್ಞಾನಂ ತತೋ ಭಕ್ತಿಃ" ಮಧ್ವರ ಈ ಕಾಣ್ಕೆಯೇ ಆಮೇಲೆ ಕನ್ನಡನಾಡಿನಲ್ಲಿ ಮೂಡಿಬಂದ ಹರಿದಾಸ ಆಂದೋಲನಕ್ಕೆ ಮೂಲಸ್ಫೂರ್ತಿಯಾಯಿತು. ಹನ್ನೆರಡನೆಯ ಶತಮಾನದಲ್ಲಿ ಕನ್ನಡನಾಡು ಮತ್ತೊಂದು ಅಭೂತಪೂರ್ವವಾದ ಕ್ರಾಂತಿಯೊಂದಕ್ಕೆ ಸಾಕ್ಷಿಯಾಯಿತು. ಅದು ಬಸವಣ್ಣನವರ

ನೇತೃತ್ವದಲ್ಲಿ ನಡೆದ ಜನಾಂದೋಲನ. ಬಸವಣ್ಣನವರ ನೇತೃತ್ತ್ವ ಎಂದರೆ ಭಕ್ತಿಯ ನೇತೃತ್ವ. ಏಕೆಂದರೆ ಬಸವಣ್ಣನೆಂದರೆ ಭಕ್ತಿ ಭಂಡಾರಿ ಬಸವಣ್ಣ! ಅಲ್ಲಮನಂಥ ಜ್ಞಾನಿಗಳು ಬಸವಣ್ಣನವರ ನೇತೃತ್ತ್ವವನ್ನು ಒಪ್ಪಿದ್ದರು. ತಾವೇ ನೇತಾರರಾಗಿರಲಿಲ್ಲ. ಕ್ರಾಂತಿಯ ಬೀಜ ಇರುವುದು ಭಕ್ತಿಯ ಬಸಿರಿನಲ್ಲಿ! ಇದು ಅಲ್ಲಮನಿಗೆ ತಿಳಿದ ಸತ್ಯವಾಗಿತ್ತು.

ಮಧ್ಯಕಾಲದಲ್ಲಿ ಕನ್ನಡನಾಡಿಗೆ ಇಸ್ಲಾಮಿನ ಸಂಪರ್ಕ ಬಂತು. ಕನ್ನಡದ ವಿಜಾಪುರ (ವಿಜಯಪುರ) ಸೂಫಿಸಂತರ ಕೇಂದ್ರವಾಗಿತ್ತು. ಸೂಫಿಗಳು ಉಜ್ವಲ ಭಕ್ತರಾಗಿದ್ದರು.

ವಿಠ್ಠಲ ಭಕ್ತಿಯ ಸಂಪ್ರದಾಯ ನೆರೆಯ ಮಹಾರಾಷ್ಟ್ರದಲ್ಲಿ ಬೆಳೆಯಿತು. ವಿಠ್ಠಲ ಕನ್ನಡದವನು, ಕನ್ನಡಿಗ ಎನ್ನುವುದು ಮಹಾರಾಷ್ಟ್ರದ ವಿಠ್ಠಲ ಭಕ್ತರಿಗೆ ಚೆನ್ನಾಗಿ ತಿಳಿದಿತ್ತು. "ಕಾನಡೀ ಹೋ ವಿಠ್ಠಲೂ" ಎನ್ನುವ ಮಾತೇ ಇದೆ–ಈಗಲೂ. ಭಕ್ತಿಯ ವೈಶಿಷ್ಟ್ಯವೆಂದರೆ ಯಾವ ಸಂಬಂಧವನ್ನೂ ಕೆಡಿಸದೆ, ಅದನ್ನು ಉಳಿಸಿ ಬೆಳೆಸುತ್ತ ಹೋಗುವುದು. ವಿಠ್ಠಲ ಕನ್ನಡಿಗನೆನ್ನುವುದು, ವೀರನಾರಾಯಣ ಗದುಗಿನವನೆನ್ನುವುದು ಈ ನೆಲೆಯಲ್ಲಿಯೇ. ದೇವರು ಸರ್ವವ್ಯಾಪಿ ಎಂಬ ಪ್ರಮೇಯವನ್ನು ಕೇಳಿದಾಗ, ನಾವಿರುವ ಸ್ಥಳದ ಜೊತೆ ದೇವರಿಗೆ ಸಂಬಂಧವಿದೆ ಎಂದು ಭಕ್ತಿಗೆ–ಭಕ್ತಿಗೆ ಮಾತ್ರ–ಹೊಳೆಯುವುದು.

ಯಾವ ನೆಲೆಯಿಂದಲೇ ನೋಡಿ: "ವೃದ್ಧಿಂ ಕರ್ಣಾಟಕೇ ಗತಾ"– ಕನ್ನಡನಾಡಿನಲ್ಲಿ ಬೆಳೆದೆ ಎಂಬ "ಭಕ್ತಿ"ಯ ಮಾತು ಇತಿಹಾಸದ ಮಾತೆನ್ನಲೇಬೇಕು. ಈ ಹಿನ್ನೆಲೆಯಲ್ಲಿ, ಅಮೆರಿಕೆಯ ಕನ್ನಡಿಗರು, "ಭಕ್ತಿ" ಎಂಬ ಪರಿಕಲ್ಪನೆಯ ಸುತ್ತ ವಸಂತ ಸಾಹಿತ್ಯೋತ್ಸವವನ್ನು ನಡೆಯಿಸಿರುವುದು ಬಹಳ ಒಳನೋಟದ ಮಾತಾಗಿದೆ. ಭಕ್ತಿಯ ದರ್ಶನ ಎಂದರೆ ಅದು ಪರೋಕ್ಷವಾಗಿ ನಾಡು–ನುಡಿಯ ದರ್ಶನ. ನಾಡಿನ ಇತಿಹಾಸದ ದರ್ಶನ.

"ಭಕ್ತಿ"ಯ ಬಗೆಗೆ ಹೇಳುವುದು ಬಹಳ ಇದೆ. ಭಕ್ತಿಯ ಸಂವೇದನೆಯಿಂದ ಒಂದು ಭಾಷೆ ಪಡೆಯುವ ಆಳ, ಬಾಗು; ಬಳುಕು, ಭಾವಶಕ್ತಿ ಇವೆಲ್ಲ ರೋಮಾಂಚಕವಾದ ಸಂಗತಿ. ಎಲ್ಲವನ್ನೂ ಒಂದೇ ಬೀಸಿನಲ್ಲಿ ಹೇಳಲಾಗುವುದಿಲ್ಲ. ಆದರೆ ಭಕ್ತಿಯ ಅನುಭವ ಮನುಷ್ಯ ಜೀವನಕ್ಕೆ ಹೇಗೆ ಮುಖ್ಯ ಎಂದು ಸೂಚಿಸಿ ಈ ಮಾತುಗಳನ್ನು ಮುಗಿತಾಯಕ್ಕೆ ತರುತ್ತಿದ್ದೇನೆ.

ಲೋಕವೆಂಬ ದೊಡ್ಡ ಸಂತೆಯ ನಡುವೆ ಬಂದು ನಿಂತ ಮನುಷ್ಯಜೀವ ಸಂತೆಯಲ್ಲಿ ಕಳೆದುಹೋಗುವ ಸಂಭವವೇ ಹೆಚ್ಚು. ಹಾಗೆ ಕಳೆದುಹೋಗುವುದೇ "ಜೀವನ ಪ್ರೀತಿ" ಎಂಬ ತಿಳುವಳಿಕೆಯೂ ಇದೆ. ಆದರೆ ಲೋಕದಲ್ಲಿ ಕಳೆದುಹೋಗಲಲ್ಲ–ಈಗಾಗಲೇ ಕಳೆದುಹೋದಂತಿರುವ ತನ್ನನ್ನು ತಾನು ಮರಳಿ ಪಡೆಯುವಂತಾಗುವುದೇ ನಿಜವಾದ ಜೀವನ ಪ್ರೀತಿ ಎಂಬ ಪ್ರತಿ ಪ್ರಸ್ಥಾನವೇ ಆಧ್ಯಾತ್ಮಿಕತೆಯಾಗಿದೆ. ಭಕ್ತಿಯು ಆಧ್ಯಾತ್ಮಿಕತೆಯ ಜೀವಸಾರವಾಗಿದೆ. ಕಳೆದುಹೋಗದೆ ಇರಬೇಕಾದರೆ, ಜೀವ; ವಿರಹವನ್ನು ಅನುಭವಿಸ–ಬೇಕು. ವಿರಹದಲ್ಲಿ ಬೇಯಬೇಕು. ತನ್ನಂತೆಯೇ ಇರುವ ಇನ್ನೊಂದು ಮನುಷ್ಯಜೀವದ

ವಿರಹದಲ್ಲಿ ಅಲ್ಲ. ಇನ್ನೊಂದು ಮನುಷ್ಯ ಜೀವಕ್ಕೆ ಸಂಬಂಧಿಸಿದ ವಿರಹವು, ನಿಜವಾದ ವಿರಹವೇ ಅಲ್ಲ. ಏಕೆಂದರೆ ಆ ಜೀವಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳೂ ನಮಗೆ ತಿಳಿದಿರುತ್ತವೆ; ಆ ಜೀವವೂ ನಮ್ಮಂತೆಯೇ ಇದೆಯಾಗಿ; ಬದುಕಿದೆಯಾಗಿ; ಆ ಜೀವದ ಬೇಕು–ಬೇಡಗಳು ಕೂಡ ನಮ್ಮ ಬೇಕು–ಬೇಡಗಳಂತೇ ಇವೆಯಾಗಿ, ನಮ್ಮಂತೆಯೇ ಇರುವ ಇನ್ನೊಂದು ಜೀವಕ್ಕೆ ಸಂಬಂಧಿಸಿ ನಿಜವಾದ ವಿರಹವು ಸಂಭವಿಸುವುದೇ ಇಲ್ಲ. ಬಯಕೆಗಳು; ಲಾಲಸೆಗಳು; ಒಲವುಗಳು, ಕದಾಚಿತ್, ನಿಸ್ವಾರ್ಥವಾದ ಪ್ರೀತಿಗಳು ಸಂಭವಿಸಬಹುದು. 'ವಿರಹ' ಎನ್ನುವ ಸಂವೇದನೆಯೇ ನಮಗೆ ತಿಳಿದಿಲ್ಲದ ತತ್ತ್ವದ ಜತೆಗೆ, ನಮ್ಮಂತಿಲ್ಲದ ತತ್ತ್ವದ ಜತೆಗೆ, ನಮಗೆ 'ಅನ್ಯ'ವಾದುದರ ಜತೆಗೆ ಮಾತ್ರ ಸಂಭವಿಸುವಂಥ ಹೃದಯವಿದ್ರಾವಕವಾದ ವಿದ್ಯಮಾನವಾಗಿದೆ. "ನಿನ್ನ ವಿರಹದಲ್ಲಿ ಬೆಂದವರ ಮತ್ತೆ ಸುಡಲುಂಟೆ?"– ಎಂದು ಉತ್ಕಟವಾಗಿ ಕೇಳುವಂಥ ವಿದ್ಯಮಾನವಾಗಿದೆ. ನನ್ನನ್ನು ನಿನ್ನಂತೆ ಮಾಡಿಕೋ ಎಂದು ಆರ್ತವಾಗಿ; ಹೃತ್ಪೂರ್ವಕವಾಗಿ ಕೇಳಿಕೊಳ್ಳ-ಬೇಕಾದರೆ, ನಿನ್ನಂತೆ ಮಾಡಿಕೊಳ್ಳುವುದೆಂದರೇನೆಂದು ನಮಗೆ ಮೊದಲೇ ತಿಳಿದಿರಬಾರದು. ನಮಗೆ ತಿಳಿದಿರದೆ ಇರುವುದನ್ನು ತೀವ್ರವಾಗಿ ಬಯಸುವುದು ವಿರಹ ಎನ್ನುವ ಸಂವೇದನೆಯ ಅರ್ಥ. ಈ ಲೋಕದಲ್ಲಿ ನಮಗೆ ತಿಳಿದಿರುವುದೆಲ್ಲ ನಮ್ಮನ್ನು ಗಟ್ಟಿಗೊಳಿಸುತ್ತಲೇ ಹೋಗಿವೆ. ಅಹಂಕಾರವನ್ನು ಬೆಳೆಯಿಸುತ್ತಲೇ ಹೋಗಿವೆ. ನಮ್ಮನ್ನು ಕರಗಿಸುತ್ತಿಲ್ಲ. ಆದರೆ ಭಕ್ತಿಯು ಎಲ್ಲವನ್ನೂ ಕರಗಿಸಬಲ್ಲ ಬೆಂಕಿಯಾಗಿದೆ. ಕರಗದೆ ಹರಿಯುವುದಿಲ್ಲ. ಕರಗದೆ ಬೆಸೆಯುವುದಿಲ್ಲ. ಭಕ್ತಿಯು ಕರಗಿಸುವ, ಕರಗಿಸಿ ಹರಿಯುವಂತೆ ಮಾಡುವ; ಹರಿದು ಬೆಸೆಯುವಂತೆ ಮಾಡುವ ಹೃದಯದ ಪವಾಡವಾಗಿದೆ.

**ಲಕ್ಷ್ಮೀಶ ತೋಳ್ಪಾಡಿ**

# ಮುನ್ನುಡಿ

'ಅವರವರ ಭಕುತಿಗೆ' ಎನ್ನುವುದು ಒಂದು ವಿಶಿಷ್ಟ ಬರಹಗಳ ಸಂಕಲನ. ಇದನ್ನು ಅಮೆರಿಕೆಯ ಕನ್ನಡ ಸಾಹಿತ್ಯರಂಗ ಯು.ಎಸ್.ಎ. ಪ್ರಕಟಿಸುತ್ತಿದೆ. ಇಪ್ಪತ್ತೊಂಬತ್ತು ಲೇಖನಗಳನ್ನುಳ್ಳ ಈ ವಿಶಿಷ್ಟ ಕೃತಿಗೆ ನನ್ನಿಂದ ಮುನ್ನುಡಿಯನ್ನು ಬಯಸುತ್ತಿದ್ದಾರೆ.

ದೂರದ ಅಮೆರಿಕೆಯಲ್ಲಿದ್ದರೂ ಕನ್ನಡದ ಭಕ್ತಿ ಸಾಹಿತ್ಯದ ಬಗ್ಗೆ ಮೂವರು ಸಂಪಾದಕರುಗಳಿಗಿರುವ ಕಾಳಜಿ ನನಗೆ ಅಚ್ಚರಿ ಮೂಡಿಸಿದೆ.

ಇಲ್ಲಿಯ ಪ್ರಬಂಧಗಳನ್ನು ಓದಿದಾಗ ಭಕ್ತಿ ಎಂಬುದು ಎಷ್ಟೊಂದು ರೀತಿಯ ಕಾವ್ಯಾನುಭವಗಳಿಗೆ ಕಾರಣವಾಗಿದೆಯೆಂದರಿವಾಗಿ ಆಶ್ಚರ್ಯವಾಯಿತು. ಅದಕ್ಕೆ ಮುಖ್ಯ ಕಾರಣ ಇಲ್ಲಿಯ ಮೂವರು ಸಂಪಾದಕರು ಯೋಜನಾಬದ್ಧವಾಗಿ ಲೇಖನಗಳನ್ನು ಬರೆಯಿಸಿರುವುದು, ಹಾಗೆಯೇ ಲೇಖನಗಳನ್ನು ಬರೆದವರು ತುಂಬ ಶ್ರದ್ಧೆಯಿಂದ ಅಧ್ಯಯನ ಪೂರ್ಣ ಲೇಖನಗಳನ್ನು ಬರೆದಿರುವುದು.

ಸಂಗೀತದಲ್ಲಿ, ಜಾನಪದದಲ್ಲಿ, ವಚನಸಾಹಿತ್ಯದಲ್ಲಿ, ಹರಿದಾಸ ಸಾಹಿತ್ಯದಲ್ಲಿ ಸುಗಮಸಂಗೀತದಲ್ಲಿ ಮತ್ತೆ ದ. ರಾ. ಬೇಂದ್ರೆ, ಕುವೆಂಪು, ಪುತಿನ ಅವರ ಕವಿತೆಗಳು ಹಾಗೂ ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಭಕ್ತಿಯ ವಿವಿಧ ರೀತಿಯ ಅಭಿವ್ಯಕ್ತಿಗಳು ಹೇಗೆ ಮೂಡಿಬಂದಿವೆ ಎಂಬುದರ ಅಧ್ಯಯನ ಇಲ್ಲಿದೆ.

ವಚನಗಳಲ್ಲಿ ಬರುವ ಮಾಯೆಯ ಕಲ್ಪನೆ, ಮಧುರಭಾವದ ಅಭಿವ್ಯಕ್ತಿ ಹೇಗೆ ಮೂಡಿಬಂದಿವೆ ಎಂಬುದರ ತುಲನಾತ್ಮಕ ಅಧ್ಯಯನವೂ ಇಲ್ಲಿದೆ.

ಶಿಶುನಾಳ ಶರೀಫರ ಹಾಡೊಂದರಲ್ಲಿ ಬರುವ ಬೆಡಗು ಹಾಗೂ ದಾಸರ ಪದಗಳ ಒಗಟಿನ ಮೋಜನ್ನು ಸರಳವಾಗಿ ನಿರೂಪಿಸಲಾಗಿದ್ದು-ಇವು ಬೆಡಗನ್ನು ಕುರಿತ ಅಧ್ಯಯನಕ್ಕೆ ನೆರವಾಗುತ್ತವೆ.

ಸಂಪಾದಕರಲ್ಲಿ ಒಬ್ಬರಾದ ನಳಿನಿ ಮೈಯ ಅವರು ಎರಡು ಲೇಖನಗಳನ್ನು ನೀಡಿದ್ದಾರೆ, ಒಂದು ಮಂಜುನಾಥ ಪೆಂಡಕೂರು ಅವರು ಇಂಗ್ಲಿಷಿನಲ್ಲಿ ಬರೆದ

ಮಹಿಳೆಯರಲ್ಲಿ ಅಂತರ್ಗತವಾಗಿರುವ ಭಕ್ತಿಯನ್ನು ಕುರಿತ ಲೇಖನದ ಅನುವಾದ. ಇನ್ನೊಂದು ನೊಂದ ಸಮಾಜಕ್ಕೆ ಭಕ್ತಿ ನೀಡುವ ಅಮೃತ ಸಿಂಚನವನ್ನು ಕುರಿತದ್ದು.

ಇನ್ನೊಬ್ಬ ಸಂಪಾದಕರಾದ ಸುಮತಿ ಮುದ್ದೇನಹಳ್ಳಿಯವರು ವಚನಸಾಹಿತ್ಯದಲ್ಲಿ ಬರುವ ಶರಣಸತಿ–ಲಿಂಗಪತಿ ರೂಪದಲ್ಲಿರುವ ಮಧುರಭಾವವು ಅಕ್ಕ, ಗಜೇಶ ಮಸಣಯ್ಯ, ಉರಿಲಿಂಗದೇವ, ಅಂಬಿಗರ ಚೌಡಯ್ಯ, ಮರುಳುಶಂಕರ ದೇವ ಮೊದಲಾದವರ ವಚನಗಳಲ್ಲಿ ಹೇಗೆ ಮೂಡಿಬಂದಿದೆ ಎಂಬುದನ್ನು ತುಂಬ ಚೆನ್ನಾಗಿ ವಿಶದ ಪಡಿಸಿದ್ದಾರೆ. ಇನ್ನೊಬ್ಬ ಲೇಖಕಿ ಮೀರಾ ಎನ್ನುವವರೂ ಈ ವಿಷಯವನ್ನೆ ಕುರಿತು ಬರೆದಿದ್ದರೂ ಅದು ಪುನರುಕ್ತಿಯಾಗಿಲ್ಲ. ಏಕೆಂದರೆ ಇಲ್ಲಿ ಚಿತ್ರಿತವಾಗಿರುವ ಮಧುರಭಾವದಲ್ಲಿ ಪುರುಷ ಮತ್ತು ಸ್ತ್ರೀಯರ ಸಂಬಂಧದ ಸೂಕ್ಷ್ಮತೆಯನ್ನು ಗುರುತಿಸುವ ಒಳ್ಳೆಯ ಯತ್ನವಿದೆ. ಇನ್ನೊಬ್ಬ ಸಂಪಾದಕರಾದ ಕಾವ್ಯಾ ಕಡಮೆ ನಾಗರಕಟ್ಟೆಯವರು ಕುವೆಂಪು ಅವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ದೇವರ ಕಲ್ಪನೆಯು ಮೂಡಿಬಂದಿರುವ ರೀತಿಯನ್ನು ಮನೋಜ್ಞವಾಗಿ ಮನಗಾಣಿಸಿದ್ದಾರೆ.

ವಚನಗಳಲ್ಲಿ ಮಾಯೆಯನ್ನು ಕುರಿತ ಲೇಖನವೂ ವಿಚಾರ ಪ್ರಚೋದಕ ಎನ್ನಬೇಕು, ಏಕೆಂದರೆ ವಚನಕಾರರಲ್ಲಿ ಬರುವ ಮಾಯೆಯ ಪರಿಕಲ್ಪನೆ ಶಂಕರಾಚಾರ್ಯರ ಮಾಯೆ (ಮಿಥ್ಯೆ)ಯ ಪರಿಕಲ್ಪನೆಗಿಂತ ಭಿನ್ನವಾದುದು. ಇದನ್ನು ಪ್ರಸನ್ನ ಅವರು ತಮ್ಮ ಲೇಖನದಲ್ಲಿ ಶಕ್ತಿ ವಿಶಿಷ್ಟಾದ್ವೈತವೆಂದು ಗುರುತಿಸಿದ್ದಾರೆ. ಆದಿಶಂಕರರು ಬ್ರಹ್ಮಸತ್ಯ ಮತ್ತು ಜಗತ್ತು ಮಿಥ್ಯೆ (ಮಾಯೆ) ಅನ್ನುತ್ತಾರೆ. ಆದರೆ ವಚನಕಾರರು ಜಗತ್ತನ್ನು ಮಾಯೆ ಅನ್ನುವುದಿಲ್ಲ. ಅದು ಕರ್ತಾರನ ಕಮ್ಮಟ, ಇಲ್ಲಿದ್ದು ಗೆಲ್ಲಬೇಕು ಎನ್ನುವುದು ವಚನಕಾರರ ನಿಲುವು, ಅಲ್ಲಮ ತನ್ನ ವಚನದಲ್ಲಿ ಹೆಣ್ಣು, ಹೊನ್ನು ಮತ್ತು ಮಣ್ಣುಗಳು– ಅಂದರೆ ಜಗತ್ತು ಮಾಯೆಯಲ್ಲ; ಮನದ ಮುಂದಣ ಆಸೆಯೇ ಮಾಯೆ ಎಂದದ್ದು. ಈ ಜಗತ್ತು ಮಾಯೆಯಲ್ಲ, ವಾಸ್ತವ. ಅರಿತರೆ ಇದು ಶಕ್ತಿ; ಮರೆತರೆ ಮಾತ್ರ ಮಾಯೆ, ಬದುಕಿನ ಗುರಿ ಎನ್ನುವುದು ಈ ಮಾಯೆಯನ್ನು ಗೆಲ್ಲುವುದು. ಆದ್ದರಿಂದಲೆ ಈ ಪರಿಕಲ್ಪನೆ... ಶಕ್ತಿ ವಿಶಿಷ್ಟಾದ್ವೈತ ಎನ್ನಿಸಿಕೊಂಡಿತು.

'ಭಕ್ತಿ ಸಾಹಿತ್ಯದ ಗಣಿಯಲ್ಲಿ ಮೂರು ರತ್ನಗಳು' ಪ್ರಬಂಧದಲ್ಲಿ ದಾಸಿಮಯ್ಯ, ಪುರಂದರದಾಸರೂ ಮತ್ತು ಹೆಳವನಕಟ್ಟೆ ಗಿರಿಯಮ್ಮನವರ ಕೊಡುಗೆಗಳನ್ನು ಮೂರ್ತಿಯವರು ವಿಶದಪಡಿಸಿದ್ದಾರೆ. ಆದರೆ ದಾಸಿಮಯ್ಯನನ್ನು ದೇವರ ದಾಸಿಮಯ್ಯ ಎಂದೇ ಗುರುತಿಸಿದ್ದಾರೆ. ವಾಸ್ತವವಾಗಿ ಇಬ್ಬರೂ ದಾಸಿಮಯ್ಯರಿದ್ದು ಒಬ್ಬರು ಧರ್ಮ ಗುರುಗಳು. ರಾಜವಂಶದವರಿಗೆ ದೀಕ್ಷೆಯಿತ್ತವರು, ವಚನಕಾರರಲ್ಲಿ, ಜೇಡರದಾಸಿಮಯ್ಯ ಈಗ ತಿಳಿದಿರುವಂತೆ ಆದ್ಯ ವಚನಕಾರರು. ವಾಸ್ತವವಾಗಿ ಜೇಡರ ದಾಸಿಮಯ್ಯನನ್ನು ಹಳಕಟ್ಟಿಯವರು, ಆರ್. ನರಸಿಂಹಾಚಾರ್ಯರು, ಎಲ್. ಬಸವರಾಜು, ಸಿದ್ಧಲಿಂಗಯ್ಯ

ಪುರಾಣಿಕರು ಮೊದಲಾದವರು ದೇವರದಾಸಿಮಯ್ಯ ಎಂದೇ ಹೇಳಿದ್ದರೂ ದೇವರದಾಸಿಮಯ್ಯ ವಚನಕಾರನಲ್ಲ, ಜೇಡರದಾಸಿಮಯ್ಯನೇ ವಚನಕಾರ ಎಂದು ಈಗ ವಿದ್ವಾಂಸರೆಲ್ಲರ ಗ್ರಹಿಕೆಯಾಗಿದೆ ಎಂದು ಹೇಳಬಹುದು.

'ಶತಮಾನಗಳಾಚೆಯ ಶರಣರ ಸಂದೇಶ' ಎಂಬ ಲೇಖನವು ವಿಶ್ವದ ಸಾಹಿತ್ಯದಲ್ಲಿ ಮೂಡಿ ಬಂದ ಅನುಭಾವ ಸಾಹಿತ್ಯಗಳ ಹಿನ್ನೆಲೆಯಲ್ಲಿ ಶರಣರ ಸಂದೇಶವನ್ನು ವಿಶದಪಡಿಸುತ್ತದೆ.

ವಚನ ಸಾಹಿತ್ಯ ಸಾಮಾಜಿಕ ಪರಿವರ್ತನೆಗೆ ನೀಡುವ ಕೊಡುಗೆಯನ್ನು ವಿಶ್ಲೇಷಿಸಿದ ಪ್ರಬಂಧ ಕೂಡ ಗಮನಾರ್ಹವಾದದ್ದು. ಈ ಲೇಖನದ ಕೊನೆಯಲ್ಲಿ ಬರುವ ಒಂದು ಮಹಾವಾಕ್ಯ ಮಾತ್ರ ಮುಕ್ತ ಚಿಂತನೆಯ ಬಾಗಿಲನ್ನು ತೆರೆಯುತ್ತದೆ.

ಎಲ್ಲ ಲೇಖನಗಳನ್ನು ಮುನ್ನುಡಿಯಲ್ಲಿ ಪ್ರಸ್ತಾಪಿಸಲು ಸಾಧ್ಯ ಎಂದು ನಾನೂ ಭಾವಿಸಿಲ್ಲ. ಏಕೆಂದರೆ ಬಸವಣ್ಣನನ್ನು ಕುರಿತು ಡಾ. ಪ್ರಭುಶಂಕರರು ಬರೆದ ಸೊಗಸಾದ ಕೃತಿ ಬೆರಗು, ಖಲೀಲ್ ಜಿಬ್ರಾನನು ಕ್ರಿಸ್ತನನ್ನು ಕುರಿತು ಬರೆದ ಗ್ರಂಥದಿಂದ ಸ್ಫೂರ್ತಿ ಪಡೆದದ್ದು. ಕಠೋಪನಿಷತ್ತಿನಲ್ಲಿ ಬರುವ ನಚಿಕೇತ ಪ್ರಸಂಗದಲ್ಲಿನ ಭಕ್ತಿ ವಿವರವೂ ಈ ಸಂಗ್ರಹಕ್ಕೆ ಸೇರಬೇಕಾದುದೇ.

ಈ ಎಲ್ಲಾ ಪ್ರಬಂಧಗಳ ಜೊತೆಗೆ ಸಂಪಾದಕರು ಭಕ್ತಿ ಸಾಹಿತ್ಯದ ಸಿಹಿ ಮತ್ತು ಪರಿಮಿತಿಗಳನ್ನು (?) ಸೂಚಿಸುವ ಮುಖ್ಯ ಲೇಖನಗಳನ್ನು ನೀಡಿರುವುದು ಸಂಪಾದಕರ ಔಚಿತ್ಯಪ್ರಜ್ಞೆಗೆ ದ್ಯೋತಕವಾಗಿದೆ. ಒಂದನೆಯದು 'ಭಕ್ತಿ ಮತ್ತು ವಿಜ್ಞಾನ', ಎರಡನೆಯದು 'ನಂಬಿಕೆ', ಇದು ಅಂತರ್ಜಾಲದಲ್ಲಿ ತೇಲಿಬಂದ ಇಂಗ್ಲಿಷ್ ಲೇಖನದ ಅನುವಾದ ಇಲ್ಲಿ ಪ್ರಾಧ್ಯಾಪಕ ಮತ್ತು ವಿದ್ಯಾರ್ಥಿ ಮಧ್ಯೆ ನಡೆದ ಜಿಜ್ಞಾಸೆ ತುಂಬ ಕುತೂಹಲಕರವೂ ಅರ್ಥಪೂರ್ಣವೂ ಆಗಿರುವುದು. ಇನ್ನೊಂದು ಲೇಖನ ವೈದ್ಯಶಾಸ್ತ್ರ ಮತ್ತು ಭಕ್ತಿ ಎಂಬ ಉದ್ಯಮ ಎಂಬುದು ಈ ಮೂರೂ ಲೇಖನಗಳು ಭಕ್ತಿ ಎಂಬುದನ್ನು ಸರಿಯಾದ ಪರಿಪ್ರೇಕ್ಷದಲ್ಲಿಟ್ಟು ನೋಡುವುದಕ್ಕೆ ನೆರವಾಗುತ್ತವೆ.

ಕುವೆಂಪು ಎಲ್ಲಾದರು ಇರು ಎಂತಾದರು ಇರು, ಎಂದೆಂದಿಗೂ ನೀ ಕನ್ನಡವಾಗಿರು ಎಂದು ಕವನವೊಂದರಲ್ಲಿ ಕರೆ ನೀಡಿದ್ದುದುಂಟು. ಅಮೆರಿಕೆಯಲ್ಲಿ ಇದ್ದರೂ ನಿಮ್ಮೆಲ್ಲರ ಪ್ರೀತಿ ನಿಮ್ಮ ಮೂಲನೆಲೆ 'ಕನ್ನಡ'ದತ್ತ ಇರುವುದು ಹೆಮ್ಮೆಯ ಸಂಗತಿ. ಸ್ವಯಂ ವಿಚಾರವಂತರೂ, ಪ್ರಬಂಧಕಾರರೂ ಆದ ಈ ಮೂವರು ಸಂಪಾದಿಕೆಯರು (ನಳಿನಿ ಮೈಯ, ಸುಮತಿ ಮುದ್ದೇನಹಳ್ಳಿ ಮತ್ತು ಕಾವ್ಯಾ ನಾಗರಕಟ್ಟೆ) ಒಂದು 'ವಿಷಯ'ವನ್ನು ಇಟ್ಟುಕೊಂಡು ವಿವಿಧ ಲೇಖಕರು/ಲೇಖಕಿಯರಿಂದ/ ಲೇಖನಗಳನ್ನು ಬರೆಯಿಸಿರುವುದು ಸಾಮಾನ್ಯ ಸಂಗತಿಯಲ್ಲ. ಇದೊಂದು ಸಾಂಸ್ಕೃತಿಕ ಸಾಹಸ. ಏಕೆಂದರೆ ಒಂದು

ವಿಷಯವನ್ನು ಕುರಿತಂತೆ ಪ್ರಬಂಧ ಬರೆಯಿಸುವುದು ಅಷ್ಟು ಸುಲಭ ಅಲ್ಲ.

ಪ್ರಬಂಧ ಸಂಕಲನಕ್ಕೆ ಕೊಟ್ಟಿರುವ ಶೀರ್ಷಿಕೆ–'ಅವರವರ ಭಕುತಿಗೆ' ಉಚಿತ ವಾದುದಾಗಿದೆ. ಪ್ರಸ್ತಾವನೆ ಕೂಡ ಅಚ್ಚುಕಟ್ಟಾಗಿದೆ.

ಈ ಸಂಕಲನವನ್ನು ಸಂಪಾದಿಸಿದ ಮೂವರು ಸಂಪಾದಿಕೆಯರು, ಲೇಖನಗಳನ್ನು ಬರೆದವರು ಮತ್ತು ಇದನ್ನು ಪ್ರಕಟನೆಗೆತ್ತಿಕೊಂಡ ಕನ್ನಡ ಸಾಹಿತ್ಯ ರಂಗ–ಯು.ಎಸ್.ಎ. ಎಲ್ಲರಿಗೂ ಪ್ರಶಂಸಾಪೂರ್ವಕ ಅಭಿನಂದನೆಗಳು. ನಮಸ್ಕಾರ.

೩–೩–೨೦೧೭ **ಜಿ. ಎಸ್. ಸಿದ್ಧಲಿಂಗಯ್ಯ**

# ಭಕ್ತಿ ಎಂಬ ಭಾವ, ಸಾಹಿತ್ಯದಲ್ಲಿ ಪ್ರವಾಹ

ಅಮೆರಿಕದಲ್ಲಿ ಎಷ್ಟೋ ಜನ ಪ್ರತಿಭಾವಂತ ಲೇಖಕರಿದ್ದಾರೆ. ಹೊಸ ಸಂಸ್ಕೃತಿಗೆ, ಹೊಸ ಜೀವನಕ್ರಮಕ್ಕೆ, ಹೊಸ ಆಲೋಚನೆಗಳಿಗೆ ಮನಸ್ಸು ತೆರೆದುಕೊಂಡಿರುವ ಸಂವೇದನಾಶೀಲ ಚಿಂತಕರು ಮತ್ತು ಬರಹಗಾರರಿದ್ದಾರೆ. ಅಂಥವರೆಲ್ಲ ಸೇರಿ ತಮ್ಮ ಸೃಜನಶೀಲತೆಯನ್ನು ಬೆಳೆಸಿಕೊಳ್ಳಲು ಮತ್ತು ಇತರರೊಂದಿಗೆ ಹಂಚಿಕೊಳ್ಳಲು ಅನುವಾಗುವಂಥ ಒಂದು ಸಂಸ್ಥೆಯನ್ನು ಕಟ್ಟಲು ಯತ್ನಿಸಿದ ಫಲವೇ ೨೦೦೩-೦೪ ರಲ್ಲಿ ಮೈತಾಳಿದ ಕನ್ನಡ ಸಾಹಿತ್ಯ ರಂಗ. ಸಾಹಿತ್ಯಕ್ಕಾಗಿಯೇ ಸಂಪೂರ್ಣವಾಗಿ ಮೀಸಲಾದ, ಅಮೆರಿಕದ ಏಕೈಕ ರಾಷ್ಟ್ರೀಯ ಸಂಸ್ಥೆ ಇದು. ಕನ್ನಡ ಸಾಹಿತ್ಯ ರಂಗದ ಮುಖ್ಯ ಉದ್ದೇಶಗಳು ಏನೆಂದರೆ, ಇಲ್ಲಿ ಅಮೆರಿಕದಲ್ಲಿ ನೆಲಸಿರುವ ಕನ್ನಡ ಸಾಹಿತ್ಯಾಸಕ್ತರನ್ನೆಲ್ಲ ಒಂದುಗೂಡಿಸಿ ಅವರ ವಿಚಾರ ವಿನಿಮಯಕ್ಕಾಗಿ ಒಂದು ಸತ್ವಶಾಲಿಯಾದ ವೇದಿಕೆಯನ್ನು ಒದಗಿಸುವುದು; ಇಲ್ಲಿನ ಕನ್ನಡಿಗರ ಸಾಹಿತ್ಯಾಸಕ್ತಿಯನ್ನು ಪೋಷಿಸುವುದು, ಬೆಳಸುವುದು; ಅವರನ್ನು ತಮ್ಮ ಅನುಭವಗಳ ಬಗ್ಗೆ ಸೃಜನಾತ್ಮಕವಾಗಿ ಬರೆಯಲು ಪ್ರೋತ್ಸಾಹಿಸುವುದು, ಅವರ ಬರವಣಿಗೆಗಳನ್ನು ಪ್ರಕಟಿಸುವುದು, ಮತ್ತು ಅವನ್ನು ಸಾಧ್ಯವಾದಷ್ಟು ಮಂದಿ ಕನ್ನಡಿಗರ ಗಮನಕ್ಕೆ ತರುವುದು.

ನಮ್ಮ ಕಾರ್ಯಕ್ರಮಗಳಲ್ಲಿ ಮುಖ್ಯವಾದದ್ದು ಎರಡು ವರ್ಷಗಳಿಗೊಮ್ಮೆ ನಡೆಸುವ ವಸಂತ ಸಾಹಿತ್ಯೋತ್ಸವ. ನಮ್ಮದು ರಾಷ್ಟ್ರೀಯ ಸಂಸ್ಥೆಯಾಗಿದ್ದು, ನಮ್ಮ ಸದಸ್ಯರು ಅಮೆರಿಕದ ಎಲ್ಲ ಕಡೆಗಳಿಂದ ಬಂದವರಾದ್ದರಿಂದಲೂ, ವಿವಿಧ ಭಾಗಗಳಲ್ಲಿರುವ ನಮ್ಮ ಜನರಲ್ಲಿ ಸಾಹಿತ್ಯಾಸಕ್ತಿಯನ್ನು ಮೂಡಿಸಬೇಕೆಂಬ ಸದುದ್ದೇಶದಿಂದಲೂ, ಅಲ್ಲದೆ ಬೇರೆ ಬೇರೆ ಸ್ಥಳಗಳಲ್ಲಿ ನೆಲಸಿದ ಸಾಹಿತ್ಯಾಸಕ್ತರಿಗೆ ತಮಗಾಗಿಯೇ ಇಂಥ ಒಂದು ಸಂಸ್ಥೆ ಇದೆ ಎಂದು ತಿಳಿಯಪಡಿಸುವ ಉದ್ದೇಶದಿಂದಲೂ ಈ ಸಮ್ಮೇಳನವನ್ನು ದೇಶದ ವಿವಿಧ ಪ್ರಮುಖ ಪಟ್ಟಣಗಳಲ್ಲಿ ನಡೆಸುತ್ತಾ ಬಂದಿದ್ದೇವೆ. ಇದುವರೆಗೆ ಈ ಸಮ್ಮೇಳನ ಫಿಲಡೆಲ್ಫಿಯ, ಲಾಸ್ ಏಂಜಲಿಸ್, ಚಿಕಾಗೊ, ರಾಕ್‌ವಿಲ್ (ಬಾಲ್ಟಿಮೋರ್-ವಾಷಿಂಗ್ಟನ್ ಡಿ.ಸಿ. ನಡುವೆ ಮೇರಿಲ್ಯಾಂಡ್-ಪ್ರಾಂತ್ಯದಲ್ಲಿರುವ ಊರು), ಸಾನ್ ಫ್ರಾನ್ಸಿಸ್ಕೋ, ಹ್ಯೂಸ್ಟನ್ ಮತ್ತು ಸೈಂಟ್ ಲೂಯಿಸ್ ನಗರಗಳಲ್ಲಿ ನಡೆದಿದೆ. ಈ

ಬಾರಿಯ ವಸಂತ ಸಾಹಿತ್ಯೋತ್ಸವ ೨೦೧೭ರ ಏಪ್ರಿಲ್ ೨೯/೩೦ರಂದು ಬಾಸ್ಟನ್ ನಗರದಲ್ಲಿ. ರಂಗದ ಪ್ರತಿ ಸಾಹಿತ್ಯೋತ್ಸವಕ್ಕೂ ಒಂದು ಮೂಲವಸ್ತು ಇರುತ್ತದೆ. ಈ ಬಾರಿ ಹೊರತರುತ್ತಿರುವ ಗ್ರಂಥದ ಮೂಲ ವಸ್ತು 'ಭಕ್ತಿ ಸಾಹಿತ್ಯ.'

ಭಕ್ತಿ ಎಂಬುದು ಮಾನವನ ಮನಸ್ಸಿನಲ್ಲಿ ನಡೆಯುವ ಒಂದು ರೀತಿಯ ಭಾವೋದ್ವೇಗವೋ? ನಮಗಿಂತ ಅತಿ ದೊಡ್ಡ ಆದರೆ ಅತಿ ಹತ್ತಿರದ ಶಕ್ತಿಯೊಂದರ ಜೊತೆಗೆ ಬೆಳೆಸಿಕೊಳ್ಳುವ ಆತ್ಮೀಯ ಸಂಬಂಧವೋ? ಈ ಪ್ರಶ್ನೆಗಳಿಗೆ ಸುಲಭವಾದ ಉತ್ತರಗಳಿಲ್ಲ. ಹುಟ್ಟಿದ ಮಗುವನ್ನು ಅದರ ತಾಯ್ತಂದೆಯರು ಬೆಳೆಸುವ ರೀತಿ, ಕಲಿಸುವ ಪಾಠ, ಮಗುವಿನ ಸುತ್ತಮುತ್ತ ಅವರು ಕಲ್ಪಿಸುವ ವಾತಾವರಣ (ಮತ್ತು ಸನಾತನ ನಂಬಿಕೆಗಳಲ್ಲಿ ನಮಗೆ ಶ್ರದ್ಧೆಯಿದ್ದರೆ, ಪೂರ್ವಜನ್ಮ ಸಂಸ್ಕಾರಗಳೂ ಕೂಡ), ಆ ಮಗುವಿನ ಮನಸ್ಸನ್ನು, ಚಿಂತನಾಕ್ರಮವನ್ನು ರೂಪಿಸುತ್ತವೆ. ಹೀಗಾಗಿ, ಧರ್ಮಭೀರುಗಳ, ದೈವಭಕ್ತರ ಮತ್ತು ಸಾಂಪ್ರದಾಯಿಕರ ಮನೆಗಳಲ್ಲಿ ಬೆಳೆದ ಮಕ್ಕಳಿಗೆ ದೇವರ ಮೇಲಿನ ನಂಬಿಕೆ ಮತ್ತು ಭಕ್ತಿ ಚಿಕ್ಕವಯಸ್ಸಿನಿಂದಲೇ ತಾನೇತಾನಾಗಿ ಜೀವನಕ್ರಮದ ಭಾಗಗಳಾಗುತ್ತವೆ. ಮಕ್ಕಳು ಪ್ರೌಢರಾದಂತೆಲ್ಲ, ಅವರಲ್ಲಿ ವೈಜ್ಞಾನಿಕ ಚಿಂತನೆ ಮತ್ತು ವಿಚಾರಶೀಲತೆ ಬೆಳೆದಂತೆಲ್ಲ ಎಲ್ಲವನ್ನೂ ಪ್ರಶ್ನಿಸುವ ಜಾಯಮಾನ ಬೆಳೆಯುತ್ತದೆ. ಮುಂದೆ ವಯಸ್ಸು ಮತ್ತು ಅನುಭವಗಳಿಂದ ಮನಸ್ಸು ಪಕ್ವವಾದಾಗ, 'ಶ್ರದ್ಧೆ'ಗೂ 'ಅಂಧಶ್ರದ್ಧೆ'ಗೂ ವ್ಯತ್ಯಾಸ ತಿಳಿದರೂ ತಿಳಿಯಬಹುದು. ದುಃಖ ಬಂದಾಗ, ನಮ್ಮ ಶಕ್ತಿಗೆ ಮೀರಿದ ವಿಷಯಗಳಿಂದ ನಾವು ಅಧೀರರಾದಾಗ, ಅಜ್ಞಾತ ವಿಷಯಗಳಿಂದ ಭೀತರಾದಾಗ ಮನಸ್ಸಿನಲ್ಲಿ ಉಕ್ಕುವ ಭಕ್ತಿ ಉದ್ವೇಗವಾಗುತ್ತದೆ, ಮನಸ್ಸು ಪುಕ್ಕಲಾದಾಗ, ನಂಬಿಕೆ ಮೂಢವಾಗುತ್ತದೆ, ಸಂಪೂರ್ಣ ಅವೈಚಾರಿಕ ನಿರೀಕ್ಷೆಗಳ ಉಗ್ರಾಣವಾಗುತ್ತದೆ. ನಾಸ್ತಿಕರ ಮನೆಯಲ್ಲಿ ಬೆಳೆದ, ಅಸಾಂಪ್ರದಾಯಿಕ ವಾತಾವರಣವನ್ನಲ್ಲದೇ ಮತ್ತೇನನ್ನೂ ಕಾಣದ, ದೇಗುಲಕ್ಕೇ ಕಾಲಿಟ್ಟಿರದ ಮಕ್ಕಳ ಮನೋಭಾವ ಬೇರೆ ರೀತಿಯಾಗಿರುವುದು ಖಂಡಿತ. ಹಾಗಾದರೆ, ಏನಿದು ಭಕ್ತಿ? ಅದೊಂದು ಮುಳುಗುತ್ತಿರುವ ಮನುಷ್ಯ ಹಿಡಿದುಕೊಳ್ಳುವ ಹುಲ್ಲಿನ ಕಡ್ಡಿಯೇ? 'ಅವನ ಇಚ್ಛೆಯಿಲ್ಲದೇ ಒಂದು ತೃಣವೂ ಅಲುಗದು' ಎನ್ನುವ ಈ ಭಾವ ಮನುಷ್ಯನಲ್ಲಿ ಎಲ್ಲಿ, ಯಾವಾಗ, ಹೇಗೆ ಬೆಳೆದು ಬಂತು? ಇದು ಕೇವಲ ಪಂಚೇಂದ್ರಿಯಗಳಿಂದ ನಿಯಂತ್ರಿತವಾದದ್ದೇ? ಕೇವಲ ಚಿತ್ತ, ಬುದ್ಧಿ, ಮನಸ್ಸಿಗೆ ಸಂಬಂಧಪಟ್ಟಿದ್ದೇ? ಅಮಾಯಕರನ್ನು ನಂಬಿಸಿ ಹತೋಟಿಯಲ್ಲಿಟ್ಟುಕೊಳ್ಳಲು 'ಬುದ್ಧಿವಂತರು' ಮಾಡಿದ ಸಂಚೇ? ಮನುಷ್ಯನ ಮಿತವಾದ ಬುದ್ಧಿಶಕ್ತಿ ಮತ್ತು ಊಹಾಶಕ್ತಿಗಳಿಗೂ ಮೀರಿದ ಅತೀಂದ್ರಿಯ ಮತ್ತು ಇಂದ್ರಿಯಾತೀತ ವಿಷಯಗಳನ್ನು ಪ್ರಶ್ನಿಸಲಾಗದು ಎಂದು ಈ 'ಭಕ್ತಿ' ಎಂಬ ಶಕ್ತಿಯನ್ನು ಅವರವರ ಅರಿವಿಗೆ, ಅನುಭವಕ್ಕೆ ಬಿಟ್ಟುಬಿಡುವುದೇ ಒಳ್ಳೆಯದೇ? ಸಾಧಾರಣ ಮನುಷ್ಯರ ಗ್ರಹಿಕೆಗೆ ಮೀರಿದ ಈ ಒಂದು ಮನಸ್ಸಿನ ವ್ಯಾಪಾರವನ್ನು

ಸಾಹಿತಿಗಳು ಹೇಗೆ ಅರ್ಥೈಸಿದ್ದಾರೆ, ಹೇಗೆ ಬಳಸಿಕೊಂಡಿದ್ದಾರೆ, ತಮ್ಮ ಬರೆಹಗಳಲ್ಲಿ ಮತ್ತು ಕಾವ್ಯಗಳಲ್ಲಿ? ಇವೇ ಮುಂತಾದ ಪ್ರಶ್ನೆಗಳ ಕುರಿತು ಕನ್ನಡ ಸಾಹಿತ್ಯ ರಂಗದ ಬರಹಗಾರರು ಮತ್ತು ಕನ್ನಡನಾಡಿನ ಕೆಲವು ಆಹ್ವಾನಿತ ಲೇಖಕರು ನಡೆಸಿರುವ ಚಿಂತನೆಗಳ ಸಂಕಲನವೇ ನಿಮ್ಮ ಮುಂದಿರುವ 'ಅವರವರ ಭಕುತಿಗೆ' ಎಂಬ ನಮ್ಮ ಗ್ರಂಥ!

ರಂಗ ಹೊರತರುತ್ತಿರುವ ಈ ಗ್ರಂಥಕ್ಕೆ ಪ್ರಧಾನ ಸಂಪಾದಕರಾಗಿ ಶ್ರೀಮತಿ ನಳಿನಿ ಮಯ್ಯ ಅವರೂ ಮತ್ತು ಸಹಸಂಪಾದಕರಾಗಿ ಶ್ರೀಮತಿಯರಾದ ಕಾವ್ಯಾ ಕಡಮೆ ಮತ್ತು ಸುಮತಿ ಮುದ್ದೇನಹಳ್ಳಿ ಅವರೂ ಅತ್ಯಂತ ಉತ್ಸಾಹದಿಂದ ಮತ್ತು ಸಂಪೂರ್ಣ ಶ್ರದ್ಧೆಯಿಂದ ದುಡಿದಿದ್ದಾರೆ, ಅದಕ್ಕಾಗಿ ರಂಗದ ಪರವಾಗಿ ಅವರಿಗೆ ನಮ್ಮ ಧನ್ಯವಾದಗಳು ಮತ್ತು ಉತ್ಕೃಷ್ಟವಾದ ಗ್ರಂಥವೊಂದನ್ನು ನೀಡಿದ್ದಕ್ಕಾಗಿ ಶುಭಾಶಯಗಳು! ರಂಗದ ಈ ಮುಖ್ಯ ಕೆಲಸದಲ್ಲಿ ಸಲಹೆಗಾರರಾಗಿರಲು ನಮ್ಮನ್ನು ಆಹ್ವಾನಿಸಿ ಗೌರವಿಸಿದ್ದಕ್ಕಾಗಿ, ನಾವು ಸಂಪಾದಕರಿಗೆ ಆಭಾರಿಗಳಾಗಿದ್ದೇವೆ. ಇಲ್ಲಿ ಒಂದು ವಿಷಯವನ್ನು ಓದುಗರೊಂದಿಗೆ ಹಂಚಿಕೊಳ್ಳಬೇಕು. ಅದೇನೆಂದರೆ, ನಮ್ಮ ಸಲಹೆ ಸೂಚನೆಗಳನ್ನು ಲೇಖಕರೂ ಮತ್ತು ಸಂಪಾದಕರೂ ಅನ್ಯಥಾ ಭಾವಿಸದೆ ತೆರೆದ ಮನಸ್ಸಿನಿಂದ ಸ್ವಾಗತಿಸಿದ್ದಾರೆ, ಸ್ವೀಕರಿಸಿದ್ದಾರೆ ಮತ್ತು ಸೂಕ್ತವೆಂದೆನಿಸಿದಾಗ ಉಪಯೋಗಿಸಿಕೊಂಡಿದ್ದಾರೆ ಸಹ. ನಮ್ಮ ಈ ಅಳಿಲು ಸೇವೆಯಿಂದ ಗ್ರಂಥದ ಗುಣಮಟ್ಟವನ್ನು ಕಾಪಾಡುವುದರಲ್ಲಿ ಕೊಂಚವಾದರೂ ನೆರವು ದೊರಕಿದ್ದರೆ, ನಮ್ಮ ಶ್ರಮ ಸಾರ್ಥಕವಾದಂತೆ.

ಈ ಬಾರಿಯ ವಸಂತೋತ್ಸವಕ್ಕೆ ಮುಖ್ಯ ಅತಿಥಿಗಳಾಗಿ ಬರಲಿರುವ ಶ್ರೀಯುತ ಲಕ್ಷ್ಮೀಶ ತೋಳ್ಪಾಡಿಯವರು ಪ್ರಚಂಡ ವಾಗ್ಮಿ ಮತ್ತು ಪ್ರಕಾಂಡ ಪಂಡಿತರು. "ಭಕ್ತಿ" ಎಂಬ ಸಂಕೀರ್ಣ ವಸ್ತುವಿನ ಕುರಿತು ಸಮಗ್ರವಾಗಿ ಅಧಿಕಾರವಾಣಿಯಿಂದ ಉಪನ್ಯಾಸಮಾಡಲು ಅವರಿಗಿಂತ ಮಿಗಿಲು ಇನ್ಯಾರಿದ್ದಾರು? ಅವರ ಮಾತುಗಳನ್ನು ಕೇಳಲು ಅವರೊಂದಿಗೆ ಸಂವಾದ ನಡೆಸಲು ನಾವೆಲ್ಲಾ ಕಾತುರರಾಗಿದ್ದೇವೆ. ತೋಳ್ಪಾಡಿಯವರ ವಿದ್ವತ್ಪೂರ್ಣ ಭಾಷಣವನ್ನೂ ಒಳಗೊಂಡ, ಅಮೆರಿಕದ ಹಲವಾರು ಹಿರಿಯ ಕಿರಿಯ ಕನ್ನಡ ಬರಹಗಾರರ ಉತ್ಕೃಷ್ಟ ಲೇಖನಗಳ ಈ ಗ್ರಂಥವನ್ನು ಕನ್ನಡ ಸಾಹಿತ್ಯ ರಂಗವು ಕನ್ನಡದ ಉದ್ದಾಮ ಪಂಡಿತರೂ ಕನ್ನಡ ಶಬ್ದಕೋಶದ ದಿಗ್ಗಜರೂ ಶತಮಾನೋತ್ಸವನ್ನು ಆಚರಿಸಿಕೊಂಡ ಹಲವೇ ಧೀಮಂತರಲ್ಲಿ ಒಬ್ಬರಾದ ಡಾ. ಜಿ. ವೆಂಕಟಸುಬ್ಬಯ್ಯನವರಿಗೆ ಅರ್ಪಿಸಲು ನಮಗೆ ಅತ್ಯಂತ ಹೆಮ್ಮೆಯಾಗುತ್ತಿದೆ. ಇಂಥಾ ಒಂದು ಕೊಡುಗೆಯು ಸಾಧ್ಯವಾಗುವಂತೆ ಮಾಡಿದ ರಂಗದ ಗೆಳೆಯ ಶ್ರೀ ವತ್ಸ ಕುಮಾರ್ ಅವರ ಔದಾರ್ಯವನ್ನು ನೆನೆಯುತ್ತಾ, ರಂಗದ ಈ ಕೊಡುಗೆಯನ್ನು

ವಿಶ್ವದಾದ್ಯಂತ ಹರಡಿರುವ ಕನ್ನಡ ಓದುಗರು ಮೆಚ್ಚುವರೆಂಬ ಭರವಸೆ ವ್ಯಕ್ತಪಡಿಸುತ್ತಾ, ಮತ್ತೊಮ್ಮೆ ಶುಭಾಶಯಗಳೊಂದಿಗೆ,

**ಮೈ. ಶ್ರೀ. ನಟರಾಜ** ಮತ್ತು **ಆಹಿತಾನಲ (ನಾಗ ಐತಾಳ)**

(ಕನ್ನಡ ಸಾಹಿತ್ಯ ರಂಗದ ಕಾರ್ಯಕಾರೀ ಸಮಿತಿಯ ಅಧ್ಯಕ್ಷ)

(ಕನ್ನಡ ಸಾಹಿತ್ಯ ರಂಗದ ಆಡಳಿತ ಮಂಡಳಿಯ ಅಧ್ಯಕ್ಷ)

# ಪ್ರಸ್ತಾವನೆ

'ರಘುಪತಿ ರಾಘವ ರಾಜಾರಾಮ್ ಪತಿತ ಪಾವನ ಸೀತಾರಾಮ್, ಈಶ್ವರ ಅಲ್ಲಾ ತೇರೋ ನಾಮ್, ಸಬಕೋ ಸನ್ಮತಿ ದೇ ಭಗವಾನ್' – ನಮ್ಮ ಸ್ವಾತಂತ್ರ್ಯ ಸಂಗ್ರಾಮದ ಬೀಜಮಂತ್ರವಾದ ಭಜನೆ! ಎಲ್ಲಿಯ ಸ್ವಾತಂತ್ರ್ಯ ಸಂಗ್ರಾಮ! ಎಲ್ಲಿಯ ದೇವರ ಭಜನೆ! ಒಂದಕ್ಕೊಂದು ಎಂತಹ ಸಂಬಂಧ! 'ಗೋಕುಲಾಷ್ಟಮಿಯಲ್ಲಿ ಇಮಾಂ ಸಾಬಿ' ಅಂದ ಹಾಗೆ ಎನ್ನಿಸಬಹುದು ಮೇಲ್ನೋಟಕ್ಕೆ. ಆದರೆ ಒಳಹೊಕ್ಕು ನೋಡಿದಾಗ ನಮ್ಮದೇ ಆದ, ಅಂದಿಗೆ ಹೊಸ ಮಾದರಿಯಾಗಿದ್ದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಇದು ಬಹಳವೇ ಸೂಕ್ತವಾದ ಬೀಜಮಂತ್ರವಾಗಿತ್ತು ಎಂಬುದು ವಿದಿತವಾಗುತ್ತದೆ. ಭಾರತದಲ್ಲಿ ಭಕ್ತಿಗೆ ಮತ್ತು ಧರ್ಮಕ್ಕೆ ಒಂದು ಸರ್ವ ವ್ಯಾಪಕವಾದ ಗುಣವಿದೆ. ಅದು ಜೀವನದಲ್ಲಿ ಒಂದು ಪ್ರತ್ಯೇಕವಾದ ಕಂಪಾರ್ಟ್‌ಮೆಂಟಿನಲ್ಲಿ 'ಭಕ್ತಿ ಹಾಗೂ ಧರ್ಮ' ಎಂಬ ಲೇಬಲ್ ಹಚ್ಚಿ ಕಾದಿರಿಸಿದ ವಸ್ತುವಲ್ಲ. ಜೀವನದ ಪ್ರತಿಯೊಂದು ಸ್ತರದಲ್ಲೂ ಪ್ರತಿಯೊಂದು ಆಯಾಮದಲ್ಲೂ ಅದರ ಪ್ರಭಾವವಿದೆ. ಸ್ವಾತಂತ್ರ್ಯ ಸಂಗ್ರಾಮದಂಥ ಘನ ಕಾರ್ಯವೇ ಆಗಲಿ, ಮಗುವಿಗೆ ಹಾಲು ಕುಡಿಸುವಂಥ ದೈನಂದಿನ ಚಟುವಟಿಕೆಯೇ ಆಗಲಿ ಆಯಾ ಸ್ಥಳದಲ್ಲಿ ಅಲ್ಲಲ್ಲೇ ಭಕ್ತಿಯ ಅಭಿವ್ಯಕ್ತಿಗೆ ಒಂದು ಮಾಧ್ಯಮವಾಗುವ ಚಟುವಟಿಕೆಗಳಾಗುತ್ತವೆ ಅವು. ಭಾರತದಲ್ಲೆಲ್ಲ ಇರುವಂತೆ ಅವಳ ತನುಜಾತೆಯಾದ ಕರ್ನಾಟಕದಲ್ಲೂ ದಿನದಿನದ ಜೀವನದಲ್ಲಿ ಭಕ್ತಿ ತಾನೇತಾನಾಗಿ ಹೊಮ್ಮಿ ಸೂಸುತ್ತದೆ. ಜಾಗತೀಕರಣದ ಈ ಯುಗದಲ್ಲಿ ನಗರಗಳಲ್ಲಿ ಈಗ ಜೀವನದ ಅವಿಭಾಜ್ಯ ಅಂಗವಾದ ಅಂತಹ ಭಕ್ತಿ ವಿರಳವಾಗಿರಬಹುದು. ಆದರೆ ಹಳ್ಳಿಹಳ್ಳಿಗಳಲ್ಲಿ, ನಗರಗಳಲ್ಲಿ ಕೂಡಾ ಹೆಚ್ಚು ಆಳವಾದ ಸಾಂಸ್ಕೃತಿಕ ಪ್ರಭಾವವುಳ್ಳ ಕೆಲವು ವಲಯಗಳಲ್ಲಿ ಇಂದಿಗೂ ಭಕ್ತಿ ಎಂಬುದು ಜೀವನ ಸಂಗೀತಕ್ಕೆ ಹಿಡಿದ ಶ್ರುತಿಯಾಗಿ ಹಿನ್ನೆಲೆಯಲ್ಲಿ ಮಿಡಿಯುತ್ತಿರುತ್ತದೆ. ಅದು ಅಲ್ಲಿ ಯಕ್ಷಗಾನವಾಗಿ, ಇಲ್ಲಿ ಜೋಗುಳವಾಗಿ, ಮತ್ತೆಲ್ಲೋ ಕವಿವಾಣಿಯಾಗಿ ಚಿಮ್ಮಿ ಹರಿಯುತ್ತಲೇ ಇದೆ.

ಬದುಕಿನ ಕನ್ನಡಿಯಾದ ಸಾಹಿತ್ಯದಲ್ಲಿ ಭಕ್ತಿ ಒಂದು ಸುಂದರ ಅಭಿವ್ಯಕ್ತಿಯನ್ನು ಪಡೆದಿದೆ. ಪಂಪ, ರನ್ನರ ಕಾಲದಿಂದ ಹಿಡಿದು ಇತ್ತೀಚಿನ ಕವಿಗಳಾದ ಕುವೆಂಪು, ಬೇಂದ್ರೆ, ಪುತಿನ, ಶಿವರುದ್ರಪ್ಪ ಮುಂತಾದವರವರೆಗೂ ಕನ್ನಡ ಸಾಹಿತ್ಯದಲ್ಲಿ ಭಕ್ತಿಯ ಪ್ರವಾಹ ಪ್ರವಹಿಸುತ್ತಿದೆ. ಈ ಪ್ರವಾಹದ ತುಂತುರು ಹನಿಗಳನ್ನು ಹಿಡಿದು ಅದರಲ್ಲಿ

ಸೂಸುವ ಕಾಮನ ಬಿಲ್ಲನ್ನು ಕಂಡು ಆನಂದಿಸುವ ಪ್ರಯತ್ನ ಮಾಡಿದ್ದೇವೆ ನಾವು ಈ ಗ್ರಂಥದಲ್ಲಿ. ಪರಿಶುದ್ಧ ಸಾಹಿತ್ಯದಲ್ಲಿ 'ದೇವರು' ಎಂದರೆ ಎಲ್ಲಕ್ಕೂ ಮೀರಿದ ಉನ್ನತ ಚೈತನ್ಯ. ಜಗತ್ತನ್ನು ಆವರಿಸಿರುವ ಕ್ಷುಲ್ಲಕಗಳನ್ನು ಅಧ್ಯಾತ್ಮದ ಮೂಲಕ ಮೀರಲು, ಏರಲು ಸಾಧ್ಯವಾಗಿಸುವ ಸರ್ವನಿಯಾಮಕ ಚೈತನ್ಯ. ಈ ಪರಿಕಲ್ಪನೆಯ ಗ್ರಹಿಕೆ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆಯಾಗಿ ಕಂಡರೂ ಮೂಲದಲ್ಲಿ ಜಗತ್ತಿನ ಎಲ್ಲ ಕಾವ್ಯಗಳೂ ಈ ಒಂದೇ ಭಾವವನ್ನು ಸ್ಫುರಿಸುತ್ತವೆ. ಈ ಜಿಜ್ಞಾಸೆಯನ್ನು ಈ ಪುಸ್ತಕದ ಮೂಲಕ ಮತ್ತೆ ಮುನ್ನೆಲೆಗೆ ತಂದು ಜನಮಾನಸದಲ್ಲಿ ಭಕ್ತಿಯ ಕುರಿತು ಯೋಚನೆಗೆ ಹಚ್ಚುವುದೇ ನಮ್ಮ ಉದ್ದೇಶವಾಗಿದೆ. ಬಿಟ್ಟುಬಂದ ಕೊಂಡಿಗಳ ಹುಡುಕಾಟ ಅನಿವಾಸಿಗಳಾದ ನಮಗೆ ಏಕ ಕಾಲದಲ್ಲಿ ವೈಯಕ್ತಿಕವೂ ಸಾರ್ವತ್ರಿಕವೂ ಆಗಿರುವುದು ನಮಗೊದಗಿರುವ ಭಾಗ್ಯವೇ ಸರಿ.

ಹೊರನಾಡ ಕನ್ನಡಿಗರಿಗೆ ಕನ್ನಡ ಎಂಬುದು ಒಂದು ಭಾಷೆ ಮಾತ್ರವಲ್ಲ. ಕನ್ನಡವೆಂದರೆ ಒಂದು ಜೀವನ ದೃಷ್ಟಿ, ಒಳಗಿಂದಲೇ ಅರಳಿ ನಿಲ್ಲುವ ಒಂದು ಜೀವಂತ ಸೃಷ್ಟಿ. ಅದೇ ಕಾರಣಕ್ಕಾಗಿ ಹುಟ್ಟಿದ ಊರುಗಳಿಂದ ಸಾವಿರಾರು ಮೈಲಿ ದೂರ ನಿಂತ ವಲಸಿಗರಿಗೆ ಭಾಷೆಯೊಂದೇ ಎದೆಯಿಂದ ಎದೆಗೆ ನಿರಂತರ ಹರಿವ ನದಿಯಾಗಿದೆ. ಭಾಷೆಯೇ ತಂದೆ, ತಾಯಿ, ಬಂಧು, ಬಳಗ ಎಲ್ಲವೂ ಆಗಿದೆ. ಕನ್ನಡವನ್ನು ಎದೆಯೊಳಗೆ ಜೀವಂತವಾಗಿರಿಸಿಕೊಂಡೇ ಈ ಎಲ್ಲ ಬಂಧಗಳನ್ನೂ ನಾವು ನಮ್ಮೊಳಗೆ ಗಟ್ಟಿಗೊಳಿಸಿ-ಕೊಳ್ಳುತ್ತಿದ್ದೇವೆ.

ಸಾಹಿತ್ಯವೆಂಬುದು ಭಾಷೆಯ ಆಪ್ತಸಖ. ಈ ಆಪ್ತಸಖನಿಲ್ಲದೆ ಭಾಷೆಯದು ಶುಷ್ಕ ಪ್ರಲಾಪ. ಜೀವ ಪ್ರಪಂಚದ ನವರಸಗಳನ್ನೂ ಭಾಷೆಯಲ್ಲಿ ಸೂಕ್ತವಾಗಿ ಹಿಡಿದಿಡುವುದೇ ಸಾಹಿತ್ಯವೆಂಬ ಈ ಆಪ್ತಸಖನ ಆದ್ಯ ಕರ್ತವ್ಯ. ಈ ಕೆಲಸವನ್ನು ಸಾಹಿತ್ಯದ ಆರಾಧಕರು ಶತಮಾನಗಳಿಂದ ಮಾಡುತ್ತಲೇ ಬಂದಿದ್ದಾರೆ. ಮಾನವನ ಭಾವ ಪ್ರಪಂಚದಲ್ಲಿ ಮುಖ್ಯವಾದ ಭಕ್ತಿಯು ಈ ಗದ್ದಲದ ಕಾಲದಲ್ಲಿ ಅತಿ ಮುಖ್ಯವಾಗಿ ನಮಗೆ ಕಂಡಿದೆ.

ಭಕ್ತಿ ಸಾಹಿತ್ಯದ ಮೇಲಿನ ಲೇಖನಗಳ ನಮ್ಮ ಆಹ್ವಾನಕ್ಕೆ ಹರಿದು ಬಂದ ಲೇಖನಗಳ ಮಹಾಪೂರವೇ ಅನೇಕ ಅನಿವಾಸಿ ಕನ್ನಡಿಗರು ಜೀವನದಲ್ಲಿ ಕನ್ನಡಕ್ಕೆ ಎಷ್ಟು ದೊಡ್ಡ ಸ್ಥಾನ ನೀಡಿದ್ದಾರೆ ಎಂಬುದನ್ನು ಸ್ಪಷ್ಟಪಡಿಸಿತ್ತು! ವಚನ ಸಾಹಿತ್ಯದ ಮೇಲೆ ಬರೆದವರೇ ಹೆಚ್ಚು. ವಚನಗಳು ಹುಟ್ಟಿದ ಬೆಳೆದ ಸಾಮಾಜಿಕ ಹಿನ್ನೆಲೆಯನ್ನು ಚರ್ಚಿಸಿ ಜಾತಿರಹಿತ ವರ್ಗರಹಿತ ಸಮಾಜಕ್ಕೆ ವಚನಗಳು ಹಾಕಿದ ಭದ್ರ ತಳಪಾಯವನ್ನು ವರ್ಣಿಸುವ ಲೇಖನದಿಂದ ಹಿಡಿದು, ಶರಣ ಸತಿ ಲಿಂಗ ಪತಿ ಭಾವ, ವಚನಗಳಲ್ಲಿ ಮಾಯೆಯ ಕಲ್ಪನೆ, ಬದಲಾಗುತ್ತಿರುವ ಸಮಾಜದಲ್ಲಿ ವಚನಗಳ ಪ್ರಸ್ತುತತೆ ಹೀಗೆ

ವೈವಿಧ್ಯಮಯ ಲೇಖನಗಳು ವಚನ ಸಾಹಿತ್ಯ ಪ್ರಕಾರವನ್ನು ವಿಶ್ಲೇಷಿಸುತ್ತವೆ. ಕನ್ನಡದ ಇನ್ನೊಂದು ಉತ್ಕೃಷ್ಟ ಭಕ್ತಿ ಸಾಹಿತ್ಯ ಪ್ರಕಾರವಾದ ದಾಸ ಸಾಹಿತ್ಯದಲ್ಲೂ ಸಮಾಜ ಸುಧಾರಣೆಯಿಂದ ಹಿಡಿದು ಪುರಂದರದಾಸ ಸಾಹಿತ್ಯದಲ್ಲಿ ನವವಿಧ ಭಕ್ತಿ, ದಾಸರ ಕಾಲದ ರಾಜಕೀಯ ಹಾಗೂ ಸಾಮಾಜಿಕ ಆಗುಹೋಗುಗಳು, ದಾಸ ಸಾಹಿತ್ಯದಲ್ಲಿ ಒಗಟುಗಳು, ಹಾಸ್ಯ ಹೀಗೇ ಅನೇಕ ವಿಧಗಳಲ್ಲಿ ಅದರ ಸೊಗಡನ್ನು, ಬೆಡಗನ್ನು ಹಿಡಿದಿಡುವ ಪ್ರಯತ್ನ ಮಾಡಿದ ಲೇಖನಗಳಿವೆ. ಈ ಗ್ರಂಥದಲ್ಲಿ ಹೆಳವನಕಟ್ಟೆ ಗಿರಿಯಮ್ಮನೂ ಇದ್ದಾರೆ, ಜನಪದ ಕವಿಗಳೂ ಇದ್ದಾರೆ. ಶಿಶುನಾಳ ಶರೀಫರೂ ಇದ್ದಾರೆ, ಯಕ್ಷಗಾನ ಕಲಾವಿದರೂ ಇದ್ದಾರೆ. ನವೋದಯ ಕಾಲದ ರತ್ನತ್ರಯರಾದ ಕುವೆಂಪು, ಬೇಂದ್ರೆ, ಪುತಿನ ಅವರ ಹೆಜ್ಜೆ ಗುರುತುಗಳೂ ಇವೆ! ಒಟ್ಟಿನಲ್ಲಿ ಕನ್ನಡ ಭಕ್ತಿ ಸಾಹಿತ್ಯದ ಹಲವು ಬಗೆಯ ಮುತ್ತು ಮಾಣಿಕ್ಯಗಳು ಈ ಹಾರವನ್ನು ಅಲಂಕರಿಸಿವೆ.

ಕೊನೆಯಲ್ಲಿ ಸ್ವತಂತ್ರ ವಿಚಾರ ಧಾರೆಯನ್ನು ಹರಿಸಿ ಭಕ್ತಿ ಮತ್ತು ವಿಜ್ಞಾನ, ಭಕ್ತಿ-ವೈದ್ಯಕೀಯ ಉದ್ಯಮದಲ್ಲಿ ಒಂದು ಮಾರಾಟದ ವಸ್ತುವಾದಂಥ ಕುತೂಹಲಕಾರಿ ಲೇಖನಗಳೂ ಇವೆ. ಎಲ್ಲ ಲೇಖಕರಿಗೂ ಅವರವರ ಅಭಿವ್ಯಕ್ತಿಗೆ ಮುಕ್ತ ವೇದಿಕೆಯನ್ನು ಕಲ್ಪಿಸುವ ಉದ್ದೇಶ ನಮ್ಮದಾದ್ದರಿಂದ ಕೆಲವು ಲೇಖನಗಳು ಒಂದಕ್ಕೊಂದು ಪರಸ್ಪರ ವಿರೋಧ ನಿಲುವನ್ನು ತಾಳಿರುವುದನ್ನೂ ನೀವು ಗಮನಿಸಬಹುದು. ಇಲ್ಲಿಯ ಲೇಖನಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯ, ನಿಲುವು ಆಯಾ ಲೇಖಕರದ್ದಷ್ಟೇ ಹೊರತು ಅವು 'ಕನ್ನಡ ಸಾಹಿತ್ಯ ರಂಗ'ದ ಅಥವಾ ಸಂಪಾದಕ ವರ್ಗದ ನಿಲುವು ಅಥವಾ ಅಭಿಪ್ರಾಯಗಳಲ್ಲ ಎಂಬುದನ್ನು ಸ್ಪಷ್ಟಗೊಳಿಸಲು ಇಚ್ಛಿಸುತ್ತೇವೆ.

ಸಾಹಿತ್ಯ, ಸಂಗೀತ ಎರಡೂ ಭಾವ ಸಂವಹನಕ್ಕೆ ಮಾಧ್ಯಮಗಳು- ಒಂದು ಅಕ್ಷರಗಳ ಮೂಲಕ, ಇನ್ನೊಂದು ಸ್ವರಗಳ ಮೂಲಕ. ಭಕ್ತಿಯಂಥ ಉತ್ಕಟ ಭಾವನೆಯನ್ನು ಹೊಮ್ಮಿಸುವಲ್ಲಿ ಸಂಗೀತ, ಸಾಹಿತ್ಯ ಎರಡೂ ಒಂದಕ್ಕೊಂದು ಪೂರಕವಾದ ಅಂಶಗಳು. ಭಕ್ತಿ ಸಾಹಿತ್ಯದ ಮೇಲಿನ ಈ ಗ್ರಂಥಕ್ಕೆ ಜೊತೆಯಲ್ಲಿ ಪೂರಕವಾಗಿ ಸಂಗೀತದ ಧ್ವನಿಮುದ್ರಿಕೆಯೊಂದು ಇರಬೇಕೆಂಬ ಆಲೋಚನೆ ಮೊದಲು ಬಂದಿದ್ದು ಕನ್ನಡ ಸಾಹಿತ್ಯ ರಂಗದ ಆಡಳಿತ ಮಂಡಳಿಯ ಸದಸ್ಯರೂ, ಕಾರ್ಯಕಾರಿ ಸಮಿತಿಯ ಖಜಾಂಚಿಯೂ ಆದ ಗುಂಡು ಶಂಕರ್ ಅವರಿಗೆ. ಆ ವೇಳೆಯಲ್ಲಿ ಅಮೆರಿಕಾದಲ್ಲೇ ಇದ್ದ ಖ್ಯಾತ ಹಿಂದೂಸ್ತಾನಿ ಸಂಗೀತ ಗಾಯಕ ಪಂಡಿತ್ ನಾಗರಾಜ ಹವಾಲ್ದಾರ್ ಅವರ ಜೊತೆ ಮಾತುಕತೆಯಾಗಿ ಅವರ ತುಂಬು ಉತ್ಸಾಹ, ಪ್ರಗಲ್ಭ ಪಾಂಡಿತ್ಯದ ಫಲಶ್ರುತಿಯಾಗಿ ನಮ್ಮ ಗ್ರಂಥಕ್ಕೆ ಜೊತೆ ನೀಡಿತು ಒಂದು ಧ್ವನಿಮುದ್ರಿಕೆ. ಈ ಕಾರ್ಯಕ್ಕೆ ನಾಂದಿ ಹಾಡಿದ ಗುಂಡು ಶಂಕರ್ ಅವರಿಗೂ, ಬೆಂಬಲ ನೀಡಿದ ಅಧ್ಯಕ್ಷ ನಟರಾಜ ಮತ್ತು ಆಡಳಿತ

ಮಂಡಳಿಗೂ, ಸಹೃದಯಿ ಕಲಾವಿದ ಪಂಡಿತ್ ನಾಗರಾಜ್ ಹವಾಲ್ದಾರ್ ಅವರಿಗೂ ಹೃತ್ಪೂರ್ವಕ ಧನ್ಯವಾದಗಳು.

ಈ ಪುಸ್ತಕಕ್ಕೆ ಕಿರೀಟಪ್ರಾಯವಾಗಿ ಶ್ರೀ ಲಕ್ಷ್ಮೀಶ ತೋಳ್ಪಾಡಿ ಅವರ ಭಾಷಣ ಬರಹವಿರುವುದು ನಮ್ಮೆಲ್ಲರ ಸೌಭಾಗ್ಯ.

ಕನ್ನಡದ ಪ್ರಸಿದ್ಧ ಕಥೆಗಾರ್ತಿಯಾದ ವೈದೇಹಿಯವರ ಸೌಜನ್ಯ ಎಂಥದ್ದೆಂದರೆ ಅವರನ್ನು ಮಾತನಾಡಿಸುವಾಗಲೆ ಅವರು ನಮ್ಮ ಒಡಹುಟ್ಟು ಎಂಬ ಭಾವನೆ ಬಂದುಬಿಡುತ್ತದೆ! ಅವರು ನಮ್ಮ ಗ್ರಂಥಕ್ಕೆ ತಮ್ಮ ಒಂದು ಲೇಖನವನ್ನು ಕೊಡಮಾಡಿದ್ದಾರೆ. ನಮ್ಮ ಕೃತಜ್ಞತೆಗಳು ವೈದೇಹಿಯವರಿಗೆ ಸಲ್ಲುತ್ತವೆ. ಸಂಗೀತದಲ್ಲಿ ಮಾತ್ರವಲ್ಲದೆ ಸಾಹಿತ್ಯದಲ್ಲೂ ಅಪೂರ್ವ ಪ್ರತಿಭೆ ಹೊಂದಿದ ಪಂ. ನಾಗರಾಜ್ ಹವಾಲ್ದಾರ್ ಅವರ ಲೇಖನ ಇಲ್ಲಿಯ ಸಾಹಿತ್ಯಕ್ಕೆ ಸಂಗೀತದ ಲಾಲಿತ್ಯ ತಂದಿದೆ. ಅವರಿಗೆ ನಮ್ಮ ವಂದನೆಗಳು.

ಈ ಗ್ರಂಥಕ್ಕೆ ವಿದ್ವತ್ಪೂರ್ಣ ಮುನ್ನುಡಿಯನ್ನು ಬರೆದು ಕೊಟ್ಟ ಕನ್ನಡದ ಪ್ರತಿಭಾನ್ವಿತ ಕವಿ ಮತ್ತು ವಿಮರ್ಶಕರಾದ ಡಾ. ಜಿ. ಎಸ್. ಸಿದ್ಧಲಿಂಗಯ್ಯನವರಿಗೆ ಅನಂತಾನಂತ ವಂದನೆಗಳು. ಅವರ ಮುನ್ನುಡಿಯಿಂದ ಈ ಗ್ರಂಥದ ತೂಕ ಹೆಚ್ಚಿದೆ! ಯಾವ ಬಿಂಕ ಬಿಗುಮಾನವನ್ನೂ ತೋರದೆ ಕೇಳಿದ ತಕ್ಷಣ ಬರೆಯಲು ಅವರು ಒಪ್ಪಿಕೊಂಡಾಗ "ತುಂಬಿದ ಕೊಡ ತುಳುಕುವುದಿಲ್ಲ" ಎಂಬ ಗಾದೆ ನೆನಪಾಯಿತು.

ಸಂಪಾದಕ ಮಂಡಳಿಯ ಸಲಹೆಗಾರಾಗಿ ಮೈ. ಶ್ರೀ. ನಟರಾಜ ಮತ್ತು ನಾಗ ಐತಾಳರು ದಾರಿಯುದ್ದಕ್ಕೂ ದೀಪ ಹಿಡಿದು ಮಾರ್ಗದರ್ಶನ ನೀಡಿದ್ದಾರೆ. 'ಸಲಹೆಗಾರರು' ಎಂದರೆ ತೋಚಿದ ನಾಲ್ಕು ಮಾತನಾಡಿ ಕೈ ತೊಳೆದುಕೊಂಡರಾಯಿತು ಎನ್ನುವವರಲ್ಲ ಇವರು. ಬಂದ ಅಡೆತಡೆಗಳನ್ನು ನಿವಾರಿಸಲು ತಾವೂ ಸಹಾಯಹಸ್ತ ನೀಡಿದವರು. ಇನ್ನಿಲ್ಲದ ಕಾಳಜಿ, ಕಳಕಳಿ ತೋರಿದವರು. ಅವರ ಉಪಕಾರ ಸ್ಮರಣೆಯನ್ನು 'ಧನ್ಯವಾದಗಳು' ಎಂಬ ಒಂದು ಮಾತಿನಲ್ಲಿ ಹೇಳಿ ಪೂರೈಸಲಾಗದು.

ಈ ಗ್ರಂಥವನ್ನು ಪ್ರಾಯೋಜಿಸಿದ ವತ್ಸ ಕುಮಾರ್ ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. ಅವರಂಥ ಮಹನೀಯರು ಇಂತಹ ಸಾಹಿತ್ಯಕ ಕಾರ್ಯಕಲಾಪಗಳೆಂಬ ಹಕ್ಕಿಯ ರೆಕ್ಕೆಗಳಡಿಯ ಗಾಳಿ ಇದ್ದಂತೆ. ಆ ಗಾಳಿ ಯಾರ ಕಣ್ಣಿಗೂ ಬೀಳುವುದಿಲ್ಲ. ಆದರೆ ಗಾಳಿಯನ್ನು ಮೀಟದಲ್ಲದೆ ಹಕ್ಕಿ ಮೇಲೇರುವುದು ಸಾಧ್ಯವೇ ಇಲ್ಲ!

ಪ್ರಕಾಶನ ಎಂಬುದು ಬರಿಯ ವೃತ್ತಿಯಾಗದೆ ಕನ್ನಡ ತಾಯಿಯ ಸೇವೆ ಎಂಬಂತೆ ದುಡಿಯುತ್ತಿರುವವರು ಅಭಿನವದ ರವಿ ಕುಮಾರ್ ಅವರು. ಅವರ ಶ್ರದ್ಧೆ, ಸಂಪೂರ್ಣವಾಗಿ ತೊಡಗಿಸಿಕೊಳ್ಳುವಿಕೆ ಅವರ ಜೊತೆ ವ್ಯವಹರಿಸುವಾಗ ಹೆಜ್ಜೆಹೆಜ್ಜೆಗೂ ಅನುಭವವಾಗುತ್ತದೆ. ಅವರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು.

ಪುಸ್ತಕ ವಿನ್ಯಾಸ ಮಾಡಿಕೊಟ್ಟ ಶ್ರೀಧರ್, ಕರಡಚ್ಚು ತಿದ್ದಿದ ಇಂದ್ರಕುಮಾರ್ ಅವರಿಗೆ, ಪುಸ್ತಕವನ್ನು ಅಂದವಾಗಿ ಮುದ್ರಿಸಿದ ಲಕ್ಷ್ಮೀ ಮುದ್ರಣಾಲಯದವರಿಗೂ ಮತ್ತು ಮುಖಪುಟ ವಿನ್ಯಾಸವನ್ನು ಮಾಡಿದ ಗುರುಪ್ರಸಾದ್ ಎಂ. ಆರ್. ಅವರಿಗೂ ವಂದನೆಗಳು.

ನೀವು ಗಮನಿಸಿರಬಹುದು– ಈ ಪುಸ್ತಕದ ಸಂಪಾದಕ ಮಂಡಳಿ ಸಂಪೂರ್ಣವಾಗಿ ಮಹಿಳಾ ರಾಜ್ಯವಾಗಿರುತ್ತದೆ. ಕನ್ನಡ ಸಾಹಿತ್ಯ ರಂಗದಮಟ್ಟಿಗೆ ಹೇಳುವುದಾದರೆ ಇದುವರೆಗೆ ಪ್ರಕಟಿಸಿದ ಎಲ್ಲ ಪುಸ್ತಕಗಳ ಪೈಕಿ ಇದೇ ಮೊದಲ ಬಾರಿ ಸಂಪಾದಕವರ್ಗದಲ್ಲಿ ಮಹಿಳೆಯರೇ ಇರುವುದು. ನಮ್ಮ ಪಾಲಿನ ಈ ಗುರುತರ ಜವಾಬ್ದಾರಿಯನ್ನು ನಿಸ್ಪೃಹತೆಯಿಂದ, ಪ್ರೀತಿಯಿಂದ, ಶ್ರದ್ಧೆಯಿಂದ ನಿರ್ವಹಿಸಿದೆವು ಎಂಬ ತೃಪ್ತಿ ನಮಗಿದೆ. ಈ ಗ್ರಂಥದ ಬಗ್ಗೆ ನಿಮ್ಮ ಅನಿಸಿಕೆಗಳನ್ನು ನಮ್ಮೊಡನೆ ಹಂಚಿಕೊಂಡಾಗ ನಮ್ಮ ಎಲ್ಲ ಶ್ರಮಕ್ಕೂ ಸಾರ್ಥಕ ಭಾವ ಬರುತ್ತದೆ. ನಮ್ಮ ಈಮೇಲ್ ವಿಳಾಸ ಕೆಳಗಿದೆ

**ನಳಿನಿ ಮೈಯ** (nmaiya@gmail.com)
**ಸುಮತಿ ಮುದ್ದೇನಹಳ್ಳಿ** (sumathi_mv@hotmail.com)
**ಕಾವ್ಯಾ ನಾಗರಕಟ್ಟೆ** (kavya.kadame@gmail.com)

## ಅನುಕ್ರಮಣಿಕೆ

**ಅನುಬಂಧ**

# ಹುಡುಕುತ್ತ ಹೊರಟವರು

–ವೈದೇಹಿ

“ಒಂದು ದಿನ ನಾನು ಸ್ನಾನಕ್ಕೆ ಹೋದೆ. ನೀರು ಹದ ಮಾಡಿಕೊಳ್ಳಲು ತಣ್ಣೀರಿರಲಿಲ್ಲ. ದೇವರು ಓಡಿ ಬಂದು ‘ಇಲ್ಲಿದ್ದೀಯ?’ ಎನ್ನುತ್ತ ತಣ್ಣೀರು ತಂದು ಸ್ವತಃ ಬಿಸಿನೀರಿಗೆ ಬೆರೆಸಿ ಹದ ಮಾಡಿ ಜನೀಯ ತಲೆಗೆ ಎರೆದ. ಸ್ನಾನ ಮಾಡದೆ ಎಷ್ಟೋ ದಿನಗಳಾಗಿದ್ದವು. ‘ಅಲ್ಲಾಡದೆ ಕುಳಿತುಕೋ ನಾನೇ ತೊಳೆಯುತ್ತೇನೆ’ ಎನ್ನುತ್ತಾ ಕೂದಲುದ್ದಕ್ಕೂ ನೀರೆರೆದು ಚೆನ್ನಾಗಿ ತಿಕ್ಕಿ ತೊಳೆದು, ಒರೆಸಿ, ತಾಯಿಯಂತೆ ತಲೆಬಾಚಿ ಕಟ್ಟಿದ. ಸ್ವತಃ ತನ್ನ ಕೈಯಾರ.”

ಸ್ತ್ರೀ ಪುರುಷ ಹಮ್ಮು ಕಳೆದ ಪ್ರೀತಿಯ ಈ ಪರಿಯ ಹಾಡು ಹಾಡಿದವಳು ಮಹಾರಾಷ್ಟ್ರದ ಜನೀಬಾಯಿ. ಅನಾಥ ಹುಡುಗಿ. ವಿಠ್ಠಲನ ಪರಮಭಕ್ತೆ. ಈ ವಿಠ್ಠಲ ಅವಳ ಎಲ್ಲ ಕೆಲಸಕ್ಕೂ ನೆರವಾಗುವವ. ಅವಳಿಗೆ ಬೀಳುವ ಪೆಟ್ಟುಗಳನ್ನು ತಾನು ತಿನ್ನುವವ. ಅವಳ ತಲೆಯಲ್ಲಿ ಬೀಡುಬಿಟ್ಟಿದ್ದ ಹೇನುಗಳನ್ನು ವಿಠೂಬಾಯಿಯಾಗಿ ಬಂದು ಹೆಕ್ಕಿ ಚೊಕ್ಕ ಮಾಡಿದವ! ಗಂಡಸರ ಕೈಯಲ್ಲಿ ಹಿಡಿಕಟ್ಟು ಕೊಟ್ಟರೆ ಅವರ ಪೌರುಷ ಹೊರಟುಹೋಗುತ್ತದೆ ಎಂಬಂಥದನ್ನೇ ಕೇಳುತ್ತ ಬೆಳೆಯುವ ಹೆಣ್ಣು ಮನಸ್ಸುಗಳ ಈ ನಾಡಿನಲ್ಲಿ ಪರಮೋಚ್ಚವನ್ನೇ ಸಂಗಾತಿಯಾಗಿ ನೆಚ್ಚಿ ಹಾಡಿದ ಜನೀ ಆತ ಏನೆಲ್ಲ ಮಾಡಿದನೆಂದು ನಲಿದಳು!

ದೆಹಲಿಯ “ಮಾನುಷಿ” ಮಹಿಳಾ ದ್ವೈಮಾಸಿಕ ಹತ್ತು ವರ್ಷ ಕಳೆದ ನೆನಪಿನ ಸಂಚಿಕೆಯಾಗಿ ಹೊರತಂದ “ವಿಮೆನ್ ಭಕ್ತಾ ಪೊಯೆಟ್ಸ್” – ಎಂಬ ಕೃತಿ ನನ್ನೆದುರಿಗಿದೆ. ಈ ಕೃತಿ ಸಾಮಾನ್ಯವಾಗಿ ಒಂದು ಸ್ತಬ್ಧಚಿತ್ರದಂತೆ ಕಾಣುವ ಭಾರತೀಯ ಮಹಿಳೆಯ ಕುರಿತ ಕಲ್ಪನೆಯನ್ನೇ ಬುಡಮೇಲು ಮಾಡಿ ಅವಳ ಹರಿಯುವ ನೀರಿನಂತಹ ಜೀವಂತಿಕೆಯನ್ನು ಪುಟಪುಟಗಳಲ್ಲಿ ತುಂಬಿ ಹೇಳುತ್ತಿದೆ. ಮಹಿಳೆಯು ಇರಬೇಕಾದ ನಿರೀಕ್ಷಿತ ರೀತಿಯನ್ನು ತಳ್ಳಿಕೊಂಡು ತಮ್ಮದೇ ದಾರಿ ಹಿಡಿದ ಈ ಭಕ್ತೆಯರೆಲ್ಲ ಎಂತಹ ನಿಜ ಹೆಣ್ಣಾಗಿದ್ದರು! ಅಲೌಕಿಕ ಪ್ರೇಮಿಯ ಹಿಂದೆ ಆತನನ್ನು ಕಾಣದೆಯೇ, ಅಲೆದರು! ಎಲ್ಲಿ ಹೆಣ್ಣಾಗಿಯೇ ಸ್ವಾಭಾವಿಕವಾಗಿ ಇರಬೇಕೋ ಅಲ್ಲಿ ಸಂಪೂರ್ಣ ಹೆಣ್ಣಾಗಿಯೇ

ಉಳಿದರು! ಇವರೆಲ್ಲರ ಆರಾಧ್ಯ ದೈವ–ಗಂಡು ದೇವರು! ಆತನೇ ಪತಿ, ಪ್ರೇಮಿ. ದೇವರು ಮತ್ತು ಭಕ್ತ ಸಂಬಂಧದಲ್ಲಿ ಭಕ್ತ ಕೂಡ ಹೆಣ್ತನವನ್ನೇ ಅಪೇಕ್ಷಿಸುವಾಗ!

ಚೈತನ್ಯದೇವನ ದೇಹ ಹೆಣ್ಣುದೇಹದಂತೆಯೇ ಮೃದು ಮತ್ತು ಬಳಕು. ಪಾದದ ಬೆರಳು ತಳಿರುಗೆಂಪು ಕೋಮಲ – ಆತ ರಾಧೆಯ ಅವತಾರ – ಅಂತೆಲ್ಲ ಕೇಳಿದ್ದೇನೆ.

ಆಶ್ಚರ್ಯವೆಂದರೆ ದೇವೀ ಉಪಾಸಕರು ಯಾರೂ ದೇವಿಯನ್ನು ಪ್ರೇಯಸಿಯಾಗಿ ಗಣಿಸದೆ ಮಾತೃಸ್ಥಾನದಲ್ಲಿಯೇ ಇಟ್ಟರು. ತಾಯಿಯನ್ನಾಗಿ ಗಣಿಸಿ ಅವರು ಅವಳನ್ನು ಹೇಗೆಲ್ಲ ವರ್ಣಿಸಿದರು! ಶಂಕರಾಚಾರ್ಯರಂತೂ ಸೌಂದರ್ಯಲಹರೀ ಎಂಬ ನೂರು ಶ್ಲೋಕಗುಚ್ಛವನ್ನೇ ಆಕೆಯ ಕುರಿತು ರಚಿಸಿದ್ದಾರೆ. ಇದು ಒಂದು ತಾತ್ವಿಕ ಗ್ರಂಥ, ಮಂತ್ರಶಾಸ್ತ್ರ ಸಾರವನ್ನು ಒಳಗೊಂಡಿರುವ ಗ್ರಂಥ ಎನ್ನುತ್ತಾರೆ. ಅದರ ಪೂರ್ವಭಾಗ ನಲವತ್ತೊಂದು ಶ್ಲೋಕಗಳ ಆನಂದಲಹರಿಯಾದರೆ, ಉತ್ತರಭಾಗದ ಸೌಂದರ್ಯ ಲಹರಿಯ ತುಂಬ ಇರುವುದು ದೇವಿಯ ಮುಡಿಯಿಂದ ಪದತಲದವರೆಗಿನ ವರ್ಣನೆ. ಆದರೆ ಭಕ್ತೆಯರು? ತಮ್ಮ ಆರಾಧ್ಯದೈವವನ್ನು ಹಾಡುವುದೇ ಪ್ರೇಯಸೀ ಭಾವದಿಂದ. ಕಾರೈಕಲ್ ಅಮ್ಮೈಯಂತಹ ಕೆಲ ಭಕ್ತೆಯರನ್ನು ಬಿಟ್ಟರೆ.

ಈ ಗಂಡು ದೇವರು ಒಡ್ಡುವ ಪರೀಕ್ಷೆಗಳು, ಕಾಯಿಸುವುದು, ಸತಾಯಿಸುವುದು, ಕೆಣಕುವುದು, ಎಷ್ಟು ಕರೆದರೂ ಬಾರದ ಗಿರಿಧರ ಗೋಪಾಲ. ದೇವೀ ಆರಾಧಕರ ಕತೆಗಳಲ್ಲೆಲ್ಲೂ ಈ ಪ್ರಮಾಣದಲ್ಲಿ ಇದು ಕಾಣಸಿಗದು! ಕೊನೆಗೂ ಈ 'ಪತಿ' ದೇವರು ಆಪದ್ಬಾಂಧವನಾಗುತ್ತಾನೆ. ಭಕ್ತೆಯನ್ನು ತನ್ನೊಳಗೆ ಲೀನಗೊಳಿಸಿಕೊಳ್ಳುತ್ತಾನೆ...!

ಮೀರಾ, ಅಕ್ಕಮಹಾದೇವಿ, ಬಹಿನಾ, ಅವ್ವೈಯಾರ್, ಕಾರೈಕಲ್ ಅಮ್ಮೈ ಆಂಡಾಳ್, ಸಹಜೇಬಾಯಿ, ಲಾಲ್‌ದೇಡ್, ರಬಿಯಾ – ಹೀಗೆ ಸಾಲುಸಾಲು ದಕ್ಷಿಣದಿಂದ ಉತ್ತರಕ್ಕೆ ಹಂಬಿದ ಭಕ್ತಿಲತೆ. ಕರೆದರೆ ಇವರಂತೆ ಕರೆಯಬೇಕು; ಬಯಸಿದರೆ ಈ ತೀವ್ರದಲ್ಲಿ ಬಯಸಬೇಕು. ತ್ಯಜಿಸಿದರೆ ಹೀಗೆ ತ್ಯಜಿಸಬೇಕು ಮತ್ತು ಎದುರಿಸಿದರೆ ಹೀಗೆ ಎದುರಿಸಬೇಕು ಎಂಬಂತೆ. ಇವರ ಹಾಡುಗಳೆಂದರೆ ಮನಸ್ಸು ಸಂಪೂರ್ಣವಾಗಿ ಏಕಮುಖಿಯಾಗಿ ಧ್ಯಾನಸ್ಥವಾದಾಗ ಮಾತ್ರ ಚಿಮ್ಮಬಲ್ಲಂಥವು. ಕೃಷ್ಣನೇ ತನ್ನ ಪತಿಯೆಂದು ಸಾರಿದ ಆಂಡಾಳ್. ಅವಳ ತಿರುಪ್ಪಾವೈ ತುಂಬ ಪರಿಚಿತ ಪ್ರಸಿದ್ಧ ಹಾಗೂ ಜನಪ್ರಿಯ; ಆದರೆ ಅವಳ ನಾಚ್ಚಿಯಾರ್ ತಿರುಮೋಜಿಯ ಹಾಡು ಅಷ್ಟು ಪರಿಚಿತವಲ್ಲವಂತೆ. ಯಾಕೆಂದರೆ ಅದರಲ್ಲಿರುವ ಮುಕ್ತತೆ! ಬೆತ್ತಲೆ ದೇಹವನ್ನಾದರೂ ಸಹಿಸಬಹುದು ಜನ, ಬೆತ್ತಲೆ ಮನದ ಮಾತುಗಳನ್ನಲ್ಲ. ತನ್ನ 'ಅವನ' ಸಂಬಂಧದ ಕುರಿತು ಯಾವ ಬಿಡೆ ಇಲ್ಲದೆ ಆಂಡಾಳ್ ಹೇಳುತ್ತಾಳೆ–

My swelling breasts I dedicated
to the lord who holds
the sea fragrant conch

ಅವಳ ಏಕಾಂತದ ನಿಟ್ಟುಸಿರೊಂದು ಹೀಗೆ ಸುಯ್ಯುತ್ತದೆ–

Tell him that my life will be spared
only if he will come
to stay with me for one day
if he will enter me so as to leave
the mark of his saffron paste
upon my breasts

ಇವರೆಲ್ಲ ಮುಕ್ತಮನದ ಉತ್ಕಟ ಪ್ರೇಮಿಯರು. ಭಕ್ತಿಯ ಪರಮಾವಧಿಯಲ್ಲಿ ನಿಂತು ಲೋಕ ಧಿಕ್ಕರಿಸುವ ಶಕ್ತಿಯರು. ತನ್ನ ಯೌವನವನ್ನೇ ಸ್ವಇಚ್ಛೆಯಿಂದ ಕಳೆದುಕೊಂಡು ಆರಾಧ್ಯದೈವವನ್ನು ಭಜಿಸುತ್ತ ತನ್ನ ಜೀವಿತದುದ್ದಕ್ಕೂ ನಾಡಿನ ಉದ್ದಗಲ ರಾಜ–ರಾಜಕೀಯ–ಸಾಮಾನ್ಯ ಜನರ ನಡುವೆ ಸರಾಗ ಹೊಕ್ಕು ಹೊರಟು ಪ್ರಭಾವ ಬೀರಿದ ಅವ್ವೆಯಾರ್, ಪಿಶಾಚವೇಷ ಧರಿಸಿ ತಲೆ ಕೆಳಗಾಗಿ ನಡೆದ ಕಾರೈಕಲ್ ಅಮ್ಮೈ, ಬರಿ ಮೈಯಲ್ಲಿ ಶಿವನನ್ನರಸಿ ಹೊರಟ ಕಾಶ್ಮೀರದ ಲಾಲ್‌ದೇಡ್, "ಅತ್ತೆ ಕುಲನಾಶಿ ಎಂದರೇನು? ನಾದಿನಿ ಏನಂದರೇನು? ರಾಣಾ ಹೀಗಳೆದರೇನು? ಇಡೀ ಸಮಾಜವೇ ತನ್ನನ್ನು ಕುಲಟೆ ಎಂದು ಬಹಿಷ್ಕರಿಸಿದರೇನು, ತಾನು ಅವರೆನ್ನುವ 'ಮರ್ಯಾದೆ'ಯನ್ನೇ ಮರೆತು ಹೊರಬಂದ ಮೇಲೆ? ನನ್ನವ ಗಿರಿಧರ ಗೋಪಾಲ" ಎಂದು, ಗೆಜ್ಜೆನಿಷೇಧದ ಪದಗಳಿಗೆ ಗೆಜ್ಜೆಕಟ್ಟಿ ಕುಣಿಕುಣಿದು ಹಾಡುತ್ತ ತವರನ್ನೂ ಅತ್ತೆಮನೆಯನ್ನೂ ತೊರೆದು ಹೊರಟುಹೋದ ಮೀರಾ, ಸಿಡುಕ ಗಂಡನೊಡನೆ ಇದ್ದೇ ಭಕ್ತಿಮಾರ್ಗದಲ್ಲಿ ಪರಮಸಾಧನೆಗೈದ ಬಹಿನಾ...

ಬಹುಶಃ ಹೆಣ್ಣುಸತ್ವವೇ ಹೀಗೆ. ಒಮ್ಮೆ ಮನಸ್ಸು ಸತ್ಯವಾಗಿಯೂ ನೆಟ್ಟಿತೆಂದರೆ ಮತ್ತೆ ಅಲ್ಲಿಂದ ಪದ ಕೀಳುವುದಿಲ್ಲ. ದೇವರು ಅಲ್ಲಾಡಿದರೂ ಮನಸ್ಸು ಅಲ್ಲಾಡದು. ಭಕ್ತಿ ಪರಂಪರೆಯಲ್ಲಿ ನಾವು ಕಾಣುವುದು ಇದನ್ನೇ ಅಷ್ಟೆ? ನೆಟ್ಟ ಮನಸ್ಸು, ನಿಗರ್ವ, ಸಖೀಸಖ ಭಾವ.

ಗರ್ವ ಕಳೆಯದೇ "ಅಯ್ಯಾ ನೀ ಕೇಳಿದರೆ ಕೇಳು, ಕೇಳದಿರ್ದೊಡೆ ಮಾಣು. ನಾ ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯಾ..." ಎಂಬಂಥ ವಚನ ಹುಟ್ಟದು. ಗರ್ವ ಇರುವವರೆಗೂ ನಾನು, ನನ್ನನ್ನು ಪ್ರತಿಷ್ಠಾಪಿಸಿಕೊಳ್ಳುವ ಆಸೆ. ಹೆಣ್ಣೆಂದರೆ

ಹೀಗಿರಬೇಕೆಂಬುದನ್ನು ಅತ್ಯುತ್ತಮವಾಗಿ ನಟಿಸಿ ತೋರಿಸುವ ಗೀಳು ಸೃಜನಶೀಲತೆಗೆ ಮುಸುಕು ಹಾಕಿರುತ್ತದೆ. ಯಾವಾಗ ಗರ್ವ ಕಳೆಯುವುದೋ ಆಗ ಮಾತ್ರ ಅಕ್ಕಮಹಾದೇವಿಯಂತೆ ಉಟ್ಟ ಬಟ್ಟೆ ಬಿಸುಟು ಬೆತ್ತಲ ಮನದಿಂದ ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಪ್ರೇಮಿಯನ್ನು ಹುಡುಕಿಕೊಂಡು ಹೊರಡುವ ಧೈರ್ಯ ಬಂದೀತು. ಪಂಡಿತ ಪದಗಳಿಗಾಗಿ ಕಾಯದೆ, ಆಡುವ ಮಾತಿನಲ್ಲೇ ನೇರವಾಗಿ ಹೃದಯ ತೆರೆದಿಡುವ ತಾಕತ್ತು ಉದಿಸೀತು.

"ಹೂವ ತರುವರ ಮನೆಗೆ ಹುಲ್ಲ ತರುವ ಅವ್ವ ಲಕುಮೀರಮಣ ಇವಗಿಲ್ಲ ಗರುವ" ಜನೀಯ ತಲೆಯ ಹೇನನ್ನು ತೆಗೆದು ಚೊಕ್ಕ ಮಾಡಿದವನ ಬಳಿ ಇದ್ದದ್ದು ಇಂತಹ ನಿಗರ್ವ. ಸಖೀ-ಸಖರ ನಡುವಣ ನಿಜವಾದ ಸಖ್ಯಕ್ಕೆ ಲಿಂಗ ಪ್ರಾಧಾನ್ಯದ ಸೋಂಕೇ ಇಲ್ಲವೆಂಬುದನ್ನು ಅನುಭವಕ್ಕೆ ತಂದುಕೊಳ್ಳದೇ ಇರುವುದೇ ಇವತ್ತು ಗಂಡಿನಲ್ಲಿಯೂ ಹೆಣ್ಣಿನಲ್ಲಿಯೂ ಇರುವ ಮೇಲುಕೀಳು ಗೊಂದಲಕ್ಕೆ ಕಾರಣವಿರಬಹುದೆ?

*

ಈ ಭಕ್ತೆಯರ ಕಥೆಗಳು ಹೇಗಿವೆಯೋ ಹಾಗೆಯೇ ಇಷ್ಟವಾಗುತ್ತವೆ. ಬೇರೆ ಕೆಲಸವಿಲ್ಲದವರಂತೆ, ಇವನ್ನು ಸೀಳಿ ಸೆಳೆದು ತಮ್ಮ ಊಹೆಯನ್ನೇ ಸತ್ಯವೆಂಬಂತೆ ಸಾರುವ ವಿದ್ವಾಂಸರನ್ನು ಕಂಡರೆ ನಗುಬರುತ್ತದೆ. ಉದಾ: ವಿದ್ವಾಂಸರು ಮೀರಾಬಾಯಿಯ ಬದುಕಿನ ಕೆಲ ಪವಾಡಗಳ ರಹಸ್ಯ ಒಡೆದು ಹೇಳಿದ ಬಗೆ – ಅರಮನೆಯಲ್ಲಿಯೇ ಇದ್ದ ಮೀರಾಬಾಯಿಯ ಹಿತಾಸಕ್ತ ದಾಸದಾಸಿಯರು ರಾಣಾ ಕಳಿಸಿದ ವಿಷವನ್ನು ಬದಲಿಸಿರಬಹುದು; ವಿಷಸರ್ಪದ ಬದಲು ಬುಟ್ಟಿಯಲ್ಲಿ ಹೂಮಾಲೆ ಇರಿಸಿರಬಹುದು; ಮೀರಾ ದ್ವಾರಕೆಯ ದೇಗುಲದ ಕೃಷ್ಣ ವಿಗ್ರಹದಲ್ಲಿ ಲೀನವಾಗಲಿಲ್ಲ, ಬದಲು ಹಿಂಬಾಗಿಲಿನಿಂದ ಹೊರಟು ಸಮುದ್ರ ಸೇರಿರಬೇಕು – ಮುಂತಾಗಿ.

ಯಾವ ಆಧಾರವೂ ಇಲ್ಲದೆ ಕೇವಲ ಊಹಾವೀರರು ಮಾಡುವ ಬುದ್ಧಿವಂತಿಕೆಯ ಪ್ರದರ್ಶನದ ತೀರ್ಮಾನಗಳಿವು. ಇಷ್ಟಕ್ಕೂ ಹೀಗೆ ಊಹಿಸಲು ವಿದ್ವಾಂಸರು ಬೇಕೇ? ಊಹಿಸಬೇಕೆಂದರೆ ಹೀಗೂ ಅಲ್ಲ. ಇದಕ್ಕಿಂತ ಇನ್ನೂ ಹೆಚ್ಚು ಸತ್ಯವಾಗಿ ಕಾಣುವಂತೆ ಕಲ್ಪಿಸುತ್ತಾ ಹೋಗಬಹುದು. ಪ್ರಶ್ನೆಯೆಂದರೆ ಇವತ್ತು ನಮಗೆ ಮೀರಾ ಯಾತಕ್ಕೆ ಅಗತ್ಯವಾಗಿದ್ದಾಳೆ ಎಂಬುದು. ಅವಳ ಬದುಕಿನ ಇಂತಹ ಪವಾಡಗಳಿಗಾಗಿಯೇ? ಪವಾಡದ ಮೌಢ್ಯ ಹರಿಸುವುದೇ ವಿದ್ವಾಂಸರ ಉದ್ದೇಶವಾದರೆ ಪವಾಡದಿಂದಲೇ ಅವಳತ್ತ ತಮ್ಮನ್ನು ಸೆಳೆಸಿಕೊಂಡವರು, ಪವಾಡಗಳ ರುಚಿಯ ಚಟ ಹತ್ತಿಸಿಕೊಂಡವರು 'ರಹಸ್ಯ ಸ್ಫೋಟ'ವೆನಿಸಿ ಕೊಡುವುದರ ಅಡಿಯಿಂದಲೇ ಮತ್ತೊಂದು ಮಿಥ್ಯೆ ಸೃಷ್ಟಿಸಿ ಹಬ್ಬಿಸಬಲ್ಲವರಾಗಿರುತ್ತಾರೆ.

ಅಕ್ಕಮಹಾದೇವಿಯ ಕತೆ ಕೇಳುತ್ತ ಒಬ್ಬ ಹುಡುಗಿ "ಅದೆಲ್ಲ ಸರೀ, ಆಕೆ ಮುಟ್ಟಾದರೆ ಹೇಗಿರುತ್ತಿದ್ದಳು?" – ಎಂದು ಚಕಿತಳಾಗಿ ಪ್ರಶ್ನೆ ಹಾಕಿದಾಗ ಅದಕ್ಕುತ್ತರ ಏನು ಹೇಳುವುದೆಂದೇ ತಿಳಿಯದೆ ಹಿರಿಯರೊಬ್ಬರು "ಅವಳು ತನ್ನ ಮಾಯಾಶಕ್ತಿಯಿಂದ ಮುಟ್ಟೇ ಆಗದಂತೆ ಮಾಡಿಕೊಂಡಿರಬಹುದು" – ಎಂದು ಮೆಲ್ಲನೆ ಅಕ್ಕನಿಗೆ ಪವಾಡದ ಗಂಟು ಹಾಕಲು ಯತ್ನಿಸಿದ್ದು ಇಲ್ಲಿ ನೆನಪಾಗುತ್ತದೆ.

*

ಭಕ್ತೆಯರ ಹಾಡುಗಳನ್ನು ಹಾಡುವ, ಚರಿತ್ರೆ ಓದುವ, ಬೆರಗಾಗುವ, ಅಭಿಮಾನಿಸುವಷ್ಟು ಸುಲಭ ಇವರಂತೆ 'ಎಲ್ಲ ಬಿಡುವ' ಕ್ರಿಯೆ ಅಲ್ಲವಲ್ಲ! ಇವರೆಲ್ಲ ಭ್ರಾಂತರೆಂದೂ, ಹುಚ್ಚರೆಂದೂ ಒಂದು ಹಂತದಲ್ಲಿ ಕರೆಸಿಕೊಂಡವರು, ಇಂದು ಇದ್ದರೂ ಹಾಗೆಯೇ ಕರೆಸಿಕೊಳ್ಳುವವರು. ಇವರನ್ನೆಲ್ಲ ಓದಿಕೊಳ್ಳುವಾಗ ಆ ಹುಚ್ಚು ಮತ್ತು 'ಭ್ರಾಂತು'ಗಳನ್ನೇ ಪ್ರೀತಿಸುವಂತಾಗುತ್ತದೆ. ಆದರೆ ವ್ಯವಸ್ಥೆಯ ಬಾಯಿಪಾಠದಂತೆ ನಡೆಯುವ, ನುಡಿಯುವ, ಷೋಕೇಸಿನೊಳಗಿನ ಪೊಟ್ಟಣದಂತಾಗಲು ಹೊರಟಿರುವ ಇವತ್ತಿನ ಮನುಷ್ಯ ಬದುಕಿನಲ್ಲಿ ಈ ಬಗೆಯ ಕನಸು ಕೂಡ ಹುಚ್ಚೆನಿಸೀತಲ್ಲವೆ?

ಝಿರ್ರೋ ಮಳೆ ಸುರಿಯುತ್ತಿದೆ. ಒಳಗೆ ಸಣ್ಣ ಕತ್ತಲೆ ಇದೆ. ಒಂದು ಹಕ್ಕಿ ಕೂಡ ಕೂಗದೆ ಸಮಸ್ತ ಪ್ರಕೃತಿ ಮಳೆಸದ್ದು ಆಲಿಸುತ್ತಿರುವಂತಿದೆ. ಸುರಿಯುತ್ತಿರುವ ಮಳೆ ಮತ್ತು ಭಕ್ತೆಯೊಬ್ಬಳ ಹಾಡು....

**ಕೂಗಿ ಕರೆದೆ**
**ಕೇಳಿಸುವುದಿಲ್ಲ ಎಂದ ಆತನ**
**ದನಿ ನನಗೆ**
**ಕೇಳಿಸಿತು!**
**ಹೇಳು ಸಖೀ ನನ್ನ ಅವನ**
**ಪ್ರೀತಿಯ ತೂಕವನ್ನಲ್ಲ.**
**ಆತನಿಂದ ನಾನಿರುವ**
**ದೂರವೆಷ್ಟು?**

■

# ಭಕ್ತಿ ಸಂಗೀತದ
# 'ಗಂಗಾ-ಕಾವೇರಿ' ಸಮ್ಮಿಲನ ಕರ್ನಾಟಕದಲ್ಲಿ

-ಡಾ. ನಾಗರಾಜ ಹವಾಲ್ದಾರ್

**ಸಂ**ಗೀತದ ಮೂಲ ಉದ್ದೇಶ ಆತ್ಮನಿವೇದನೆ, ಆತ್ಮಾವಲೋಕನ. ಭಗವಂತನಿಗೆ ಭಕ್ತಿಪೂರ್ವಕವಾಗಿ ಸಮರ್ಪಿಸಿದ ಅಗೋಚರ ನೈವೇದ್ಯ ಅದು. ಕನ್ನಡ ಭಕ್ತಿ ಸಾಹಿತ್ಯ ಈ ನೈವೇದ್ಯಕ್ಕೆ ಪೂರಕವಾಗಿ ಒದಗಿಸಿದ ಸಾಮಗ್ರಿ ಅನನ್ಯವಾದುದು. ಸಂಗೀತದಲ್ಲಿ, ಸಾಹಿತ್ಯದಲ್ಲಿ ಈ ಬಗೆಯ ವಿಶಿಷ್ಟ ಸಾಂಸ್ಕೃತಿಕ ಕೊಡುಗೆಯನ್ನು ವಿಶ್ವಕ್ಕೆ ನೀಡಿದ ನಮ್ಮ ಕನ್ನಡ ನಾಡಿನ ಅಪೂರ್ವ ಪರಂಪರೆಯ ಅವಲೋಕನದ ಆಶಯ ಈ ಲೇಖನದ್ದು.

ಭಾರತೀಯರು ಹೆಮ್ಮೆಪಡಬಹುದಾದ ಸತ್ಯವೆಂದರೆ ನಮ್ಮ ದೇಶದಲ್ಲಿ ಶತಶತಮಾನಗಳಿಂದ ಹುಟ್ಟಿ ಬೆಳೆದು ಸಾಗುತ್ತಾ ಬಂದಿರುವ ಎರಡು ಪ್ರಬುದ್ಧವಾದ ಶಾಸ್ತ್ರೀಯ ಸಂಗೀತ ಶೈಲಿಗಳು—ಕರ್ನಾಟಕ ಹಾಗೂ ಹಿಂದೂಸ್ತಾನಿ (ದಕ್ಷಿಣಾದಿ-ಉತ್ತರಾದಿ). ಇಂತಹ ಎರಡು ಸಂಗೀತ ಪದ್ಧತಿಗಳು, ಅವುಗಳ ಸೌಂದರ್ಯ, ಮಾಧುರ್ಯ, ವೈಶಿಷ್ಟ್ಯ ಇಡೀ ವಿಶ್ವಕ್ಕೆ ಭಾರತದ ಕೊಡುಗೆ ಎಂದು ಗೌರವ ಅಭಿಮಾನದಿಂದ ಹೇಳಬಹುದು. ಈ ಎರಡೂ ಪದ್ಧತಿಗಳಲ್ಲಿ ಮೇರು ಕಲಾವಿದರನ್ನು ನೀಡಿದ, ನೀಡುತ್ತಿರುವ ಏಕಮಾತ್ರ ರಾಜ್ಯವೆಂದರೆ ನಮ್ಮ ಕನ್ನಡನಾಡು. ವೀಣೆ ಶೇಷಣ್ಣ, ಸುಬ್ಬಣ್ಣ, ವಾಸುದೇವಾಚಾರ್, ಆರ್. ಕೆ. ಶ್ರೀಕಂಠನ್, ಸವಾಯಿ ಗಂಧರ್ವ, ಮಲ್ಲಿಕಾರ್ಜುನ ಮನಸೂರ್, ಭೀಮಸೇನ ಜೋಶಿ, ಗಂಗೂಬಾಯಿ ಹಾನಗಲ್, ಕುಮಾರ ಗಂಧರ್ವ ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಮೈಸೂರು ಒಡೆಯರ ಕಲಾಪ್ರೇಮದಿಂದ ಎರಡೂ ಪದ್ಧತಿಗಳು ನಮ್ಮಲ್ಲಿ ಬೆಳೆಯಲು ಅನುಕೂಲವಾಯಿತು. ಬರೋಡ ಸಂಸ್ಥಾನದಿಂದ ಉಸ್ತಾದ್ ಫಯಾಜ್ ಖಾನ್, ಅಬ್ದುಲ್ ಕರೀಮ್ ಖಾನ್ ಮುಂತಾದ ಹಿಂದೂಸ್ತಾನಿ ಸಂಗೀತಗಾರರು ನಮ್ಮಲ್ಲಿಗೆ ಬರುತ್ತಿದ್ದರು. ಮಾರ್ಗ ಮಧ್ಯೆ ಧಾರವಾಡ-ಹುಬ್ಬಳ್ಳಿಯಂತಹ ಊರುಗಳಲ್ಲಿ ಇವರ ಬೈಠಕ್ ನಡೆಯುತ್ತಿತ್ತು. ಹುಬ್ಬಳ್ಳಿಯ ಹತ್ತಿರದ ಕುಂದಗೋಳದ ನಾಡಿಗೇರರಲ್ಲಿ ಅಬ್ದುಲ್ ಕರೀಮ್ ಖಾನ್ ಅವರು ಬಿಡಾರ ಹೂಡುತ್ತಿದ್ದರು. ಅಲ್ಲಿಯ ಬಾಲಕ 'ರಾಮಭಾವು' ಉರುಫ್ ಮುಂದಿನ ದಿನಗಳ

ಸವಾಯಿ ಗಂಧರ್ವ ಕರ್ನಾಟಕದಲ್ಲಿ ಕಿರಾನಾ ಘರಾನೆಯ ಕೈದೀಪವಾದರು. ಅವರ ಶಿಷ್ಯರೇ ಡಾ. ಗಂಗೂಬಾಯಿ ಹಾನಗಲ್, ಪಂ. ಭೀಮಸೇನ ಜೋಶಿ, ಪಂ. ವೆಂಕಟರಾವ್ ರಾಮದುರ್ಗ, ಉಸ್ತಾದ್ ಫಿರೋಜ್ ದಸ್ತೂರ್ ಮುಂತಾದವರು. ಅಲ್ಲಿಯೇ ಹತ್ತಿರದ ಗದುಗಿನಲ್ಲಿ ಪಂಚಾಕ್ಷರಿ ಗವಾಯಿಗಳು, ಮಲ್ಲಿಕಾರ್ಜುನ ಮನಸೂರರು ನೀಲಕಂಠಬುವಾ ಮೀರಜಕರ್ ಅವರಿಂದ ಗ್ವಾಲಿಯರ್ ಘರಾನೆಯಲ್ಲಿ ತಾಲೀಮು ಪಡೆಯುತ್ತಿದ್ದರು. ಮೈಸೂರಿನ ವೀಣೆ ಶೇಷಣ್ಣ ಮುಂತಾದ ಕಲಾವಿದರು ಬರೋಡ ಆಸ್ಥಾನಕ್ಕೆ ಸಂಗೀತ ಕಾರ್ಯಕ್ರಮಕ್ಕೆ ಭೇಟಿ ನೀಡುತ್ತಿದ್ದರು. ಪ್ರಸಿದ್ಧ ವಾಗ್ಗೇಯಕಾರ, ಮೈಸೂರು ವಾಸುದೇವಾಚಾರ್ಯರಿಗೆ ಸಂಗೀತದಲ್ಲಿ ಉನ್ನತ ವ್ಯಾಸಂಗಕ್ಕಾಗಿ ತಮಿಳುನಾಡಿನ ಪಟ್ಣಂ ಸುಬ್ರಮಣ್ಯ ಅಯ್ಯರ್ ಅವರಲ್ಲಿ ಗುರುಕುಲ ಪದ್ಧತಿಯಲ್ಲಿ ವ್ಯಾಸಂಗ ಮಾಡಲು ಶಿಷ್ಯವೇತನ ಕೊಟ್ಟು ಕಳುಹಿಸಿದ್ದು ಮೈಸೂರು ದೊರೆಗಳ ಔದಾರ್ಯ, ಕಲಾಪ್ರೇಮ, ದೂರದೃಷ್ಟಿಗೆ ಕೈಗನ್ನಡಿಯಾಗಿದೆ.

ಆತ್ಮ ನಿವೇದನೆಯ ಮಾರ್ಗದಲ್ಲಿ ಸಂಗೀತದ ಮೂಲಕ ಭಕ್ತಿಪೂರ್ವಕ ಆತ್ಮ ಸಮರ್ಪಣೆ ಒಂದು ಅವಿಭಾಜ್ಯ ಅಂಗವಾಗಿ ಬೆಳೆದುಬಂತು. 'ಎನ್ನ ಕಾಯವ ದಂಡಿಗೆಯ ಮಾಡಯ್ಯ', 'ನಾದಪ್ರಿಯ ಶಿವನಲ್ಲ – ಭಕ್ತಿಪ್ರಿಯ ನಮ್ಮ ಕೂಡಲ ಸಂಗಮದೇವ' ಎಂದು ಬಸವಣ್ಣ ಸಾರಿದರು. 'ಕೇಳನೋ ಹರಿ ತಾಳನೋ – ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ' ಎಂದು ಉದ್ಗರಿಸಿದರು ಪುರಂದರದಾಸರು. ಹೀಗಾಗಿ ಐತಿಹಾಸಿಕವಾಗಿ ಸಾಂಸ್ಕೃತಿಕವಾಗಿ ಗಮನಿಸಿದರೆ ಪ್ರತಿಯೊಂದು ಹಳ್ಳಿಯಲ್ಲೂ ಕನಿಷ್ಠ ಒಂದು ಭಜನಾ ಮಂಡಳಿಯಾದರೂ ನಮಗೆ ಸಿಕ್ಕೇ ಸಿಗುತ್ತದೆ. ಒಟ್ಟಾರೆ ನಮ್ಮ ನಾಡು–ನುಡಿಗಳು ಜೀವನದಲ್ಲಿ ಸಂಗೀತ–ಹಾಡುವಿಕೆ, ವಚನ–ದಾಸರಪದ, ತತ್ವಪದಗಳು ಹಾಸುಹೊಕ್ಕಾಗಿ ಬೆಸೆದು ಬಂದಿದೆ.

ಪ್ರಬುದ್ಧವಾದ ಎರಡು ಶಾಸ್ತ್ರೀಯ ಪದ್ಧತಿಗಳು ಅದಕ್ಕೆ ಪೂರಕವಾಗಿ ಅದರದೇ ಆದ ಸಾಹಿತ್ಯ ಆ ಕಾಲದಲ್ಲಿ ಅದಾಗಲೇ ವಿಪುಲವಾಗಿ ಇದ್ದಾಗಲೂ ನಮ್ಮ ವಚನ ಸಾಹಿತ್ಯ ಮತ್ತು ದಾಸ ಸಾಹಿತ್ಯ, ಸಂಗೀತ ಪರಂಪರೆಯ ಅವಿಭಾಜ್ಯ ಅಂಗವಾಗಿ ಬೆಳೆದಿದ್ದು ಇನ್ನೊಂದು ಐತಿಹಾಸಿಕ ಪಯಣ. ಮೈಸೂರಿನ ಆಸ್ಥಾನ ವಿದ್ವಾಂಸರಾಗಿ ಬಿಡಾರಂ ಕೃಷ್ಣಪ್ಪನವರು ದಾಸರ ಪದಗಳನ್ನು ಶಾಸ್ತ್ರೀಯ ಸಂಗೀತದ ಕಛೇರಿಯಲ್ಲಿ ಹಾಡಲು ನಾಂದಿ ಹಾಕಿದರು. ಎಮ್. ಎಸ್. ಸುಬ್ಬಲಕ್ಷ್ಮಿಯವರು ಹಾಡಿ ಪ್ರಸಿದ್ಧಗೊಳಿಸಿದ 'ಜಗದೋದ್ಧಾರನ' ಗೀತೆಗೆ ಸ್ವರಸಂಯೋಜನೆ ಮಾಡಿದ ಬೆಳಕವಾಡಿ ಶ್ರೀನಿವಾಸ ಅಯ್ಯಂಗಾರ್ ಕನ್ನಡದವರು ಹಾಗೂ ಮೈಸೂರಿನ ಆಸ್ಥಾನ ವಿದ್ವಾಂಸರಾಗಿದ್ದರು. ಗದುಗಿನ ಪಂಚಾಕ್ಷರ ಗವಾಯಿಗಳು ವಚನಗಳನ್ನು ಹಾಡಲಾರಂಭಿಸಿದರು. ಅನಕ್ಕೃ ಅವರ ಪ್ರೇರಣೆ ಹಾಗೂ ಪ್ರಚೋದನೆಯಿಂದ ಮಲ್ಲಿಕಾರ್ಜುನ ಮನಸೂರರು ವಚನ

ಗಾಯನವನ್ನು ರಾಷ್ಟ್ರೀಯ ಮಟ್ಟಕ್ಕೆ ಕೊಂಡೊಯ್ದರು. ಆಕಾಶವಾಣಿಯ ರಾಷ್ಟ್ರೀಯ ಶಾಸ್ತ್ರೀಯ ಸಂಗೀತ ಕಾರ್ಯಕ್ರಮದಲ್ಲಿ ಪಟ್ಟು ಹಿಡಿದು, ಶಾಸ್ತ್ರೀಯ ಸಂಗೀತದ ಚೌಕಟ್ಟಿನಲ್ಲೇ ವಚನವನ್ನೂ ಹಾಡಿದರು. ಸಂಗೀತಕ್ಕೆ ಭಾಷೆಯ ಬಂಧನವಿಲ್ಲ. ಸಂಗೀತ–ಸ್ವರ–ರಾಗ! ಅದೇ ಒಂದು ಅಲೌಕಿಕ ಭಾಷೆ! ಕನ್ನಡಿಗರೆಲ್ಲ ಮೀರಾಭಜನೆ, ಕಬೀರರ ದೋಹ, ನಾಮದೇವ, ತುಕಾರಾಮರ ಅಭಂಗಗಳನ್ನು ಕೇಳುವುದಾದರೆ ಕನ್ನಡೇತರರೂ ನಮ್ಮ ವಚನ–ದಾಸರ ಪದಗಳನ್ನು ಆಸ್ವಾದಿಸಿ ಖುಷಿಪಡಬೇಕಲ್ಲವೇ!

ದೇಶ ವಿದೇಶಗಳಲ್ಲಿ ಸಂಗೀತ–ಸಂಸ್ಕೃತಿಯ ಪ್ರಚಾರ, ಬೋಧನೆ, ಕಾರ್ಯಕ್ರಮ–ಗಳನ್ನು ನೀಡುವುದು ಎಲ್ಲವೂ ನನ್ನಲ್ಲಿ ಒಂದು ಧನ್ಯತೆಯ ಭಾವವನ್ನು ಮೂಡಿಸುತ್ತವೆ. ನನ್ನ ವೈಯಕ್ತಿಕ ಅನುಭವವನ್ನು ಹಂಚಿಕೊಳ್ಳುವುದಾದರೆ, ನಾನು ಕನ್ನಡಿಗರು ಮತ್ತು ಅನಿವಾಸಿ ಭಾರತೀಯರಷ್ಟೇ ಅಲ್ಲ; ಅಮೇರಿಕನ್ನರಿಗೂ ವಚನ, ದಾಸರ ಪದಗಳನ್ನು ಕಲಿಸಿದ್ದೇನೆ. ಅವರು ಅಷ್ಟೇ ಪ್ರೀತಿಯಿಂದ ಹಾಡುತ್ತಾರೆ ಕೂಡ. ಅದಕ್ಕೆ ಹೇಳುವುದು 'Music starts where speech ends' ಎಲ್ಲಿ ಲೌಕಿಕ ಭಾಷೆ ಸೋತು ನಿಲ್ಲುತ್ತದೋ, ಅಲ್ಲಿ ಸಂವೇದನೆಗಳನ್ನು ಸಂಗೀತದ ಸ್ವರಗಳು ಹೇಳುತ್ತವೆ.

ಸಾಹಿತ್ಯ ಪ್ರಕಾರಗಳಲ್ಲಿಯೂ 'ವಚನಗಳು' ವಿಶ್ವಕ್ಕೆ ಒಂದು ವಿಶಿಷ್ಟ ಕೊಡುಗೆ. ರಂ. ಶ್ರೀ. ಮುಗಳಿಯವರು ಇದನ್ನು ಪದ್ಯಾತ್ಮಕ ಗದ್ಯ ಎಂದು ಕರೆದರು. ನಾವು ಹಾಡುತ್ತಾ ಬಂದಿರುವ

**ಹಸಿವಾದೊಡೆ ಭಿಕ್ಷಾನ್ನಗಳುಂಟು**
**ತೃಷೆಯಾದೊಡೆ ಕೆರೆ ಬಾವಿಗಳುಂಟು**
**ಶಯನಕೆ ಹಾಳು ದೇಗುಲಗಳುಂಟು**
**ಆತ್ಮ ಸಂಗಾತಕೆ ಚನ್ನಮಲ್ಲಿಕಾರ್ಜುನ ನೀನುಂಟು**

ಇದನ್ನು ಗಮನಿಸೋಣ. ಕೇವಲ ಹದಿಮೂರು ಶಬ್ದಗಳಿರುವ ಈ ವಚನ ಏನೆಲ್ಲಾ ಹೇಳುತ್ತದೆ ನೋಡಿ. ಕೌಶಿಕನ ಅರಮನೆಯಲ್ಲಿದ್ದ ಅಕ್ಕಮಹಾದೇವಿ, ಲೌಕಿಕ ಅವಶ್ಯಕತೆಗಳಾದ ಹಸಿವು–ಬಾಯಾರಿಕೆ–ನಿದ್ದೆಗೆ ಹೇಗಾದರೂ ರಾಜಿ ಮಾಡಿಕೊಳ್ಳುತ್ತೇನೆ ಆದರೆ ಆತ್ಮ ಸಂಗಾತಕ್ಕೆ ಚೆನ್ನಮಲ್ಲಿಕಾರ್ಜುನ ಮಾತ್ರ ಎಂದು ಖಚಿತವಾಗಿ ನಿರ್ದಿಷ್ಟವಾಗಿ ಹೇಳುತ್ತಾಳೆ. ಹಾಗೆಯೇ ಕಾವ್ಯದ ಗುಣ ಲಕ್ಷಣಗಳು, ಛಂದಸ್ಸು, ಆದಿ ಪ್ರಾಸ ಅಂತ್ಯ ಪ್ರಾಸದ ಹಂಗನ್ನೆಲ್ಲಾ ತೊರೆದು ಮುಕ್ತವಾಗಿ, ಮುಗ್ಧವಾಗಿ ಅದ್ಭುತ ಪದ್ಯದ ರಚನೆಯಾಗಿದೆ. ಸಂಗೀತಗಾರರಿಗೆ ವಿದ್ಯಾರ್ಥಿಗಳಿಗೆ ಇದೊಂದು ಅಪರೂಪವಾದ ರಚನೆ. ಪಂ. ಸಂಗಮೇಶ್ವರ ಗುರವ್ ಇದನ್ನು ಹಾಡುತ್ತಿದ್ದರು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಅವರ ಶಿಷ್ಯನಾಗಿ ನಾನೂ ಕಲಿತು ಹಾಡುತ್ತಾ ಬಂದಿದ್ದೇನೆ. ಭಟಿಯಾರ್ ರಾಗದ

ಅಂತರ್ಮುಖತ್ವ, ಗಂಭೀರ ನಡೆ! ಆತ್ಮ ನಿವೇದನೆಗೆ ಇದೊಂದು ಅತೀ ಸುಂದರ, ಸರಳ ಪ್ರಬುದ್ಧ ರಚನೆ. ಹೀಗೆ ವಚನ ಸಾಹಿತ್ಯವು ಭಕ್ತಿ ಸಂಗೀತಕ್ಕೆ ಅದ್ಭುತ ಮಾಧ್ಯಮವಾಗಿದೆ. ಪಂ. ಬಸವರಾಜ ರಾಜಗುರು ಅವರ ಶಿಷ್ಯರಾದ ಪಂ. ಸೋಮನಾಥ ಮರಡೂರು 'ಶರಣವಾಣಿ' ಎಂಬ ಸ್ವತಂತ್ರ-ಸಂಪೂರ್ಣ ಕಾರ್ಯಕ್ರಮವನ್ನೇ ರೂಪಿಸಿ ಹಾಡಿ ಪ್ರಸ್ತುತಪಡಿಸುತ್ತಿದ್ದಾರೆ.

ಪೂಜ್ಯರಾದ ಪಂಚಾಕ್ಷರ ಗವಾಯಿಗಳು ಪಂ. ಮಲ್ಲಿಕಾರ್ಜುನ ಮನಸೂರ್, ಪಂ. ಬಸವರಾಜ ರಾಜಗುರು, ಇವರ ಹಾದಿಯನ್ನು ಅನುಸರಿಸಿ ಸಿದ್ದರಾಮಯ್ಯ ಜಂಬಲದಿನ್ನಿ, ಪಂ. ಪಂಚಾಕ್ಷರೀ ಸ್ವಾಮೀ ಮತ್ತೀಗಟ್ಟಿ ಅವರು ವಚನಗಳನ್ನ ಹಾಡುತ್ತಿದ್ದರು. ನಂತರದ ಪೀಳಿಗೆಯಲ್ಲಿ ಶ್ರೀಮತಿ ನೀಲಮ್ಮ ಕೊಡ್ಲಿ, ಪಂ. ವೆಂಕಟೇಶ ಕುಮಾರ್, ಕುಮಾರದಾಸ್ ಹೀಗೆ ಹತ್ತು ಹಲವಾರು ಕಲಾವಿದರು ವಚನ ಗಾಯನ ಸಂಪ್ರದಾಯವನ್ನು ಮುಂದುವರೆಸಿದ್ದಾರೆ.

ಹರಿದಾಸರ ಭಕ್ತಿಪಂಥ ಸರಳ-ಸುಂದರ ರಚನೆಗಳ ಮೂಲಕ ವೇದಗಳ ಸಾರವನ್ನು ಜನಮಾನಸಕ್ಕೆ ತಲುಪಿಸುವಲ್ಲಿ ಮಹಾನ್ ಕೊಡುಗೆ ನೀಡಿತು. ಜೊತೆಗೆ ಸಮಾಜ ಸುಧಾರಣೆಯೂ ದಾಸರ ಸುಪ್ತ ಆಶಯವಾಗಿತ್ತು. 'ಮುಪ್ಪಿನ ಗಂಡನ ಒಲ್ಲೆನೆ' ಎಂಬ ರಚನೆಯಲ್ಲಿ ಪುರಂದರದಾಸರು ಅಂದಿನ ಕಾಲದ ಬಾಲ್ಯವಿವಾಹದ ಪದ್ಧತಿ ಅದರ ದೋಷಗಳನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಸಂಗೀತ-ಶಾಸ್ತ್ರ-ವ್ಯಾಕರಣ-ಭಕ್ತಿಯ ಸುಂದರ ಸಂಬಂಧಕ್ಕೆ 'ಕೇಳನೋ ಹರಿ ತಾಳನೋ' ಅದ್ಭುತ ಉದಾಹರಣೆ. 'ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ' ಎಂಬಲ್ಲಿ ಬರೀ ವ್ಯಾಕರಣ ಪಾಂಡಿತ್ಯವಿದ್ದರೆ ಸಾಲದು, ಪ್ರೇಮ-ಭಕ್ತಿ ಇರಬೇಕು ಎನ್ನುತ್ತಾರೆ. ತಂಬೂರಿ ಮೊದಲಾದ ಅಖಿಲ ವಾದ್ಯಗಳಿದ್ದರೂ, ತುಂಬುರು ನಾರದರ ದೈವೀ ಸಂಗೀತವನ್ನು ಕೇಳುವ ಹರಿ, ಈ ಢಂಬಕರ ಲೌಕಿಕ ಕೂಗಾಟವನ್ನು ಕೇಳಲಾರ ಅನ್ನುತ್ತಾರೆ ದಾಸರು. 'ನಾನಾ ಬಗೆಯ ರಾಗ ಭಾವ ತಿಳಿದು ಸ್ವರಜ್ಞಾನ, ಮನೋಧರ್ಮ ಜಾತಿ ಇದ್ದು' ಅಂದರೆ ಔಡವ, ಷಾಡವ, ಸಂಪೂರ್ಣ ಜಾತಿಗಳ, ಉತ್ತಮ ಮನೋಧರ್ಮ ಇದ್ದರೂ. 'ದಾನವಾರಿಯ ದಿವ್ಯ ನಾಮರಹಿತವಾದ ಹೀನ ಸಾಹಿತ್ಯ ಸಂಗೀತಕ್ಕೆ ಮನವಿಕ್ಕೆ' ಅಂದರೆ, ಸಂಪೂರ್ಣ ಭಕ್ತಿ ತನ್ಮಯತೆ ಇಲ್ಲದ ಕಲಾವಿದನ ಶುಷ್ಕ ಪಾಂಡಿತ್ಯ ಯಾವ ಕೇಳುಗನಿಗೂ ರಂಜಿಸದು ಎನ್ನುತ್ತಾರೆ ದಾಸರು. 'ಆವ ರೋಗವೊ ಎನಗೆ ದೇವ ಧನ್ವಂತ್ರಿ' ಹಾಡಿನಲ್ಲಿ 'ಹರಿಯ ಕೀರ್ತನೆಯು ಕೇಳಿಸದೆನ್ನ ಕಿವಿಗೆ' ಎಂದು ಸಂಗೀತದಲ್ಲಿ ಭಕ್ತಿಯ ಮಹತ್ವವನ್ನು ಪಾಡುತ್ತಾರೆ ಶ್ರೀ ಗೋಪಾಲದಾಸರು. ಕರ್ನಾಟಕ ಸಂಗೀತದ ತ್ರಿಮೂರ್ತಿಗಳಲ್ಲಿ ಒಬ್ಬರಾದ ತ್ಯಾಗರಾಜರು 'ಸಂಗೀತ ಜ್ಞಾನಮು ಭಕ್ತಿವಿನಾ' ಎಂದು ಉದ್ಗರಿಸಿದ್ದಾರೆ.

ಹರಿದಾಸರ ರಚನೆಗಳ ದಾಸವಾಣಿ, ನಾಮದೇವ, ತುಕಾರಾಮ ಮುಂತಾದ ಸಂತರ ರಚನೆಗಳ 'ಸಂತವಾಣಿ' ಕಾರ್ಯಕ್ರಮಗಳನ್ನು ರೂಪಿಸಿ, ಎಲ್ಲ ಕಡೆ ಹಾಡಿ ಪಂ. ಭೀಮಸೇನ ಜೋಶಿಯವರು ಮನೆ ಮಾತಾದರು. ಅವರ ಸ್ನೇಹಿತ ಮುಂಬಯಿಯ ನರಹರಿ ಕುಲಕರ್ಣಿ ಅವರ ಮನೆಯಲ್ಲಿ 'ದಾಸವಾಣಿ' ಧ್ವನಿಮುದ್ರಿಕೆ ಹದಿನೈದು ದಿನ ತಬಲಾ-ಹಾರ್ಮೋನಿಯಂ, ವಯೋಲಿನ್, ಮಂಜೀರ ಇಡೀ ತಂಡದೊಂದಿಗೆ ಪೂರ್ವ ತಯಾರಿ, ಅಭ್ಯಾಸ ನಡೆಸುತ್ತಿದ್ದಾಗ 'ನಮ್ಮ ಮನೆ ಪಂಢರಾಪುರ ಆಗಿತ್ರೀ' ಎಂದರು ನರಹರಿ ಕುಲಕರ್ಣಿ. (ಭೀಮಸೇನ ಜೋಶಿಯವರ ಪುಸ್ತಕಕ್ಕಾಗಿ ನಡೆಸಿದ ಸಂದರ್ಶನದಲ್ಲಿ ಬೆಳಕಿಗೆ ಬಂದ ವಿಷಯ)

ಪಂಡಿತಜೀಯವರ ಆತ್ಮೀಯ ಶಿಷ್ಯ ಪಂ. ಮಾಧವಗುಡಿಯವರೂ ದಾಸವಾಣಿ ಕಾರ್ಯಕ್ರಮಕ್ಕೆ ಮತ್ತಷ್ಟು ಹೊಸ ಹಾಡುಗಳನ್ನು ಸೇರಿಸಿ ಬೇರೊಂದು ಹೊಳಪನ್ನು ಕೊಟ್ಟರು. ಅವರ ಶಿಷ್ಯನಾದ ನಾನೂ ಸಹ ಹಲವಾರು ದಾಸರ ಪದಗಳಿಗೆ ರಾಗ ಸಂಯೋಜನೆ ಮಾಡಿ ಭಕ್ತಿ-ಸಂಗೀತ-ಸಾಮಾಜಿಕ ಸಂವೇದನೆಗಳನ್ನು ಪಸರಿಸುವಲ್ಲಿ ಪ್ರಯತ್ನಶೀಲನಾಗಿದ್ದೇನೆ. 'ಭಕುತ ಜನ ಮುಂದೆ, ನೀನವರ ಹಿಂದೆ' ರಚನೆಯಲ್ಲಿ ವಿಜಯದಾಸರು ದೇವರಿಗಿಂತ ಅವನ ಆರಾಧಕ ಭಕ್ತನೇ ಮುಂದೆ ಎಂದು ಹೇಳುವಲ್ಲಿ ಹಲವಾರು ಸುಂದರ ಪ್ರತಿಮೆ, ಉಪಮೆಗಳನ್ನು ನೀಡಿ ಒಂದೇ ಹಾಡನ್ನು ಸುಂದರ ಕಾವ್ಯವಾಗಿ ಮಾಡಿದ್ದಾರೆ. ಈ ರಚನೆಯನ್ನ ಬಿಭಾಸ್-ರಾಟಿಯಾರ್ ರಾಗದ ಸುಂದರ ಜೋಡಣೆಯಲ್ಲಿ ನನ್ನ ತಂದೆ ರಾಮರಾವ್ ಹವಾಲ್ದಾರ್ ಸುಂದರವಾಗಿ ಸ್ವರ ಸಂಯೋಜನೆ ಮಾಡಿದ್ದಾರೆ.

ಕರ್ನಾಟಕೀ ಹಾಗೂ ಹಿಂದೂಸ್ತಾನಿ ಎರಡೂ ಪದ್ಧತಿಯ ಸಂಗೀತಗಾರರು ದಾಸರ ಪದಗಳನ್ನು ಹಾಡುವುದು ಇನ್ನೊಂದು ವೈಶಿಷ್ಟ್ಯ. ಆರ್. ಕೆ. ಶ್ರೀಕಂಠನ್, ಬಾಲಮುರಳೀಕೃಷ್ಣ, ಎಮ್. ಎಸ್. ಸುಬ್ಬುಲಕ್ಷ್ಮೀ, ಎಮ್. ಎಸ್. ಶೀಲಾ, ಎಮ್. ಎಲ್. ವಸಂತಕುಮಾರಿ, ವಿದ್ಯಾಭೂಷಣ, ಆರ್. ಕೆ. ಪದ್ಮನಾಭ, ತಿರುಮಲೆ ಶ್ರೀನಿವಾಸ ಇವರೆಲ್ಲ ದಾಸ ಮತ್ತು ಭಕ್ತಿ ಸಾಹಿತ್ಯವನ್ನು ದಶಕಗಳಿಂದ ಪ್ರಚಾರ ಮಾಡುತ್ತಾ ಬಂದಿದ್ದಾರೆ.

ಸಂಗೀತ-ದೈವತ್ವ-ದೈವಾರಾಧನೆ ಇದರ ಅವಿನಾಭಾವ ಸಂಬಂಧವನ್ನು ಎತ್ತಿ ಸಾರುವ ಶ್ಲೋಕ ಅದರ ಭಾವಾರ್ಥ ಇಲ್ಲಿದೆ.

**'ನಾಹಂ ವಸಾಮಿ ವೈಕುಂಠೇ ಯೋಗಿನಾ ಹೃದಯೇ ನ ಚ**
**ಮದ್ಭಕ್ತಾಃ ಯತ್ರ ಗಾಯಂತಿ ತತ್ರ ತಿಷ್ಠಾಮಿ ನಾರದ...'**

ಸರ್ವಾಂತರ್ಯಾಮಿಯಾದ ಕೃಷ್ಣ-ತ್ರಿಲೋಕ ಸಂಚಾರಿ ನಾರದನಿಗೆ ಹೇಳಿದ್ದು ಹೀಗೆ-

'ನಾನು ವೈಕುಂಠದಲ್ಲಿ ಇರುವುದಿಲ್ಲ, ಯೋಗಿಗಳ ಹೃದಯದಲ್ಲೂ ಇಲ್ಲ'
ನನ್ನ ಭಕ್ತ ಮೈದುಂಬಿ, ಮನದುಂಬಿ ಎಲ್ಲಿ ಹಾಡುತ್ತಾನೆ
ನಾನು ಅವನ ಸಂಗೀತದಲ್ಲಿ - ಹಾಡಿನಲ್ಲಿದ್ದೇನೆ...'

ಈ ಶ್ಲೋಕದಲ್ಲಿ ಶಾಸ್ತ್ರೀಯ ಸಂಗೀತಗಾರನೆಂಬ ಉಲ್ಲೇಖ ಬಂಧನ ಷರತ್ತು ಯಾವುದೂ ಇಲ್ಲ. ಭಕ್ತಿಯೇ ಸಂಗೀತ - ಸಂಗೀತವೇ ಭಕ್ತಿ.

ಸಮಗ್ರವಾಗಿ ಹೇಳುವುದಾದರೆ ಎರಡು ಪ್ರಬುದ್ಧ ಸಂಗೀತ ಪ್ರಕಾರಗಳು, ಎರಡೂ ಪದ್ಧತಿಯ ಸಂಗೀತಗಾರರಿಂದ ಭಕ್ತಿ ಸಂಗೀತ- ಗಾಯನ-ಸಾಹಿತ್ಯದ ಪ್ರಚಾರ, ಸಾಂಸ್ಕೃತಿಕ ಲೋಕಕ್ಕೆ ಕರ್ನಾಟಕದ ವಿಶಿಷ್ಟ ಕೊಡುಗೆ ಎಂದು ಹೆಮ್ಮೆಯಿಂದ ಸಾರಬಹುದು. ಕರ್ನಾಟಕದಲ್ಲಿ ಇತ್ತೀಚಿನ ದಶಕದಲ್ಲಿ ಕಾಡುಗಳ್ಳ ವೀರಪ್ಪನ್ ಕುರಿತು ಎರಡು ಸಿನೇಮಾ ತೆಗೆದಿರುವುದು ಎಲ್ಲೋ ಒಂದು ಕಡೆ ಆ ಕ್ಷೇತ್ರದಲ್ಲಿ ಸಾಂಸ್ಕೃತಿಕ ದಿವಾಳಿತನ ತೋರಿಸುತ್ತಿದೆಯೋ ಎಂಬ ಆತಂಕ ಮೂಡಿಸುತ್ತದೆ. ಹೀಗಿರುವಾಗ ಅನಿವಾಸಿ ಭಾರತೀಯರು, ಕನ್ನಡಿಗರು ಅಮೆರಿಕದಲ್ಲಿ ಎಲ್ಲೋ ಕಟ್ಟಿಕೊಂಡ 'ಕನ್ನಡ ಸಾಹಿತ್ಯರಂಗ'ದ ಮೂಲಕ ಅವರು ಮಾಡುತ್ತಿರುವ ಕೆಲಸ, ಮುದ್ರಿಸಿದ ಪುಸ್ತಕಗಳು, ಹೊರ ತಂದಿರುವ ಸಿ.ಡಿ. ಇವು ಅವರ ಮುಂದಾಲೋಚನೆ, ದೂರದೃಷ್ಟಿ, ಸಾಂಸ್ಕೃತಿಕ ಕಳಕಳಿಗಳನ್ನು ಪ್ರದರ್ಶಿಸುತ್ತವೆ. ಇದು ನಿಜವಾಗಿಯೂ ಅಭಿನಂದನೀಯ.

■

# ವಚನಾಮೃತದಲ್ಲಿ ಭಕ್ತಿರಸ ಧಾರೆ

–ಮೈ. ಶ್ರೀ. ನಟರಾಜ

**ಹಿನ್ನೆಲೆ:** ಇಂದಿನ ವಿಶ್ವದ ಅನೇಕ ಮುಂದುವರೆದ ರಾಷ್ಟ್ರಗಳು ಅಜ್ಞಾನದ ಅಂಧಕಾರದಲ್ಲಿ ಮುಳುಗಿದ್ದಾಗ, ಭಾರತೀಯ ದಾರ್ಶನಿಕರು ಅತ್ಯುನ್ನತ ಮಟ್ಟದ ಜೀವನ ತತ್ವಸಾರವನ್ನು ಅರಗಿಸಿಕೊಂಡಿದ್ದರೆಂಬ ಸಂಗತಿ ಜಗತ್ತಿನ ಇತಿಹಾಸವನ್ನು ಅಧ್ಯಯನ ಮಾಡಿದಾಗ ಸುಲಭವಾಗಿ ಅರಿವಾಗುತ್ತದೆ. 'ಸೃಷ್ಟಿಯ ರಹಸ್ಯಗಳೇನು? ಮನುಷ್ಯನ ಬದುಕಿನ ಧ್ಯೇಯವೇನು, ಜೀವಾತ್ಮ–ಪರಮಾತ್ಮಗಳ ಸಂಬಂಧವೇನು,' ಇತ್ಯಾದಿಯಾಗಿ ಸತ್ಯವನ್ನರಸುತ್ತಾ ಋಷಿ–ಮುನಿಗಳು ತಮ್ಮ ಇಡೀ ಜೀವಮಾನವನ್ನೇ ತೇಯ್ದು, ತಾವು ಕಂಡುಕೊಂಡ ಸತ್ಯವನ್ನು ಅಂದಿನ ಬುದ್ಧಿಜೀವಿಗಳ ಭಾಷೆಯಾಗಿದ್ದ ಗೀರ್ವಾಣ (ಸಂಸ್ಕೃತ) ಭಾಷೆಯ ಮೂಲಕ ಪ್ರಪಂಚಕ್ಕೆ ಸಾರಿದರು. ಉದಾಹರಣೆಗೆ, ಸೃಷ್ಟಿರಹಸ್ಯವನ್ನು ಪ್ರಸ್ತುತಪಡಿಸುತ್ತ, 'ಜಗತ್ತು ಹುಟ್ಟುವ ಮುನ್ನ ಹೇಗಿದ್ದಿರಬಹುದು?' ಎಂಬ ಪ್ರಶ್ನೆಯನ್ನೆತ್ತಿರುವ 'ನಾಸದೀಯ ಸೂಕ್ತ'ವನ್ನೇ ನೋಡಬಹುದು. ಇಂಥಾ ಜಟಿಲ ಪ್ರಶ್ನೆಗೆ ಕಾವ್ಯಮಯವಾದ ಹಾಗು ಜಾಣ್ಮೆಯ ಉತ್ತರವನ್ನು ವೇದದಲ್ಲಿ ದೊರಕುವ ಈ ಸೂಕ್ತದಲ್ಲಿ ಕಾಣಬಹುದಾಗಿದೆ. ವಿಶ್ವಸಾಹಿತ್ಯದಲ್ಲಿ ಪ್ರಾಮುಖ್ಯತೆಯನ್ನು ಪಡೆದಿರುವ ಈ ಸೂಕ್ತದಲ್ಲಿ 'ಎಲ್ಲಕ್ಕೂ ಒಂದು ಮೂಲಶಕ್ತಿ ಇರಲೇಬೇಕು' ಎಂದು ಪ್ರತಿಪಾದಿಸುವುದರ ಜೊತೆಜೊತೆಗೇ, 'ಜಗತ್ತಿಗೂ ಮುನ್ನ ಏನಿತ್ತು' ಎಂಬ ಜಟಿಲ ಪ್ರಶ್ನೆಯನ್ನು ಎತ್ತಲಾಗಿದೆ. ಪ್ರಶ್ನೆಗೆ ಉತ್ತರವನ್ನು ಹುಡುಕುತ್ತಾ, 'ಜಗತ್ತಿಗೆ ಮುನ್ನ ಏನಿತ್ತೋ, ಆ ಸೃಷ್ಟಿಕರ್ತನಿಗೇ ಗೊತ್ತು' ಎಂಬ ಚಮತ್ಕಾರದ ಉತ್ತರ ಕೊಟ್ಟರೂ ಅದರ ಬೆನ್ನಲ್ಲೇ, ಸೂಕ್ತಕಾರರು 'ಆತನಿಗೂ ಗೊತ್ತೋ ಇಲ್ಲವೋ–ಯಾರಿಗೆ ಗೊತ್ತು?' ಎಂಬ ಕುತೂಹಲಕಾರಕವಾದ ಮರುಪ್ರಶ್ನೆಯನ್ನೆತ್ತಿ ದಿಗ್ಭ್ರಮೆಗೊಳಿಸುವ ಜಾಣತನವನ್ನು ಓದಿಯೇ ಸವಿಯಬೇಕು!

ಆದರೆ, ಕ್ರಮೇಣ, ಕ್ಲಿಷ್ಟವಾದ ಸಂಸ್ಕೃತ ಸಾಹಿತ್ಯ ಮತ್ತು ತಾತ್ವಿಕ ಪ್ರಬಂಧಗಳು ಪಂಡಿತರ ಬಾಯಿಗಳಲ್ಲೇ ಉಳಿದು ಆ ಭಾಷೆಯಲ್ಲಿ ವಿಪುಲವಾಗಿದ್ದ ಜೀವನ ತತ್ವಸಾರ ಜನಸಾಮಾನ್ಯರಿಗೆ ತಲಪುವುದು ದುಸ್ಸಾಧ್ಯವಾಗುತ್ತಾ ಬಂದಿತು. ವೇದಶಾಸ್ತ್ರಗಳ ಭಾಗವಾದ ಜ್ಞಾನಕಾಂಡಗಳಲ್ಲಡಗಿದ್ದ ಆದರ್ಶ ವಿಚಾರಗಳು ಮಾಯವಾಗಿ ಕರ್ಮಕಾಂಡಗಳಲ್ಲಿ

ವಿಪುಲವಾಗಿದ್ದ ಬಾಹ್ಯಾಚಾರಗಳಿಗೇ ಪ್ರಾಮುಖ್ಯತೆ ಕೊಡುತ್ತಾ, ಮೇಲು-ಕೀಳೆಂಬ ತುಚ್ಛ ವಿಚಾರಗಳಿಗೆ ಎಡೆ ಕೊಡುತ್ತಾ, ಸಮಾಜ ಅಧೋಗತಿಯತ್ತ ಸಾಗುತ್ತಿದ್ದಾಗ, ಭಾರತದಲ್ಲಿ ಹಲವು ಬಾರಿ ವೈಚಾರಿಕ, ಧಾರ್ಮಿಕ ಹಾಗು ಸಾಮಾಜಿಕ ಕ್ರಾಂತಿಗಳು ನಡೆದಿವೆ. ಹಾಗೆ ನಡೆದ ಸೈದ್ಧಾಂತಿಕ ಜಿಜ್ಞಾಸೆಯಿಂದ ಹುಟ್ಟಿದ ಜೈನ ಹಾಗು ಬೌದ್ಧ ಧರ್ಮಗಳು ವೇದಶಾಸ್ತ್ರಗಳನ್ನು ಪ್ರಶ್ನಿಸುವ ಯತ್ನಗಳ ಪೈಕಿ ಅತ್ಯಂತ ಹಳೆಯವು. ಅದೇ ರೀತಿ, ಧಾರ್ಮಿಕ ಚಿಂತನೆ ಸಂಸ್ಕೃತದಲ್ಲೇ ಏಕೆ ನಡೆಯಬೇಕು, ಅದು ಶಾಸ್ತ್ರಾಭ್ಯಾಸ ಮಾಡದವರಿಗೂ ತಲುಪಬೇಕೆಂಬ ಉದಾತ್ತ ಧ್ಯೇಯಗಳಿಂದ ಅಂದಿನ ಸಾಮಾನ್ಯ ಜನರ ಆಡುಮಾತಿನ ಭಾಷೆಯಾಗಿದ್ದ ಪಾಲೀ ಭಾಷೆಯನ್ನು ಬುದ್ಧ ಉಪಯೋಗಿಸಿದ್ದರಿಂದ ಅವನ ತತ್ವ ಬೋಧನೆ ಎಲ್ಲರಿಗೂ ಸುಲಭವಾಗಿ ತಲುಪಿತು. ಅವನು ಸಂಸ್ಕೃತದಲ್ಲಿದ್ದ ಅನೇಕ ವಿಷಯಗಳನ್ನೇ ಪಾಲಿಯಲ್ಲಿ ಹೇಳಿದಾಗ ಹೊಸದೋ ಎಂಬಂತೆ ಅನ್ನಿಸಿ ಜನಸಾಮಾನ್ಯರನ್ನು ಆಕರ್ಷಿಸಿತು, ಆದರೆ ಅವನ ಅರಿವು ಅವನ ಜೀವನಾನುಭವದ ಫಲವೇ ಹೊರತು ಕೇವಲ ಪುಸ್ತಕದ ಜ್ಞಾನವಾಗಿರಲಿಲ್ಲ. ಪಾಶ್ಚಾತ್ಯ ಧರ್ಮಗಳಲ್ಲೂ ಮೂಲಧರ್ಮವನ್ನು ಪ್ರಶ್ನಿಸುವ ಯತ್ನ ನಡೆದೇ ಇದೆ. ಇದಕ್ಕೆ ಮುಖ್ಯ ಉದಾಹರಣೆ, ಕ್ರಿಶ್ಚಿಯನ್ ಸಂಪ್ರದಾಯಗಳನ್ನು ಪ್ರಶ್ನಿಸಿ, ದೇವರ ಮತ್ತು ಭಕ್ತರ ನಡುವೆ 'ಪುರೋಹಿತ'ರ ಅಗತ್ಯವಾದರೂ ಏಕೆ ಎಂದು ಬಂಡೆದ್ದು 'ಪ್ರಾಟೆಸ್ಟೆಂಟ್' ಮತ (ಸಂಪ್ರದಾಯ ವಿರೋಧಿಗಳ ಮತ) ಯೂರೋಪಿನಲ್ಲಿ ಹುಟ್ಟಿದ್ದನ್ನು ಇಲ್ಲಿ ನೆನೆಯಬಹುದಾಗಿದೆ.

ಹನ್ನೊಂದು-ಹನ್ನೆರಡನೇ ಶತಮಾನಗಳಲ್ಲಿ ಕರ್ನಾಟಕದ ಇತಿಹಾಸ ಹಲವು ಕಾರಣಗಳಿಗಾಗಿ ಪ್ರಾಮುಖ್ಯತೆ ಪಡೆಯುತ್ತದೆ, ಏಕೆಂದರೆ, ಅದ್ಭುತ ಕ್ರಾಂತಿಯೊಂದು ನಡೆದ ಕಾಲವದು. ಸಂಸ್ಕೃತದ ಕಪಿಮುಷ್ಠಿಯಿಂದ ಬಿಡುಗಡೆ ಹೊಂದಿ, ಜನಸಾಮಾನ್ಯರಿಗೆಲ್ಲ ಸುಲಭವಾಗಿ ತಿಳಿಯುವ ಅಚ್ಚಕನ್ನಡದಲ್ಲಿ ಜೀವನಧರ್ಮಸಾರದ ಪ್ರಸಾರ ನಡೆದ ಮಹಾಯುಗವದು. ಅರ್ಥಹೀನ ಆಡಂಬರದ ಪದ್ಧತಿಗಳನ್ನು ಪ್ರಶ್ನಿಸುವ, ಸರಳ ನಿರಾಡಂಬರ ಜೀವನವನ್ನು ಪ್ರತಿಪಾದಿಸುವ ಅನುಭಾವಿಗಳ ಆಗಮನವಾದ ಕಾಲವೇ ಅದು. ಆಡುನುಡಿಯಲ್ಲಿ ಎಲ್ಲರಿಗೂ ತಿಳಿಯುವಂತೆ ಜೀವನದ ಮೌಲ್ಯಗಳ ಸಾರವನ್ನು ಹಳ್ಳಿ-ಹಳ್ಳಿಗಳಲ್ಲಿ ಸಾರುವ ಶರಣರ ಗುಂಪೊಂದು ಹುಟ್ಟಿಕೊಂಡ ಕಾಲವೇ ಅದು. ಸುಮಾರು ಸಾವಿರ ವರ್ಷಗಳ ಹಿಂದಿನ ಕರ್ನಾಟಕದಲ್ಲಿ ನಡೆದ ಸಾಮಾಜಿಕ ಮತ್ತು ಸಾಹಿತ್ಯಕ ಕ್ರಾಂತಿ ಭಾರತದ ಇತರ ಪ್ರದೇಶಗಳಲ್ಲಾಗಲೀ ಅಥವಾ ಜಗತ್ತಿನ ಮತ್ತಾವುದೇ ದೇಶಗಳಲ್ಲಾಗಲೀ ಅಥವಾ ಭಾಷೆಗಳಲ್ಲಾಗಲೀ ಇಂಥಾ ಪ್ರಮಾಣದಲ್ಲಿ ನಡೆದಂತೆ ಕಾಣುವುದಿಲ್ಲ. ಭಾಷೆಗಳ ಇತಿಹಾಸವನ್ನು ಅಧ್ಯಯನ ಮಾಡಿದವರು ಹೇಳುವ ಪ್ರಕಾರ ಸಾಹಿತ್ಯದ ದೃಷ್ಟಿಯಿಂದಲೂ ಇಂತಹ ಒಂದು ಹಿರಿಮೆ ಕನ್ನಡಕ್ಕಲ್ಲದೇ ಮತ್ತಾವ ಭಾಷೆಗೂ ಇಲ್ಲದಿರುವುದು ವೇದ್ಯವಾಗುತ್ತದೆ. ಪಾಶ್ಚಿಮಾತ್ಯ ದೇಶಗಳಲ್ಲಿ ಇತ್ತೀಚೆಗೆ

ಉಂಟಾದ 'ಸೋಶಿಯಲಿಸಂ'ನಂಥಾ ಸಾಮಾಜಿಕ ಕ್ರಾಂತಿ ಸಾವಿರ ವರ್ಷಗಳಿಗೂ ಮುನ್ನ ಕನ್ನಡ ನಾಡಿನಲ್ಲಿ ನಡೆದದ್ದೂ ಒಂದು ಚಾರಿತ್ರಿಕ ವಿಸ್ಮಯ!

ಹೀಗೆ, ಸಾವಿರ ವರ್ಷಗಳ ಹಿಂದಿನ ಕನ್ನಡ ನಾಡಿನ ಇತಿಹಾಸವೇ ಶರಣಸಾಹಿತ್ಯದ ಉಗಮದ ಹಿನ್ನೆಲೆ. ಜೀವನದ ವಿವಿಧ ರಂಗಗಳಿಂದ ಬಂದ 'ಶಿವಶರಣ'ರು ತಮ್ಮ ಅಪೂರ್ವ ಅನುಭವಗಳನ್ನು ಕಾವ್ಯದ ಕಟ್ಟಿಲ್ಲದೇ, ಛಂದಸ್ಸು ಅಲಂಕಾರಗಳ ಆಡಂಬರವಿಲ್ಲದೇ, ಸರಳವಾಗಿ, ಸುಂದರವಾಗಿ, ನೇರವಾಗಿ ಜನಸಾಧಾರಣರನ್ನೂ ಬಡಿದು ತಟ್ಟುವಂತೆ, ತಿವಿದು ಎಚ್ಚರಿಸುವವರಂತೆ, ನೇವರಿಸಿ ಮನದಟ್ಟು ಮಾಡುವಂತೆ, ಪುಟ್ಟ ಪುಟ್ಟ 'ವಚನ'ಗಳಲ್ಲಿ ಭಟ್ಟಿ ಇಳಿಸಿದರು. ಕನ್ನಡನಾಡಿನ ಇತಿಹಾಸದ ಮತ್ತೊಂದು ವೈಶಿಷ್ಟ್ಯವೆಂದರೆ, ಈ ಕ್ರಾಂತಿಯಲ್ಲಿ ಪುರುಷರು ಸಾಧಿಸಿದ ಹಿರಿಮೆಯನ್ನು ಸ್ತ್ರೀಯರೂ ಸಾಧಿಸಿದರೆಂಬುದು. ವಿಶ್ವದಲ್ಲಿ, ಅದರಲ್ಲೂ ಭಾರತದಲ್ಲಿ, ಮಹಿಳೆಯರು ತಮ್ಮ ಸ್ಥಾನಕ್ಕಾಗಿ ಹೊಡೆದಾಡಬೇಕಾದ ಪರಿಸ್ಥಿತಿ ಇಂದಿಗೂ ಇರುವಾಗ, ಹಲವು ಶತಮಾನಗಳ ಹಿಂದೆಯೇ ಕನ್ನಡನಾಡಿನ ಸ್ತ್ರೀಯರು ಶರಣೆಯರಾಗಿ ತಮ್ಮ ಅಭಿಪ್ರಾಯ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮೆರೆದ ದಾಖಲೆಯನ್ನು ನೋಡಿದಾಗ ಯಾರಿಗಾದರೂ ಅಚ್ಚರಿಯಾಗದೇ ಇರದು. ಶರಣರ ತತ್ವಗಳಲ್ಲಿ ಆಧ್ಯಾತ್ಮಿಕ ವಿಷಯಗಳು ಅಡಗಿರುವಂತೆಯೇ ಭಕ್ತಿಯ ಅಭಿವ್ಯಕ್ತಿಯೂ ನೇರವಾಗೇ ಸೇರಿಕೊಂಡಿದೆ. ಹೊಸದೊಂದು ಸ್ವತಂತ್ರ ಶೈಲಿ ಮತ್ತು ಸ್ವಚ್ಛಂದ ಛಂದಸ್ಸನ್ನು ಕನ್ನಡಕ್ಕೆ ಕೊಟ್ಟ ಹತ್ತಾರು ಶರಣ–ಶರಣೆಯರು ಆಡಿದ/ಹಾಡಿದ ಮಾತುಗಳು (ಗಪದ್ಯಗಳು) 'ವಚನ'ಗಳೆಂದು ಪ್ರಸಿದ್ಧವಾಗಿವೆ. ಕನ್ನಡದಿಂದ ಭಾರತದ ವಿವಿಧ ಭಾಷೆಗಳಿಗೂ ಮತ್ತು ಕೆಲವು ಐರೋಪ್ಯ ಭಾಷೆಗಳಿಗೂ ಅನುವಾದಗೊಂಡಿರುವ ಶರಣರ ವಚನಗಳು ಪಂಡಿತರ ಹಾಗೂ ಪಾಮರರ ಮನಸ್ಸುಗಳನ್ನು ಗೆದ್ದಿವೆ. ಹತ್ತಾರು ವಚನಕಾರರು ಬಿಟ್ಟುಹೋದ ಸಹಸ್ರಾರು ವಚನಗಳು ನಮಗೆ ದೊರೆತಿವೆ ಮತ್ತು ಸಂಶೋಧಕರು ಇಂದಿಗೂ ಕಳೆದುಹೋಗಿದ್ದ ವಚನಗಳನ್ನು ಕಂಡುಹಿಡಿದು ಪ್ರಕಟಿಸುತ್ತಲೇ ಇದ್ದಾರೆ. ವಚನಸಾಹಿತ್ಯವೆಂಬುದು ಒಂದು ಸಮುದ್ರವಿದ್ದಂತೆ, ಅದರಲ್ಲಿಯ ಕೆಲವು ಹನಿಗಳನ್ನು ಮಾತ್ರ ಪ್ರಸ್ತುತಪಡಿಸುವ ಯತ್ನ ಈ ಲೇಖನದಲ್ಲಿದೆ. ಭಕ್ತಿಸಾಹಿತ್ಯದ ಮೂಲವಸ್ತುವಿಗೆ ಹತ್ತಿರವಾದ ಇಬ್ಬರು, ಒಬ್ಬ ವಚನಕಾರ, ಒಬ್ಬಳು ವಚನಕಾರ್ತಿಯ ಆಯ್ದ ಜನಪ್ರಿಯ ವಚನಗಳ ಸಾರವನ್ನು ಮಾತ್ರ ಉದಾಹರಣೆಯ ರೂಪದಲ್ಲಿ ಈ ಲೇಖನದ ಕೊನೆಯಲ್ಲಿ ಪ್ರಸ್ತುತಪಡಿಸಲಾಗಿದೆ.

**ವಚನಧರ್ಮಕ್ಕೂ ಮುನ್ನ:** ಭಾರತದ ಇತಿಹಾಸ ಹಲವು ಸಹಸ್ರ ವರ್ಷಗಳಷ್ಟು ಪುರಾತನ. 'ಸನಾತನ ಧರ್ಮ' ಎಂದು ಕರೆಸಿಕೊಳ್ಳುವ, ಅನಾದಿಕಾಲದಿಂದಲೂ ಭಾರತವರ್ಷದ ವಿವಿಧ ಭಾಗಗಳಲ್ಲಿ ಚಾಲ್ತಿಯಲ್ಲಿದ್ದ ಜೀವನಪದ್ಧತಿಯನ್ನು ದೇಶದ ಹೊರಗಿನಿಂದ ಬಂದವರು 'ಹಿಂದೂ ಧರ್ಮ' ಎಂಬ ಹೆಸರಿನಿಂದ ಗುರುತಿಸುತ್ತಾರೆ.

ಮಧ್ಯಪ್ರಾಚ್ಯದಲ್ಲಿ ಅತಿಪುರಾತನವಾದ ಯಹೂದಿ ಧರ್ಮ ಮತ್ತು ಅದರ ನಂತರ ಹುಟ್ಟಿದ ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳು ಬಹುತೇಕ, ಒಬ್ಬ ದೇವರು, ಒಬ್ಬ ಪ್ರವಾದಿ ಮತ್ತು ಒಂದು ಗ್ರಂಥದ ಆಧಾರದ ಮೇಲೆ ನಿಂತಿವೆ. ಭಾರತದಲ್ಲಿ ಸಹ (ಕ್ರೈಸ್ತಧರ್ಮಕ್ಕೆ ಮೊದಲೇ ಹುಟ್ಟಿದ) ಜೈನ ಮತ್ತು ಬೌದ್ಧ ಧರ್ಮಗಳು ಮತ್ತು ನಂತರ ಬಂದ ಸಿಖ್ ಧರ್ಮಗಳೂ ಸಹ ಒಬ್ಬ ಪ್ರವಾದಿಯ/ಪ್ರವರ್ತಕನ ತತ್ವಗಳ ಮೇಲೆ ಬೆಳೆದಿವೆ (ಜೈನರಿಗೆ ಮಹಾವೀರ, ಬೌದ್ಧರಿಗೆ ಗೌತಮ ಬುದ್ಧ ಮತ್ತು ಸಿಖ್ಖರಿಗೆ ಗುರು ನಾನಕ್). ಪ್ರಪಂಚದ ನಾನಾ ಧರ್ಮಗಳಿಗಿರುವಂತೆ ಭಾರತದ ಸನಾತನ ಧರ್ಮಕ್ಕೆ ಒಬ್ಬ ಗುರು/ಪ್ರವಾದಿ/ಪ್ರವರ್ತಕನಿಲ್ಲ, ಒಂದೇ ಪವಿತ್ರಗ್ರಂಥವನ್ನು ಅದು ಅವಲಂಬಿಸಿಲ್ಲ, ವೇದಗಳು ಮತ್ತು ಅದರ ಉಪಾಂಗಗಳಾದ ಉಪನಿಷತ್ತುಗಳ ಜೊತೆಗೆ ಪುರಾಣ ಇತಿಹಾಸಗಳು ಸನಾತನಧರ್ಮದ ತಳಹದಿಯೆಂದು ಪರಿಗಣಿಸಲ್ಪಡುತ್ತವೆ. ಅಸಂಖ್ಯಾತ ಋಷಿಗಳು, ಆಚಾರ್ಯರು, ಗುರುಗಳು, ಯೋಗಿಗಳು, ಬಾಬಾಗಳು ಅನಾದಿಕಾಲದಿಂದ ಬಂದಿರುವ ಗ್ರಾಂಥಿಕ ಮತ್ತು ಮೌಖಿಕ ಸಂಪತ್ತನ್ನು ತಮ್ಮದೇ ಆದ ಸ್ವಾನುಭವಜನ್ಯ ವ್ಯಾಖ್ಯಾನಗಳಿಂದ ವಿವರಿಸಿ ಧರ್ಮಬೋಧನೆ ಮಾಡುತ್ತಾ ಬಂದಿದ್ದಾರೆ. ಅವರೆಲ್ಲರ ಉದ್ದೇಶ ಮತ್ತು ಧ್ಯೇಯ ಒಂದೇ ಆಗಿದ್ದರೂ ಅವರ ವ್ಯಾಖ್ಯಾನಗಳ ವೈಖರಿಯಲ್ಲಿ ವ್ಯತ್ಯಾಸಗಳಿವೆ. ಆದರೆ, ಅವರುಗಳ ಮತ್ತು ಅವರ ಅನುಯಾಯಿಗಳ ನಡುವೆ ನಡೆದ ಶತಮಾನಗಳ ವಾಗ್ವಾದಗಳು ಹೆಚ್ಚುಪಾಲು ಬೌದ್ಧಿಕ ಕಸರತ್ತುಗಳಾಗಿದ್ದವೇ ವಿನಃ ಪ್ರತಿನಿತ್ಯದ ಬದುಕಿನ ದೃಷ್ಟಿಯಲ್ಲಿ ಗೌಣವೇ ಆಗಿದ್ದವು ಎಂಬ ಸತ್ಯವನ್ನು ಮನಗಾಣದಿದ್ದರೆ, ಒಟ್ಟಾರೆ ಸಂದೇಶವನ್ನು ಮೂಲೆಗೆ ತೂರಿ ತರ್ಕಕ್ಕೇ ಪ್ರಾಧಾನ್ಯತೆ ಕೊಟ್ಟಂತಾಗುತ್ತದೆ. ವೇದಾಂತದ ಮೂಲವಸ್ತುವಾದ ಆತ್ಮಜ್ಞಾನ (ತನ್ನನ್ನು ತಾನು ಅರಿತುಕೊಳ್ಳುವಿಕೆ) ತರ್ಕವನ್ನೂ ಮೀರಿದ ತಪಸ್ಸು ಎಂಬುದನ್ನು ಮರೆತಂತಾಗುತ್ತದೆ.

ಶತಮಾನಗಳ ದೀರ್ಘಾವಧಿಯಲ್ಲಿ ಬಂದುಹೋದ ಅಸಂಖ್ಯ ಆಚಾರ್ಯರ ಪೈಕಿ ಅನೇಕರು ಅನಾಮಿಕರಾಗಿಯೇ ಉಳಿದಿದ್ದಾರೆ, ಇನ್ನು ಕೆಲವರು ಗ್ರಂಥಗಳಲ್ಲಿ ಕಾಣಸಿಗುತ್ತಾರೆ ಮತ್ತು ಕೇವಲ ತತ್ವಶಾಸ್ತ್ರದ ವಿದ್ಯಾರ್ಥಿಗಳಿಗೆ ಅಧ್ಯಯನ ಮಾಡುವಾಗ ಪರಿಚಿತರಾಗುತ್ತಾರೆ. ಇವರೆಲ್ಲರ ನಡುವೆ ಎದ್ದುಕಾಣುವ ಮತ್ತು ಸಾಧಾರಣ ಜನರಿಗೂ ಪರಿಚಿತರಾಗಿರುವವರು ಮೂವರು ಪ್ರಮುಖ ಆಚಾರ್ಯರು. ಆದಿಶಂಕರ (೮ನೇ ಶತಮಾನ), ರಾಮಾನುಜ (೧೧ ರಿಂದ ೧೨ನೇ ಶತಮಾನ) ಮತ್ತು ಮಧ್ವ (೧೨ ರಿಂದ ೧೩ನೇ ಶತಮಾನ)–ಈ ಮೂವರು ಇಡೀ ಭಾರತೀಯ ದಾರ್ಶನಿಕ ಜ್ಞಾನಭಂಡಾರವನ್ನು ಭಟ್ಟಿ ಇಳಿಸಿ, ಕ್ರಮವಾಗಿ ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ಎಂಬ ಸಿದ್ಧಾಂತಗಳನ್ನು ಜಗತ್ತಿಗೆ ಕೊಟ್ಟಿರುತ್ತಾರೆ (ಈ ಮೂರು ಆಚಾರ್ಯರುಗಳಿಗೂ ಮುನ್ನ ಈ ಮೂರು ಸಿದ್ಧಾಂತಗಳೂ ಮತ್ತು ಅವುಗಳ ನಡುವಿನ ಮತಭೇದಗಳೂ

ಚರ್ಚೆಗೆ ಗುರಿಯಾಗುತ್ತಲೇ ಇದ್ದವು ಎಂಬುದನ್ನು ನಾವು ಮರೆಯುವಂತಿಲ್ಲ). ಆಚಾರ್ಯರ ವ್ಯಾಖ್ಯಾನಗಳಿಗೆ, ವೇದಗಳು, ಉಪನಿಷತ್ತುಗಳು, ಮತ್ತು ಬ್ರಹ್ಮಸೂತ್ರಗಳು ಮೂಲಾಧಾರವಾಗಿವೆ. ಇವುಗಳ ಜೊತೆಗೆ, ಮಹಾಭಾರತವೆಂಬ ಮಹಾಕಾವ್ಯದ ಒಂದು ಭಾಗವಾಗಿ ಪ್ರಸಿದ್ಧವಾಗಿರುವ 'ಭಗವದ್ಗೀತೆ'ಯೂ (ಭಗವಂತನ ಅವತಾರವೆಂದು ಪರಿಗಣಿಸಲ್ಪಡುವ ಶ್ರೀಕೃಷ್ಣನು ಯುದ್ಧರಂಗದಲ್ಲಿ ಅರ್ಜುನನೆಂಬ ಪಾತ್ರವೊಂದಕ್ಕೆ ಬೋಧಿಸಿದನೆನ್ನಲಾದ ಜೀವನಧರ್ಮಸಾರ) ಸನಾತನ ಧರ್ಮದ ಅಡಿಗಲ್ಲಾಗಿದೆ. ಅಂದರೆ, ಶರಣರ ಆಗಮನ ಆಗುವ ಕಾಲಕ್ಕೆ (ಹನ್ನೊಂದು–ಹನ್ನೆರಡನೇ ಶತಮಾನ) ಭಾರತದ ತಾತ್ವಿಕ ಜಗತ್ತಿನಲ್ಲಿ ಅಪಾರವಾದ ಮತ್ತು ವಿಪುಲವಾದ ಭಾರತೀಯ ತತ್ವಶಾಸ್ತ್ರವನ್ನಾಧರಿಸಿ ಬೆಳೆದ 'ವೇದಾಂತ' ಎಂಬೊಂದು ಜ್ಞಾನಭಂಡಾರವೇ ಲಭ್ಯವಿತ್ತು, ಆದರೆ ಕ್ಲಿಷ್ಟವಾದ ಸಂಸ್ಕೃತ ಭಾಷೆಯಲ್ಲಿ! ಜ್ಞಾನಪಿಪಾಸುಗಳೂ ತಾತ್ವಿಕ ವಿಷಯಗಳಲ್ಲಿ ತೀವ್ರ ಆಸಕ್ತಿಯಿದ್ದವರೂ ಆದ ಶಿವಶರಣರಲ್ಲಿ ಕೆಲವರಾದರೂ ಈ ಜ್ಞಾನಭಂಡಾರವನ್ನು ನೇರವಾಗಿ ಸಂಸ್ಕೃತದಲ್ಲೇ ಅಭ್ಯಾಸ ಮಾಡಿದವರು ಇದ್ದರೆನಿಸುತ್ತದೆ. ಮತ್ತು ಇನ್ನು ಕೆಲವು ಶರಣರು ಅಷ್ಟು ಹೊತ್ತಿಗೆ ವಿಪುಲವಾಗಿ ಬೆಳೆದಿದ್ದ ಶಾಸ್ತ್ರೀಯ ಕನ್ನಡ ಭಾಷೆಯ ಸಹಾಯದಿಂದಲೂ ಅಧ್ಯಯನ ಮಾಡಿರಲಿಕ್ಕೂ ಸಾಕು. ತಮಿಳು ಮತ್ತು ತೆಲುಗಿನ ಶಿವಭಕ್ತರ ಪ್ರಭಾವ ಸಹ ಕರ್ನಾಟಕದ ಶಿವಶರಣರ ಮೇಲೆ ಸಾಕಷ್ಟು ಆಗಿದೆ ಎಂಬುದಕ್ಕೂ ನಿದರ್ಶನಗಳಿವೆ. ಈ ಮಾತಿಗೆ ಅಪರೋಕ್ಷವಾದ ಆಧಾರವೆಂದರೆ, ಶರಣರ ಸರಳಗನ್ನಡ ವಚನಗಳಲ್ಲಿ ಕಾಣುವ ಆಧ್ಯಾತ್ಮಿಕ ಚಿಂತನೆಗಳ ಹಿಂದಡಗಿರುವ ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತಗಳ ಮತ್ತು ಶೈವಾಗಮಗಳ ಛಾಯೆ. ಗಮನಿಸಬೇಕಾದ ವಿಷಯವೆಂದರೆ, ಶರಣರು ಈ ಎಲ್ಲ ವಿಚಾರಧಾರೆಗಳನ್ನೂ ಮೀರಿದ್ದಲ್ಲದೇ, ಅವುಗಳ ಸಮನ್ವಯವನ್ನೂ ಸಾಧಿಸಲು ಯತ್ನಿಸಿದರು ಎಂಬುದು.

**ಶರಣರ ಆಂದೋಳನ ನಡೆದಾಗಿನ ಭಾರತ ಮತ್ತು ಅದರೊಳಗಿನ ಕನ್ನಡನಾಡು:** ಸನಾತನಧರ್ಮದ ಮೂಲರೂಪ ಬದಲಾವಣೆಗೊಂಡು 'ಜಾತಿ ಪದ್ಧತಿ' ಭಾರತದಲ್ಲಿ ಬೇರು ಬಿಟ್ಟದ್ದು ಯಾವಾಗ ಎಂದು ಖಚಿತವಾಗಿ ಹೇಳಲಾಗದಿದ್ದರೂ ಹತ್ತನೇ ಶತಮಾನದ ಭಾರತದಲ್ಲಿ ಜಾತಿಪದ್ಧತಿ ಸಮಾಜದ ಅವಿಭಾಜ್ಯ ಅಂಗವಾಗಿತ್ತೆಂಬುದು ನಿರ್ವಿವಾದ. ವೇದಗಳ ಪರಿಕಲ್ಪನೆಯಲ್ಲಿ ಜಗತ್ತು ಹುಟ್ಟುವ ಪ್ರಕ್ರಿಯೆಯನ್ನು ಪುರುಷಸೂಕ್ತದಲ್ಲಿ ವರ್ಣಿಸಲಾಗಿದೆ. ಅಲ್ಲಿ ಪ್ರಕೃತಿಯ ಎಲ್ಲ ಜೀವಿಗಳ ಉಗಮವನ್ನು ವಿವರಿಸುತ್ತ, ಮನುಷ್ಯನ ಹುಟ್ಟನ್ನು ವಿವರಿಸುವಾಗ ಈ ಮಾತುಗಳು ಕಂಡುಬರುತ್ತವೆ: "ಬ್ರಾಹ್ಮಣೋಸ್ಯ ಮುಖಮಾಸೀತ್, ಬಾಹೂರಾಜನ್ಯಃಕೃತಃ, ಊರೂತದಸ್ಯಯದ್ವೈಶ್ಯಃ, ಪದ್ಭ್ಯಾಂ ಶೂದ್ರೋ ಅಜಾಯತ" (ವಿಶ್ವರೂಪಿಯಾದ ಭಗವಂತನ ಮುಖದಿಂದ ಬ್ರಾಹ್ಮಣನೂ, ತೋಳುಗಳಿಂದ ಕ್ಷತ್ರಿಯನೂ ತೊಡೆಗಳಿಂದ ವೈಶ್ಯನೂ ಪಾದಗಳಿಂದ

ಶೂದ್ರನೂ ಹುಟ್ಟಿದನು). ಮನುಷ್ಯವರ್ಗವನ್ನು ನಾಲ್ಕು ಗುಂಪುಗಳಾಗಿ ಗುರುತಿಸಲ್ಪಡಲು ಈ 'ವೇದವಾಕ್ಯ'ವೇ ಕಾರಣವಾಗಿದೆ! ಮುಂದೆ ಬರುವ ಭಗವದ್ಗೀತೆಯ ಕೃಷ್ಣ ಹೇಳುವ ಪ್ರಕಾರ, "ಚಾತುರ್ವರ್ಣ್ಯಂ ಮಯಾ ಸೃಷ್ಟಮ್ ಗುಣಕರ್ಮ ವಿಭಾಗಶಃ" (ವ್ಯಕ್ತಿಯ ಗುಣ ಮತ್ತು ಕರ್ಮಗಳಿಗನುಸಾರವಾಗಿ ನಾಲ್ಕು ವರ್ಣಗಳನ್ನು ನಾನು ಸೃಷ್ಟಿಸಿದೆನು) ಎಂಬ ಮಾತುಗಳಿವೆ. ಈ ನಾಲ್ಕು ಗುಂಪುಗಳನ್ನೇ ವರ್ಣಗಳೆಂದು ಕರೆದು ಅವು ಮನುಷ್ಯನ ಗುಣ ಮತ್ತು ಕರ್ಮಗಳಿಗೆ ಅನುಸಾರವಾಗಿವೆ ಎಂಬ ಸಿದ್ಧಾಂತ ದೀರ್ಘಕಾಲ ಸಮಾಜದ ಒಳಿತಿಗೆ ಆಧಾರವಾಗಿದ್ದರೂ, ಸಹಸ್ರಾರು ವರ್ಷಗಳ ಭಾರತೀಯ ಇತಿಹಾಸದಲ್ಲಿ ಕ್ರಮೇಣ, ಮನುಷ್ಯ ಹುಟ್ಟಿನಿಂದಲೇ ಒಂದು ವರ್ಣಕ್ಕೆ ಸೇರಿ ಹುಟ್ಟುತ್ತಾನೆಂಬ ನಂಬಿಕೆ ಮತ್ತು ಆಚರಣೆ ಬಂದುಹೋಯಿತು. ಮುಂದೆ ಅದು ಮತ್ತಷ್ಟು ಹೆಪ್ಪುಗಟ್ಟಿ, ವರ್ಣವೆಂಬುದು 'ಜಾತಿ'ಯಾಗಿ ಒಂದೊಂದು ಜಾತಿಯಲ್ಲೂ ಹತ್ತಾರು, ಏಕೆ, ನೂರಾರು–ಉಪಜಾತಿಗಳು ಹುಟ್ಟಿ, ಪರಸ್ಪರ ಸಹಜೀವನ, ಸಹಭೋಜನ, ವೈವಾಹಿಕ ಸಂಬಂಧ ಎಲ್ಲ ಕಡಿದುಹೋಗಿ ಹಿಂದೂ ಸಮಾಜದ ಅತ್ಯಂತ ದೊಡ್ಡ ಶಾಪವಾಗಿ ಪರಿಣಮಿಸಿತು. ಅದರ ದುಷ್ಪರಿಣಾಮವನ್ನು ಭಾರತೀಯ ಸಮಾಜ ಇಂದಿಗೂ ಅನುಭವಿಸುತ್ತಿದೆ ಎಂಬುದು ಎಲ್ಲರಿಗೂ ತಿಳಿದದ್ದೇ.

ವಚನ ಸಾಹಿತ್ಯ ಹುಟ್ಟುವ ಕಾಲಕ್ಕೆ ಅಂದರೆ ವಚನಗಳನ್ನು ಆಡಿದ/ಹಾಡಿದ ಶರಣರು ಕರ್ನಾಟಕದಲ್ಲಿ ಕಾಣಿಸಿಕೊಂಡಾಗ ಜಾತಿಪದ್ಧತಿ ಭಾರತದ ಅವಿಭಾಜ್ಯ ಅಂಗವಾಗಿತ್ತು ಎಂದು ಮೇಲೆ ಹೇಳಿದೆವಷ್ಟೆ. ಧರ್ಮಗ್ರಂಥಗಳನ್ನು ಸ್ವಾರ್ಥ ಮತ್ತು ಅಧಿಕಾರದ ಅನುಕೂಲಕ್ಕೆ ತಕ್ಕಂತೆ ವ್ಯಾಖ್ಯಾನಿಸಿದ್ದೇ ಸಾಲದೆಂಬಂತೆ, ನಾಲ್ಕು ವರ್ಣಗಳೇ ಅಲ್ಲದೇ ವರ್ಣಗಳಿಂದ ಹೊರಗೇ ಇಡಲ್ಪಟ್ಟ 'ಪಂಚಮ'ರ ಗುಂಪೊಂದು ಕೂಡ ನಿರ್ಮಾಣವಾಗಿದ್ದು ಮನುಷ್ಯವರ್ಗದ ಮೇಲೆ ನಡೆದ ಅತ್ಯಂತ ಘೋರ ಅಪರಾಧ ಮತ್ತು ಅತ್ಯಾಚಾರಗಳಲ್ಲೊಂದಾಗಿತ್ತು. ಭಾರತವನ್ನು ಆಕ್ರಮಿಸಿಕೊಂಡ ಪರಕೀಯರು ಭಾರತೀಯ ಸಮಾಜದ ಮನುಷ್ಯ–ಮನುಷ್ಯರ ನಡುವೆ ಜಾಡ್ಯವಾಗಿದ್ದ ಅಸಮಾನತೆಯನ್ನು ಹೋಗಲಾಡಿಸುವ ಗೋಜಿಗೆ ಹೋಗದೇ ಜಾತಿಪದ್ಧತಿಯನ್ನು ಜಾತಿದ್ವೇಷವನ್ನಾಗಿ ಮಾರ್ಪಡಿಸಿಕೊಂಡು ರಾಜಕೀಯ ಲಾಭ ಪಡೆದುಕೊಂಡದ್ದಲ್ಲದೇ 'ಕೆಳ'ವರ್ಗದವರನ್ನು ತಮ್ಮ ಧರ್ಮಕ್ಕೆ ಪರಿವರ್ತಿಸಿಕೊಳ್ಳಲು ಈ ಆಂತರಿಕ ತಾರತಮ್ಯ ಒಳ್ಳೆಯದೇ ಎಂದು ಯೋಚಿಸಿದರು. ಹೊರಗಿನಿಂದ ಬಂದ ಆಕ್ರಮಣಕಾರಿಗಳು ಮತ್ತು ವ್ಯಾಪಾರಕ್ಕೆಂದು ಬಂದು ಭಾರತದಲ್ಲೇ ತಳವೂರಿ ದೇಶದ ಒಂದೊಂದು ಪ್ರಾಂತ್ಯದ ರಾಜನನ್ನು ಮತ್ತೊಂದು ಪ್ರಾಂತ್ಯದ ರಾಜನೊಡನೆ ಹೊಡೆದಾಡುವಂತೆ ಪ್ರಚೋದಿಸಿ, ಮೊದಲೇ ಛಿದ್ರವಾಗಿದ್ದ ಸಮಾಜವನ್ನು ಮತ್ತಷ್ಟು ಒಡೆಯಲು ಉಪಯೋಗಿಸಿಕೊಂಡರೆಂಬುದು ಚಾರಿತ್ರಿಕ ಸತ್ಯ. ಆದರೆ, ಪರಕೀಯರು ಆಗಮಿಸುವ ಕಾಲಕ್ಕೂ ಮುನ್ನ, ಅಂದರೆ ಇಂದಿಗೆ

ಸುಮಾರು ೯೦೦ ವರ್ಷಗಳ ಹಿಂದೆ ಕರ್ನಾಟಕದಲ್ಲಿ ಅವತರಿಸಿದ ಒಬ್ಬ ಯುಗಪುರುಷನ ಇತಿಹಾಸ ಸುವರ್ಣಾಕ್ಷರಗಳಲ್ಲಿ ಬರೆದಿಡಲು ಯೋಗ್ಯವಾದದ್ದು. ಹುಟ್ಟಿನಿಂದ ಬ್ರಾಹ್ಮಣನಾಗಿದ್ದರೂ 'ಬ್ರಾಹ್ಮಣ್ಯ'ದ ವಿರುದ್ಧ ಮತ್ತು ಸಮಾಜದಲ್ಲಿದ್ದ ಜಾತಿಭೇದ ಮತ್ತು ತಾರತಮ್ಯಗಳ ವಿರುದ್ಧ ದಂಗೆಯೆದ್ದ ಬಸವಣ್ಣನೇ ಆ ಮಹಾನುಭಾವ. ಅವನೊಂದಿಗೆ ಅವನ ಸಮಕಾಲೀನರಾದ ಇತರ ಶಿವಶರಣರು (ಅಲ್ಲಮ, ಚೆನ್ನಬಸವಣ್ಣ, ಮಹದೇವಿಯಕ್ಕ, ಮೊದಲಾದವರು) ನಡೆಸಿದ ಕ್ರಾಂತಿ ಅಂದಿನ ಕರ್ನಾಟಕದ ಬಣ್ಣವನ್ನೇ ಬದಲಿಸಿತು.

**ಜನಪ್ರಿಯ ಹಿಂದೂ ಧರ್ಮ:** ಋಷಿ-ಮುನಿಗಳು, ಆಚಾರ್ಯರು ವಿವರಿಸುವ 'ಪರಬ್ರಹ್ಮ,' 'ಜೀವಾತ್ಮ,' 'ಪರಮಾತ್ಮ,' ಮುಂತಾದ ಸುಲಭಗ್ರಾಹ್ಯವಲ್ಲದ ವಿಷಯಗಳನ್ನು ಬದಿಗಿಟ್ಟು ಯಾವುದನ್ನು ದಿನನಿತ್ಯದ ಬದುಕಿನಲ್ಲಿ ಜನಸಾಮಾನ್ಯರು ಬಳಕೆಯಲ್ಲಿಟ್ಟಿರು-ತ್ತಾರೋ ಅದನ್ನು ಜನಪ್ರಿಯ ಹಿಂದೂಧರ್ಮ (popular Hinduism) ಅನ್ನುತ್ತೇವೆ. ತಾತ್ವಿಕ ದೃಷ್ಟಿಯಿಂದ ದೇವರು ಎಂಬ ಪರಿಕಲ್ಪನೆಯೇ ಬೇರೆ, ದಿನನಿತ್ಯದ ದೇವರೇ ಬೇರೆ. "ಏಕಂ ಸತ್ ವಿಪ್ರಾಃ ಬಹುಧಾ ವದಂತಿ" ('ದೇವರೊಬ್ಬನೇ ತಿಳಿದವರು ಅವನನ್ನು ವಿಧವಿಧವಾಗಿ ವರ್ಣಿಸುವರು') ಮುಂತಾಗಿ ಉಪನಿಷತ್ತುಗಳು ಸಾರುತ್ತಿದ್ದರೂ, 'ದೇವರು ನಿರಾಕಾರ, ನಿರ್ವಿಕಲ್ಪ, ನಿರಂಜನ,' 'ಅದು' ಗಂಡೂ ಅಲ್ಲ, ಹೆಣ್ಣೂ ಅಲ್ಲ ಎಂದೆಲ್ಲ ವಿವರಣೆಗಳಿದ್ದರೂ, ಶಿವ, ವಿಷ್ಣು, ಗಣೇಶ, ಶಕ್ತಿ, ರುದ್ರ, ಸರಸ್ವತಿ ಮೊದಲಾಗಿ ಹತ್ತಾರು, ಏಕೆ, ನೂರಾರು ಸಾಕಾರ, ಗಂಡು-ಹೆಣ್ಣು ರೂಪದ (ಅಷ್ಟೇ ಏಕೆ, ಪ್ರಾಣಿರೂಪದ, ಮನುಷ್ಯ-ಪ್ರಾಣಿಗಳ ಮಿಶ್ರರೂಪದ) ದೇವ-ದೇವಿಗಳ ಆರಾಧನೆ ಆಚರಣೆಯಲ್ಲಿದೆ. ಶಿವನೇ ಎಲ್ಲರಿಗಿಂತ ಮಿಗಿಲೆಂಬ ಶೈವರು ಮತ್ತು ವಿಷ್ಣುವೇ ಹೆಚ್ಚೆನ್ನುವ ವೈಷ್ಣವರೂ ತಮ್ಮ ತಮ್ಮ ಇಷ್ಟದೇವತೆಗಳಿಗೆ ದೇಗುಲಗಳನ್ನು ಕಟ್ಟಿ ಅಲ್ಲಿ ಹಾಲು, ಮೊಸರು, ಜೇನುತುಪ್ಪ, ತುಪ್ಪ ಮತ್ತು ಸಕ್ಕರೆಗಳಿಂದ ಅಭಿಷೇಕ ಮಾಡುವ, ಹೂವು ಹಣ್ಣುಗಳನ್ನು ಅರ್ಪಿಸುವ, ಧೂಪ-ದೀಪ-ಆರತಿಗಳಿಂದ ಸಂತೃಪ್ತಿಪಡಿಸುವ ಅಷ್ಟೇ ಏಕೆ, ದೊಡ್ಡ ದೊಡ್ಡ ಯಾಗ-ಯಜ್ಞಗಳನ್ನು ನಡೆಸುವ, ಹಾಗೆ ನಡೆಸುವ ವಿಧಿವಿಧಾನಗಳಲ್ಲಿ ಪಶುಗಳನ್ನು ಬಲಿಕೊಡುವ ಪದ್ಧತಿಗಳೆಲ್ಲ ಬೆಳೆದು ಒಂದಿಷ್ಟು ಮಾರ್ಪಟ್ಟು ಮತ್ತೆ ಮತ್ತೆ ಬಂದು-ಹೋಗಿ ಮಾಡಿವೆ. (ಪಶುಬಲಿಯನ್ನು ತಪ್ಪಿಸಲು ಜೈನರೂ ಬೌದ್ಧರೂ ಮಾಡಿದ ಯತ್ನ ಕೆಲಕಾಲ ಪರಿಣಾಮ ಬೀರಿದ್ದರೂ ಆ ಪದ್ಧತಿಗಳು ಕಡಿಮೆಯಾಗಿದ್ದರೂ ಮತ್ತೆ ಅವು ಜನಪ್ರಿಯ ಹಿಂದೂಧರ್ಮದ ಭಾಗವಾಗಿ ಒಂದಿಲ್ಲ ಒಂದು ವೇಷದಲ್ಲಿ ಇಂದಿಗೂ ಉಳಿದೇ ಇವೆ ಎಂಬುದು ದುರ್ಭಾಗ್ಯದ ಸಂಗತಿ.) ಸುಮಾರು ಸಾವಿರ ವರ್ಷಗಳಿಂದಲೂ, ಅಥವಾ ಅದಕ್ಕೂ ಮೊದಲೇ (?) ಸನಾತನಧರ್ಮವೆಂಬ ಆದರ್ಶವು ಭಾರತೀಯ ಸಮಾಜದಿಂದ ಮಾಯವಾಗಿ ಮಠಗಳ ಪ್ರವಚನಗಳಲ್ಲಿ ಮಾತ್ರ ಉಳಿದುಕೊಂಡಿತ್ತು. ಇದು ವಚನಕಾರರ ಪ್ರವೇಶದ ಸನ್ನಿವೇಶ.

**ವೀರಶೈವ/ಲಿಂಗಾಯತ ಧರ್ಮ ಮತ್ತು ಶಿವಶರಣರು:** ನಮ್ಮ ಪ್ರಸ್ತುತ ವಿಷಯಕ್ಕೆ ಶಿವಶರಣರು ಆಚರಣೆಗೆ ತಂದ ಮತದ ಬಗ್ಗೆ ಎರಡು ಮಾತುಗಳು ಇಲ್ಲಿ ಅಗತ್ಯವೆಂಬ ಕಾರಣಕ್ಕಷ್ಟೇ ಇದರ ಪ್ರಸ್ತಾಪ. ವೀರಶೈವ ಧರ್ಮದ ಪ್ರಸ್ತಾಪ ಬಂದಾಗಲೆಲ್ಲ ಪಂಚಾಚಾರ್ಯರ ಹೆಸರುಗಳು ಉದ್ಧರಿಸಲ್ಪಡುತ್ತವೆ. ಭಾರತದ ಸುತ್ತಗಲವನ್ನು ಹೊಂದಿರುವ ರಂಭಾಪುರಿ, ಉಜ್ಜಯಿನಿ, ಶ್ರೀಶೈಲ, ಕೇದಾರ ಮತ್ತು ವಾರಣಾಸಿ ಪ್ರದೇಶಗಳಲ್ಲಿ ಶೈವಮಠಗಳನ್ನು ಸ್ಥಾಪಿಸಿದವರೇ ರೇಣುಕಾಚಾರ್ಯ, ಮರುಳ ಸಿದ್ಧ, ಏಕೋರಾಮಾರಾಧ್ಯ, ಪಂಡಿತಾರಾಧ್ಯ ಮತ್ತು ವಿಶ್ವಾರಾಧ್ಯ ಎಂಬ ಪಂಚಾಚಾರ್ಯರು. ಶೈವಾಗಮ ಮಠಗಳಲ್ಲಿ ಸನಾತನಧರ್ಮದ ಅನುಯಾಯಿಗಳಾಗಿದ್ದ ಶಿವಭಕ್ತರು, ಹಿಂದೆ ತಿಳಿಸಿದ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತಗಳಿಗಿಂತ ವಿಭಿನ್ನವಾದ 'ಶಕ್ತಿವಿಶಿಷ್ಟಾದ್ವೈತ'ವೆಂಬ ಸಿದ್ಧಾಂತವನ್ನು ಅನುಸರಿಸುವವರಾಗಿದ್ದರು. ಮುಂದೆ ಬರುವ ಕೆಲವು ಶರಣರ ಚಿಂತನೆಯ ಮೇಲೆ ಪಂಚಾಚಾರ್ಯರ ಪ್ರಭಾವ ಸಾಕಷ್ಟು ಇದ್ದಂತಿದೆ. ಆದರೆ, ಕರ್ನಾಟಕದ ಶಿವಶರಣರು ಜನಪ್ರಿಯ ಹಿಂದೂ ಧರ್ಮದ ಅಟಾಟೋಪಗಳನ್ನು ಮತ್ತು ಕಂದಾಚಾರ ಪದ್ಧತಿಗಳನ್ನೂ ಸಾರಾಸಗಟಾಗಿ ವಿರೋಧಿಸಿದವರಾಗಿದ್ದರು. ಅವರೂ ತಮ್ಮ ದೇವರನ್ನು ಶಿವನೆಂದೇ ಕರೆದರು, ಅವನೊಬ್ಬನೇ ದೇವರೆಂದರು. ಆದರೆ, ಆ ದೇವರು ದೇಗುಲದಲ್ಲಲ್ಲ, ದೇಹದಲ್ಲೇ ಇರುವವ ಎಂದರು. ಶರಣರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತಗಳ ಪ್ರತಿಪಾದನೆ ಒಂದಿಲ್ಲ ಒಂದು ರೀತಿ ಇದ್ದೇಯಿದೆಯಾದರೂ ಸಾಧ್ಯವಾದಷ್ಟೂ ಅಲ್ಲಿಯವರೆಗಿನ ಮತಗಳ ಸಮನ್ವಯದ ಯತ್ನವೂ ಕಂಡುಬರುತ್ತದೆ. ವೇದ, ಆಗಮ ಮೊದಲಾದ ಧಾರ್ಮಿಕ ಗ್ರಂಥಗಳನ್ನು ಶರಣರು ಹಳಿದರೂ ಉಪನಿಷತ್ತಿನ ತಾತ್ವಿಕ ವಿಷಯಗಳನ್ನು ಸಂಪೂರ್ಣವಾಗಿ ನಿರಾಕರಿಸಿಲ್ಲ, ಆದರೆ ಅವುಗಳ ಸಾರವನ್ನು ಸುಲಭಗೊಳಿಸಿ ತಮ್ಮ ಜೀವನಧರ್ಮದಲ್ಲಿ ಅಳವಡಿಸಿಕೊಂಡಿದ್ದಾರೆ. ಶರಣರ ಬಗ್ಗೆ ಹೇಳಬಹುದಾದ ಒಂದು ಮುಖ್ಯ ವಿಷಯವೆಂದರೆ, ಅವರು ಕೇವಲ ಮಾತಿನಲ್ಲಲ್ಲದೇ ಕ್ರಿಯೆಯಲ್ಲೂ ತಮ್ಮ ನಂಬಿಕೆಗಳನ್ನು ಆಚರಿಸಲು ಯತ್ನಿಸಿದರು. ದೇಹ ಬೇರೆಯಲ್ಲ, ಲಿಂಗ ಬೇರೆಯಲ್ಲ ಎಂದು ನಂಬಿದರೂ ಅದನ್ನು ಮನಗಾಣಲು ಮೊದಲ ಹೆಜ್ಜೆಯಾಗಿ ಬ್ರಹ್ಮಾಂಡರೂಪಿಯಾದ ಇಷ್ಟಲಿಂಗವೊಂದನ್ನು ದೇಹದ ಮೇಲೆ ಧರಿಸಿಕೊಂಡು 'ಲಿಂಗವಂತ'ರಾದರು. ಜಾತಿಭೇದವನ್ನು ತೊಡೆಯಲು ಲಿಂಗ ಧರಿಸಿದವರೆಲ್ಲ ಒಂದೇ ಜಾತಿಯೆಂದು ಸಾರಿದರು. ಗಂಡು ಹೆಣ್ಣಿನ ಭೇದವನ್ನೂ ತೊಡೆದು ಎರಡೂ ವರ್ಗಕ್ಕೂ ಲಿಂಗಧಾರಣೆಯ ಹಕ್ಕನ್ನು ಕೊಟ್ಟರು. ಇವರಿಗೆ 'ಕಾಯಕ' ಅತಿಮುಖ್ಯವಾಯಿತು, ಸಾಮಾಜಿಕ ಋಣವನ್ನು ತೀರಿಸಲು ಪ್ರತಿಯೊಬ್ಬರೂ ತಮ್ಮ ತಮ್ಮ ಶಕ್ತಿಗನುಸಾರವಾಗಿ ದುಡಿದು ಕಾಯಕದಿಂದಲೇ ಕೈಲಾಸಕ್ಕೇರಬೇಕೆಂಬುದು ಇವರ ಅಭಿಮತ. ವಚನಗಳನ್ನು ಬರೆದ ಶರಣರು ಸಮಾಜದ ವಿವಿಧ ಕಾಯಕದವರು (ಕುಂಬಾರ, ಕಮ್ಮಾರ, ಬಡಗಿ, ಕ್ಷೌರಿಕ, ಅಗಸ, ವೇಶ್ಯೆ ಕೂಡ!).

ಇಂಥಾ ಕಾಯಕದವರನ್ನು 'ಶರಣ'ರೆಂದು ಗೌರವಿಸುವ ಔದಾರ್ಯ ಮತ್ತು ಶ್ರೇಷ್ಠತೆ ಇತರ ಧರ್ಮಗಳಲ್ಲಿ ಕೇವಲ ಆದರ್ಶಗಳಾಗಿವೆಯೇ ಹೊರತು ನಿತ್ಯಜೀವನದಲ್ಲಿ ಆಚರಣೆಯಲ್ಲಿದ್ದಂತಿಲ್ಲ.

ಶಿವನೇ ಪರಮಶ್ರೇಷ್ಠನೆಂದು ನಂಬಿದವರು ಭಾರತದಲ್ಲಿ ಬಸವಣ್ಣ ಮುಂತಾದ ಶರಣರ ಆಗಮನಕ್ಕೆ ಶತಮಾನಗಳ ಮೊದಲೇ ಇದ್ದರಲ್ಲ. ಶೈವಪಂಥಕ್ಕೆ ನಾಲ್ಕೈದು ಸಹಸ್ರ ವರ್ಷಗಳ ಇತಿಹಾಸವಿದೆಯೆಂದು ಪಂಡಿತರು ಹೇಳುತ್ತಾರೆ. ಇದು ದಕ್ಷಿಣಭಾರತದ (ಅದರಲ್ಲೂ ತಮಿಳು ಪ್ರಾಂತ್ಯದ), ಪಶ್ಚಿಮದ ಗುಜರಾತ್ ಮತ್ತು ಮಹಾರಾಷ್ಟ್ರ, ಮಧ್ಯಭಾರತ ಮತ್ತು ಉತ್ತರಭಾರತದಲ್ಲಿ ಕಾಶ್ಮೀರದವರೆಗೆ ಹಬ್ಬಿದ್ದ ಪಂಥ. (ಪ್ರಸಿದ್ಧ ಹಾಗು ಪ್ರಾಚೀನ ದ್ವಾದಶ ಜ್ಯೋತಿರ್ಲಿಂಗಗಳು ಇಡೀ ದೇಶದ ಉದ್ದಗಲವನ್ನು ಆವರಿಸಿವೆ ಎಂಬುದನ್ನು ಇಲ್ಲಿ ನೆನೆಸಿಕೊಳ್ಳಬಹುದು.) ಈ ರೀತಿ ಶೈವ ಪಂಥದ ಒಂದು ಒಳಗುಂಪು ವೀರಶೈವ ಪಂಥ, ಹಾಗೂ ಅವರ ಸಿದ್ಧಾಂತಕ್ಕೆ 'ಶಕ್ತಿವಿಶಿಷ್ಟಾದ್ವೈತ' ಎಂಬ ಹೆಸರು ಪ್ರಚಲಿತವಾಗಿದೆ, ಎಂಬುದು ಹಲವು ಪಂಡಿತರ ಅಭಿಪ್ರಾಯ. ಕರ್ನಾಟಕದಲ್ಲಿ ಆಗಲೇ ವೀರಶೈವಪಂಥವನ್ನು ಆಚರಿಸುತ್ತಿದ್ದ ಅನೇಕರು ಬಸವಣ್ಣನ ಲಿಂಗಾಯತ ಧರ್ಮದತ್ತ ಆಕರ್ಷಿತರಾಗಿರುವ ಸಾಧ್ಯತೆ ಇದೆ, ಹೀಗಾಗಿ ಇಂದಿನ ವೀರಶೈವ/ಲಿಂಗಾಯತ ಸಮುದಾಯದಲ್ಲಿ ಹಲವಾರು ಪ್ರಾಚೀನ ರೀತಿಗಳೂ ಪದ್ಧತಿಗಳೂ ಅಡಕವಾಗಿದ್ದಲ್ಲಿ ಅಚ್ಚರಿಯೇನಿಲ್ಲ. 'ಲಿಂಗಾಯತ' ಮತ್ತು 'ವೀರಶೈವ' ಈ ಶಬ್ದಗಳ ಬಳಕೆಯ ವಿಷಯದಲ್ಲಿ ಬಸವಣ್ಣನ ಇಂದಿನ ಅನುಯಾಯಿಗಳಲ್ಲಿ ಒಮ್ಮತವಿದ್ದಂತೆ ಕಾಣುವುದಿಲ್ಲ. ಅಷ್ಟೇ ಅಲ್ಲ, 'ವೀರಶೈವ/ಲಿಂಗಾಯತ' ಎಂಬ ವರ್ಗ ಹಿಂದೂ ಧರ್ಮದ ಒಂದು ಪಂಗಡವೋ ಅಥವಾ ಅದೇ ಒಂದು ಸ್ವತಂತ್ರ ಧರ್ಮವೋ ಎಂಬ ಬಗ್ಗೆ ಸಹ ಸಾಕಷ್ಟು ಚರ್ಚೆಗಳು ನಡೆದಿವೆ. ಈ ಚರ್ಚೆಗಳಲ್ಲಿ ಇಂದಿನ ಸಾಮಾಜಿಕ ಪರಿಸ್ಥಿತಿ ಮತ್ತು ರಾಜಕೀಯದ ಒತ್ತಡಗಳೂ ಸೇರಿಕೊಂಡು ಶರಣರು ಬಯಸಿದ ಸಮಾಜದಲ್ಲಿ ಬಸವಣ್ಣ ವಿರೋಧಿಸಿದ ಅಂದಿನ ಹಿಂದೂಧರ್ಮದ ಎಲ್ಲ ವೈಪರೀತ್ಯಗಳೂ ಒಂದಿಲ್ಲ ಒಂದು ರೀತಿ ಉಳಿದುಬಿಟ್ಟಿವೆ. ಇಂದಿನ ಪರಿಸ್ಥಿತಿಯನ್ನು ಒತ್ತಟ್ಟಿಗಿಟ್ಟು, ಬಸವ ಮತ್ತು ಇತರ ಶರಣರ ಆದರ್ಶದತ್ತ ಗಮನ ಹರಿಸುವುದು ಈ ಲೇಖನದ ಉದ್ದಿಶ್ಯವಾಗಿರುವುದರಿಂದ ಅತ್ತ ಗಮನ ಹರಿಸೋಣ.

**ಬಸವಾದಿ ಶಿವಶರಣರ ಧರ್ಮದ ಸಾರ:** ಸಹಸ್ರಾರು ವಚನಗಳಲ್ಲಿ ಜ್ಞಾನ-ಭಕ್ತಿ-ವೈರಾಗ್ಯ ಮತ್ತು ಕಾಯಕಗಳಿಗೆ ಸಂಬಂಧಪಟ್ಟ ಬೋಧನೆಗಳನ್ನು ಕೆಲವೇ ಮಾತುಗಳಲ್ಲಿ ಹಿಡಿದಿಡುವುದು ದುಸ್ಸಾಧ್ಯ, ಆದರೂ ಸಂಕ್ಷಿಪ್ತವಾಗಿ ಈ ಮುಂದಿನ ಮಾತುಗಳಲ್ಲಿ ವಿವರಿಸಬಹುದು. ಮನುಷ್ಯ-ಮನುಷ್ಯರಲ್ಲಿ ತಾರತಮ್ಯವಿರಕೂಡದು. ಗಂಡು-ಹೆಣ್ಣುಗಳಲ್ಲಿ ಸಮಾನತೆ ಇರಬೇಕು. ಮನುಷ್ಯನ ವೃತ್ತಿ ಯಾವುದೇ ಇರಲಿ ಶ್ರದ್ಧೆಯಿಂದ ದುಡಿದು ಸಮಾಜದ ಋಣವನ್ನು ತೀರಿಸಬೇಕು. ಸ್ವರ್ಗ, ನರಕ ಇವೆಲ್ಲ ಬೇರೆ ಇಲ್ಲ, ಇಡೀ

ಜಗತ್ತು ಸೃಷ್ಟಿಕರ್ತನ ಒಂದು ಕಮ್ಮಟವಿದ್ದಂತೆ, ಮೊದಲು ಇಲ್ಲಿ ಬದುಕಿ ಸಾರ್ಥಕ್ಯವನ್ನು ಗಳಿಸಿಕೊಳ್ಳದಿದ್ದರೆ ಮತ್ತೆಲ್ಲಿಯೂ ಮೋಕ್ಷವಿಲ್ಲ. ದೇವರನ್ನು ಪೂಜಿಸಲು ದೇಗುಲಕ್ಕೆ ಹೋಗುವ ಅಗತ್ಯವಿಲ್ಲ. ಈ ನಮ್ಮ ದೇಹವೇ ದೇಗುಲ, ದೇವರನ್ನು ಎಲ್ಲೆಲ್ಲೋ ಹುಡುಕುವ ಅಗತ್ಯವಿಲ್ಲ, ಅವ ನಮ್ಮೊಳಗೇ ಇರುವನು, ಅವನನ್ನು ಇಷ್ಟಲಿಂಗದ ರೂಪದಲ್ಲಿ ಅಂಗೈಯಲ್ಲಿಟ್ಟುಕೊಂಡು ಪೂಜಿಸಿದರೆ (ಶರಣರು ಹೇಳಿಕೊಟ್ಟ ಷಟ್ ಸ್ಥಳ ಅಥವಾ ಆರು ಸೋಪಾನಗಳಲ್ಲಿ ನಂಬಿ ನಡೆದರೆ), ಕ್ರಮೇಣ ಆ 'ಲಿಂಗವೇ ಬೇರೆ ತನ್ನ ಅಂಗವೇ ಬೇರೆ' ಎಂದು ಬಗೆದಿದ್ದ ದ್ವೈತವು ಮರೆಯಾಗಿ (ಮನದ ಮುಂದಿನ ಮಾಯೆ ಕಳೆದು) 'ತನ್ನೊಳಗೇ ಇರುವ ಮಹಾಲಿಂಗಕ್ಕೂ ಅಂಗೈಯಲ್ಲಿಟ್ಟು ಪೂಜಿಸುವ ಇಷ್ಟಲಿಂಗಕ್ಕೂ ತನ್ನ ಅಂಗಕ್ಕೂ ಯಾವ ಭೇದವೂ ಇಲ್ಲ'ವೆಂಬ ಅರಿವು ಉಂಟಾಗುತ್ತದೆ. (ಆ ಅರಿವು ಬರುವ ಮುನ್ನ ಇಷ್ಟಲಿಂಗ ಒಂದು 'ಕುರುಹು' ಅಷ್ಟೆ.) ಮನುಷ್ಯ, ಕಳ್ಳತನ ಮಾಡದೇ, ಯಾರನ್ನೂ ಕೊಲ್ಲದೆ, ಸುಳ್ಳಾಡದೇ, ತನ್ನನ್ನು ತಾನೇ ಹೊಗಳಿಕೊಳ್ಳದೇ, ಇತರರನ್ನು ಹೀಯಾಳಿಸದೆ, ದೀನ-ದಲಿತರನ್ನು ಕಂಡರೆ ಅಸಹ್ಯಪಡದೇ, ದೈಹಿಕ ಶುಚಿ ಮತ್ತು ಒಳಗಿನ ಶುದ್ಧಿ ಇಟ್ಟುಕೊಂಡಲ್ಲಿ ಭಗವಂತನನ್ನು ಒಲಿಸಿಕೊಳ್ಳಬಲ್ಲ. ಇವು ಶರಣರು ಸಾರಿದ ಧರ್ಮದ ಸಾರ, ಇಂಥ ಉದಾತ್ತ ತಾತ್ವಿಕ ವಿಷಯಗಳನ್ನು ಶರಣರು ಸುಲಭವಾದ ಕನ್ನಡದಲ್ಲಿ ನಮಗೆ ಕೊಟ್ಟುಹೋಗಿದ್ದಾರೆ, ಅವನ್ನು ಪಾಲಿಸುವ ಸದ್ಬುದ್ಧಿ ನಮಗಿದ್ದರೆ ಸಾಕು!

**ಭಕ್ತಿ ಮತ್ತು ಭಕ್ತಿ ಸಾಹಿತ್ಯ:** 'ಭಕ್ತಿ' ಎಂಬ ಶಬ್ದಕ್ಕೆ ಅಗಾಧವಾದ ಅರ್ಥವಿಸ್ತಾರವಿದೆ. 'ದೇವರು ಮತ್ತು ಗುರುಹಿರಿಯರಲ್ಲಿ ಇಡುವ ನಿರತಿಶಯವಾದ ಪ್ರೀತಿ, ಗೌರವ ಬುದ್ಧಿ, ಅನುರಾಗ, ಜೀವಾತ್ಮ-ಪರಮಾತ್ಮಗಳ ಯಥಾರ್ಥ ಜ್ಞಾನದಿಂದ ಮಾಡುವ ಪರಮಪುರುಷನ ಪಾದಾರವಿಂದಗಳ ಧ್ಯಾನ, ನಿರ್ಮಲ ಚಿತ್ತದಿಂದ ಮಾಡುವ ಪರಮಾತ್ಮನ ಕಥಾಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಮತ್ತು ಆತ್ಮನಿವೇದನಗಳೆಂಬ ಒಂಬತ್ತು ಅಂಗಗಳಿಂದ ಕೂಡಿದ ಧ್ಯಾನವು ಭಕ್ತಿ ಎನಿಸುವುದು.' ನಿಘಂಟುಗಳಲ್ಲಿ ಸಿಗುವ ಅರ್ಥ-ತಾತ್ಪರ್ಯಗಳನ್ನು ಜೋಡಿಸಿ ಪೋಣಿಸಿದ ಪರಿಭಾಷೆ ಇದು ಎನ್ನಬಹುದು! ವೀರಶೈವ ಸಿದ್ಧಾಂತದಲ್ಲಿ ಆರು ವಿಧವಾದ ಭಕ್ತಿಗಳ ವ್ಯಾಖ್ಯೆ ಇದೆ: ಸದ್ಭಕ್ತಿ, ನೈಷ್ಠಿಕೀಭಕ್ತಿ, ಅವಧಾನಭಕ್ತಿ, ಅನುಭವಭಕ್ತಿ, ಆನಂದಭಕ್ತಿ, ಮತ್ತು ಸಮರಸಭಕ್ತಿ. ಇವು ಸಾಧನೆಯ ಆರು ಮೆಟ್ಟಲುಗಳಿಗೆ ಸರಿಹೊಂದುವ ಭಕ್ತಿಮಾರ್ಗಗಳು. ರಾಮ, ಕೃಷ್ಣ, ಮೊದಲಾದ ವಿಷ್ಣುವಿನ ಅವತಾರಗಳಲ್ಲೊಂದನ್ನು, ಅಥವಾ ಶಿವನನ್ನು ಅಥವಾ ದೇವಿಯ ಹಲವು ರೂಪಗಳಲ್ಲೊಂದನ್ನು ತಮ್ಮ ಆರಾಧ್ಯ/ಇಷ್ಟ ದೈವವಾಗಿ ಸ್ವೀಕರಿಸಿ, ಭಾರತದ ವಿವಿಧ ಭಾಗಗಳ ಭಕ್ತರು ತಮ್ಮ ತಮ್ಮ ಭಾಷೆಗಳಲ್ಲಿ, ತಮ್ಮ ತಮ್ಮ ಶೈಲಿಗಳಲ್ಲಿ ಹಾಡಿ ಹೊಗಳುವ ಭಕ್ತಿ ಸಾಹಿತ್ಯಕ್ಕೆ ಸಹಸ್ರಾರು ವರ್ಷಗಳ ಇತಿಹಾಸವಿದೆ.

ಕಬೀರ್, ನಾನಕ್, ನಾಮದೇವ, ತುಕಾರಾಮ್, ಮೀರಾ ಬಾಯಿ, ತುಲಸೀ ದಾಸ್, ಜಯದೇವ, ವಲ್ಲಭಾಚಾರ್ಯ, ಚೈತನ್ಯ, ಮುಂತಾದವರು ಉತ್ತರ ಭಾರತದಲ್ಲಾದರೆ, ದಕ್ಷಿಣದಲ್ಲಿ, ವೀರಶೈವ ಪಂಥದ ಶಿವಶರಣ/ಶರಣೆಯರು, ದಾಸ ಪಂಥದ ಪುರಂದರ, ಕನಕ, ಜಗನ್ನಾಥ, ವಿಜಯರೇ ಮುಂತಾದ ದಾಸವರೇಣ್ಯರು, ತಮಿಳಿನ ಆಳ್ವಾರುಗಳು, ಆಂಡಾಳ್, ಹೀಗೆ ಭಕ್ತರ ಸಾಲು ಸಾಲೇ ಇರುವುದು ಅರಿವಾಗುತ್ತದೆ. ಹಲವು ಶತಮಾನಗಳ ಭಕ್ತಿಸಾಹಿತ್ಯದ ದಾಖಲೆ ಭಾರತೀಯ ಸಾಹಿತ್ಯದಲ್ಲಿರುವಂತೆ ಮತ್ತಾವ ದೇಶದ ಸಾಹಿತ್ಯದಲ್ಲೂ ದೊರಕಲಾರದು.

'ಭಕ್ತಿ'ಗೂ 'ದೇವರು' ಎಂಬ ಕಲ್ಪನೆಗೂ ಅವಿನಾಭಾವ ಸಂಬಂಧವಿದೆ. ಮನುಷ್ಯನಿಗೆ ಈ 'ದೇವರ' ಕಲ್ಪನೆ ಯಾವಾಗ ಬಂತೋ, ಅಂತು, ದೇವರೊಬ್ಬನಿದ್ದಾನೆ ಎಂಬ ನಂಬಿಕೆ ಮನುಷ್ಯನ ಮನಸ್ಸಿಗೆ ಒಂದು ರೀತಿಯ, ಆನಂದ, ಸಮಾಧಾನ ಮತ್ತು ಧೈರ್ಯವನ್ನು ಕೊಡುತ್ತದೆ ಎಂಬುದರಲ್ಲಿ ಎರಡಭಿಪ್ರಾಯಗಳು ಇರಲಾರವು. ವನ್ಯಮೃಗಗಳಿಂದ ಸುತ್ತುವರೆಯಲ್ಪಟ್ಟ ಭಯಭೀತ ಮಾನವನೊಬ್ಬ ಕಾಡಿನಲ್ಲಿ ಒಬ್ಬಂಟಿಗನಾಗಿ ನಡೆಯುವ ಸಂದರ್ಭದಲ್ಲಿ ತನ್ನನ್ನು ಹೇಗಾದರೂ ರಕ್ಷಿಸುವ ಶಕ್ತಿಯೊಂದಿದೆ ಎನಿಸಿದರೆ ಅದಕ್ಕಿಂತ ಹೆಚ್ಚೇನು ಬೇಕು? ಪ್ರವಾಹದ ಅಬ್ಬರದಲ್ಲಿ ಸಿಕ್ಕು ಮುಳುಗುತ್ತಿರುವವರಿಗೆ, ಉರಿಯುವ ಬೆಂಕಿಯಲ್ಲಿ ಸಿಕ್ಕು ಬೇಯುತ್ತಿರುವವರಿಗೆ, ಇನ್ಯಾರೂ ರಕ್ಷಿಸಲಾರರು ಎಂಬ ಪರಿಸ್ಥಿತಿಯಲ್ಲಿರುವಾಗ ಅಗೋಚರ ಶಕ್ತಿಯೊಂದು ನಮ್ಮನ್ನು ಕಾಪಾಡೀತು ಎಂಬ ಆಶಾಭಾವನೆ ಮೂಡುವುದು ಸಹಜವಲ್ಲವೇ? ಅಂಥಾ ಒಂದು ಶಕ್ತಿಗೆ ಒಂದು ಹೆಸರು, ರೂಪ ಇದ್ದರೆ? ಅವನನ್ನು/ಅವಳನ್ನು/ಅದನ್ನು ನಾವು ಅತ್ಯಂತ ಪ್ರೀತಿಯಿಂದ ಭಜಿಸಿದರೆ, ನಾವು ತಾಯಿಯ ಗರ್ಭದಲ್ಲಿರುವ ಶಿಶುವಿನಂತೆ ಸುರಕ್ಷಿತತೆಯನ್ನು ಅನುಭವಿಸುತ್ತೇವೆ. ಇಂಥಾ ಒಂದು ಭಾವನೆಯೇ ಭಕ್ತಿಸಾಹಿತ್ಯಕ್ಕೆ ಮೂಲಾಧಾರ. ನಮ್ಮ ತತ್ವಶಾಸ್ತ್ರಗಳಲ್ಲಿ ವಿವರಿಸುವಂತೆ, ಮನುಷ್ಯರಲ್ಲಿ ಎರಡು ಗುಂಪು: ಒಂದು ಮರ್ಕಟದಂತೆ ಮತ್ತೊಂದು ಮಾರ್ಜಾಲದಂತೆ! ಕೋತಿ ತನ್ನ ಮರಿಯನ್ನು ಸಾಕುವಾಗ ಮರಿಗೇ ಹೆಚ್ಚಿನ ಜವಾಬ್ದಾರಿ, ಅದು ತಾಯಿಯ ಹೊಟ್ಟೆಯನ್ನು ಗಟ್ಟಿಯಾಗಿ ತಬ್ಬದಿದ್ದರೆ, ತಾಯಿ ಮರದಿಂದ ಮರಕ್ಕೆ, ರೆಂಬೆಯಿಂದ ರೆಂಬೆಗೆ ಹಾರುವಾಗ ಕೆಳಗೆ ಬಿದ್ದು ಸಾಯುವುದು ಖಂಡಿತ. ಆದರೆ, ಬೆಕ್ಕು ತನ್ನ ಮರಿಯನ್ನು ಜೋಪಾನವಾಗಿ ಕಚ್ಚಿಕೊಂಡು ಮನೆಯಿಂದ ಮನೆಗೆ ನೆಗೆಯುತ್ತದೆ. ಮರಿಗೆ ನಿರಾಯಾಸ, ನಿರಾಳ, ಅದಕ್ಕೆ ಯಾವ ಜವಾಬ್ದಾರಿಯೂ ಇಲ್ಲ, ಎಲ್ಲ ತಾಯಿಯದೆ. ಹೀಗೆ ಕೆಲವರು ದೇವರು ಎಂಬ ಕಲ್ಪನೆಯನ್ನು ತಾವೇ ಅರಿತುಕೊಳ್ಳಲು ಯತ್ನಿಸಿ ಮುಂದೆ ಸಾಗುತ್ತಾರೆ, ಆದರೆ ಇನ್ನು ಕೆಲವರು ದೇವರನ್ನು ತಾಯಿಯಂತೆ, ತಂದೆಯಂತೆ, ಸಖನಂತೆ ನಂಬಿ ಎಲ್ಲವನ್ನೂ ಅವನ, ಅವಳ, ಅಥವಾ, ಅದರ ಮೇಲೆ ಬಿಟ್ಟು ನಿಶ್ಚಿಂತರಾಗುತ್ತಾರೆ. ಶರಣರ ಭಕ್ತಿಯಲ್ಲೂ

ಈ ಎರಡೂ ತರಹದ ನಮೂನೆಗಳಿವೆ. ಇನ್ನು ಮುಂದೆ ತಮ್ಮ ವಚನಗಳಲ್ಲಿ ಭಕ್ತಿರಸವನ್ನು ಪ್ರದರ್ಶಿಸಿರುವವರಲ್ಲಿ ಮುಖ್ಯರಾದ ಇಬ್ಬರ ಆಯ್ದ ವಚನಗಳನ್ನು ಸವಿಯೋಣ.

**ಬಸವಣ್ಣ:** ವಚನಕಾರರಲ್ಲಿ ಅತಿ ಮುಖ್ಯ ಬಸವಣ್ಣ. 'ಜಗಜ್ಯೋತಿ ಬಸವೇಶ್ವರ' ಎಂದು ಹೊಗಳಲ್ಪಟ್ಟರೂ ಆತನ ಅನುಯಾಯಿಗಳಿಗೆ ಆತ ಪ್ರೀತಿಯ 'ಬಸವಣ್ಣ!' ಕ್ರಾಂತಿಕಾರೀ ಚಿಂತಕ, ವಿಖ್ಯಾತ ದಾರ್ಶನಿಕ, ಹಾಗೂ ವೀರಶೈವ ಮತದ ಪ್ರಮುಖ, ಬಸವಣ್ಣ ಜನಿಸಿದ್ದು ಬಿಜಾಪುರ ಜಿಲ್ಲೆಯ ಬಾಗೇವಾಡಿಯ ಬಳಿ. ತಂದೆ ಮಾದರಸ, ತಾಯಿ ಮಾದಲಾಂಬಿಕೆ. ಬಿಜ್ಜಳನ ಆಸ್ಥಾನದ ಕೋಶಾಧಿಕಾರಿಯಾದರೂ, ಧನಕನಕಗಳಿಗೆ ಅಂಟದ ಸಾತ್ವಿಕ. ರಾಜಕೀಯದ ಮಧ್ಯೆ ತೊಳಲಬೇಕಾಗಿ ಬಂದರೂ 'ರಾಜಕಾರಣಿ'-ಯಾಗದೇ, ಸಮಾಜಸೇವಕನಾಗಿಯೇ ಉಳಿದದ್ದು ಈತನ ಹಿರಿಮೆ. ಈಶಾನ್ಯ ಮುನಿಯಿಂದ ದೀಕ್ಷೆ ಪಡೆದನೆನ್ನಲಾದ ಬಸವಣ್ಣ ಸಾವಿರಕ್ಕೂ ಹೆಚ್ಚು ವಚನಗಳನ್ನು ಬರೆದಿರುವನೆನ್ನುತ್ತಾರೆ. ಕೃಷ್ಣಾ-ಮಲಪ್ರಭಾ ನದಿಯ ಸಂಗಮದಲ್ಲಿರುವ ಕೂಡಲ ಸಂಗಮೇಶ್ವರ ಈತನ ಆರಾಧ್ಯ ದೈವ, ಈತ ಬರೆದ ವಚನಗಳ ಅಂಕಿತ ಸಹ ಆತನ ಆರಾಧ್ಯ ದೈವನಾದ 'ಕೂಡಲ ಸಂಗಮದೇವ.' ನಮಗೆ ದೊರಕಿರುವ ಸಹಸ್ರಾರು ವಚನಗಳಲ್ಲಿ ತನ್ನ ಅಂತರಾಳದ ಭಾವನೆಗಳನ್ನು ಈತ ಇಷ್ಟದೇವನೊಂದಿಗೆ ಹಂಚಿಕೊಳ್ಳುವ ಪರಿ ಅದ್ಭುತವಾದುದು. ಆ ಕೂಡಲ ಸಂಗಮದೇವ ಕಲ್ಯಾಣದ ದೇಗುಲದಲ್ಲಿರುವ 'ಸ್ಥಾವರ' ಲಿಂಗವೇ ಆದರೂ ಅದು ಬೇರೆಯಲ್ಲ, ತನ್ನ ಅಂಗೈಯಲ್ಲಿರುವ ನಿತ್ಯಪೂಜೆಯ ಇಷ್ಟಲಿಂಗ ಬೇರೆಯಲ್ಲ ಎಂಬುದನ್ನು ಮನಗಾಣುವುದು ಆತನಿಗೆ ಕಷ್ಟವಲ್ಲ. ಬಸವಣ್ಣ ಬರೆದ ಅತ್ಯಂತ ಜನಪ್ರಿಯ ವಚನಗಳಲ್ಲೊಂದು:

**ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ**
**ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ**
**ಕೂಡಲಸಂಗಮ ದೇವ ನಿಮ್ಮ ಚರಣಕಮಲದೊಳಗಾನು ತುಂಬಿ**

'ನಯನದಲಿ ನಿಮ್ಮ ಮೂರುತಿ ತುಂಬಿ.....ಕೂಡಲಸಂಗಮ ದೇವ ನಿಮ್ಮ ಚರಣಕಮಲದೊಳಗಾನು ತುಂಬಿ' ಅನ್ನುವಾಗ, ಕಮಲದೊಳಗಿನ ಜೇನನ್ನು ಕುಡಿಯಲು ಬರುವ 'ದುಂಬಿ'ಯೇ ತಾನು ಎನ್ನುತ್ತಾ ಶಿವಪಾದೋದಕವನ್ನು ತೀರ್ಥವಾಗಿ ಸ್ವೀಕರಿಸುವ ಪರಮಭಕ್ತಿಯನ್ನು ಗುರುತಿಸುವುದು ಕಷ್ಟವಾಗಲಾರದು.

'ಎನ್ನ ಕಾಯವ ದಂಡಿಗೆಯ ಮಾಡಯ್ಯ' ಎಂಬ ಮತ್ತೊಂದು ವಚನದಲ್ಲಿ ಭಕ್ತಿಪರವಶರಾದ ಬಸವಣ್ಣ ತಮ್ಮ ಇಷ್ಟ ದೈವವನ್ನು ಕುರಿತು ಹೇಳುತ್ತಾ-

**ಎನ್ನ ಕಾಯವ ದಂಡಿಗೆಯ ಮಾಡಯ್ಯ, ಎನ್ನ ಸಿರವ ಸೋರೆಯ ಮಾಡಯ್ಯ**
**ಎನ್ನ ನರವ ತಂತಿಯ ಮಾಡಯ್ಯ, ಎನ್ನ ಬೆರಳ ಕಡ್ಡಿಯ ಮಾಡಯ್ಯ**
**ಬತ್ತೀಸ ರಾಗವ ಹಾಡಯ್ಯ, ಉರದೊಳಿಟ್ಟು ಬಾಜಿಸು ಕೂಡಲಸಂಗಮ ದೇವ**

ವೀಣೆಗೆ ಬುರುಡೆ ಮತ್ತು ತಂತಿಗಳಿರುತ್ತವೆ, ವಾದ್ಯಸಂಗೀತದಲ್ಲಿ ನುರಿತ ಸಂಗೀತಗಾರ ತಂತಿಗಳನ್ನು ಮೀಟಿ ಮಧುರವಾದ ನಾದವನ್ನು ಹೊರಡಿಸುತ್ತಾನೆ, ಸಂಗೀತರಸಿಕರ ಮನತಣಿಸುತ್ತಾನೆ. ಭಕ್ತನಾದರೋ ತನ್ನ ಹೃದಯವೀಣೆಯನ್ನು ಮೀಟಿ ತನ್ನ ಇಷ್ಟದೈವವನ್ನು ಒಲಿಸಿಕೊಳ್ಳುತ್ತಾನೆ. ಭಕ್ತನ ದೇಹದ ವಿವಿಧ ಅಂಗಾಂಗಗಳನ್ನೇ ಉಪಯೋಗಿಸಿ ವೀಣೆಯೊಂದನ್ನು ಸೃಷ್ಟಿಸಿ ಮೂವತ್ತೆರಡೂ ರಾಗಗಳನ್ನು (ಪ್ರಾಯಃ ಬಸವಣ್ಣನ ಕಾಲಕ್ಕೆ ೩೨ ಪ್ರಮುಖ/ಜನಕ ರಾಗಗಳಿದ್ದವೋ ಏನೋ?) ನುಡಿಸಿದರೆ ತಾನುಂಟು ತನ್ನ ಇಷ್ಟದೈವವಾದ ಕೂಡಲ ಸಂಗಮದೇವನುಂಟು! ಆರ್ತ ಭಕ್ತನಾಗಿ ಆತ್ಮಾರ್ಪಣೆ ಮಾಡಿಕೊಳ್ಳುವ ಈ ರೀತಿಯೂ ಅಮೋಘವಾದುದು.

'ನುಡಿದರೆ ಮುತ್ತಿನ ಹಾರದಂತಿರಬೇಕು,' ಎಂಬ ವಚನವನ್ನು ಕೇಳದ ಕನ್ನಡಿಗರಾರು? ಇಂತಹ ವಚನದ ಸಂದೇಶವನ್ನು ಪಾಲಿಸುವುದು, ಅದನ್ನೋದಿ ಸವಿಯುವಷ್ಟು ಸುಲಭವಲ್ಲ. 'ಮನುಷ್ಯನ ನಾಲಿಗೆ ನುಡಿಯುವ ಮಾತುಗಳು ಹೇಗಿರಬೇಕು?' ಎಂದು ಅತ್ಯಂತ ಮನೋಜ್ಞವಾಗಿ ವಿವರಿಸುವ ಈ ವಚನವನ್ನು ನೋಡಿ:

**ನುಡಿದರೆ ಮುತ್ತಿನ ಹಾರದಂತಿರಬೇಕು,**
**ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು**
**ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು,**
**ನುಡಿದರೆ ಲಿಂಗಮೆಚ್ಚಿ ಅಹುದಹುದೆನ್ನಬೇಕು**
**ನುಡಿಯೊಳಗಾಡಿ ನಡೆಯದಿದ್ದರೆ ಕೂಡಲ ಸಂಗಮದೇವನೆಂತೊಲಿವನಯ್ಯ**

ಇಲ್ಲಿನ ಸಂದೇಶ ವಚನದ ಮಾತುಗಳಷ್ಟೇ ಸ್ಪಷ್ಟ, ನೇರ, ಯಾವ ಅನುಮಾನಕ್ಕೂ ಆಸ್ಪದ ಕೊಡದ ನಿಖರತೆಯಿಂದ ಕೂಡಿದ ಅಧಿಕಾರವಾಣಿ! ಮಾತೆಂದರೆ ಹೇಗಿರಬೇಕು, ಎಂದು ತಿಳಿಸುವಾಗ, 'ಮುತ್ತಿನ ಹಾರ,' 'ಮಾಣಿಕ್ಯದ ದೀಪ್ತಿ,' 'ಸ್ಫಟಿಕದ ಶಲಾಕೆ,' ಎಂದೆಲ್ಲಾ ಉಪಮೆಗಳನ್ನು ಕೊಟ್ಟು ವರ್ಣಿಸಿದರೂ, ಈ ವಚನದ ಮುಖ್ಯಾಂಶ 'ಕೇವಲ ಮುತ್ತಿನಂಥ ನುಡಿ ಇದ್ದರೆ ಸಾಲದು, ನುಡಿದಂತೆಯೇ ನಡೆಯದಿದ್ದರೆ ದೇವ ಮೆಚ್ಚನು' ಎಂಬುದೇ ಆಗಿದೆ. ದೇವರನ್ನು ಒಲಿಸಿಕೊಳ್ಳಲು ಹೊರಟ ಭಕ್ತನಿಗೆ ಬಸವಣ್ಣ ಕೊಡುವ ಎಚ್ಚರಿಕೆ ಸಹ ಇಲ್ಲಿ ಅಡಕವಾಗಿದೆ. ಬೇರಾರಿಗೂ ಮನುಷ್ಯನ ವಂಚನೆಯ ಸುಳಿವು ಸಿಕ್ಕದಿದ್ದರೂ ನುಡಿದಂತೆ ನಡೆಯದ ಮನುಷ್ಯನಿಗೂ ಅವನ ಅಂತರಂಗದ ಆತ್ಮಲಿಂಗಕ್ಕೂ ತಿಳಿದೇ ಇರುತ್ತದಲ್ಲವೇ?

'ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ' ಎಂಬ ಬಸವಣ್ಣನವರ ಮತ್ತೊಂದು ವಚನ ಗಹನವೂ ಗೂಢವೂ ಆದ ಅರ್ಥದಿಂದ ಕೂಡಿದ್ದಾಗಿದೆ.

**ಮರ್ತ್ಯಲೋಕವೆಂಬುದು, ಕರ್ತಾರನ ಕಮ್ಮಟವಯ್ಯ**
**ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ**
**ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ, ಕೂಡಲ ಸಂಗಮದೇವ**

ಕಮ್ಮಟದಲ್ಲಿ ಕಮ್ಮಾರನು ಕಾಯ್ದ ಕಬ್ಬಿಣವನ್ನು ಬಡಿದು, ಬಗ್ಗಿಸಿ, ಕುಗ್ಗಿಸಿ, ಹಿಗ್ಗಿಸಿ, ನೀರಿನಲ್ಲದ್ದಿ, ಮತ್ತೆ ಕಾಸಿ ಬಡಿದು ರೂಪು ಕೊಡುವಂತೆ, ಜೀವನವೆಂಬ ಈ ಕಮ್ಮಟದ ಕಮ್ಮಾರನ ಲೀಲೆಯಿಂದ ಮನುಷ್ಯರು ನಾನಾ ಶಕ್ತಿಗಳ, ನಾನಾರೀತಿಯ ಪೆಟ್ಟುಗಳಿಗೆ ಒಳಗಾಗುವರು. ಇವುಗಳನ್ನೆಲ್ಲಾ ಸಹಿಸಿ 'ಇಲ್ಲಿ' ಅಂದರೆ ಭೂಲೋಕದ ಈ ಜೀವನದಲ್ಲಿ ಸಲ್ಲುವವರು, 'ಅಲ್ಲಿ'ಯೂ, ಅಂದರೆ ಪರಲೋಕದಲ್ಲಿಯೂ (ಪರಲೋಕವೆಂಬು-ದೊಂದಿದ್ದರೆ) ಸಲ್ಲುವರು, ಎಂಬುದು ಈ ವಚನದ ಸಾರ. ಈ ಮಾತು ನಮ್ಮ ಕಿವಿಗಳಲ್ಲಿ ಸದಾ ಗುಯ್ಗುಡುತ್ತಿರಬೇಕು. ಸ್ವರ್ಗ–ನರಕಗಳೆಂದು ಇಲ್ಲದ ಚಿಂತೆಯಿಂದ ತಲೆಕೆಡಿಸಿಕೊಂಡು ಜೀವನವನ್ನೇ ನಿರರ್ಥಕಗೊಳಿಸಿಕೊಳ್ಳುವ ನಮ್ಮಂತಹ ಮನುಷ್ಯರ ಹುಚ್ಚಿಗೆ ಏನೆನ್ನೋಣ? ನೀತಿಮಾರ್ಗವನ್ನು ಬಿಡದೇ ನಾವು ಈ ಲೋಕದಲ್ಲಿ ಸಲ್ಲಿದರೆ ಇನ್ನೆಲ್ಲಿಯ ಚಿಂತೆ? ಈ ಸಂದೇಶವನ್ನು ಕೊಡುವಾಗ, ಮನುಷ್ಯನನ್ನು ಇಂದಿನ ನಮ್ಮ ಬದುಕಿನಲ್ಲಿ ಮಾಡಬಹುದಾದ ಪಾಪಗಳಿಂದ ತಪ್ಪಿಸಿ ಸನ್ಮಾರ್ಗದೆಡೆಗೆ ಒಯ್ಯುವ ಉದ್ದಿಶ್ಯವಿದೆಯಲ್ಲವೇ?

ಸತ್ಯವನರಿಯದ ಸುಳ್ಳಿನ ಪೊಳ್ಳು ಜೀವನವನ್ನು ಕಂಡು ನಗುತ್ತಾರೆ, ಬಸವಣ್ಣನವರು. ಅವರ ಮತ್ತೊಂದು ಜನಪ್ರಿಯ ವಚನದಲ್ಲಿ,

**ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ**
**ಆ ಪೂಜೆಯೂ ಆ ಮಾಟವೂ**
**ಚಿತ್ರದ ರೂಹು ಕಾಣಿರಣ್ಣ, ಚಿತ್ರದ ಕಬ್ಬು ಕಾಣಿರಣ್ಣ**
**ಅಪ್ಪಿದರೆ ಸುಖವಿಲ್ಲ, ಮೆಲಿದರೆ ಸವಿಯಿಲ್ಲ**
**ಕೂಡಲ ಸಂಗಮದೇವ, ನಿಜವಿಲ್ಲದವನ ಭಕ್ತಿ**

ಪ್ರೀತಿಯಿಲ್ಲದ ಪೂಜೆ, ಚಿತ್ರದಲ್ಲಿನ ಸ್ನೇಹವಿಲ್ಲದ ನಿರ್ಜೀವ ಹೆಣ್ಣಿನಂತೆ. ಚಿತ್ರದಲ್ಲಿನ ಹೆಣ್ಣನ್ನು ಅಪ್ಪಿ ಮುದ್ದಾಡಿದರೆ ಸುಖ ದೊರಕೀತೆ? ಚಿತ್ರದಲ್ಲಿರುವ ಕಬ್ಬಿನ ಜಲ್ಲೆಯನ್ನು ಸಿಗಿದು ತಿನ್ನಲು ಸಾಧ್ಯವೇ? ಭಕ್ತ ಮಾಡುವ ಪೂಜೆಯು ಪ್ರೇಮದಿಂದ ಕೂಡಿರಬೇಕು, ಇಲ್ಲವಾದರೆ ಪೂಜೆ ನಿಷ್ಪ್ರಯೋಜಕವೆನ್ನುತ್ತಾರೆ ಈ ವಚನದಲ್ಲಿ.

ಶಿವನನ್ನು ಅರಿತೆವೆಂದು ಭ್ರಮಿಸುವವರು ಅನೇಕರಿದ್ದಾರೆ. ಅವರು ಅವನನ್ನು ವಿವರಿಸುವ ರೀತಿಯನ್ನು ಕಂಡು ಬಸವಣ್ಣ ನಗುತ್ತಾರೆ ಈ ಮುಂದಿನ ವಚನದಲ್ಲಿ:

**ನಾದಪ್ರಿಯ ಶಿವನೆಂಬರು, ನಾದಪ್ರಿಯ ಶಿವನಲ್ಲ**
**ವೇದಪ್ರಿಯ ಶಿವನೆಂಬರು, ವೇದಪ್ರಿಯ ಶಿವನಲ್ಲ**
**ನಾದವ ಮಾಡಿದ ರಾವಣಗೆ, ಅರೆ ಆಯುಷ್ಯವಾಯ್ತು**
**ವೇದವನೋದಿದ, ಬ್ರಹ್ಮನ ಶಿರ ಹೋಯ್ತು**
**ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ**
**ಭಕ್ತಿಪ್ರಿಯ ನಮ್ಮ ಕೂಡಲ ಸಂಗಮದೇವ**

ಜನರು ತಮ್ಮ ಅಜ್ಞಾನದ ಕಾರಣ ಶಿವನನ್ನು 'ನಾದಪ್ರಿಯ' 'ವೇದಪ್ರಿಯ' ಮುಂತಾಗಿ ತಪ್ಪು-ತಪ್ಪಾಗಿ ವರ್ಣಿಸುತ್ತಾರೆ. ಶಿವ ನಾದಪ್ರಿಯನೂ ಅಲ್ಲ, ವೇದಪ್ರಿಯ ಮೊದಲೇ ಅಲ್ಲ, ಅವನು ಭಕ್ತಿಪ್ರಿಯನೆಂದು ವರ್ಣಿಸುತ್ತಾರೆ, ಬಸವಣ್ಣನವರು, ನಾದಮಾಡಿದವರ ಗತಿ ಏನಾಯ್ತು? ವೇದವನೋದಿದವರ ಗತಿ ಏನಾಯ್ತು? ಇಲ್ಲಿ, ಭಕ್ತಿ ಎಂಬುದು ನಾದದಂಥ ಕಲೆಯೂ ಅಲ್ಲ, ವೇದದಂತೆ ಜ್ಞಾನವೂ ಅಲ್ಲ, ಅದೊಂದು ತಪಸ್ಸು. ಪ್ರಪತ್ತಿ ಮತ್ತು ಶರಣಾಗತಿಯ ಫಲಿತಾಂಶ ಎಂಬ ಅದ್ಭುತ ತತ್ವ ಈ ವಚನದಲ್ಲಿ ಅಡಗಿರುವುದನ್ನು ಗಮನಿಸಬೇಕು.

ಬಸವೇಶ್ವರರ ಮತ್ತೊಂದು ಪ್ರಸಿದ್ಧ ವಚನ–

**'ಚಕೋರಂಗೆ ಚಂದ್ರಮನ ಬೆಳಕಿನ ಚಿಂತೆ.'**

**ಚಕೋರಂಗೆ ಚಂದ್ರಮನ ಬೆಳಕಿನ ಚಿಂತೆ**
**ಅಂಬುಜಕ್ಕೆ ಭಾನುವಿನ ಉದಯದ ಚಿಂತೆ**
**ಭ್ರಮರಂಗೆ ಪರಿಮಳದ ಬಂಡುಣ್ಣುವ ಚಿಂತೆ**
**ಎನಗೆ ನಮ್ಮ ಕೂಡಲ ಸಂಗಮದೇವರ ನೆನೆವುದೇ ಚಿಂತೆ**

ಈ ಸರಳ ಸುಂದರ ವಚನದಲ್ಲಿ ಅಗಾಧವಾದ ಅರ್ಥಗಾಂಭೀರ್ಯವಿದೆ; 'ಚಕೋರ' ಎಂಬ ಪಕ್ಷಿ ಬೆಳದಿಂಗಳನ್ನೇ ಸೇವಿಸಿ ಬದುಕುತ್ತದಂತೆ, ಹಾಗಾಗಿ ಅದು ಚಂದ್ರೋದಯ-ಕ್ಕಾಗಿ ಕಾಯುತ್ತದೆ. ಸೂರ್ಯಕಿರಣಗಳ ದರ್ಶನವಿಲ್ಲದೇ ಕಮಲ ಅರಳದು, ಅದಕ್ಕಾಗಿ ಕಮಲ ಸೂರ್ಯೋದಯವನ್ನೇ ಕಾದಿರುತ್ತದೆ. ಜೇನನ್ನು ಹೀರಲು ಕಾದಿರುವ ದುಂಬಿ ಹೂವು ಅರಳುವುದನ್ನೇ ಕಾದಿರುತ್ತದೆ. ಈ ಉಪಮೆಗಳಲ್ಲಿ, 'ಇದು ದೊರೆತಲ್ಲದೇ ನಾನು ವ್ಯರ್ಥ' ಎಂಬ ತದೇಕ ಚಿತ್ತ, ತಾದಾತ್ಮ್ಯ ಮತ್ತು ಸಂಪೂರ್ಣ ತವಕವನ್ನು ಕಾಣಬಹುದಾಗಿದೆ. ಭಕ್ತನಲ್ಲಿ ತನ್ನ ಇಷ್ಟದೈವದ ಬಗ್ಗೆ ಇಂತಹ ಚಡಪಡಿಕೆ ಇಲ್ಲದಿದ್ದರೆ ಅದು ಭಕ್ತಿಯೇ ಅಲ್ಲ ಎಂಬ ಭಕ್ತಿಯ ಪರಾಕಾಷ್ಠೆಯೇ ಇಲ್ಲಿ ಅಡಕವಾಗಿದೆ. ಚಂದ್ರಮನಿಗಾಗಿ ತಪಿಸುವ ಚಕೋರ ಪಕ್ಷಿಯಂತೆ, ಉದಯರವಿಯ ಹೊಂಗಿರಣಕ್ಕಾಗಿ ಕಾದು ಅರಳುವ ಕಮಲದಂತೆ, ಕುಸುಮದೊಳಗಿನ ಜೇನಿಗಾಗಿ ಹಾರಿಬರುವ ದುಂಬಿಯಂತೆ, ಕೂಡಲ ಸಂಗಮ ದೇವನ ಕೃಪೆಗಾಗಿ ಕಾತರಿಸುತ್ತಾರೆ ಬಸವಣ್ಣನವರು.

ಸ್ವರ್ಗ ಬೇರೆ, ನರಕ ಬೇರೆ ಇಲ್ಲ, ಎಲ್ಲವೂ ಇಲ್ಲಿಯೇ ಎಂದು ಬಸವೇಶ್ವರ ವಚನದಲ್ಲಿ ಮತ್ತೆ ಮತ್ತೆ ಕೇಳಿಬರುತ್ತದೆ. ಅದೇ ತತ್ವವನ್ನು ಮತ್ತೆ ಬಿಡಿಸಿ ಹೇಳುತ್ತಾರೆ, ಈ ವಚನದಲ್ಲಿ:

**ದೇವಲೋಕ ಮರ್ತ್ಯಲೋಕ ಎಂಬುದು ಬೇರಿಲ್ಲ ಕಾಣಿರೋ**
**ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ**
**ಆಚಾರವೇ ಸ್ವರ್ಗ, ಅನಾಚಾರವೇ ನರಕ,**
**ನೀವೇ ಪ್ರಮಾಣು ಕೂಡಲ ಸಂಗಮದೇವ**

ಸ್ವರ್ಗ, ನರಕ, ಮುಂತಾದ ಕಲ್ಪನೆಗಳಿಗೆ ವಚನಧರ್ಮದಲ್ಲಿ ಸ್ಥಾನವಿಲ್ಲ. 'ಆಚಾರವೇ ಸ್ವರ್ಗ, ಅನಾಚಾರವೇ ನರಕ, ಸತ್ಯವನ್ನು ನುಡಿಯುವುದೇ ಸ್ವರ್ಗ, ಸುಳ್ಳನಾಡುವುದೇ ನರಕ' ಎಂಬ ಬೋಧನೆಗಿಂತ ಮನುಷ್ಯನಿಗೆ ಏನು ತಾನೆ ಬೇಕು? 'ಕೂಡಲ ಸಂಗಮದೇವನೇ ಸಾಕ್ಷಿ' ಎಂದರೆ, ಆ ಇಷ್ಟದೈವ ತನ್ನ ಹತ್ತಿರದ ಮಿತ್ರ, ಬಂಧು ಹಾಗು ಪರಮ ಆಪ್ತನಾಗಿಬಿಡುತ್ತಾನೆ ಈ ಸುಂದರವಾದ ವಚನದಲ್ಲಿ. ಪರಮ ಭಕ್ತನಲ್ಲದೇ ಮತ್ತಾರು ಇಂಥಾ ವಚನವನ್ನಾಡಬಲ್ಲ?

ಬಸವಣ್ಣನವರ ಮತ್ತೊಂದು ಪ್ರಸಿದ್ಧ ವಚನದಲ್ಲಿ, 'ಉಳ್ಳವರು ಶಿವಾಲಯವ ಮಾಡುವರು, ನಾನೇನ ಮಾಡಲಿ ಬಡವನಯ್ಯ?' ಎಂದು ಅಂಗಲಾಚುತ್ತಾರೆ.

**ಉಳ್ಳವರು ಶಿವಾಲಯವ ಮಾಡುವರು, ನಾನೇನ ಮಾಡಲಿ ಬಡವನಯ್ಯ**
**ಎನ್ನ ಕಾಲೇ ಕಂಬ ದೇಹವೆ ದೇಗುಲ, ಶಿರವೇ ಹೊನ್ನ ಕಲಶವಯ್ಯ**
**ಕೂಡಲ ಸಂಗಮದೇವ ಕೇಳಯ್ಯ, ಸ್ಥಾವರಕಳಿವುಂಟು ಜಂಗಮಕಳಿವಿಲ್ಲ**

ಬಸವಣ್ಣನವರಿಗೇನು ಕೊರತೆಯಾಗಿತ್ತು? ಅವರು ಉಳ್ಳವರೇ ಆಗಿದ್ದರಲ್ಲವೇ? ಆದರೆ, ಅದು ಹಾಗಲ್ಲ. ಕೇವಲ ಧನದ ಬಲದಿಂದ ಅರಿವಿಲ್ಲದ ಮೂಢನಂಬಿಕೆ-ಯಿಂದಲೋ, ಮತ್ತಾವ ಸ್ವಾರ್ಥದಿಂದಲೋ ಕಟ್ಟಿದ ದೇವಾಲಯಕ್ಕೆ ಬಸವಣ್ಣನವರ ಮತದಲ್ಲಿ ಸ್ಥಾನವಿಲ್ಲ. ದೇಹವೇ ದೇಗುಲವಾದಾಗ, ಇನ್ನು ಕಲ್ಲಿನ ಕಂಬವಾಗಲೀ ಚಿನ್ನದ ಗೋಪುರವಾಗಲೀ ಏಕೆ ಬೇಕು? ಅಲ್ಲದೆ, ಜಂಗಮರ ಬಾಳು ಒಂದೆಡೆಯಲ್ಲಿದ್ದು ಕೊಳೆಯತಕ್ಕದ್ದಲ್ಲ. ಚಿಂತಾಶಕ್ತಿಯಂತೂ 'ಸ್ಥಾವರ'ವಾದರೆ ನಿಂತ ನೀರಿನಂತೆ ಕೆಟ್ಟೀತು, ಕೊಳೆತುಹೋದೀತು. ಬದಲಾಗದ, ಬೆಳೆಯಲಾಗದ ಚಿಂತಾಶಕ್ತಿ ಕುಂದುತ್ತದೆ, ಕೊನೆಗೆ ಅಳಿಯುತ್ತದೆ. ಆದರೆ, ಕಾಲಕ್ಕೆ ತಕ್ಕಂತೆ ಬದಲಾಗಿ ಬೆಳೆಯುವ ಜಂಗಮಶಕ್ತಿ ಉಳಿಯುತ್ತದೆ, ಎನ್ನುವುದೇ ಈ ವಚನದ ಸಾರಾಂಶ. ಇಂಥಾ ನಿಗೂಢ ತತ್ವದ ಜೊತೆಗೆ ನಿರರ್ಥಕವಾಗಿ ಕಟ್ಟುವ ದೇವಸ್ಥಾನ, ಅಲ್ಲಿ ನಡೆಯುವ ಕಂದಾಚಾರ, ದೇವರ ಹೆಸರಿನಲ್ಲಿ ನಡೆಯುವ ಅವ್ಯವಹಾರ ಮತ್ತು ದೇವಸ್ಥಾನದ ವ್ಯವಸ್ಥೆಯ ಸುತ್ತ ಬೆಳೆಯುವ ರಾಜಕೀಯ, ದೇವರಿಗೂ

ಭಕ್ತರಿಗೂ ನಡುವೆ ನಿಲ್ಲುವ 'ಪೂಜಾರಿ'ಯೆಂಬ ಮಧ್ಯಸ್ಥಿಕೆಗಾರ, ಇವೆಲ್ಲವುಗಳ ವಿರೋಧ ಮತ್ತು ಅವಹೇಳನವೂ ಅಡಗಿದೆಯೆಂದು ಬೇರೆ ಹೇಳಬೇಕಿಲ್ಲ!

'ದೊಡ್ಡವರಲ್ಲಿ ದೊಡ್ಡವನಾದ' ಆ ಮಹಾದೇವ ಶಿವನನ್ನು 'ಸಣ್ಣವರಲ್ಲಿ ಸಣ್ಣವನಾದ' ಹುಲುಮಾನವ ಹೇಗೆ ಹಿಡಿದಿಟ್ಟಾನು? ಈ ಪ್ರಶ್ನೆಗೆ ಬಸವಣ್ಣನವರು ಒಂದು ವಚನದಲ್ಲಿ ಸುಂದರವಾದ ಉಪಮೆಯೊಂದಿಗೆ ಉತ್ತರ ಕೊಡುತ್ತಾರೆ:

**ಜಗವ ಸುತ್ತಿಪುದು ನಿನ್ನ ಮಾಯೆಯಯ್ಯ,**
**ನಿನ್ನ ಸುತ್ತಿಪುದು ಎನ್ನ ಮನ ನೋಡಯ್ಯ**
**ನೀನು ಜಗಕೆ ಬಲ್ಲಿದನು, ನಾನು ನಿನಗೆ ಬಲ್ಲಿದನು ಕಂಡಯ್ಯ**
**ಕರಿಯು ಕನ್ನಡಿಯೊಳಗೆ ಅಡಗಿದಂತಯ್ಯ**
**ಎನ್ನೊಳಗೆ ನೀನಡಗಿದೆ ಕೂಡಲ ಸಂಗಮದೇವ**

ಭಗವಂತನೆಂಬ ಅನಂತದ ಕಲ್ಪನೆಯನ್ನು ನಮ್ಮ ಪುಟ್ಟ ಹೃದಯದಲ್ಲಿ ಹಿಡಿದಿಡುವುದಾದರೂ ಹೇಗೇ? ಈ ಚಿಂತೆ ಎಲ್ಲಾ ಭಕ್ತರನ್ನೂ ಕಾಡಿದೆ. ಬಸವೇಶ್ವರರು ಹೇಳುತ್ತಾರೆ, ಭಾರಿಯ ಒಂದು ಆನೆಯನ್ನು ಪುಟ್ಟ ಒಂದು ಕನ್ನಡಿಯಲ್ಲಿ ಪ್ರತಿಬಿಂಬವಾಗಿ ಹಿಡಿಯಬಹುದಲ್ಲವೇ? ಹಾಗೇ, ಆ ಮಹಾಸ್ವರೂಪನಾದ ಕೂಡಲ ಸಂಗಮದೇವನನ್ನು ತಮ್ಮ ಅಂತರಂಗದೊಳಗೆ ಬಂದಿಯಾಗಿಸುತ್ತಾರೆ ಬಸವಣ್ಣನವರು, ತಮ್ಮ ವಚನದ ವಾಙ್ಮಯದಲ್ಲಿ. ಜಗತ್ತು ಒಂದು ಮಾಯೆಯಿಂದ ಆವರಿಸಲ್ಪಟ್ಟ ಒಂದು ಮಿಥ್ಯೆ, ಅದರ ನಡುವೆ ಏಕಮೇವ ಸತ್ಯವಾದ ಭಗವಂತನನ್ನು ತನ್ನಲ್ಲಿ ಹುದುಗಿಸಿಟ್ಟುಕೊಳ್ಳುವ ಬಯಕೆಯೇ ನಿಜವಾದ ಭಕ್ತಿ.

ಬಸವಣ್ಣ ಮನುಜಕುಲಕ್ಕೆ ಕೊಟ್ಟ ಒಂದು ಮಹಾಸಂದೇಶವನ್ನು ಅವಲೋಕಿಸೋಣ. 'ಟೆನ್ ಕಮ್ಮ್ಯಾಂಡ್‌ಮೆಂಟ್ಸ್' (ಭಗವಂತನ ಹತ್ತು ಆಣತಿಗಳು) ಎಂಬುದು ಕೇವಲ ಯಹೂದ್ಯರ ಅಥವಾ ಕ್ರೈಸ್ತರ ಚಿಂತನೆಯಲ್ಲ, ಬಸವ ಕೂಡ ತನ್ನದೇ ಆದ 'ಹತ್ತು ಆಣತಿ'ಗಳನ್ನು ನಮಗೆ ಕೊಟ್ಟು ಚಿರಸ್ಮರಣೀಯನಾಗಿದ್ದಾನೆ:

**ಕಳಬೇಡ ಕೊಲಬೇಡ, ಹುಸಿಯ ನುಡಿಯಲು ಬೇಡ**
**ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ**
**ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ**
**ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ**
**ಇದೇ ನಮ್ಮ ಕೂಡಲ ಸಂಗಮದೇವನ ಒಲಿಸುವ ಪರಿ**

'ಕಳಬೇಡ, ಕೊಲಬೇಡ' ಎಂಬೀ ವಚನವನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಿ, ಇಲ್ಲಿ ಅಡಕವಾಗಿರುವ ಜೀವನದ ಹತ್ತು ನಿಯಮಗಳನ್ನು ಗಮನಿಸಿ: ಒಂದು– ಕಳ್ಳತನ

ಮಾಡಬೇಡ; ಎರಡು– ಕೊಲ್ಲಬೇಡ; ಮೂರು– ಸುಳ್ಳು ಹೇಳಬೇಡ; ನಾಲ್ಕು– ಕುಪಿತನಾಗಬೇಡ; ಐದು– ಇತರರ ಬಗ್ಗೆ ಅಸಹ್ಯಪಡಬೇಡ; ಆರು– ತನ್ನನ್ನೇ ತಾನು ಹೊಗಳಿಕೊಳ್ಳಬೇಡ; ಏಳು– ಬೇರೆಯವರನ್ನು ದೂರಬೇಡ; ಎಂಟು– ದೇಹವನ್ನು ಶುಚಿಯಾಗಿಟ್ಟುಕೊ; ಒಂಬತ್ತು– ಮನಸ್ಸನ್ನು ಶುಚಿಯಾಗಿಟ್ಟುಕೊ; ಮತ್ತು ಕೊನೆಯದಾಗಿ, ಹತ್ತು– ಹಿಂದೆ ತಿಳಿಸಿದ ಒಂಬತ್ತು ನಿಯಮಗಳನ್ನು ಪಾಲಿಸುವುದೇ ಕೂಡಲ ಸಂಗಮದೇವನನ್ನು ಒಲಿಸಿಕೊಳ್ಳುವ ಮಾರ್ಗ ಎಂಬುದನ್ನು ಅರಿತುಕೊ! ಮಾನವಕುಲಕ್ಕೆ ಬಸವಬೋಧೆಯ ಸಾರವಿಷ್ಟೇ. ಈ ಜಗತ್ತನ್ನು ಶುಭ್ರಗೊಳಿಸಲು ಇದಕ್ಕಿಂತ ಸುಲಭವಾದ, ಉತ್ತಮವಾದ ಮಾರ್ಗ ಉಂಟೇ?

**ಅಕ್ಕಮಹಾದೇವಿ:** ಕನ್ನಡದ ಪ್ರಖ್ಯಾತ ಕವಯಿತ್ರಿಯರ ಪ್ರಥಮ ಪಂಕ್ತಿಯಲ್ಲಿ ಸೇರುವ ವಚನಕಾರ್ತಿ ಅಕ್ಕಮಹಾದೇವಿ. ಹನ್ನೆರಡನೇ ಶತಮಾನದಲ್ಲಿ ಶಿವಮೊಗ್ಗ ಜಿಲ್ಲೆಯ ಉಡುತಡಿ ಗ್ರಾಮದಲ್ಲಿ ಸುಮತಿ ಮತ್ತು ನಿರ್ಮಲರ ಮಗಳಾಗಿ ಜನಿಸಿ, ರಾಜ ಕೌಶಿಕನನ್ನು ವರಿಸದಿದ್ದರೂ ಮದುವೆಯಾಗಿ, ಸಾಕ್ಷಾತ್ ಶಿವನನ್ನೇ ವರಿಸಿದರೂ ಮದುವೆಯಾಗಲಾರದೇ, ಭವದ ಬಂಧನವನ್ನು ಮುರಿದು, 'ಅರಿವೆ' ಎಂಬ ಬಾಹ್ಯಾಡಂಬರವನ್ನು ಕಿತ್ತೊಗೆದು, 'ಅರಿವು' ಎಂಬ ತೊಡಿಗೆಯನ್ನು ತೊಟ್ಟು, ಶ್ರೀಶೈಲದ ಚನ್ನಮಲ್ಲಿಕಾರ್ಜುನನಲ್ಲಿ ಐಕ್ಯಳಾದ ಅಕ್ಕನ ಜೀವನವು ನೋವು ತಾಪಗಳ ದೀರ್ಘ ಪಟ್ಟಿಯಂತಿದೆ. ಈಕೆ ಬರೆದ ವಚನಗಳಲ್ಲಿ ಅವಳ ಇಷ್ಟದೈವವಾದ ಚೆನ್ನಮಲ್ಲಿಕಾರ್ಜುನನ ಹೆಸರೇ ಅಂಕಿತವಾಗಿ ಬರುತ್ತದೆ.

ನೆನಸಿನಲ್ಲಿ ಸುಖವನ್ನು ಕಂಡರಿಯದ ಅಕ್ಕ ಕನಸಿನಲ್ಲಿ ಬಯಸುವುದೂ ಚೆನ್ನಮಲ್ಲಿಕಾರ್ಜುನನ ಸಂಗವನ್ನೇ. 'ಇನ್ನೇನು ಬಂದ, ಇದೋ ಬಂದುಬಿಟ್ಟ. ಶಿವ ಬಂದು ತನ್ನ ಕೈ ಹಿಡಿದ' ಎಂದು ಅಕ್ಕ ಕನಸಿನಲ್ಲಿ ಭ್ರಮಿಸುತ್ತಿರುವಾಗಲೇ ಬೆಳಕು ಹರಿದು, ನಿದ್ರೆ ಕಡಿದು, ಕನಸು ಮುರಿದು, .....ಮತ್ತದೇ ನೋವು!

**ಅಕ್ಕ ಕೇಳವ್ವ ಅಕ್ಕಯ್ಯ ಕೇಳವ್ವ, ನಾನೊಂದು ಕನಸ ಕಂಡೆ....ಕೇಳವ್ವ**
**ಅಕ್ಕಿಅಡಕೆ ತೆಂಗಿನಕಾಯಿ ಕಂಡೆ**
**ಚಿಕ್ಕಚಿಕ್ಕ ಜಡೆಗಳ ಸುಲಿಪಲ್ಲ ಗೊರವನು ಭಿಕ್ಷಕೆ ಬಂದುದ ಕಂಡೆನವ್ವ**
**ಮಿಕ್ಕು ಮೀರಿ ಪೋಹನ, ಬೆಂಬತ್ತಿ ಕೈಪಿಡಿದೆ**
**ಚೆನ್ನಮಲ್ಲಿಕಾರ್ಜುನನ ಕಂಡು ಕಣ್ತೆರೆದೆನವ್ವ**

ಶಿವನ ಪರಮ ಭಕ್ತೆಯಾದ ಅಕ್ಕ ಜೀವನಪರ್ಯಂತ ಪೂಜಿಸಿದ್ದು ಸಾಕಾರ ಶಿವನನ್ನೇ. 'ಶರಣ ಸತಿ–ಲಿಂಗಪತಿ' ಎಂಬ ಮಾತಿಗೆ ಇವಳೇ ಜ್ವಲಂತ ಉದಾಹರಣೆ. ಅವಳ ಪ್ರೀತಿ ಎಷ್ಟು ಉತ್ಕಟವಾಗಿತ್ತೆಂದರೆ ಆ ಪರಮಶಿವ ಇವಳಲ್ಲಿ ಭಿಕ್ಷೆಗಾಗಿ, (ಪ್ರೇಮಭಿಕ್ಷೆಗಾಗಿ!) ಬರುತ್ತಾನೆ, ಆಗ ಅವನ ಬೆನ್ನಟ್ಟಿಯಾದರೂ ಕೈಹಿಡಿದು, ಕೊನೆಗೆ

ಅವನಲ್ಲೇ ಐಕ್ಯಳಾಗುತ್ತೇನೆ ಎಂಬ ದೃಢವಾದ ನಂಬಿಕೆಯಿಂದಲೇ ಅವಳು ಬದುಕನ್ನು ಕಳೆದಳು!

ಇಡೀ ಜೀವನವನ್ನು ತನ್ನ ಪ್ರಿಯತಮ ಚೆನ್ನಮಲ್ಲಿಕಾರ್ಜುನನನ್ನು ಹುಡುಕುತ್ತಾ ಕಳೆದ ಅಕ್ಕನಿಗೆ, ಅಹರ್ನಿಶಿ ಒಂದೆ ಚಿಂತೆ. ಮೃಗ–ಪಕ್ಷಿಗಳನ್ನು ಕಂಡಾಗಲೂ, ಗಿಡ–ಮರ–ಬಳ್ಳಿ, ಬೆಟ್ಟ–ಗುಡ್ಡ–ಗುಹೆ, ಏನನ್ನು ಕಂಡರೂ, ಆಕೆ ಕೇಳುವುದು ಒಂದೇ ಪ್ರಶ್ನೆ– 'ನೀವು ಕಾಣಿರೇ?' 'ನೀವು ಕಾಣಿರೇ?' ಅವಳು ಹುಡುಕುತ್ತಿರುವ ಜ್ಯೋತಿ ಅಂತಿಂತಹುದಲ್ಲ, ಆಕೆ ಹುಡುಕ ಹೊರಟದ್ದು ಚೆನ್ನಮಲ್ಲಿಕಾರ್ಜುನನನ್ನು!

**ಚಿಲಿಮಿಲಿ ಎಂದು ಓಡುವ ಗಿಳಿಗಳಿರಾ, ನೀವು ಕಾಣಿರೇ ನೀವು ಕಾಣಿರೇ**
**ಸ್ವರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೇ ನೀವು ಕಾಣಿರೇ**
**ಎರಗಿ ಬಂದಾಡುವ ತುಂಬಿಗಳಿರಾ, ನೀವು ಕಾಣಿರೇ ನೀವು ಕಾಣಿರೇ**
**ಕೊಳದ ತಡಿಯಲಾಡುವ ಹಂಸಗಳಿರಾ, ನೀವು ಕಾಣಿರೇ ನೀವು ಕಾಣಿರೇ**
**ಗಿರಿಗಹ್ವರದೊಳಾಡುವ ನವಿಲುಗಳಿರಾ, ನೀವು ಕಾಣಿರೇ ನೀವು ಕಾಣಿರೇ**
**ಚೆನ್ನಮಲ್ಲಿಕಾರ್ಜುನ ಎಲ್ಲಿಹನೆಂದು ನೀವು ಹೇಳಿರೇ ನೀವು ಹೇಳಿರೇ**

ತನ್ನೆದೆಯಲ್ಲಿ ಶಿವನನ್ನು ಬಚ್ಚಿಟ್ಟುಕೊಳ್ಳುವ ಬಯಕೆಯುಳ್ಳ ಅಕ್ಕನಿಗೆ ಆ ಕರುಣಾಳು ಮಹಾದೇಹನ ವಿಶಾಲ ಹೃದಯದಲ್ಲಿ ಒಂದಿಷ್ಟಾದರೂ ತಾವಿಲ್ಲವೇ? ಭಕ್ತವತ್ಸಲನಾದ ಶಿವನು ತನ್ನ ಭಕ್ತೆಯ ಕೂಗಿಗೆ ಓಗೊಡನೆ? ಮೇಲಿನ ವಚನವನ್ನೋದಿದಾಗ ಮನಸ್ಸು ಕರಗಿ ನೀರಾಗುವುದಿಲ್ಲವೇ?

ಅಕ್ಕನ ಜೀವನವನ್ನು ಅರ್ಥ ಮಾಡಿಕೊಳ್ಳಲಾಗದ, ಅಥವಾ ಅರ್ಥ ಮಾಡಿಕೊಳ್ಳಲೊಲ್ಲದ ಹಲವಾರು ಸಮಕಾಲೀನರು ಅವಳನ್ನು ನಾನಾ ರೀತಿಯ ಹಿಂಸೆಗೆ ಮತ್ತು ಅವಹೇಳನಕ್ಕೆ ಗುರಿಪಡಿಸಲು ಯತ್ನಿಸಿದ್ದುಂಟು. ಆದರೆ, ಚೆನ್ನಮಲ್ಲಿಕಾರ್ಜುನನ ನಿರ್ಮಲ ಪ್ರೇಮ, ಭಕ್ತಿಗಳಲ್ಲಿ ತಲ್ಲೀನಳಾಗಿದ್ದ ಅಕ್ಕನಿಗೆ ಇತರರ ನಿಂದೆಯಾಗಲೀ, ಅವಹೇಳನವಾಗಲೀ ಬಾಧಿಸುತ್ತಿರಲಿಲ್ಲವೆಂಬುದಕ್ಕೆ ಈ ಮುಂದಿನ ವಚನವೇ ಸಾಕ್ಷಿ. ಹದ್ದು ಎಷ್ಟು ಮೇಲೆ ಹಾರಿದರೂ ಚಂದ್ರನ ಎತ್ತರಕ್ಕೆ ಏರಲಾರದಷ್ಟೆ? ಅಂತೆಯೇ, ಗಗನದ ಹರಹು ಹಾರಾಡುವ ಹದ್ದಿಗೆ ಎಂದಿಗೂ ಮನವರಿಕೆಯಾಗಲಾರದು. ನೀರಿನ ಆಳವನ್ನು ಅರಿಯಲು ನೀರಿನಲ್ಲಿರುವ ತಾವರೆಗೆ ಸಾಧ್ಯವಾಗುವಂತೆ ದಡದ ಮೇಲಿನ ಹೊನ್ನಾವರಿಕೆಗೆ ಸಾಧ್ಯವಾಗಲಾರದು. ಈ ರೀತಿ ತನ್ನನ್ನು ತಾನು ಸಮಾಧಾನ ಮಾಡಿಕೊಳ್ಳುತ್ತಾ, ಚೆನ್ನಮಲ್ಲಿಕಾರ್ಜುನನ ಭಕ್ತಿ–ಪ್ರೇಮಗಳನ್ನರಿಯಲಾಗದ ನತದೃಷ್ಟರನ್ನು ಕೋಣನ ಮೈಮೇಲಿನ ಸೊಳ್ಳೆಗಳಿಗೆ ಹೋಲಿಸುತ್ತಾಳೆ ಅಕ್ಕ! 'ನೀನೊಬ್ಬ ನನ್ನನ್ನು ಅರಿತುಕೊಂಡರೆ ಸಾಕು' ಎಂದು ತನ್ನ ಸ್ವಾಮಿಯಲ್ಲಿ ಗೋಳಿಡುತ್ತಾ ಅಲವತ್ತುಕೊಳ್ಳುತ್ತಾಳೆ.

**ಗಗನದ ಗುಂಪ ಚಂದ್ರಮ ಬಲ್ಲುದಲ್ಲದೆ**
**ಮೇಲಿದ್ದಾಡುವ ಹದ್ದು ಬಲ್ಲುದೇ ಅಯ್ಯ**
**ನದಿಯ ಗುಂಪ ತಾವರೆ ಬಲ್ಲುದಲ್ಲದೆ**
**ತಡಿಯಲ್ಲಿದ್ದ ಹೊನ್ನಾವರಿಕೆ ಬಲ್ಲುದೇ ಅಯ್ಯ**
**ಪುಷ್ಪದ ಪರಿಮಳವ ತುಂಬಿ ಬಲ್ಲುದಲ್ಲದೆ**
**ಕಡೆಯಲಿದ್ದಾಡುವ ನೊರಜು ಬಲ್ಲುದೇ ಅಯ್ಯ**
**ನಿಮ್ಮ ಶರಣರ ನಿಲವ ನೀವಲ್ಲದೇ ಈ ಕೋಣನ ಮೈಯ್ಯ**
**ಸೊಳ್ಳೆಗಳು ಬಲ್ಲುವೇ ಅಯ್ಯ ಚೆನ್ನಮಲ್ಲಿಕಾರ್ಜುನಯ್ಯ**

'ಮಾಯೆ' ಎಂದರೆ ಏನು? ಅದು ಹೇಗೆ ಮನುಷ್ಯನನ್ನು ಕಾಡುತ್ತದೆ? ಎಂಬುದರ ಬಗ್ಗೆ ಅನೇಕ ವಚನಕಾರರು ಚಿಂತಿಸಿದ್ದಾರೆ. ಭೌತಿಕ ಸುಖದ ಆಸೆ ಬಿಟ್ಟಿಲ್ಲದ ಯೋಗಿಗೆ, ಯೋಗಿನಿಯ ರೂಪದಲ್ಲಿ ಬಂದು ಕಾಡಬಹುದು ಮಾಯೆ! ಅಹಂಕಾರವನ್ನು ಬಿಟ್ಟೆನೆಂದು ಹೇಳಿಕೊಳ್ಳುತ್ತಾ ಬಿಡದೇ ಕುಳಿತ ಸನ್ಯಾಸಿಗೆ, ಇತರರಿಂದ ಹೊಗಳಿಸಿಕೊಳ್ಳಬೇಕೆಂಬ ಆಸೆಯ ರೂಪದಲ್ಲಿ ಕಾಡಬಹುದು, ಮಾಯೆ! 'ಯಾರಿಗೆ ತಾನೇ ಮಾಯೆಯ ಕಾಟವಿಲ್ಲಾ?' ಎಂದು ಕೇಳುತ್ತಾಳೆ, ಅಕ್ಕ. 'ಈ ಮಾಯೆಯನ್ನು ಕೊಟ್ಟವನೂ ನೀನೇ ತಾನೇ' ಎಂದು ಚನ್ನಮಲ್ಲಿಕಾರ್ಜುನನನ್ನೇ ಛೇಡಿಸುತ್ತಾಳೆ. 'ನಿನ್ನ ಈ ಮಾಯೆಗೆ ಹೆದರುವವಳು ನಾನಲ್ಲ' ಎಂದು ಅವನಿಗೇ ಸವಾಲು ಹಾಕುತ್ತಾಳೆ ಅಕ್ಕ!

**ಬಿಟ್ಟೆನೆಂದರೆ ಬಿಡದೀ ಮಾಯೆ, ಬಿಡದಿದ್ದರೆ ಬೆಂಬತ್ತಿತ್ತು ಮಾಯೆ**
**ಯೋಗಿಗೆ ಯೋಗಿನಿಯಾಯಿತ್ತು ಮಾಯೆ, ಸವಣಂಗೆ ಸವಣಿಯಾಯಿತ್ತು ಮಾಯೆ**
**ಯತಿಗೆ ಪರಾಕಿಯಾಯಿತ್ತು ಮಾಯೆ, ನಿನ್ನ ಮಾಯೆಗೆ ನಾನಂಜುವಳಲ್ಲ,**
**ಚೆನ್ನಮಲ್ಲಿಕಾರ್ಜುನ ದೇವ**

ಅಕ್ಕ ಜೀವನದುದ್ದಕ್ಕೂ ಬೇಗೆಯಲ್ಲಿ ಬೆಂದಳೆಂದು ಹಿಂದೆಯೇ ಹೇಳಿದೆವಲ್ಲ. ಆದರೆ, ಇವಳ ಧಗೆಯಲ್ಲಿ ಬೆಂಕಿಯಿಲ್ಲ! ಇವಳ ಗಾಯದಲ್ಲಿ ರಕ್ತವಿಲ್ಲ. ಇವಳ ನೋವೆಲ್ಲ ಭವದ ಗೋಳಿಗೆ ಅಂಟಿಕೊಳ್ಳಲೊಲ್ಲೆ ಎಂದಿದ್ದರಿಂದಲೇ ತಾನೇ? ಈ ಭವದಲ್ಲಿ ಸುಖವಿಲ್ಲ, ಚೆನ್ನಮಲ್ಲಿಕಾರ್ಜುನನ ನೈಜಪ್ರೇಮವೊಂದೇ ನಿಜವಾದ ಸುಖಕ್ಕೆ ದಾರಿ ಎಂದು ನಿರ್ಧರಿಸಿಬಿಡುತ್ತಾಳೆ ಅಕ್ಕ.

**ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವ**
**ಏರಿಲ್ಲದ ಗಾಯದಲ್ಲಿ ನೊಂದೆನವ್ವ**
**ಸುಖವಿಲ್ಲದ ಧಾವತಿಗೊಂಡೆನವ್ವ**

**ಚೆನ್ನಮಲ್ಲಿಕಾರ್ಜುನದೇವಂಗೊಲಿದು**
**ಬಾರದ ಭವಂಗಳಲಿ ಬೆಂದೆನವ್ವ**

ಅಕ್ಕ ಪಟ್ಟ ಕಷ್ಟಗಳಿಗೆಲ್ಲ ಕಾರಣ ಅವನೇ, ಶಿವ! ಶಿವನನ್ನು ಪ್ರೀತಿಸಿ ಕೆಟ್ಟಳು ಅಕ್ಕ, ಚನ್ನಮಲ್ಲಿಕಾರ್ಜುನನಿಗೆ ಒಲಿದು ಪಡಬಾರದ ಕಷ್ಟಕ್ಕೊಳಗಾದಳಲ್ಲ, 'ಭಕ್ತರಿಗೆಲ್ಲ ಬೇಕೆಂತಲೇ ದೇವರು ಕಷ್ಟ ಕೊಟ್ಟು ಪರೀಕ್ಷಿಸುವನೇ' ಎಂಬ ಪ್ರಶ್ನೆ ಏಳುವುದಿಲ್ಲವೇ, ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದ ಅಕ್ಕಳನ್ನು ನೆನೆದು?

**ಮುಕ್ತಾಯ:** ವಚನಸಾಹಿತ್ಯ ವೀರಶೈವ/ಲಿಂಗಾಯತ ಮತದ ಒಂದು ಅವಿಭಾಜ್ಯ ಅಂಗವಾಗಿರುವುದರ ಜೊತೆಗೆ, ಭಾರತದ ಹಲವು ಪ್ರಾಂತ್ಯಗಳಲ್ಲಿ ಆಗಾಗ್ಗೆ ನಡೆದ ಭಕ್ತಿಮಾರ್ಗದ ಆಂದೋಳನಗಳ ಒಂದು ಮುಖ್ಯ ಅಂಗವಾಗಿಯೂ ಕಂಗೊಳಿಸುತ್ತದೆ. ಎಲ್ಲಾ ಭಕ್ತಿಮಾರ್ಗಗಳಂತೆಯೇ, ವಚನಧರ್ಮದಲ್ಲೂ ಭಾರತದ ವಿವಿಧ ಮೂಲೆಗಳಲ್ಲಿ ನಡೆದ ಭಕ್ತಿಯ ಚಳುವಳಿಗಳಲ್ಲಿ ಕಾಣಸಿಗುವಂಥ ಹಲವು ಗುಣಗಳು ಕಂಡುಬರುತ್ತವೆ. ಉದಾಹರಣೆಗೆ, ಗುರುವಿನ ಪಾರಮ್ಯ, ಶರಣರೊಂದಿಗೆ ಸಮುದಾಯದ ಸಂಭ್ರಮದ ಆಚರಣೆ, ಅತ್ಯಂತ ವೈಯಕ್ತಿಕ ನೆಲೆಯಲ್ಲಿ ಭಗವಂತನೊಂದಿಗೆ ಸಂಬಂಧ, ಕಂದಾಚಾರದ ಸಂಪ್ರದಾಯಗಳ ಸಂಪೂರ್ಣ ತಿರಸ್ಕಾರ, ಅಲೆದಾಡುವ ಜಂಗಮರ ವಿರಾಗ, ಸರ್ವ-ಸಾಧಾರಣ ಧಾರ್ಮಿಕ ವಿಚಾರಗಳ ಪ್ರಸಾರ, ಸ್ಥಳೀಯ ಆಡುಮಾತಿನ ನುಡಿಗಟ್ಟುಗಳ ಸದ್ಬಳಕೆ, ಇವೇ ಮುಂತಾದ ಗುಣಗಳು. ಶಾಸ್ತ್ರೀಯ ಹಾಗು ಜಾನಪದ ಮಾರ್ಗಗಳಲ್ಲಿ ಕಂಡುಬರುವ ಭಾಷೆಯ ಕಟ್ಟುನಿಟ್ಟಿನ ನಿಯಮಗಳನ್ನು ನಿರಾಯಾಸವಾಗಿ ಮೀರಿ ಮಾತಿನ ಸರಳ ಮಾರ್ಗವನ್ನು ಕಂಡುಹಿಡಿದ ಖ್ಯಾತಿ ಮಾತ್ರ ಕನ್ನಡಕ್ಕೇ ಮೀಸಲು, ವಚನಕಾರರಿಗೇ ಮೀಸಲು. ಛಂದಸ್ಸಿನ ಸರಪಳಿಯನ್ನು ಕಿತ್ತೊಗೆದದ್ದರಿಂದಲೇ ವಚನ ಸಾಹಿತ್ಯ ಓದುಗ/ಕೇಳುಗರಿಗೆ ಅತ್ಯಂತ ಆಪ್ತವಾಗಿಬಿಡುತ್ತದೆ. ಈ ಆಪ್ತತೆಯ ಕುರುಹುಗಳನ್ನು ಈ ಕೆಳಕಂಡಂತೆ ಗುರುತಿಸಬಹುದಾಗಿದೆ:

ಹಿಂದೆಂದೂ ಅಭಿವ್ಯಕ್ತವಾಗದ ವಿನೂತನ ರೀತಿಯಲ್ಲಿ ವಚನಗಳು ವಚನಕಾರನ ಮನೋವೈರುಧ್ಯಗಳನ್ನು ಪ್ರತಿಬಿಂಬಿಸುತ್ತವೆ. ಉದಾಹರಣೆಗೆ, ವೀರಶೈವನಲ್ಲದ ದೊರೆಯ ರಾಜಭಂಡಾರದ ಹೊಣೆಹೊತ್ತ ಬಸವಣ್ಣ ತನ್ನವರಿಂದಲೇ ದೂಷಣೆಗೆ ಒಳಪಟ್ಟಾಗಿನ ಆತ ಅನುಭವಿಸುವ ದ್ವಂದ್ವ – 'ರಾಜನಿಗಾಗಿ ತನ್ನ ಇಷ್ಟದೇವನಿಗೇ ತಾನು ದ್ರೋಹ ಬಗೆಯುತ್ತಿರುವೆನೇ?' ಎಂಬ ತೊಳಲಾಟ; ಸುತ್ತುಬಳಸಿಲ್ಲದ ಸಂಭಾಷಣಾ ಶೈಲಿ, ಆಡುಮಾತುಗಳಲ್ಲಿ ನೇರವಾಗಿ ವಚನಕಾರನೇ ಎದುರಿನವನಿಗೆ ತಲುಪಿಸುವ ರೀತಿ. ಅಕ್ಕನ ವಚನಗಳಲ್ಲಿರುವಂತೆ, ಭಕ್ತಿಯ ಅಭಿವ್ಯಕ್ತಿಯಲ್ಲಿ ವೈಯಕ್ತಿಕ ಹಾಗು ಅಂತರಾಳದ ಮಾತುಗಳು, ಪ್ರೀತಿ, ನಿರಾಸೆ, ಅಲವತ್ತುಕೊಳ್ಳುವಿಕೆ, ಪ್ರೇಮಿಯೊಂದಿಗೆ ಪ್ರಿಯಕರಳಂತೆ ಓದುಗ/ಕೇಳುಗರ ಅಂತಃಕರಣವನ್ನು ಕರಗಿಸುವ ಬಿಸಿ. ತಾಯಿ ತನ್ನ ಮಕ್ಕಳೊಂದಿಗೆ

ನುಡಿದಂತೆ, ತಂದೆ ಮಗನ ಕುರಿತಾಡಿದಂತೆ, ಯಜಮಾನ-ಸೇವಕ, ಕೊನೆಗೆ ವೇಶ್ಯೆ-ವ್ಯಭಿಚಾರಿಯ ವ್ಯವಹಾರ ಕೂಡ ಯಾವ ಕಟ್ಟಿಲ್ಲದೇ ವ್ಯಕ್ತವಾಗುವ ರೀತಿ, ಭಗವಂತನೊಂದಿಗೆ ನೇರ ಸಂಭಾಷಣೆ, ಇವೆಲ್ಲ ವಚನದ ವೈಶಿಷ್ಟ್ಯಗಳು. ಯೂರೋಪಿನಲ್ಲಿ ಕ್ರಿಶ್ಚಿಯನ್ ಪುರೋಹಿತಶಾಹಿಯ ವಿರುದ್ಧ ನಡೆದ ಆಂದೋಳನದಿಂದ ಹುಟ್ಟಿದ ವಿರೋಧಮತ (ಪ್ರೋಟೆಸ್ಟೆಂಟ್ ಧರ್ಮ) ಇದ್ದಹಾಗೆ ವಚನಧರ್ಮವೂ ಒಂದು ಕ್ರಾಂತಿ – ಭಕ್ತನಿಗೂ ಭಗವಂತನಿಗೂ ನಡುವೆ ಪೂಜಾರಿಯ ಅಗತ್ಯವನ್ನು ಅಲ್ಲಗಳೆಯುವ, ಕಂದಾಚಾರದ ಸಂಪ್ರದಾಯಗಳನ್ನು ವಿರೋಧಿಸುವುದಷ್ಟೇ ಅಲ್ಲ ನಗೆಪಾಟಲು ಮಾಡುವ, ಎಲ್ಲಕ್ಕಿಂತ ಮಿಗಿಲಾಗಿ ಸಾಮಾಜಿಕ ತಾರತಮ್ಯಗಳನ್ನು ಧಿಕ್ಕರಿಸುವ ಸಾಹಸ; ವಿವಿಧ ಕಸುಬುಗಳನ್ನು ಪ್ರತಿನಿಧಿಸುವ ಶರಣರ ಜೀವನಾನುಭವದ ಸದುಪಯೋಗ ಮತ್ತು ಸದ್ವಿನಿಯೋಗ; ಹಾಗೂ ಸಾಧಾರಣರಿಗೆ ಸುಲಭವಾಗಿ ದೊರಕದ ಸಂಸ್ಕೃತದಲ್ಲಿರುವ ತಾತ್ವಿಕ ಜ್ಞಾನ ಸುಲಭ ಕನ್ನಡದಲ್ಲಿ ಅಚ್ಚರಿಯೆನಿಸುವಂಥ ಸರಳ ಶೈಲಿಯಲ್ಲಿ ಲಭ್ಯವಾಗುವ ರೀತಿ. ಇವು ಅದ್ವಿತೀಯವಾದ ಗುಣಗಳು.

ಈ ಪ್ರಬಂಧವನ್ನು ಮುಗಿಸುವ ವೇಳೆ ನನ್ನಲ್ಲಿ ಹಲವು ಪ್ರಶ್ನೆಗಳು ಏಳುತ್ತಿವೆ. ಬಸವಣ್ಣ, ಅಲ್ಲಮ ಮುಂತಾದ ಶರಣರು ಸಾಮಾಜಿಕ ಕ್ರಾಂತಿಯತ್ತ ತಮ್ಮ ಗಮನವನ್ನು ಕೇಂದ್ರೀಕರಿಸದೆ, ಕೇವಲ ಸೈದ್ಧಾಂತಿಕ ಮತ್ತು ತಾತ್ವಿಕ ಚರ್ಚೆಯತ್ತ ತಮ್ಮ ಶಕ್ತಿಯನ್ನು ನಿಯೋಜಿಸಿದ್ದಿದ್ದರೆ ಏನಾಗುತ್ತಿತ್ತು? ಶಂಕರ, ರಾಮಾನುಜ ಮತ್ತು ಮಧ್ವರಂತೆ ಸಂಸ್ಕೃತದಲ್ಲೇ ತಮ್ಮ ವಿಚಾರಗಳನ್ನು ಮಂಡಿಸಿದ್ದಿದ್ದರೆ ಏನಾಗುತ್ತಿತ್ತು? ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತಗಳನ್ನು ಅನುಸರಿಸುವ ತ್ರಿಮತಸ್ಥರ ಜೊತೆಗೆ ಶಕ್ತಿವಿಶಿಷ್ಟಾದ್ವೈತವನ್ನು ಪ್ರತಿಪಾದಿಸುವ ನಾಲ್ಕನೇ ಸಂಪ್ರದಾಯಸ್ಥರ ಮತ್ತೊಂದು ಗುಂಪು ಸೃಷ್ಟಿಯಾಗುತ್ತಿತ್ತೇ? ಕಲ್ಯಾಣದ ಬಳಿ ಅನುಭವ ಮಂಟಪದಲ್ಲಿ ಸಮಾನತೆಯ ಚರ್ಚೆ ನಡೆಯುವ ಬದಲು ಕೂಡಲ ಸಂಗಮದಲ್ಲಿ ಮತ್ತೊಂದು ಮಠದ ಸ್ಥಾಪನೆಯಾಗಿ ಅಲ್ಲಿ ಶಕ್ತಿವಿಶಿಷ್ಟಾದ್ವೈತದ ಹಿರಿಮೆಯ ಚರ್ಚೆಯಾಗುತ್ತಿತ್ತೇ? ವಿವಿಧ ವೃತ್ತಿಯನ್ನು ಪ್ರತಿನಿಧಿಸುವ ಶರಣರ ಅನುಭಾವದ ಬದಲು ಇತರ ಸಿದ್ಧಾಂತಗಳ 'ಮಂಡನ-ಖಂಡನ-ತುಂಡನ'ಗಳ ಚರ್ವಿತ ಚರ್ವಣವಾಗುತ್ತಿತ್ತೇ? ಉತ್ತರಗಳು ಅಷ್ಟು ಸುಲಭವಾಗಿ ಲಭ್ಯವಾಗತಕ್ಕವಲ್ಲ. ದುರ್ದೈವದಿಂದ ಬಸವ ಮುಂತಾದ ಶರಣರ ಕ್ರಾಂತಿ ಅಲ್ಪಾಯುಷಿಯಾಗಿ ಅವರ ನಂತರ ಉಳಿದು ಬೆಳೆದ ಅನುಯಾಯಿಗಳ ಗುಂಪು ಸಾಂಪ್ರದಾಯಿಕತೆಗೇ ಶರಣಾದದ್ದನ್ನು ಕಂಡು ನಿರಾಸೆಯಾಗುತ್ತದೆ. ಆದರೂ, ಒಂದು ಮಾತಂತೂ ನಿರ್ವಿವಾದ, ಕನ್ನಡ ಸಾಹಿತ್ಯ ವಚನ ಸಾಹಿತ್ಯದಿಂದ ಸಮೃದ್ಧವಾಯಿತು, ಹೊಸದೊಂದು ಮಾರ್ಗವನ್ನು ಜಗತ್ತಿಗೆ ಕೊಟ್ಟಿತು!

**ಗ್ರಂಥಋಣ:** ಈ ಲೇಖನವನ್ನು ಸಿದ್ಧಪಡಿಸಲು ಹಲವು ಪುಸ್ತಕಗಳನ್ನು ಇಡಿಯಾಗಿಯೂ ಇನ್ನು ಕೆಲವನ್ನು ಭಾಗಶಃ ಓದುವುದು ಅಗತ್ಯವಾಯಿತು. ಅವುಗಳಲ್ಲಿ ಮುಖ್ಯವಾದವು:

(೧) ಎಮ್. ಆರ್. ಶ್ರೀನಿವಾಸಮೂರ್ತಿಯವರ 'ವಚನಧರ್ಮಸಾರ'.

(೨) ಎಚ್. ತಿಪ್ಪೇರುದ್ರಸ್ವಾಮಿಯವರ ಪಿಎಚ್. ಡಿ. ಪದವಿಯ ಮಹಾಪ್ರಬಂಧ 'ಶರಣರ ಅನುಭಾವ ಸಾಹಿತ್ಯ'.

(೩) ಶಾಬಾದಿಮಠ ಬುಕ್ ಡಿಪೋ ಪ್ರಕಟಿಸಿದ 'ಶ್ರೀ ಬಸವಣ್ಣನವರ ವಚನಗಳು'.

(೪) ಎಲ್. ಬಸವರಾಜು ಅವರ 'ಅಕ್ಕನ ವಚನಗಳು'.

(೫) ಎಂ. ಹಿರಿಯಣ್ಣ ಅವರ 'Outlines of Indian Philosophy'.

(೬) ಪ್ರಭುಶಂಕರರ ಅದೇ ಪುಸ್ತಕದ ಕನ್ನಡ ಅನುವಾದ 'ಭಾರತೀಯ ತತ್ವಶಾಸ್ತ್ರದ ರೂಪು ರೇಖೆಗಳು'.

(೭) ಆಕ್ಸ್‌ಫರ್ಡ್ ಪ್ರಕಟಿಸಿದ Andrew Schelling ಸಂಪಾದಿಸಿದ 'The Oxford Anthology of Bhakti Literature'.

(೮) ಎ. ಕೆ. ರಾಮಾನುಜನ್ ಅವರ 'Speaking of Shiva'.

(೯) ಪ್ರಭುಶಂಕರ ಸಂಪಾದಿಸಿದ 'ಶರಣರ ನೂರೊಂದು ವಚನಗಳು' ಮತ್ತು

(೧೦) ಅದೇ ಪುಸ್ತಕದ ಆಂಗ್ಲಾನುವಾದ 'Naming the Nameless.'

■

# ಆದರ್ಶ ಸಮಾಜಕ್ಕೆ ದಾಸ ಸಾಹಿತ್ಯದ ಸಂದೇಶ

–ತ್ರಿವೇಣಿ ಶ್ರೀನಿವಾಸರಾವ್

ಹನ್ನೆರಡನೆಯ ಶತಮಾನದಲ್ಲಿ ಸಂಭವಿಸಿದ ವಚನ ಚಳುವಳಿಯಂತೆಯೇ ಹದಿನಾಲ್ಕನೆಯ ಶತಮಾನದಲ್ಲಿ ಪ್ರಾರಂಭವಾದ ದಾಸಸಾಹಿತ್ಯದ ಉಗಮ ಕನ್ನಡ ಸಾಹಿತ್ಯ ಚರಿತ್ರೆಯ ಪ್ರಮುಖ ಮೈಲುಗಲ್ಲು. ಕನ್ನಡವು ಸಾಹಿತ್ಯದ ಭಾಷೆಯಾಗಿ ವಿಜೃಂಭಿಸಿದ ಸುವರ್ಣ ಯುಗವಿದು. ವಚನಕಾರರು ತಮ್ಮ ವಚನಗಳ ಮೂಲಕ ಅಂದಿನ ಸಮಾಜದಲ್ಲಿ ಬೇರುಬಿಟ್ಟಿದ್ದ ಜಾತಿ ಪದ್ಧತಿ, ಮೌಢ್ಯಗಳನ್ನು ತೊಡೆಯುವತ್ತ ಗಮನಹರಿಸಿದ್ದರು. ದಾಸಸಾಹಿತ್ಯವು ಕೂಡ ಹರಿಭಕ್ತಿ ಸಾರುವುದಲ್ಲದೆ, ಸಮಾಜದ ಓರೆಕೋರೆಗಳನ್ನು ತೋರಿಸಿ, ಅದನ್ನು ತಿದ್ದುವುದನ್ನು ತನ್ನ ಗುರಿಯಾಗಿಸಿಕೊಂಡಿತು. ವಚನ ಚಳುವಳಿಯ ಕಾಲದಲ್ಲಾಗಿದ್ದು ಕ್ಷಿಪ್ರ ಕ್ರಾಂತಿಯಾದರೆ, ದಾಸರು ಮಾಡಹೊರಟಿದ್ದು ಜನರ ಮನವನ್ನು ಸಾವಧಾನವಾಗಿ ಪರಿವರ್ತಿಸುವ ಕೆಲಸ. ಭಕ್ತ–ಭಗವಂತನ ನಡುವೆ ತೊಡಕಾಗಿದ್ದ ಸಾಮಾಜಿಕ ಅನಿಷ್ಟಗಳನ್ನು ನಿವಾರಿಸಲು ಪ್ರಯತ್ನ ನಡೆಸಿ, ಜನಮನದಲ್ಲಿ ವೈಚಾರಿಕತೆಯ ಬೀಜ ಬಿತ್ತುವ ಕಾಯಕ.

ಜನಸಾಮಾನ್ಯರನ್ನು ಸುಲಭದಲ್ಲಿ ಆಕರ್ಷಿಸುವ ಶಕ್ತಿ ಸಂಗೀತಕ್ಕಿರುವುದರಿಂದಲೇ ದಾಸರು ಜನಮನವನ್ನು ಸೆಳೆಯಲು ಇದನ್ನೇ ತಮ್ಮ ಮಾಧ್ಯಮವಾಗಿಸಿಕೊಂಡರು. ಸಂಸ್ಕೃತ ಗ್ರಂಥಗಳನ್ನು ಓದಿ, ಅರಿತುಕೊಳ್ಳುವ ಶಕ್ತಿಯಿಲ್ಲದ ಜನಸಾಮಾನ್ಯರನ್ನು ಮನಸ್ಸಿನಲ್ಲಿಟ್ಟುಕೊಂಡು ತಮ್ಮ ಸಾಹಿತ್ಯ ರಚನೆಗೆ ತೊಡಗಿದರು. ಡಾ. ಎಸ್. ಎಸ್. ಅಂಗಡಿಯವರು ಅಭಿಪ್ರಾಯಪಟ್ಟಿರುವಂತೆ, ಹರಿದಾಸರು ಕೈಗೊಂಡ ಕೆಲಸ ನಡೆದದ್ದು ಜನಸಾಮಾನ್ಯರ ನಡುವೆಯೇ, ಜನಸಾಮಾನ್ಯರ ಸಲುವಾಗಿಯೇ, ಜನಸಾಮಾನ್ಯರ ನೆಲೆಯಲ್ಲಿಯೇ (ದಾಸಸಾಹಿತ್ಯ ಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ೧೬). ಹಾಗಾಗಿ ಜನಸಾಮಾನ್ಯರ ಆಡುಭಾಷೆಯಾಗಿದ್ದ ಸರಳ ಕನ್ನಡ ಭಾಷೆಯನ್ನು ದಾಸರು ತಮ್ಮ ತಮ್ಮ ಸಾಹಿತ್ಯ ರಚನೆಗೆ ಬಳಸಿಕೊಂಡರು. ಸಂಸ್ಕೃತವು ಪಂಡಿತರ ಭಾಷೆಯೆನ್ನಿಸಿ, ಅದರಲ್ಲಿರುವ ಸಾರವನ್ನು ಆ ಭಾಷೆಯನ್ನು ಅರಿಯದವರಿಗೆ ತಲುಪಿಸುವ ಉದ್ದೇಶವೂ ಅದರಲ್ಲಿತ್ತು.

ಹರಿದಾಸರು ಜನಸಾಮಾನ್ಯರ ಅರಿವಿಗೆ ಬರುವಂಥ ಕನ್ನಡ ನುಡಿಯನ್ನೇ ಬಳಸಿಕೊಂಡರು. ಜನರ ದಿನನಿತ್ಯದ ಬದುಕಿನ ವಿಚಾರಗಳನ್ನೇ ಎತ್ತಿಕೊಂಡರು. ನುಡಿಕಟ್ಟಿನಲ್ಲಿಯೂ ಕ್ಲಿಷ್ಟತೆ ಬಿಟ್ಟರು. ಸರಳತೆಗೆ ಒಲಿದರು. ತಾವು ಪಂಡಿತರಾದರೂ ಜನರೆದುರು ತಮ್ಮ ಪಾಂಡಿತ್ಯವನ್ನು ಮೆರೆಯಲಿಲ್ಲ. ತಮ್ಮ ಮಾತುಗಳಿಗೆ ಶಾಸ್ತ್ರದ ಒತ್ತಾಸೆಯಿದ್ದರೂ ಶಾಸ್ತ್ರದ ಸೊಲ್ಲನ್ನು ಎತ್ತಿ ಹಿಡಿಯಲಿಲ್ಲ. ಅಧ್ಯಾತ್ಮವು ಜನರಿಗೆ ದಕ್ಕಬೇಕೆಂದೆ ಅವರು ದಾಸರಾದುದು (ಪ್ರೊ. ಎಸ್. ಕೆ. ರಾಮಚಂದ್ರರಾವ್, ದಾಸಸಾಹಿತ್ಯ ಮತ್ತು ಸಂಸ್ಕೃತಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ ೨೧೧). ಕನ್ನಡವು ದಾಸ ಸಾಹಿತ್ಯದ ಅಧಿಕೃತ ರಾಯಭಾರಿಯಾಗಿದ್ದು ಹೀಗೆ. ಕನ್ನಡ ನುಡಿಯನ್ನು ಮಾಧ್ಯಮವಾಗಿಸಿಕೊಂಡ ದಾಸಪಂಥ, ಆ ಮೂಲಕ ಹರಿಭಕ್ತಿ ಪ್ರಚಾರದ ಜೊತೆಗೆ ಸಾಮಾಜಿಕ ಸುಧಾರಣೆ ಸಾರುವ ಅಭಿಯಾನವನ್ನು ಪ್ರಾರಂಭಿಸಿತು.

ಈ ಸುಧಾರಣಾ ಕಾರ್ಯಭಾರಕ್ಕೆ ಹಲವಾರು ಆಯಾಮಗಳಿವೆ. ದಾಸ ಸಾಹಿತ್ಯ ನಿಲುಕಲು ಯತ್ನಿಸಿದ ಆಶಯಗಳನ್ನು ಡಾ. ಎ. ಮಾಧವ ಉಡುಪರ ಈ ಮಾತುಗಳ ಮೂಲಕ ಗ್ರಹಿಸಬಹುದು– ಜಾತಿಪದ್ಧತಿಯ ಹಾಗೂ ಅಸ್ಪೃಶ್ಯತೆಯ ಅನಿಷ್ಟಗಳಿಗೆ ತಡೆಯೊಡ್ಡುವಲ್ಲೂ ಸೌಹಾರ್ದ–ಸಾಮರಸ್ಯಗಳಿಂದ ಬಾಳುವಲ್ಲೂ ದಾಸರ ಸಂದೇಶ ವಿಶೇಷ ಪ್ರಭಾವ ಬೀರಿದೆ. ಮೂಢನಂಬಿಕೆಗಳನ್ನು ಬಡಿದೋಡಿಸುವ ಜಾಗೃತಿಯನ್ನೂ ಇದು ಪ್ರೋತ್ಸಾಹಿಸಿದೆ. ವೈಚಾರಿಕತೆಗೆ ಆದ್ಯತೆಯನ್ನಿತ್ತಂತೆಯೇ ಕಂದಾಚಾರ, ಡಂಭಾಚಾರಗಳ ವಿರುದ್ಧ ಸಮರ ಸಾರುವಲ್ಲೂ ಅದು ಪ್ರೇರಣೆಯನ್ನಿತ್ತಿದೆ. ಎಲ್ಲರಲ್ಲೂ ಆ ದೇವರನ್ನೇ ಕಾಣುತ್ತ, ಮಾಡುವ ಕೆಲಸವನ್ನೇ ದೇವರ ಪೂಜೆಯಾಗಿಸಿ, ಎಲ್ಲರೊಂದಿಗೆ ಒಂದಾಗಿ ಬಾಳುವ ಪಾಠವನ್ನದು ಕಲಿಸಿದೆ. ಒಟ್ಟಿನಲ್ಲಿ ದಾಸರ ಸಂದೇಶ ಹುಟ್ಟಿಸಿದ ಆತ್ಮೋನ್ನತಿ–ಸಮಾಜೋನ್ನತಿಯ ಜಾಗೃತಿಯ ಅಲೆ, ಮುಂದಿನ ದಿನಗಳಲ್ಲೂ ಜನಮನವನ್ನು ಅರಳಿಸುವ ಕೈಂಕರ್ಯವನ್ನು ಈಡೇರಿಸುತ್ತ ಕ್ರಿಯಾಶೀಲವಾಗಿಯೇ ಸಾಗಿದೆ. (ಗ್ರಂಥ: ದಾಸ ಸಾಹಿತ್ಯದಲ್ಲಿ ಆತ್ಮೋನ್ನತಿ, ಸಮಾಜೋನ್ನತಿ/ ಲೇ: ಡಾ. ಎ. ಮಾಧವ ಉಡುಪ).

## ವ್ಯಾಸರಾಯರು ಬರೆದ ಸಮಾನತೆಯ ಮುನ್ನುಡಿ

ವ್ಯಾಸರಾಜರು ದಾಸಸಾಹಿತ್ಯದಲ್ಲಿ ಅತ್ಯಂತ ಪ್ರಮುಖವಾದ ಸ್ಥಾನ ಪಡೆದವರು. ಇವರು ವಿಜಯನಗರ ಸಾಮ್ರಾಟ ಕೃಷ್ಣದೇವರಾಯನ ಆಸ್ಥಾನದಲ್ಲಿ ಪ್ರಭಾವಿ ಸ್ಥಾನವನ್ನು ಪಡೆದವರಾಗಿದ್ದರು. ವ್ಯಾಸರಾಯರು ಅಂದಿನ ಧಾರ್ಮಿಕ ಪರಿಸರದಲ್ಲಿ ಹಾಸುಹೊಕ್ಕಾಗಿದ್ದ ಮಡಿವಂತಿಕೆಯ ಪರಿಸರದಲ್ಲಿದ್ದೂ, ಕುರುಬ ಜನಾಂಗಕ್ಕೆ ಸೇರಿದ ಕನಕದಾಸರನ್ನು ಶಿಷ್ಯನಾಗಿ ಸ್ವೀಕರಿಸಿದ್ದು ಅಂದಿನಮಟ್ಟಿಗೆ ಕ್ರಾಂತಿಕಾರಿ ಹೆಜ್ಜೆಯೇ ಸರಿ. ಮಠ–ಮಂದಿರಗಳು

ಬ್ರಾಹ್ಮಣರ ಸೊತ್ತಾಗಿದ್ದು, ಕೆಳ ಜಾತಿಯವರಿಗೆ ಅಲ್ಲಿಗೆ ಪ್ರವೇಶ ನಿರಾಕರಿಸಿತ್ತೆನ್ನಲಾಗಿದ್ದ ಕಾಲದಲ್ಲಿ ವ್ಯಾಸರಾಯರು ಕೈಗೊಂಡ ಈ ಕ್ರಮ ಬಹಳ ದೊಡ್ಡ ಸುಧಾರಣೆಯ ಅಲೆಯನ್ನೇ ಎಬ್ಬಿಸಿತು.

ಅದೇ ರೀತಿ ವೃತ್ತಿಯಿಂದ ವ್ಯಾಪಾರಿಯಾಗಿದ್ದ ಪುರಂದರದಾಸರು, ಪತ್ನಿಯ ಕಾರಣದಿಂದಾಗಿ ನಡೆದ ಘಟನೆಯಿಂದಾಗಿ ವೈರಾಗ್ಯತಳೆದು, ತಮ್ಮಲ್ಲಿದ್ದ ಅಪಾರ ಸಂಪತ್ತನ್ನು ತ್ಯಜಿಸಿ ಹರಿದಾಸರಾಗಿ ತಮ್ಮ ದೇವರನಾಮಗಳ ಮೂಲಕ ಹರಿಭಕ್ತಿಯನ್ನು ಪಸರಿಸಿದ್ದಲ್ಲದೆ ಸಮಾಜದ ಓರೆಕೋರೆಗಳನ್ನು ತಿದ್ದುವ ಕೆಲಸ ಮಾಡಿದರು. ಪುರಂದರ, ಕನಕ, ವಾದಿರಾಜರೇ ಮುಂತಾದವರಿಂದ ಪುಷ್ಟಿಗೊಳ್ಳುತ್ತಾ ಹೋದ ದಾಸಸಾಹಿತ್ಯ ತನ್ನ ಉದ್ದೇಶ ಸಾಧಿಸುವಲ್ಲಿ ಪ್ರಗತಿ ಸಾಧಿಸಿತು. ನಂತರದಲ್ಲಿ ಬಂದ ಇತರ ದಾಸರುಗಳು ತಮ್ಮ ರಚನೆಗಳಲ್ಲಿ ಅಧ್ಯಾತ್ಮ ಪ್ರಸಾರಕ್ಕೆ ಹೆಚ್ಚಿನ ಒತ್ತು ಕೊಟ್ಟಿದ್ದರೂ, ಅಲ್ಲಲ್ಲಿ ಇಂಥ ಪ್ರಯತ್ನಗಳು ನಡೆದಿರುವುದು ಕಂಡುಬರುತ್ತವೆ. ಪುರಂದರ, ಕನಕದಾಸರ ಕೃತಿಗಳಲ್ಲಿ ಕಂಡುಬರುವ ಸಾಮಾಜಿಕ ಸಂದೇಶಗಳ ಕಿರುಪರಿಚಯ ಮಾಡಿಕೊಡುವುದು ಈ ಲೇಖನದ ಉದ್ದೇಶ.

### ಪುರಂದರದಾಸರ ಪದಗಳಲ್ಲಿ ಸಮಾಜಮುಖೀ ಚಿಂತನೆ

ವ್ಯಾಸರಾಯರ ಶಿಷ್ಯ ವರ್ಗದಲ್ಲಿ ಪ್ರಮುಖರೆಂದರೆ ಪುರಂದರದಾಸರು. ಕರ್ನಾಟಕ ಸಂಗೀತ ಪಿತಾಮಹನೆಂದು ಖ್ಯಾತರಾಗಿರುವ ಪುರಂದರದಾಸರು ವ್ಯಾಸರಾಯರ ಅಚ್ಚುಮೆಚ್ಚಿನವರಾಗಿದ್ದು, ದಾಸರೆಂದರೆ ಪುರಂದರ ದಾಸರಯ್ಯ ಎಂದು ಗುರು ವ್ಯಾಸರಾಯರಿಂದಲೇ ಹೊಗಳಿಸಿಕೊಂಡ ಮಹಾನುಭಾವರು. ಜನರಿಗೆ ಸುಲಭವಾಗಿ ಅರ್ಥವಾಗುವಂತೆ, ಸರಳವಾಗಿ ಹಾಡಿಕೊಳ್ಳಲು ಅನುಕೂಲವಾಗಿರುವುದು ಪುರಂದರ ಸಾಹಿತ್ಯದ ವೈಶಿಷ್ಟ್ಯ. ಪುರಂದರದಾಸರು ಜನರನ್ನು ಸುಲಭವಾಗಿ ತಲುಪಲು ಅವರದೇ ಭಾಷೆಯನ್ನು ತಮ್ಮ ಸಾಹಿತ್ಯ ರಚನೆಗೆ ಬಳಸಿಕೊಂಡರು. ಹಾಡುವಂತಹ, ಹಾಡಿಕೊಂಡು ಕುಣಿಯುವಂತಹ ಮೋಹಕ ಗುಣವನ್ನು ತಮ್ಮ ರಚನೆಗಳಿಗೆ ತಂದರು.

ತಮ್ಮ ತತ್ತ್ವಗಳನ್ನು ಜನತೆಗೆ ತಲುಪಿಸಲು ತಮ್ಮದೇ ಸಾಹಿತ್ಯವನ್ನು ಸಮೂಹ ಮಾಧ್ಯಮವಾಗಿಸಿಕೊಂಡರು. ತಾವು ಜೀವಿಸಿದ್ದ ಸಮಾಜದ ಕುಂದುಕೊರತೆ, ಮೌಢ್ಯ, ಲೋಪ–ದೋಷಗಳನ್ನು ನಿಷ್ಠುರವಾಗಿ ಖಂಡಿಸಿದ್ದಲ್ಲದೆ, ಆ ಬಗ್ಗೆ ಅರಿವು ಮೂಡಿಸುವ ಕೆಲಸವನ್ನು ಇವರು ಮಾಡಿದರು. ಹಿರಿಯರಿಗೆ ತೋರಿಸಬೇಕಾದ ಗೌರವ, ಕಿರಿಯರಲ್ಲಿ ಮಮತೆ, ಸಮಾಜದ ಇತರರೊಡನೆ ಸಮಾನತೆ –ಇತ್ಯಾದಿಯಾಗಿ ಸಾಮಾಜಿಕ ಮೌಲ್ಯಗಳೆಡೆಗೆ ಕಾಳಜಿ ಇವರ ಪದಗಳಲ್ಲಿ ವ್ಯಕ್ತವಾಗುತ್ತದೆ.

ಪುರಂದರರ ದೇವರನಾಮಗಳಲ್ಲಿ ದೈವಭಕ್ತಿ ರಾರಾಜಿಸುವುದಲ್ಲದೆ, ವೈಚಾರಿಕತೆಯ ಹೊಳಪನ್ನೂ ಜೊತೆಯಲ್ಲಿ ಕಾಣಬಹುದು. ಭಕ್ತಿ ಮತ್ತು ವೈಚಾರಿಕತೆಗಳ ಈ ಸಂಗಮ ವಿರೋಧಾಭಾಸವೆನಿಸಿದರೂ, ಜಿ. ಎಸ್. ಶಿವರುದ್ರಪ್ಪನವರು ಅಭಿಪ್ರಾಯಪಡುವಂತೆ, ಪುರಂದರದಾಸರಂಥ ದಾಸರ ವ್ಯಕ್ತಿತ್ವಕ್ಕೆ ಎರಡು ರೇಖೆಯಿದೆ. ಒಂದು ತಮಗೂ ತಮ್ಮ ಭಗವಂತನಿಗೂ ಇರುವ ಸಂಬಂಧ. ಇನ್ನೊಂದು ತಮಗೂ ತಮ್ಮ ಸುತ್ತಣ ಲೋಕಕ್ಕೂ ಇರುವ ಸಂಬಂಧ. ಈ ಎರಡು ಸಂಬಂಧಗಳೂ ಹೊರಡುವ ಒಂದು ಬಿಂದುವಿನಲ್ಲಿದೆ ಇವರ ವ್ಯಕ್ತಿತ್ವ.

ತಮ್ಮ ಮತ್ತು ಭಗವಂತನ ಸಂಬಂಧ ಕುರಿತ ಹಾಡುಗಳಲ್ಲಿ ಈ ಅನುಭಾವಿಗಳ ಕಾವ್ಯ ವ್ಯಕ್ತಿನಿಷ್ಠವೂ; ಸಮಾಜ ಮತ್ತು ತಮ್ಮ ನಡುವಿನ ಸಂಬಂಧದ ಪರಿಶೀಲನೆ ನಡೆದಾಗ ವಸ್ತುನಿಷ್ಠವೂ ಆಗುವುದು ಸಹಜವಾಯಿತು. ಮಾರ್ಗನಿರ್ಮಾಣ ಮತ್ತು ಮಾರ್ಗದರ್ಶನ ಈ ಎರಡೂ ಹಂತಗಳಲ್ಲಿ ದಾಸರ ಕ್ರಿಯಾಶಕ್ತಿ ಕಾರ್ಯಪ್ರವೃತ್ತವಾಯಿತು.

ಹಾಗಾಗಿ ಭಗವಂತನ ಕುರಿತ ಹಾಡುಗಳಲ್ಲಿ ಹರಿಸರ್ವೋತ್ತಮತ್ವದ ಪಾರಮ್ಯವನ್ನೂ, ಸಮಾಜ ಮತ್ತು ತಮ್ಮ ನಡುವಿನ ಸಂಬಂಧ ಕುರಿತ ಹಾಡುಗಳಲ್ಲಿ ವಸ್ತುನಿಷ್ಠವಾಗಿ ವಿಮರ್ಶಿಸುವುದೂ ಇವರಿಂದ ಸಾಧ್ಯವಾಯಿತು. ದಾರಿ ಯಾವುದಯ್ಯಾ ವೈಕುಂಠಕೆ? ಎಂದು ಮುಕ್ತಿಗೆ ದಾರಿಯನ್ನು ತೋರಿದ್ದಲ್ಲದೆ, ಸಮಾಜಕ್ಕೆ ಮಾರ್ಗದರ್ಶಕರೂ ಆದವರು ಅವರು! ಪುರಂದರರ ಸಾಹಿತ್ಯದಲ್ಲಿ ಸಮಾಜೋದ್ಧಾರದ ಬಗ್ಗೆ ವಿಪುಲ ಉದಾಹರಣೆಗಳನ್ನು ಹೆಕ್ಕಿ ತೆಗೆಯಬಹುದು.

## ಜಾತಿ ವ್ಯವಸ್ಥೆಯ ಕುರಿತು ದಾಸರ ದೃಷ್ಟಿಕೋನ

ಈ ಇಪ್ಪತ್ತೊಂದನೆಯ ಶತಮಾನದಲ್ಲಿಯೇ ಇಷ್ಟೊಂದು ಅಧಿಕ ಪ್ರಮಾಣದಲ್ಲಿರುವ ಜಾತಿ ತಾರತಮ್ಯ, ಮೂಢನಂಬಿಕೆಗಳು, ಮಡಿವಂತಿಕೆಯ ಉಪದ್ರವಗಳು ದಾಸರು ಜೀವಿಸಿದ್ದ ಹದಿನಾಲ್ಕನೆಯ ಶತಮಾನದಲ್ಲಿ ಇನ್ನೆಷ್ಟು ಪ್ರಬಲವಾಗಿದ್ದೀತೆಂದು ಊಹಿಸುವುದು ಸುಲಭ. ಅದಕ್ಕಾಗಿಯೇ ಪುರಂದರದಾಸರು ತಮ್ಮ ಪದಗಳಲ್ಲಿ ಅಂತರಂಗ ಶುದ್ಧಿ ಇಲ್ಲದೆ ಬಾಹ್ಯದಾಡಂಬರ ಮಾಡುವವರನ್ನು ಇನ್ನಿಲ್ಲದಂತೆ ನಿಷ್ಠುರವಾಗಿ ಟೀಕಿಸಿದ್ದಾರೆ. ದಾಸರು ಬಳಸುವ ಹರಿತವಾದ ಭಾಷೆ, ಬಳಸುವ ಉಪಮೆಗಳು ಬಹಳ ಪರಿಣಾಮಕಾರಿಯಾಗಿ ಮೂಡಿಬಂದಿವೆ.

ಪುರಂದರದಾಸರ ಕಾಲದಲ್ಲಿಯೂ ತಮ್ಮ ಜಾತಿ ಹೆಚ್ಚೆಂದು ಮೆರೆಯುವವರು, ತಾವು ಶ್ರೇಷ್ಠ, ಉಳಿದವರು ಕನಿಷ್ಟರೆಂದು ಭಾವಿಸುವವರ ಸಂಖ್ಯೆ ಹೆಚ್ಚೇ ಇತ್ತೆಂದು ತೋರುತ್ತದೆ. ಹಾಗಾಗಿ ದಾಸರ ಅನೇಕ ಕೃತಿಗಳಲ್ಲಿ ಈ ಬಗ್ಗೆ ಪ್ರಸ್ತಾಪ ಬರುತ್ತದೆ. ಈ

ಜಾತಿಭಾವನೆ ತೊಲಗದೆ ಆದರ್ಶ ಸಮಾಜದ ಕನಸು ನನಸಾಗದು ಎಂದು ಅವರಿಗೆ ಅನ್ನಿಸಿರಲಿಕ್ಕೂ ಸಾಕು.

ಆವಕುಲವಾದರೇನು ಆವನಾದರೇನು ಆತ್ಮ ಭಾವನರಿತ ಮೇಲೆ ಎಂಬ ಪದದಲ್ಲಿ ತಮ್ಮ ವಿಚಾರವನ್ನು ಸ್ಪಷ್ಟವಾಗಿ ಹೊರಗೆಡಹಿದ್ದಾರೆ.

**ಹಸಿಕಬ್ಬು ಡೊಂಕಿರಲು ಅದರ**
**ರಸ ತಾನು ಡೊಂಕೇನೋ।**
**ವಿಷಯಾಸೆಗಳ ಬಿಟ್ಟು**
**ಹಸನಾದ ಗುರುಭಕ್ತಿ ಮಾಡೊ॥**

'ಕುಲದ ಮೇಲೆ ಹೋಗಬೇಡ ಮನುಜ, ಕುಲವಿಲ್ಲ ಜ್ಞಾನಿಗಳಿಗೆ' ಎನ್ನುವ ಮೂಲಕ ದೇಹಕ್ಕಂಟಿರುವ ಜಾತಿಗಿಂತ, ಗುಣವೇ ಮುಖ್ಯವೆಂದು ಪ್ರತಿಪಾದಿಸುತ್ತಾರೆ.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರವೆಂಬ ನಾಲ್ಕು ವರ್ಣಗಳಿಗೆ ಸೇರದೆ ಪಂಚಮ ವರ್ಣವೆಂದು ಹೆಸರಾಗಿ, ಸಮಾಜದಲ್ಲಿ ತುಳಿತಕ್ಕೊಳಗಾಗಿದ್ದ ಜಾತಿಯ ಬಗ್ಗೆಯೂ ದಾಸರು ಆ ಕಾಲದಲ್ಲಿಯೇ ದನಿ ಎತ್ತಿರುವುದು ಆಶ್ಚರ್ಯಕಾರಿಯಾಗಿದೆ. ಯಾರೂ ಹುಟ್ಟಿನಿಂದ ಮೇಲು ಜಾತಿಯಾಗಲು ಸಾಧ್ಯವಿಲ್ಲ ಎಂದು ಈ ಹಾಡಿನ ಮೂಲಕ ಪ್ರತಿಪಾದಿಸುತ್ತಾರೆ ದಾಸರು. ಜಾತಿಯ ಮೇಲಿನ ಅಭಿಮಾನ ಅದೆಷ್ಟು ಹುಸಿಯೆಂಬುದನ್ನು ಈ ಮೂಲಕ ತೋರಿಸಿಕೊಡುತ್ತಿರುವುದಲ್ಲದೆ, ಅದರೆಡೆಗಿನ ತಮ್ಮ ಅಸಹನೆಯನ್ನೂ ಇಲ್ಲಿ ಹೊರಗೆಡಹಿದ್ದಾರೆ.

**ಹೊಲೆಯ ಹೊರಗಿಹನೆ ಊರೊಳಗಿಲ್ಲವೆ**
**ಶ್ರೀಹರಿಯ ಸ್ಮರಣೆಯನು ಬಲ್ಲವರು ಪೇಳಿ ॥**

**ಶೀಲವನು ಕೈಕೊಂಡು ನಡೆಸದಾತನೆ ಹೊಲೆಯ**
**ಪೇಳಿದ ಹರಿಕಥೆಯ ಕೇಳದವ ಹೊಲೆಯ ।**
**ಆಳಾಗಿ ಅರಸಂಗೆ ಕೇಡು ಬಗೆವವ ಹೊಲೆಯ**
**ಸೂಳೆಯನು ಕಾಮಿಸುವ ಶುದ್ಧ ಹೊಲೆಯ ॥**

**ಕೊಂಡ ಸಾಲಗಳನ್ನು ತಿದ್ದದಾತನೆ ಹೊಲೆಯ**
**ಲಂಡತನದಲಿ ನಡೆವ ಭಂಡ ಹೊಲೆಯ ।**
**ಉಂಡ ಮನೆಗೆರಡನ್ನು ಬಗೆವಾತನೆ ಹೊಲೆಯ**
**ಹೆಂಡತಿಯ ಇಚ್ಛೆಯವ ಹೇಡಿ ಹೊಲೆಯ ॥**

**ಇದ್ದಾಗ ದಾನ ಧರ್ಮವ ಮಾಡದವ ಹೊಲೆಯ**
**ಮದ್ದಿಕ್ಕಿ ಕೊಲ್ಲುವವ ಮಾರಿ ಹೊಲೆಯ ॥**
**ಬದ್ಧವಾದ ನಯನುಡಿಯು ಇಲ್ಲದಾತನೆ ಹೊಲೆಯ ।**
**ಶುದ್ಧ ತಾನೆಂಬಾತ ಶುಂಠ ಹೊಲೆಯ ॥**

**ಆಸೆ ಮಾತನು ಕೊಟ್ಟು ಭಾಷೆ ತಪ್ಪುವ ಹೊಲೆಯ**
**ಲೇಸು ಉಪಕಾರಗಳ ಮಾಡದವ ಹೊಲೆಯ ।**
**ಮೋಸದಲಿ ಜೀವನವ ಮುನಿದು ಕೆಡಿಸುವ ಹೊಲೆಯ**
**ಹುಸಿಯ ಬೊಗಳುವನೊಬ್ಬ ಹುಚ್ಚು ಹೊಲೆಯ ॥**

**ಅರಿತು ಆಚಾರವನು ನಡೆಸದಾತನೆ ಹೊಲೆಯ**
**ಪರಸತಿಗೆ ಅಳುಕಿದವ ಪಾಪಿ ಹೊಲೆಯ ।**
**ಗುರು ಹರಿಯನು ನಮಿಸದಾತನೇ ಹೊಲೆಯ**
**ಪುರಂದರವಿಠಲನ ನೆನೆಯದವ ಹೊಲೆಯ ॥**

ಕೆಟ್ಟದ್ದನ್ನು ಮಾಡದೆ ಜ್ಞಾನಮಾರ್ಗದಲ್ಲಿರುವ ಮನುಜನೇ ಉತ್ತಮ ಎಂಬುದು ಇಲ್ಲಿ ದಾಸರ ಇಂಗಿತ. ಅದೇ ಭಾವವನ್ನು ಸಾರುವ ಮತ್ತೊಂದು ಉಗಾಭೋಗ ಇಲ್ಲಿದೆ:

**ಹೊಲೆಯ ಬಂದನೆಂದು ಒಳಗೆ ದೇವರ ಮಾಡಿ**
**ಗಣ ಗಣ ಗಂಟೆಯ ಬಾರಿಸುವರಯ್ಯ**
**ತನುವಿನ ಕೋಪವು ಹೊಲೆಯಲ್ಲವೆ?**
**ಪರಧನ ಪರಸತಿ ಹೊಲೆಯಲ್ಲವೆ?**
**ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟರೆ**
**ಇದಕೇನು ಮದ್ದೋ ಪುರಂದರ ವಿಠಲ ॥**

ಪುರಂದರದಾಸರ ಈ ಎರಡೂ ರಚನೆಗಳು ಸರಳವಾಗಿವೆ. ಇವುಗಳಲ್ಲಿ ಹುದುಗಿರುವ ನೀತಿಯೂ ಸುಲಭವಾಗಿಯೇ ತಿಳಿಯುವಂತಿದೆ. ಸಮಾಜ ಕೀಳಾಗಿ ಕಾಣುವ ಹೊಲೆಯ ಎಂಬುದು ಜಾತಿಯಲ್ಲ. ಅದು ಎಲ್ಲಾ ಮನುಷ್ಯನಲ್ಲಿಯೂ ಅಡಗಿರುವ ದುರ್ಗುಣವೆನ್ನುತ್ತಾರೆ ದಾಸರು. ಹೊಲೆತನವೆಂಬುದು ಹುಟ್ಟಿನಿಂದ ನಿರ್ಧಾರವಾಗುವುದಲ್ಲ, ನಮ್ಮ ನಡತೆ, ಗುಣಗಳಿಂದ ಎಂಬುದನ್ನು ಅನೇಕ ಹೋಲಿಕೆಗಳಿಂದ ಸ್ಪಷ್ಟಪಡಿಸುತ್ತಾರೆ. ಬಸವೇಶ್ವರರ ಕೊಲುವವನೆ ಮಾದಿಗ, ಹೊಲಸು ತಿಂಬುವನೆ ಹೊಲೆಯ ಎಂಬ ಪ್ರಸಿದ್ಧ ವಚನದ ಆಶಯವನ್ನೇ ಈ ಉಗಾಭೋಗವೂ

ಸಾರುತ್ತಿದೆ. ಶ್ರೇಷ್ಠ ಮನಸ್ಸುಗಳು ಒಂದೇ ರೀತಿ ಚಿಂತಿಸುತ್ತವೆ ಎಂಬ ಮಾತು ಇಂಥಾ ಸಾಮ್ಯತೆಗಳನ್ನು ಕಂಡಾಗ ನಿಜವೆನ್ನಿಸುತ್ತದೆ. ಕವಿ, ಸಾಹಿತಿ, ಎಚ್. ಎಸ್. ವೆಂಕಟೇಶ-ಮೂರ್ತಿಯವರ ಮಾತುಗಳೂ ಈ ಅಭಿಪ್ರಾಯವನ್ನು ಅನುಮೋದಿಸುವಂತಿವೆ.

ಆರೋಗ್ಯವಂತ ಮನಸ್ಸುಗಳು ಸಮಾಜದ ಹೊಲಸನ್ನು ತೊಳೆಯ ಹೊರಟಾಗ ಸಮಾನಧಾಟಿಯ ವಿಚಾರಗಳನ್ನು ವ್ಯಕ್ತಪಡಿಸುವುದು ಅನಿವಾರ್ಯವೆಂಬಂತೆ ತೋರುವುದು. (ಕೃತಿ: ಪ್ರಮುಖ ಕೀರ್ತನಕಾರರು).

ದಾಸರ ಆಶಯ ಅದೆಷ್ಟರಮಟ್ಟಿಗೆ ಪರಿಣಾಮಕಾರಿಯಾಯಿತೆಂಬುದು ತಿಳಿಯದೆ ಹೋದರೂ, ಅಂದಿನ ಕಟ್ಟಾ ಸಾಂಪ್ರದಾಯಿಕ ಪರಿಸರದಲ್ಲಿ ತಮ್ಮ ವಿರೋಧವನ್ನು ದೊಡ್ಡದನಿಯಲ್ಲಿ ಹೇಳಬಲ್ಲ ದಿಟ್ಟತನವನ್ನು ದಾಸರು ತೋರಿರುವುದು ಮುಖ್ಯವೆನ್ನಿಸುತ್ತದೆ.

### ಬಾಹ್ಯದಾಡಂಬರಕ್ಕಿಂತ ಅಂತರಂಗ ಶುದ್ಧಿಯೇ ಮಿಗಿಲು

ತೋರಿಕೆಯ ಭಕ್ತಿಯನ್ನು ಅಂತರಂಗ ಶುದ್ಧಿಯಿಲ್ಲದ ಬಾಹ್ಯದಾಡಂಬರವನ್ನು ಅತ್ಯಂತ ನಿಷ್ಠುರವಾಗಿ ಖಂಡಿಸಿದ್ದಾರೆ ದಾಸರು. ಅವರ ಉದರ ವೈರಾಗ್ಯವಿದು ಎಂಬ ರಚನೆ ಅದಕ್ಕೊಂದು ಉತ್ತಮ ನಿದರ್ಶನ.

**ಉದರ ವೈರಾಗ್ಯವಿದು ನಮ್ಮ**
**ಪದುಮನಾಭನಲಿ ಲೇಶ ಭಕುತಿಯಿಲ್ಲ ॥ಪ॥**

**ಉದಯಕಾಲದಲೆದ್ದು ಗಡಗಡ ನಡುಗುತ**
**ನದಿಯಲಿ ಮಿಂದೆನೆಂದು ಹಿಗ್ಗುತಲಿ**
**ಮದ ಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು**
**ಬದಿಯಲ್ಲಿದ್ದವರಿಗಾಶ್ಚರ್ಯ ತೋರುವುದು ॥೧॥**

**ಕಂಚುಗಾರನ ಅಂಗಡಿಯಂದದಿ**
**ಕಂಚು ಹಿತ್ತಾಳೆಯ ಪ್ರತಿಮೆಗಳ ನೆರಹಿ**
**ಮಿಂಚಬೇಕೆಂದು ಬಲು ಜ್ಯೋತಿಗಳನು ಹಚ್ಚಿ**
**ವಂಚನೆಯಿಂದಲಿ ಪೂಜೆ ಮಾಡುವುದು ॥೨॥**

**ಕರದಲಿ ಜಪಮಣಿ ಬಾಯಲಿ ಮಂತ್ರವು**
**ಅರಿವೆಯ ಮುಸುಕನು ಮೋರೆಗೆ ಹಾಕಿ**
**ಪರಸತಿಯರ ಗುಣ ಮನದಲಿ ಸ್ಮರಿಸುತ**
**ಪರಮ ವೈರಾಗ್ಯಶಾಲಿ ಎಂದೆನಿಸುವುದು ॥೩॥**

ಬೂಟಕತನದಲಿ ಬಹಳ ಭಕುತಿ ಮಾಡಿ
ದಿಟನೀತ ಸರಿಯಾರಿಲ್ಲೆನಿಸಿ
ನಾಟಕ ಸ್ತ್ರೀಯಂತೆ ಬಯಲ ಡಂಭವ ತೋರಿ
ಊಟದ ಮಾರ್ಗದ ಜ್ಞಾನವಿದಲ್ಲದೆ ॥೪॥

ನಾನು ಎಂಬುದ ಬಿಟ್ಟು ಜ್ಞಾನಿಗಳೊಡನಾಡಿ
ಏನಾದರು ಹರಿ ಪ್ರೇರಣೆಯೆಂದು
ಧ್ಯಾನಿಸಿ ಮೌನದಿ ಪುರಂದರವಿಠಲನ
ಕಾಣದೆ ಮಾಡಿದ ಕಾರ್ಯಗಳೆಲ್ಲವು ॥೫॥

ಈ ರಚನೆಯಲ್ಲಿ, ಬೂಟಾಟಿಕೆಯ ಭಕ್ತಿಯನ್ನು ಬಹಳ ಕಟುವಾಗಿ ಖಂಡಿಸಲಾಗಿದೆ. ಅದಕ್ಕೆ ದಾಸರು ಬಳಸಿರುವ ಉಪಮೆಗಳು ಬಹಳ ಪರಿಣಾಮಕಾರಿಯಾಗಿವೆ. ಪ್ರತಿಮೆಗಳನ್ನು ತಯಾರಿಸಿ, ಮಾರುವ ವ್ಯಾಪಾರಿಯು ಅದಕ್ಕೆ ಮೆರುಗು ನೀಡಿ, ದೀಪಾಲಂಕಾರಗಳ ಮೂಲಕ ದಾರಿಯಲ್ಲಿ ಹೋಗಿಬರುವ ಜನಗಳನ್ನು ತನ್ನತ್ತ ಸೆಳೆಯಲು ಇನ್ನಿಲ್ಲದ ಕಸರತ್ತು ನಡೆಸುವವನಂತೆ, ಭಕ್ತಿ ಇಲ್ಲದೆ ದೇವರ ವಿಗ್ರಹಗಳನ್ನಿರಿಸಿಕೊಂಡು ಪೂಜೆ ಮಾಡುವವನ ಶ್ರಮವೆಲ್ಲವೂ ವ್ಯರ್ಥ, ಅದು ಕೇವಲ ಹೊಟ್ಟೆಪಾಡಿಗಾಗಿ ನಡೆಸುವ ದೊಂಬರಾಟ, 'ಊಟದ ಮಾರ್ಗದ ಜ್ಞಾನವಿದಲ್ಲದೆ' ಅದೆಂದಿಗೂ ಭಗವಂತನಿಗೆ ಒಪ್ಪಿಗೆಯಾಗದು ಎನ್ನುತ್ತಾರೆ ದಾಸರು.

ಇಲ್ಲಿ ಬರುವ ನಾಟಕ ಸ್ತ್ರೀಯಂತೆ ಬಯಲ ಡಂಭವ ತೋರಿ ಎಂಬ ಪ್ರತಿಮೆಯು ಬಹಳ ವಿಶೇಷವಾಗಿದೆ. ಹಿಂದೆಲ್ಲ, ನಾಟಕಗಳಲ್ಲಿ ಪುರುಷನೇ ಸ್ತ್ರೀವೇಷವನ್ನು ಧರಿಸಿ, ಜನರನ್ನು ರಂಜಿಸುತ್ತಿದ್ದ ಕಾಲವನ್ನು ಇದು ನೆನಪಿಸುತ್ತದೆ. ಮನಸ್ಸಿನಲ್ಲಿ ಭಕ್ತಿಯ ಲವಲೇಶವಿಲ್ಲದೆ, ಇತರರನ್ನು ನಂಬಿಸಲು ತೋರುಗಾಣಿಕೆಯ ಭಕ್ತಿ ಪ್ರದರ್ಶನಕ್ಕೆ ಇದಕ್ಕಿಂತ ಉತ್ತಮ ಹೋಲಿಕೆ ಇರಲಾರದು.

**ನುಡಿದರೆ ಮುತ್ತಿನ ಹಾರ : ದಾಸರ ಹಾಡಿನ ಸಾರ:–**

ತಮಗೆ ಪ್ರಯೋಜನವಿರಲಿ, ಬಿಡಲಿ, ಸಂಬಂಧವಿಲ್ಲದ ವ್ಯಕ್ತಿ, ವಿಷಯಗಳಿಗೆ ಮೂಗು ತೂರಿಸುವುದು, ಕ್ಷುಲ್ಲಕ ಗಾಳಿಸುದ್ದಿ ಹರಡಿಸುವುದು ನಮ್ಮೆಲ್ಲರ ಅನುಭವಕ್ಕೆ ಬಂದೇ ಇರಬಹುದಾದ ಸಮಾಜದ ರೀತಿ. ಇದು ದಾಸರ ಚುರುಕುಗಣ್ಣಿಗೆ ಬೀಳದಿದ್ದೀತೆ? ಇಂಥಾ ಹೀನ ಪ್ರವೃತ್ತಿಯನ್ನು ಖಂಡಿಸುತ್ತಾ ದಾಸರು ಬೀಸುವ ಚಾಟಿಯೇಟು ಹೀಗಿದೆ:–

ಆಚಾರವಿಲ್ಲದ ನಾಲಿಗೆ ನಿನ್ನ
ನೀಚ ಬುದ್ಧಿಯ ಬಿಡು ನಾಲಿಗೆ ॥ಪ॥

ವಿಚಾರವಿಲ್ಲದೆ ಪರರ ದೂಷಿಸುವುದಕ್ಕೆ
ಚಾಚಿಕೊಂಡಿರುವಂಥ ನಾಲಿಗೆ ॥ ಅನು ॥

ಪ್ರಾತಃಕಾಲದೊಳೆದ್ದು ನಾಲಿಗೆ ಸಿರಿ-
ಪತಿಯೆನ್ನಬಾರದೆ ನಾಲಿಗೆ
ಪತಿತ ಪಾವನ ನಮ್ಮ ರತಿಪತಿ ಜನಕನ
ಸತತವು ನುಡಿ ಕಂಡ್ಯ ನಾಲಿಗೆ ॥೧॥

ಚಾಡಿ ಹೇಳಲಿಬೇಡ ನಾಲಿಗೆ ನಿನ್ನ
ಬೇಡಿಕೊಂಬುವೆನು ನಾಲಿಗೆ
ರೂಢಿಗೊಡೆಯ ಶ್ರೀರಾಮನ ನಾಮವ
ಪಾಡುತಲಿರು ಕಂಡ್ಯ ನಾಲಿಗೆ ॥೨॥

ಹರಿಯ ಸ್ಮರಣೆ ಮಾಡು ನಾಲಿಗೆ ನರ-
ಹರಿಯ ಭಜಿಸು ಕಂಡ್ಯ ನಾಲಿಗೆ
ವರದ ಪುರಂದರವಿಟ್ಠಲರಾಯನ
ಚರಣಕಮಲವ ನೆನೆ ನಾಲಿಗೆ ॥೩॥

ಮೂರಂಗುಲ ಉದ್ದದ ನಾಲಿಗೆ ಮೂರು ಲೋಕವನ್ನೇ ಕೆಡಿಸಿತು ಎಂಬ ಗಾದೆ ಮಾತೊಂದಿದೆ. ಅದರಂತೆ ಮಾತು ಮುತ್ತೂ ಹೌದು, ಮೃತ್ಯುವೂ ಹೌದು. ನಾಲಿಗೆಯನ್ನು ಹತೋಟಿಯಲ್ಲಿಟ್ಟುಕೊಂಡಿದ್ದೇ ಆದರೆ ಮುಂದಾಗುವ ಅನೇಕ ಅನಾಹುತಗಳನ್ನು ತಡೆಯಬಹುದೆಂಬುದು ನಿಜ. ಹಾಗಾಗಿ ಇಲ್ಲಿ ದಾಸರು ನಾಲಿಗೆಯನ್ನೇ ತಮ್ಮ ಗೀತೆಯ ವಸ್ತುವಾಗಿಸಿದ್ದಾರೆ. ನಾಲಿಗೆ ನಾವಾಡುವ ಮಾತಿನ ಮೂಲಸ್ಥಾನ. ಅದನ್ನು ಒಳ್ಳೆಯ ಮಾತುಗಳಾಡುವುದಕ್ಕೆ ಬಳಸದೆ, ಪರರನ್ನು ನಿಂದಿಸುವುದಕ್ಕೆ, ನೋಯಿಸುವುದಕ್ಕೆ ಬಳಸಬಾರದೆಂದು ದಾಸರು ಇಲ್ಲಿ ಬುದ್ಧಿ ಹೇಳಿದ್ದಾರೆ. ಅವರಿವರ ಬಗ್ಗೆ ಆಡಿಕೊಂಡು ಕಾಲಹರಣ ಮಾಡದೆ, ಸಾರ್ಥಕ ಬಾಳುವೆ ಸಾಗಿಸಬೇಕೆಂಬುದು ಇಲ್ಲಿ ದಾಸರು ಸಾರುವ ನೀತಿಯಾಗಿದೆ.

ನಾಗರಿಕ ಸಮಾಜದಲ್ಲಿ ಎಲ್ಲರೂ ಕಲೆತು ಬದುಕಲು ಕೆಲವು ನಿಯಮಗಳು, ಕಟ್ಟುಪಾಡುಗಳು ಅಗತ್ಯ. ಅದನ್ನು ಪಾಲಿಸಬೇಕಾದ್ದು ಎಲ್ಲರ ಕರ್ತವ್ಯ. ಕಿರಿಯರಿಗೆ ಆ ಬಗ್ಗೆ ಮಾರ್ಗದರ್ಶನ ಮಾಡುವುದು ಹಿರಿಯರ ಜವಾಬ್ದಾರಿಯೇ ಆಗಿದೆ. ದಾಸರು ಆ ಹೊಣೆಗಾರಿಕೆಯನ್ನು ಮರೆತಿಲ್ಲ. ಮದುವೆಯಾಗಿ ಹೋಗುತ್ತಿರುವ ಹೆಣ್ಣುಮಗಳಿಗೆ ತಾಯಿಯೊಬ್ಬಳು ಮೆಲುಮಾತಿನಲ್ಲಿ ತಿಳಿಹೇಳುವ ವಿಧಾನವನ್ನೇ ದಾಸರು ಆರಿಸಿಕೊಂಡಿದ್ದಾರೆ. ಬಾಲ್ಯವಿವಾಹಗಳು ಸಾಮಾನ್ಯವಾಗಿದ್ದ ಆ ಕಾಲದಲ್ಲಿ ಈ ಬಗೆಯಲ್ಲಿ

ಬುದ್ಧಿ ಹೇಳುವ ಸಂಪ್ರದಾಯವೇ ಇದ್ದಿರಬಹುದು. ಹಾಗಾಗಿ ದಾಸರು ತಮ್ಮ ನೀತಿ ಸಾರಲು ಈ ತಂತ್ರವನ್ನೇ ಬಳಸಿದ್ದಾರೆ.

ಈ ಪದ 'ಬುದ್ಧಿಮಾತು ಹೇಳಿದರೆ ಕೇಳಬೇಕಮ್ಮ, ಮಗಳೇ, ಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ' ಎಂದು ಪ್ರಾರಂಭವಾಗುತ್ತದೆ. ಶುದ್ಧಳಾಗಿ ಎಂಬುದು ಇಲ್ಲಿ ಮಹತ್ವದ ಪದವೆನ್ನಿಸುತ್ತದೆ. ಶುದ್ಧಿ ಎನ್ನುವುದು ಇಲ್ಲಿ ವಾಕ್ ಶುದ್ಧಿ, ಮನಶುದ್ಧಿ, ಶೀಲ ಶುದ್ಧಿಯ ಜೊತೆಗೆ ಮನೆಯನ್ನು ಸ್ವಚ್ಛವಾಗಿಟ್ಟುಕೊಳ್ಳುವತನಕ ಅನೇಕ ಅರ್ಥಗಳನ್ನೊಳಗೊಳ್ಳುತ್ತದೆ. ದಾಸರ ಪದಗಳಲ್ಲಿ ಶೀಲ ಪಾವಿತ್ರ್ಯವನ್ನು ಕಾಪಿಟ್ಟುಕೊಳ್ಳುವ ಹೊಣೆ ಬರೀ ಸ್ತ್ರೀಯರು ಹೊತ್ತು ನಿರ್ವಹಿಸಬೇಕಾದ್ದಲ್ಲ, ಅದು ಪುರುಷರು ಆಚರಿಸಬೇಕಾದ ವ್ರತವೂ ಹೌದು.

ತಾಯಿ ಮಗಳಿಗೆ ಸವಿ ನುಡಿಗಳಲ್ಲಿ ಹೀಗೆ ಕಿವಿಮಾತು ಹೇಳುತ್ತಾ ಹೋಗುತ್ತಾಳೆ. 'ನೆರೆಹೊರೆಯವರಿಗೆ ನ್ಯಾಯವನ್ನು ಹೇಳಬೇಡಮ್ಮ ಮಗಳೆ' ಎನ್ನುತ್ತಾಳೆ. 'ಗರುವ ಕೋಪ ಮತ್ಸರವನ್ನು ಮಾಡಬೇಡಮ್ಮ' ಎಂದು ಮಗಳಿಗೆ ಕಿವಿಮಾತು ಹೇಳುತ್ತಾಳೆ, 'ಪರರ ನಿಂದಿಪ ಹೆಂಗಳೊಡನೆ ಸೇರಬೇಡಮ್ಮ ಮಗಳೆ', ಕೊಟ್ಟು ಕೊಂಬುವ ನಂಟರೊಡನೆ ದ್ವೇಷ ಬೇಡಮ್ಮ ಎಂದು ಹಿತವಚನ ನುಡಿಯುತ್ತಾಳೆ. ಒಟ್ಟಿನಲ್ಲಿ, 'ಹತ್ತು ಮಂದಿ ಒಪ್ಪುವ ಹಾಗೆ ನುಡಿಯಬೇಕಮ್ಮಾ!' ಎನ್ನುತ್ತಾ ಉತ್ತಮ ಸಂಸಾರಿ, ಉತ್ತಮ ಪ್ರಜೆ ಹೇಗಾಗಬೇಕೆಂದು, ತಾಯಿ ಮಗಳಿಗೆ ದಾರಿ ತೋರುತ್ತಿದ್ದಾಳೆ.

ಈ ನೀತಿ ತಾಯಿ ತನ್ನ ಮಗಳಿಗೆ ಹೇಳಿರುವಂತೆ ತೋರಿದರೂ, ಇದು ಸಮಾಜದ ಸರ್ವರಿಗೂ ಅನ್ವಯವಾಗುವ ಸದ್ವಿವೇಕವೂ ಹೌದು. ವ್ಯಕ್ತಿ, ವ್ಯಕ್ತಿ ಸೇರಿ ಸಮಾಜ, ರಾಜ್ಯ, ರಾಷ್ಟ್ರವಾಗುವುದರಿಂದ, ವಿಕಸನದ ಕಾರ್ಯ ವೈಯಕ್ತಿಕ ನೆಲೆಯಿಂದಲೇ ಪ್ರಾರಂಭವಾಗಬೇಕಾಗುತ್ತದೆ.

### ಜೀವನ ಪ್ರೀತಿ: ದಾಸರ ನೀತಿ

ಪುರಂದರದಾಸರು ಧಾರ್ಮಿಕ ಮೌಲ್ಯಗಳಿಗೆ ಹೆಚ್ಚಿನ ಒತ್ತು ಕೊಟ್ಟಿದ್ದರೂ ಅವರಲ್ಲಿದ್ದ ಹಾಸ್ಯ ಪ್ರಜ್ಞೆ, ಜೀವನಪ್ರೀತಿ ಅಗಾಧ. ಬದುಕು ತಂದೊಡ್ಡುವ ಎಲ್ಲಾ ಸವಾಲುಗಳನ್ನು ಎದುರಿಸಿ, ಈಸಬೇಕು, ಇದ್ದು ಜೈಸಬೇಕು ಎಂದು ಹೆದರಿ ಹಿಂದೇಟು ಹೊಡೆಯುವ ಜೀವಗಳನ್ನು ಮುನ್ನುಗ್ಗಲು ಪ್ರೇರೇಪಿಸಿದರು. ಸಂಸಾರದ ಸಂಕಷ್ಟಗಳ ಸರಮಾಲೆಗೆ ಅಂಜಿ ಪಲಾಯನವಾದಿಯಾಗುವುದಕ್ಕೆ ದಾಸರ ವಿರೋಧವಿದೆ. ಸನ್ಯಾಸಕ್ಕಿಂತ ಸಂಸಾರ ಜೀವನ ಮೇಲೆನ್ನುತ್ತಾರೆ ಅವರು. ಸಂಸಾರವೆಂಬಂಥ ಸೌಭಾಗ್ಯವಿರಲಿ ಎಂಬುದು ದಾಸರ ಅಭಿಮತ. ಮಾತಿಲ್ಲದ ಮೂಕಪ್ರಾಣಿಗಳ ಜನ್ಮಕ್ಕಿಂತ ಯೋಚಿಸಬಲ್ಲ, ಉತ್ತಮ

ವಿಚಾರಗಳನ್ನು ಚಿಂತಿಸಬಲ್ಲ ಸಾಮರ್ಥ್ಯವಿರುವ ಮನುಷ್ಯ ಜನ್ಮ ದೊರಕಿರುವುದೇ ಒಂದು ಭಾಗ್ಯ. ಈ ಸುಂದರ ಬದುಕನ್ನು ಸವಿಯುತ್ತಾ ಸಾರ್ಥಕವಾಗಿ ಬದುಕಬೇಕಲ್ಲದೆ ಅದನ್ನು ವ್ಯರ್ಥವಾಗಿಸಬಾರದೆಂದು ದಾಸರ ಕಳಕಳಿ. ಅವರ ಈ ಪದ ಸರ್ವಕಾಲಕ್ಕೂ ಸತ್ಯವೆನ್ನಿಸುವಂಥದು. ದುರ್ಲಭವಾದ ಮಾನವ ಜನ್ಮವನ್ನು ಸದುಪಯೋಗ ಪಡಿಸಿಕೊಳ್ಳಬೇಕೆಂಬ ನೀತಿ ಇದರಲ್ಲಿ ಅಡಕವಾಗಿದೆ.

ಬದುಕಿನಲ್ಲಿ ಎಲ್ಲಾ ಸುಖ, ಸೌಲಭ್ಯಗಳಿದ್ದೂ ಸಣ್ಣಪುಟ್ಟ ಕೊರತೆಗಳನ್ನು ಭರಿಸಲಾಗದೆ, ನಿರಾಶೆಯಿಂದ ನರಳುವವರನ್ನು ಕುರಿತೇ ಹೇಳಿದಂತಿದೆ ಈ ಗೀತೆ. ದೊರೆತಿರುವ ಅಪೂರ್ವ ಅವಕಾಶವನ್ನು ಉಪಯೋಗಿಸಿಕೊಳ್ಳದೆ ಖಿನ್ನತೆಗೊಳಗಾಗು-ವವರು, ಆತ್ಮಹತ್ಯೆಗೆ ಮನಸ್ಸು ಮಾಡುವ ಜನ ಅದೆಷ್ಟಿಲ್ಲ! ಅಂಥವರಿಗೆ ಆಪ್ತ ಸಲಹೆ ಕೊಡುವಾಗ ಇದನ್ನು ಬಳಸಿಕೊಳ್ಳಬಹುದಾದಷ್ಟು ಪ್ರೇರಣಾದಾಯಕವಾಗಿದೆ ಈ ಪದ: ಮನಃಶಾಸ್ತ್ರದ ಸಿದ್ಧಾಂತದಂತೆ ರಾಗಬದ್ಧವಾದ, ಲಯಬದ್ಧವಾದ ಮಾತು ಬೇಗ ಮನದಾಳಕ್ಕಿಳಿಯುವುದಲ್ಲದೆ, ಸುಲಭದಲ್ಲಿ ನೆನಪಿನಲ್ಲುಳಿದು ಜ್ಞಾಪಿಸಿಕೊಂಡಾಗ ಒದಗಿ ಬರುತ್ತದೆ. '(ದಾಸಸಾಹಿತ್ಯದಲ್ಲಿ ಆತ್ಮೋನ್ನತಿ, ಸಮಾಜೋನ್ನತಿ, ಪುಟ ೨೨೪, ಲೇ. ಡಾ. ಎ. ಮಾಧವ ಉಡುಪ)

ಮಾನವ ಜನ್ಮ ದೊಡ್ಡದು ಇದ
ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ ॥ಪ॥

ಕಣ್ಣು ಕೈ ಕಾಲ್ಕಿವಿ ನಾಲಗೆ ಇರಲಿಕ್ಕೆ
ಮಣ್ಣುಮುಕ್ಕಿ ಮರುಳಾಗುವರೆ
ಹೊನ್ನು ಹೆಣ್ಣಿಗಾಗಿ ಹರಿಯ ನಾಮಾಮೃತ
ಉಣ್ಣದೆ ಉಪವಾಸ ಇರುವರೆ ಖೋಡಿ ॥೧॥

ಕಾಲನದೂತರು ಬಂದು ಕರಪಿಡಿದೆಳೆದಾಗ
ತಾಳು ತಾಳೆಂದರೆ ಕೇಳುವರೆ?
ವೇಳೆ ಹೋಗದ ಮುನ್ನ ಧರ್ಮವ ಗಳಿಸಿರೊ
ಸುಳ್ಳಿನ ಸಂಸಾರ ಸುಳಿಗೆ ಸಿಲುಕಬೇಡಿ ॥೨॥

ಏನು ಕಾರಣ ಯದುಪತಿಯನ್ನು ಮರೆತಿರಿ
ಧನ ಧಾನ್ಯ ಸತಿ ಸುತರಿವು ನಿತ್ಯವೆ?
ಇನ್ನಾದರು ಶ್ರೀ ಪುರಂದರವಿಠಲನ
ಚೆನ್ನಾಗಿ ಭಜಿಸಿ ನೀವು ಸುಖಿಯಾಗಿರಯ್ಯ ॥೩॥

**ಬೇಡ ಕಂದಾಚಾರ : ಇರಲಿ ಸದ್ವಿಚಾರ**

ದಾಸರು ಕಂದಾಚಾರವನ್ನು ತಿರಸ್ಕರಿಸಿದರು. ಯಾರೋ ಮಾಡಿದರೆಂದು ಅದನ್ನು ಅನುಕರಿಸುವ ಕುರುಡು ಮನೋಭಾವವೂ ದಾಸರ ಟೀಕೆಗೆ ಗುರಿಯಾಯಿತು. ಮಾಡುವ ಆಚರಣೆಗೆ ಅರ್ಥವಿರಬೇಕಲ್ಲದೆ ಅಂಧಾನುಕರಣೆ ಸಲ್ಲದು ಎನ್ನುವುದು ಅವರ ಅಭಿಮತ.

ಮಡಿ ಎಂದರೆ ಸ್ವಚ್ಛತೆ, ಶುದ್ಧಿ ಎಂಬ ಅರ್ಥ ಬರುವ ಪದ. ಆದರೆ ಕಾಲಕ್ರಮೇಣ ಈ ಮೂಲ ಪದದ ಅರ್ಥವೇ ಮರೆಯಾಗಿ, ತೋರಿಕೆಯ ಆಡಂಬರ, ನಿನಗಿಂತ ನಾ ಮೇಲು ಎಂಬ ಭಾವನೆ ವಿಜೃಂಭಿಸಲು ತೊಡಗಿತು. ಇದನ್ನು ಗಮನಿಸಿದ ಪುರಂದರದಾಸರು ಮಡಿ ಎಂದರೇನು? ಎಂದು ಸೊಗಸಾದ ವ್ಯಾಖ್ಯೆಯನ್ನು ಕೊಡುತ್ತಾರೆ. 'ಮಡಿಮಡಿಮಡಿಯೆಂದು ಅಡಿಗಡಿಗೆ ಹಾರುವಿ, ಮಡಿ ಮಾಡುವ ಬಗೆ ಬೇರುಂಟು' ಎನ್ನುತ್ತಾರೆ.

**ಏನದು?**

**ಮಡಿ ಮಡಿ ಮಡಿಯೆಂದಡಿಗಡಿಗ್ಹಾರುತಿ**
**ಮಡಿ ಮಾಡುವ ಬಗೆ ಬೇರುಂಟು**
**ಪೊಡವಿ ಪಾಲಕನ ಪಾದಧ್ಯಾನವನು**
**ಬಿಡದೆ ಮಾಡುವುದು ಅದು ಮಡಿಯು ॥**

**ಬಟ್ಟೆಯ ನೀರೊಳಗದ್ದಿ ಒಣಗಿಸಿ**
**ಉಟ್ಟುಕೊಂಡರೆ ಅದು ಮಡಿಯಲ್ಲ**
**ಹೊಟ್ಟೆಯೊಳಗೆ ಕಾಮಕ್ರೋಧವ**
**ಬಿಟ್ಟು ನಡೆದರೆ ಅದು ಮಡಿಯು ॥**

ಇದು ದಾಸರು ಪ್ರಮಾಣಿಸಿದ ಮಡಿ. ಬಹಿರಂಗ ಶುದ್ಧಿಯೂ ಬೇಕು. ಆದರೆ ಅದು ತೋರಿಕೆ ಅಬ್ಬರವಾಗದಂತೆ ಎಚ್ಚರಿಕೆಯಿಂದಿರಲು ದಾಸರ ಹಿತನುಡಿಯ ಅಗತ್ಯವಿದೆ. ಆಂತರ್ಯದ ಕೊಳಕು ಕಳೆದುಕೊಳ್ಳುವುದೇ ನಿಜವಾದ ಮಡಿ ಎಂಬ ಭಾವ ಈ ಪದದಲ್ಲಿ ವ್ಯಕ್ತವಾಗಿದೆ.

ದೇವರ ಧ್ಯಾನಕ್ಕೆ ಭಕ್ತಿ ತುಂಬಿದ ಮನಸ್ಸೊಂದಿದ್ದರೆ ಸಾಕು. ದೇವರ ಸೇವೆಗಾಗಿ ವ್ರತ, ನಿಯಮ, ಉಪವಾಸವೆಂದು ಬಳಲಿ ಬೆಂಡಾಗುವುದು ಬೇಡ. ಮನೆ, ಮಡದಿ, ಸಂಸಾರವನ್ನು ಬಿಟ್ಟು ಕಾಡು ಸೇರಿ ಕೃಶನಾಗಬೇಕಿಲ್ಲ, ಯಾವುದೇ ಪರಿಶ್ರಮವಿಲ್ಲದೆ ಭಗವಂತನನ್ನು ಆರಾಧಿಸುವ ಉಪಾಯವನ್ನು ದಾಸರು ಹೇಳಿಕೊಟ್ಟಿದ್ದಾರೆ. 'ಸುಲಭಪೂಜೆಯ ಮಾಡಿ ಬಲವಿಲ್ಲದವರು' ಎಂಬ ಗೀತೆಯ ಮೂಲಕ ಅವರು ಪ್ರತಿಪಾದಿಸುವ ಸುಲಭ ಪೂಜೆಯ ಪರಿ ಬಹಳ ಚೆನ್ನ.

ಇರುಳು ಹಚ್ಚುವ ದೀಪ ಹರಿಗೆ ನೀರಾಜನವು
ಮರೆ ಮಾಡುವ ವಸ್ತ್ರ ಪರಮ ಮಡಿಯು ।
ತಿರುಗಾಡಿ ದಣಿಯುವುದೆ ಹರಿಗೆ ಪ್ರದಕ್ಷಿಣೆಯು
ಹೊರಳಿ ಮಲಗುವುದೆಲ್ಲ ಹರಿಗೆ ವಂದನೆಯು ॥

ನುಡಿವ ಮಾತುಗಳೆಲ್ಲ ಕಡಲಶಯನನ ಜಪವು
ಮಡದಿ ಮಕ್ಕಳು ಮತ್ತೆ ಒಡನೆ ಪರಿವಾರ ।
ನಡುಮನೆ–ಅಂಗಳವು ಉಡುಪಿ–ವೈಕುಂಠಗಳು
ಎಡಬಲದ ಮನೆಯವರು ಕಡು ಭಾಗವತರು ॥

ಪುರಂದರದಾಸರ ಮತ್ತಿತರ ಪ್ರಸಿದ್ಧ ರಚನೆಗಳಲ್ಲಿಯೂ ಇಂತಹ ಸಾಮಾಜಿಕ ಮೌಲ್ಯಗಳ ಪ್ರಸ್ತಾಪವಿದೆ. ಸತ್ಯವೆಂಬುದೇ ಸ್ನಾನ, ಉಪವಾಸ, ಜಪ, ನೇಮ ಅಸತ್ಯದಲೆ ಮಾಡುವ ಕರ್ಮ ವ್ಯರ್ಥ. ಪದದಲ್ಲಿ ತೋರಿಕೆಗಾಗಿ ಮಾಡುವ ವ್ರತ–ನಿಯಮಗಳಿಗಿಂತ ಉತ್ತಮ ನಡೆ–ನುಡಿಗಳೇ ಸರ್ವಕಾಲಕ್ಕೂ ಸಲ್ಲುವ ಮೌಲ್ಯವೆಂದು ಪ್ರತಿಪಾದಿಸಿದ್ದಾರೆ. ವಾಕ್ ಶುದ್ಧಿ, ನುಡಿದಂತೆ ನಡೆಯುವ ಸತ್ಯಪರ ನಡತೆಗಳನ್ನು ಪ್ರತಿಪಾದಿಸುತ್ತಾರೆ.

'ಅಪ್ಪಳಿಸಿ ಪರರ ಒಡವೆಗಳ ತಂದುಂಡು ತಾ–
ನೊಪ್ಪದಿಂದುಪವಾಸ ವ್ರತವ ಮಾಡಿ
ತಪ್ಪದಲೆ ಸ್ವರ್ಗವನು ಸೂರೆಗೊಂಬುವನೆಂಬೆ
ಸರ್ಪಗಳು ಮಾಡಿದ ಅಪರಾಧವೇನಯ್ಯ?'

–ಎಂದು ಪ್ರಶ್ನಿಸುತ್ತಾರೆ. ಇದೇ ರೀತಿ 'ಧರ್ಮವೇ ಜಯವೆಂಬ ದಿವ್ಯ ಮಂತ್ರ, ಮರ್ಮವನರಿತು ಮಾಡಲಿ ಬೇಕು ತಂತ್ರ' ಎಂದು ನಮಗೆ ಅಪಕಾರ ಮಾಡುವವರಿಗೂ ಕೆಡುಕು ಬಯಸಬಾರದೆನ್ನುವ ಉನ್ನತ ಆದರ್ಶವನ್ನು ಎತ್ತಿಹಿಡಿದ್ದಾರೆ. 'ವಿಷವಿಕ್ಕಿದವರಿಗೆ ಷಡ್ರಸವನುಣಿಸಲುಬೇಕು, ಮೋಸಮಾಡಿದವನ ಹೆಸರ ಮಗನಿಗಿಡಬೇಕು.' ಎಂಬುವಲ್ಲಿಗೆ, ಮಾನವನೊಬ್ಬ ಸಾಧಿಸಬೇಕಾದ ನಿರ್ವಿಕಾರ ಚಿತ್ತದ ಪರಮಗುರಿ ಯಾವುದೆಂದು ದಾಸರು ತೋರಿಸಿಕೊಡುತ್ತಿದ್ದಾರೆ.

*

## ಕನಕದಾಸರ ಪದಗಳಲ್ಲಿ ಸಾಮಾಜಿಕ ಚಿಂತನೆ

ಕನಕದಾಸರ ಸೇರ್ಪಡೆಯಿಂದಾಗಿ ದಾಸಸಾಹಿತ್ಯವು ಸಮಾನತೆಯ ವಿಶಾಲ ಆವರಣವನ್ನು ತನ್ನದಾಗಿಸಿಕೊಳ್ಳಲು ಅವಕಾಶವಾಯಿತು. ದೇವರೆದುರಿನಲ್ಲಿ ಎಲ್ಲರೂ ಸಮಾನರು ಎಂಬ ದಾಸಸಾಹಿತ್ಯದ ತತ್ವ ಪ್ರಾಯೋಗಿಕವಾಗಿಯೂ ಯಶಸ್ವಿಯಾಗಿದ್ದು ಹೀಗೆ. ಇದರಿಂದಾಗಿ, ದಾಸ ಸಾಹಿತ್ಯವು ಸಮಾಜದ ನಿರ್ದಿಷ್ಟ ವರ್ಗದ ವಶವಾಗಿ,

ಸಂಕುಚಿತವಾಗುವ ಅಪಾಯವೂ ನಿವಾರಣೆಯಾಯಿತು. ಕನಕ ನಾಯಕನು ಭಕ್ತ ಕನಕದಾಸನಾಗಿ, ಅಲ್ಪತೆಯಿಂದ ಮಹತ್ತಿನೆಡೆಗೆ ಸಾಗಿದ ಇತಿಹಾಸ, ಇಂದು ನೆನೆದರೂ ಬೆರಗು ಹುಟ್ಟಿಸುವ, ಮನಸ್ಸನ್ನು ಮತ್ತೆಮತ್ತೆ ಪುಳಕಿತಗೊಳಿಸುವ ಘಟನೆ. ಬಾಗಿಲನು ತೆರೆದು ಸೇವೆಯನು ಕೊಡೊ ಎಂದು ಬೇಡಿದ ಭಕ್ತನ ಮುಂದೆ ದೇವರೇ ಬಂದು ಶರಣಾದ ಅದ್ಭುತ ಪವಾಡ!

ವ್ಯಾಸರಾಯರಿಂದ ದಾಸದೀಕ್ಷೆ ಪಡೆದ ಕನಕದಾಸರು ಹರಿದಾಸ ಪಂಥಕ್ಕೆ ಬದ್ಧರಾಗಿ, ಹರಿ ಸರ್ವೋತ್ತಮತ್ವವನ್ನು ಸಾರುವ ಗೀತೆಗಳನ್ನು ರಚಿಸುವುದರೊಂದಿಗೆ ತಮ್ಮ ಹಾಡುಗಳ ಮೂಲಕ ಸಮಾನತೆಯ ಸಂದೇಶವನ್ನು ಬೀರುವ ಪ್ರಯತ್ನ ಮಾಡಿದರು. ಸುತ್ತಲಿನ ಪರಿಸರದಲ್ಲಿ ಕಂಡುಬಂದ ಜಾತಿ ತಾರತಮ್ಯ, ಮೂಢನಂಬಿಕೆ, ಪ್ರಾಣಿ ಬಲಿಗಳನ್ನು ಸ್ಪಷ್ಟ ನುಡಿಗಳಲ್ಲಿ ಖಂಡಿಸಿದರು. ಧಾರ್ಮಿಕ ಮುಖವಾಡ ತೊಟ್ಟು ಸಮಾಜ ಕಂಟಕ ಕೆಲಸದಲ್ಲಿ ತೊಡಗುವ ಧರ್ಮಗುರುಗಳ ಬಗ್ಗೆಯೂ ಕಟು ವಿಮರ್ಶೆ ಕಂಡುಬರುತ್ತದೆ.

ಕನಕದಾಸರು ಜಾತಿ ತಾರತಮ್ಯವನ್ನು ಕಣ್ಣಾರೆ ಕಂಡಿದ್ದಲ್ಲದೆ, ತಾವೇ ಅದನ್ನು ಅನುಭವಿಸಿಯೂ ಇದ್ದುದ್ದರಿಂದ ಅವರ ಪದಗಳಲ್ಲಿ ಆ ಬಗೆಗಿನ ಚಿಂತನೆಗಳು ಪ್ರಖರವಾಗಿವೆ.

**ಆತ್ಮ ಯಾವ ಕುಲ ಜೀವ ಯಾವ ಕುಲ**
**ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ**
**ಆತ್ಮಾಂತರಾತ್ಮ ನೆಲೆಯಾದಿಕೇಶವ**
**ಆತನೊಲಿದ ಮೇಲೆ ಯಾತರ ಕುಲವಯ್ಯಾ?**

–ಎಂದು ತಾವೇ ಉನ್ನತರೆಂದು ಬೀಗುವ, ಭ್ರಮಿಸುವ ಮೇಲುವರ್ಗದ ಜನರನ್ನು ಪ್ರಶ್ನಿಸುವ ಎದೆಗಾರಿಕೆ ತೋರಿದ್ದಾರೆ.

**ಕೆಸರೊಳು ತಾವರೆ ಪುಟ್ಟಲು ಅದ ತಂದು**
**ಬಿಸಜನಾಭನಿಗರ್ಪಿಸಲಿಲ್ಲವೆ**
**ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು**
**ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ?**

–ಎಂದು ಪ್ರಶ್ನಿಸಿದ ಕನಕರು, ಕುಲದ ಹೆಮ್ಮೆ ಎನ್ನುವುದು ಅರ್ಥವಿಲ್ಲದ್ದು, ಉತ್ತಮ ಗುಣಕ್ಕೆ ಜಾತಿ ಭೇದವಿಲ್ಲ. ಸದ್ಗುಣವು ಎಲ್ಲೇ ಇದ್ದರೂ ಸ್ವೀಕರಿಸಲು ಅರ್ಹವಾದುದು, ಸಜ್ಜನ ಯಾವುದೇ ಜಾತಿಯಲ್ಲಿದ್ದರೂ ಗೌರವಕ್ಕೆ ಅರ್ಹ ಎಂದು ಸಾರಿದರು.

ತಾವರೆಯು ಕೆಸರಿನಲ್ಲಿ ಜನ್ಮ ತಾಳಿದರೂ, ಅದರ ನಿರ್ಮಲ ಸೌಂದರ್ಯದಿಂದ ಭಗವಂತನ ಪೂಜೆಗೆ ಉಪಯುಕ್ತವಾಗುವಂತೆ ಸದ್ಗುಣಗಳು ಯಾರಲ್ಲಿದ್ದರೂ,

ಜಾತಿಭೇದವಿಲ್ಲದೆ ಗುರುತಿಸಲ್ಪಡಬೇಕು ಎಂಬ ಆಶಯ ಅವರ ಗೀತೆಗಳಲ್ಲಿ ಕಂಡು ಬರುತ್ತದೆ. ಕನಕದಾಸರು ಇಂದು ಪುರಂದರದಾಸರೇ ಮೊದಲಾದ ಇತರ ದಾಸರಷ್ಟೇ ಪ್ರಮುಖ ಸ್ಥಾನವನ್ನು ಕನ್ನಡ ಸಾಹಿತ್ಯದಲ್ಲಿ ಸ್ಥಾನ ಪಡೆದಿರುವುದು ಅವರ ಆಶಯ ಈಡೇರಿರುವುದಕ್ಕೆ ಸಾಕ್ಷಿಯಾಗಿದೆ.

ಕನಕದಾಸರಿಂದ ರಚಿತವಾದ ಈ ಗೀತೆಯನ್ನು ಕೇಳದ ಕನ್ನಡಿಗರಿರಲಾರರು. ನಟಸಾರ್ವಭೌಮ ಡಾ. ರಾಜಕುಮಾರ್ ಅಭಿನಯಿಸಿದ್ದ ಭಕ್ತ ಕನಕದಾಸ ಚಿತ್ರದಲ್ಲಿ ಡಾ. ಪಿ. ಬಿ ಶ್ರೀನಿವಾಸ್ ಅವರು ಹಾಡುವ ಮೂಲಕ ಈ ಗೀತೆಯು ಬಹಳ ಜನಪ್ರಿಯವಾಯಿತು.

**ಕುಲಕುಲವೆಂದು ಹೊಡೆದಾಡದಿರಿ ನಿಮ್ಮ ।**
**ಕುಲದ ನೆಲೆಯನೇನಾದರೂ ಬಲ್ಲಿರಾ ॥**

**ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ ।**
**ಅಟ್ಟು ಉಣ್ಣದ ವಸ್ತುಗಳಿಲ್ಲ ॥**
**ಹುಟ್ಟು ಕಾಣಿಸಬಂದು ಹಿರಿದೇನು ಕಿರಿದೇನು ।**
**ನೆಟ್ಟನೆ ಸರ್ವಜ್ಞನ ನೆನೆಕಂಡ್ಯ ಮನುಜಾ ।**

**ಜಲವೇ ಸಕಲ ಕುಲಕ್ಕೆ ತಾಯಲ್ಲವೆ ।**
**ಜಲದ ಕುಲವನೇನಾದರೂ ಬಲ್ಲಿರಾ ॥**
**ಜಲದ ಬೊಬ್ಬುಳಿಯಂತೆ ಸ್ಥಿರವಿಲ್ಲವೀ ದೇಹ ।**
**ನೆಲೆಯರಿತು ನೀ ನೆನೆಕಂಡ್ಯ ಮನುಜಾ ॥**

**ಹರಿಯೇ ಸರ್ವೋತ್ತಮ ಹರಿಯೇ ಸರ್ವೇಶ್ವರ ।**
**ಹರಿಮಯವೆಲ್ಲವೆನುತ ತಿಳಿದು ॥**
**ಸಿರಿಕಾಗಿನೆಲೆಯಾದಿ ಕೇಶವರಾಯನ ।**
**ಚರಣಕಮಲವ ಕೀರ್ತಿಸುವನೆ ಕುಲಜ ॥**

ಜನರಲ್ಲಿ ಕಲಹಕ್ಕೆ, ಮನಸ್ತಾಪಕ್ಕೆ, ಮೇಲು-ಕೀಳೆಂಬ ತಾರತಮ್ಯಕ್ಕೆ ಕಾರಣವಾಗಿರುವ ಕುಲದ ಬಗ್ಗೆ ಸುಂದರವಾದ ವ್ಯಾಖ್ಯಾನ ನೀಡುತ್ತಾರೆ ಕನಕದಾಸರು. ಹಿಂದೆ ನೂರೆಂಟು ಜನ್ಮಗಳಲ್ಲಿ ಹುಟ್ಟಿ ಬಂದು ಈಗ ನಾವೇ ಮೇಲುಜಾತಿ ಎಂದು ಹುಸಿಗರ್ವ ತಾಳುತ್ತಿರುವ ಜಾತ್ಯಂಧರಿಗೆ 'ನಿಮ್ಮ ಕುಲದ ನೆಲೆಯೇನಾದರು ಬಲ್ಲಿರಾ?' ಎಂದು ಪ್ರಶ್ನಿಸುತ್ತಾರೆ. ಮನು ಕುಲದ ಹುಟ್ಟಿಗೆ ನೀರೇ ಮೂಲ, ಅಲ್ಲಿಂದ ಎಲ್ಲಾ ಜೀವಜಾಲಗಳ ವಿಕಸನವಾಯಿತು ಎಂಬ ವೈಜ್ಞಾನಿಕ ಸತ್ಯವನ್ನು ಈ ಗೀತೆಯಲ್ಲಿ ಎತ್ತಿ ಹಿಡಿಯುತ್ತಾರೆ. 'ಜಲವೇ ಸಕಲ ಕುಲಕ್ಕೆ ತಾಯಲ್ಲವೆ, ಜಲದ ಕುಲವನೇನಾದರೂ ಬಲ್ಲಿರಾ? –

ಎಂದು ನಾವು ತಿಳಿಯದೆ ಇರುವ ವಿಷಯಗಳ ಬಗ್ಗೆ ಮನುಷ್ಯ ವಿನೀತವಾಗಿ ಈ ಕ್ಷಣಿಕ ಬಾಳುವೆಯನ್ನು ಸತ್ ಚಿಂತನೆಗಳಿಂದ ಪರಿಪೂರ್ಣಗೊಳಿಸಬೇಕೆನ್ನುತ್ತಾರೆ.

ಸಮಾಜದ ಹುಳುಕುಗಳಿಗೆ ಕನ್ನಡಿ ಹಿಡಿಯುತ್ತಾ, ತಮಗೆ ತಪ್ಪು ಎಂದು ಕಂಡಿದ್ದನ್ನು ಒರೆಗೆ ಹಚ್ಚುತ್ತಾ ಹೋಗುವ ಕನಕದಾಸರ ನುಡಿಗಳಲ್ಲಿ ನೇರವಂತಿಕೆ ಎದ್ದುಕಾಣುತ್ತದೆ. ತಮ್ಮ ನಿಲುವಿನ ಬಗ್ಗೆ ಅವರಲ್ಲಿ ದ್ವಂದ್ವವಿಲ್ಲ. ಆಷಾಢಭೂತಿ ವ್ಯಕ್ತಿತ್ವ ಅವರದಲ್ಲ. ಈ ಕೆಳಕಂಡ ಪದವನ್ನು ಗಮನಿಸಿ. ಇದರಲ್ಲಿ ಕನಕದಾಸರು ಸಮಾಜದ ಎಲ್ಲಾ ಧರ್ಮದಲ್ಲಿರುವ ಪೊಳ್ಳುತನಗಳ ಬಗ್ಗೆಯೂ ನಿರ್ಭಯವಾಗಿ ಬೊಟ್ಟು ಮಾಡಿ ತೋರಿಸಿದ್ದಾರೆ. ಖೋಟ ಧಾರ್ಮಿಕರ ಡಂಭಾಚಾರದಿಂದ ಅವರ ಮನಸ್ಸಿಗಾಗಿರುವ ನೋವು ಈ ಸಾಲುಗಳಲ್ಲಿ ಎದ್ದು ಕಾಣುತ್ತದೆ. ಈ ರೀತಿಯ ನಿಷ್ಪಕ್ಷಪಾತ ಧೋರಣೆ ಸಮಾಜ ಸುಧಾರಕರಲ್ಲಿ ಇರಲೇಬೇಕಾಗುತ್ತದೆ. ಇದು ಇಂದಿನ ಕಾಲದ ಸಾಹಿತಿ, ಸುಧಾರಕರಲ್ಲೂ ಕಾಣಸಿಗದ ಬಲು ಅಪರೂಪದ ಗುಣ.

ಅದಕ್ಕೆ ಉದಾಹರಣೆಯೆಂಬಂತೆ ತೋರುವ ಈ ಕೆಳಗಿನ ಪದವನ್ನು ಗಮನಿಸಿ.

**ತೀರ್ಥಪಿಡಿದವರೆಲ್ಲ ತಿರುನಾಮಧಾರಿಗಳೇ**
**ಜನ್ಮಸಾರ್ಥಕವಿಲ್ಲದವರೆಲ್ಲ ಭಾಗವತರೇ?**

**ಮೂಗ್ಹಿಡಿದು ನೀರೊಳಗೆ ಮುಳುಗಿ ಜಪತಪ ಮಾಡಿ**
**ಭಾಗವತ ಶಾಸ್ತ್ರಾದಿಗಳನೆಲ್ಲ ತಿಳಿದು**
**ಬಾಗಿ ಪರಸತಿಯರನು ಬಯಸಿ ಕಣ್ಣಿಡುವಂಥ**
**ಯೋಗಭ್ರಷ್ಟರು ಎಲ್ಲ ದೇವಬ್ರಾಹ್ಮಣರೆ?**

ನಾಮ, ಗಂಧ, ತಿಲಕ ಧರಿಸಿ ಶ್ರೇಷ್ಠ ಬ್ರಾಹ್ಮಣರೆಂದು ಗರ್ವಪಡುವವರನ್ನು ಕಟುವಾಗಿ ಚುಚ್ಚಿದ ಕನಕದಾಸರ ನಿಷ್ಪಕ್ಷಪಾತೀ ಕಣ್ಣುಗಳಿಗೆ ಇತರ ಧರ್ಮದಲ್ಲಿರುವ ಲೋಪ–ದೋಷಗಳು ಕಾಣದಿದ್ದೀತೇ?

**ಅಲ್ಲಾ ಖುದಾ ಎಂಬ ಅರ್ಥವನು ತಿಳಿಯದೆಯೆ**
**ಮುಲ್ಲಶಾಸ್ತ್ರದ ನೆಲೆಯ ಮುನ್ನರಿಯದೆ**
**ಪೊಳ್ಳು ಕೂಗನು ಕೂಗಿ ಬಗುಳಿ ಬಾಯಾರುವಂಥ**
**ಕಳ್ಳಸುಳ್ಳರಿಗೆಲ್ಲ ವೀರಸ್ವರ್ಗವುಂಟೆ?**

**ವೇಷಭಾಷೆಯ ಕಲಿತು ಗೋಸಾಯಿ ಉಡೆದೊಟ್ಟು**
**ಆಸೆಯನು ತೊರೆಯದೆಯೆ ತಪಕೆ ಕುಳಿತು**
**ವಾಸನೆಯ ಗುರುತಿನ ಹೊಲಬನರಿಯದ ಇಂಥ**
**ವೇಷಧಾರಿಗಳೆಲ್ಲ ಸಂನ್ಯಾಸಿಗಳು ಅಹುದೇ?**

ಮಾಡುವ ಕ್ರಿಯೆಯ ಅರ್ಥ ತಿಳಿಯದೆ ಆಚರಿಸುವ ಸಂಪ್ರದಾಯವನ್ನು ಕನಕದಾಸರು ವಿರೋಧಿಸಿದ್ದಾರೆ. ಶ್ರಾದ್ಧ ಕಾರ್ಯದ ಮಹತ್ವ ತಿಳಿಯದೆ ಅದನ್ನು ಆಚರಿಸುವ ಬಗ್ಗೆ ಕನಕದಾಸರ ಚಿಂತನೆ ಈ ಪದದಲ್ಲಿದೆ. ಇದರಲ್ಲಿ ಕಂಡುಬರುವ ಅವರ ಪ್ರಖರ ವೈಚಾರಿಕ ಮನೋಭಾವ ಆಶ್ಚರ್ಯ ಉಂಟುಮಾಡುತ್ತದೆ. ಈ ಆಧುನಿಕ ಯುಗದಲ್ಲೂ ಯಾರೊಬ್ಬರೂ ಈ ಬಗ್ಗೆ ತಮ್ಮ ಮುಕ್ತ ಅನಿಸಿಕೆ ವ್ಯಕ್ತಪಡಿಸಲು ಅಂಜುವಂಥ ಪರಿಸ್ಥಿತಿ ಇರುವಾಗ, ಆ ಕಾಲದಲ್ಲಿ ದಾಸರಿಗಿದ್ದ ವೈಚಾರಿಕ ಸ್ವಾತಂತ್ರ್ಯ ಅಚ್ಚರಿ ಹುಟ್ಟಿಸುತ್ತದೆ.

ಅರ್ಥ ತಿಳಿಯದೆ ಆಚರಿಸುವ ಅಂಧಾನುಕರಣೆಗಳ ಬಗೆಗಿನ ದಾಸರ ಚಿಕಿತ್ಸಕ ಮನೋಭಾವ ಈ ಕೆಳಕಂಡ ಪದದಲ್ಲಿ ಸ್ಫುಟವಾಗಿ ಕಂಡುಬರುತ್ತದೆ:-

ಸತ್ತವನು ಎತ್ತ ಪೋದ
ಸತ್ತು ತನ್ನ ಜನ್ಮಕೆ ಪೋದ ।
ಸತ್ತವನು ಉಣ್ಣುವನೆಂದು
ನಿತ್ಯ ಪಿಂಡುವಿಕ್ಕುತೀರಿ ॥

ಎಳ್ಳು ದರ್ಭೆ ಕೈಲಿ ಹಿಡಿದು
ಪಿತರ ತೃಪ್ತಿ ಪಡಿಸುತೀರಿ ।
ಎಳ್ಳು ಮೀನು ನುಂಗಿ ಹೋಯಿತು
ದರ್ಭೆ ನೀರೊಳು ಹರಿದು ಹೋಯಿತು ॥

ಎಡಕೆ ಒಂದು ಬಲಕೆ ಒಂದು
ಎಡಕೆ ತೋರಿಸಿ ಬಲಕೆ ತೋರಿಸಿ
ಕಡು ಧಾವಂತಪಡಿಸಿ
ಕಟಿಯ ಹಸ್ತದೊಳಗೆ ಪಿಡಿಸುತೀರಿ ॥

ಮಂತ್ರಾಕ್ಷತೆಯ ಕೈಗೆ ಕೊಟ್ಟು
ಮೋಕ್ಷವನು ಹಾರಯಿಸುವಿರಿ
ಮಂತ್ರವೆಲ್ಲೊ ಅಕ್ಷತೆಯೆಲ್ಲೊ
ಮೋಕ್ಷವೆಲ್ಲೊ ಮರ್ತ್ಯವೆಲ್ಲೊ ॥

ಹೇಳುವವನು ಅವಿವೇಕಿ
ಕೇಳುವವನು ಅಜ್ಞಾನಿ ।
ಹೇಳುವ ಕೇಳುವ ಇಬ್ಬರ ಸೊಲ್ಲ
ಆದಿಕೇಶವ ಮೂರ್ತಿ ಬಲ್ಲ ॥

ಸ್ವಂತ ವಿಚಾರಶಕ್ತಿ ಇಲ್ಲದೆ, ಯುಕ್ತಾಯುಕ್ತ ವಿವೇಕವಿಲ್ಲದೆ ಆಚರಿಸುವ ಸಂಪ್ರದಾಯಗಳಿಗೆ ಕನಕದಾಸರ ವಿರೋಧವಿದೆ. ಮೃತರ ಆದರ್ಶಗಳನ್ನು ಪಾಲಿಸುವ ಮೂಲಕ ಅವರನ್ನು ಸ್ಮರಿಸುವ ಕೆಲಸವಾಗಬೇಕೇ ಹೊರತು ಆಡಂಬರದ ಆಚರಣೆಯಿಂದ ಗತಿಸಿದವರಿಗೆ ಮುಕ್ತಿಯಾಗದು ಎಂಬ ಇಂಗಿತ ಇಲ್ಲಿದೆ. ಹೇಳುವವನು ಅವಿವೇಕಿ, ಕೇಳುವವನು ಅಜ್ಞಾನಿ ಎಂಬ ಮಾತು ಮುಗ್ಧ ಜನರನ್ನು ನಂಬಿಸಿ, ವಂಚಿಸುವವರ ಬಗ್ಗೆ ನೀಡಿರುವ ಎಚ್ಚರಿಕೆಯಂತಿದೆ.

'ಅಪುತ್ರಸ್ಯ ಗತಿರ್ನಾಸ್ತಿ' ಎಂಬುದು ಸಮಾಜದಲ್ಲಿ ಹಾಸುಹೊಕ್ಕಾಗಿರುವ ಮೂಢನಂಬಿಕೆ. ಇದು ಗಂಡುಮಗುವನ್ನು ಹೆರದ ಹೆಣ್ಣಿನ ಕಣ್ಣೀರಿಗೂ ಕಾರಣವಾಗಿರುವುದು ನಿಜ. ಆದರೆ, ಈ ಅಭಿಪ್ರಾಯದಲ್ಲಿ ಯಾವುದೇ ಹುರುಳಿಲ್ಲವೆಂಬುದು ಕನಕದಾಸರ ಅಭಿಮತ. ಇಂದಿಗೂ ಬೇರೂರಿರುವ ಈ ನಂಬಿಕೆಯನ್ನು ದಾಸರು ಅಂದೇ ಖಂಡಿಸಿರುವುದನ್ನು ನೋಡಿದರೆ ಅವರ ದೂರದರ್ಶಿತ್ವ ಮೆಚ್ಚುಗೆ ಮೂಡಿಸುತ್ತದೆ. 'ಮಗನಿಂದ ಗತಿಯುಂಟೆ ಜಗದೊಳಗೆ, ನಿಗಮಾರ್ಥಸಾರ ವಿಚಾರದಿಂದಲ್ಲದೆ' ಎಂದು ಪ್ರಶ್ನಿಸುವ ದಾಸರು ಮೊದಲ ಸಾಲಿನಲ್ಲಿಯೇ 'ಗಂಡು ಮಗನಿಂದಲೇ ಮೋಕ್ಷ ಸಾಧನೆ!' ಎಂಬ ಮೌಢ್ಯದ ಬುಡಕ್ಕೆ ಕೊಡಲಿಯೇಟು ಬೀಸುತ್ತಾರೆ. 'ಸುತರಿಲ್ಲದವರಿಗೆ ಗತಿಯಿಲ್ಲವೆಂಬುದು ಕೃತಕಶಾಸ್ತ್ರ' ಎನ್ನುತ್ತಾರೆ.

**ಮಗನಿಂದ ಗತಿಯುಂಟೆ ಜಗದೊಳಗೆ**
**ನಿಗಮಾರ್ಥಸಾರ ವಿಚಾರದಿಂದಲ್ಲದೆ**

**ತ್ರಿಗುಣರಹಿತ ಪರಮಾತ್ಮನ ಧ್ಯಾನದಿ**
**ಹಗಲಿರುಳಲಿ ನಿತ್ಯಾನಂದದಿ**
**ತೆಗೆದು ಪ್ರಪಂಚವಾಸನೆಯ ಬಿಟ್ಟವರಿಗೆ**
**ಮಗನಿದ್ದರೇನು ಇಲ್ಲದೇ ಹೋದರೇನು?**

**ಲಲನೆಯರು ಪುರುಷರು ತಂತಮ್ಮ ಕಾಮದ**
**ಸಲುವಾಗಿ ಕೂಡಲು ಶುಕ್ಲಶೋಣಿತದಿ**
**ಮಿಳಿತ ಮಾನಿಸಪಿಂಡ ಪೂರ್ವಕರ್ಮದಿಂದ**
**ನೆಲಕೆ ಬೀಳಲು ಅದು ಸಲಹಿ ರಕ್ಷಿಪುದೇ**

**ಸತ್ಯನೊಬ್ಬ ಪುತ್ರ ಶಾಂತನೊಬ್ಬ**
**ದುರ್ವೃತ್ತಿ ನಿಗ್ರಹನೊಬ್ಬ ಸಮಚಿತ್ತನೊಬ್ಬ**
**ಉತ್ತಮ ನಾಲ್ವರು ಮಕ್ಕಳಿದ್ದ ಮೇಲೆ**
**ಹೆತ್ತರೆ ಫಲವೇನು ಹೆರದಿದ್ದರೇನಯ್ಯ**

**ಸುತರಿಲ್ಲದವರಿಗೆ ಗತಿಯಿಲ್ಲವೆಂಬುದು**
**ಕೃತಕಶಾಸ್ತ್ರವು ಲೌಕಿಕಭಾವಕೆ**
**ಕ್ಷಿತಿಯೊಳು ಬಾಡದ ಆದಿಕೇಶವ ಜಗ**
**ತ್ಪತಿಯ ಧ್ಯಾನಿಪಗೆ ಸದ್ಗತಿಯಿರದೇ ಹೋಹುದೇ?**

ಕನಕದಾಸರು ಈ ಪದದ ಮೂಲಕ ಸಮಾಜಕ್ಕೆ ಎಂತಹ ಅದ್ಭುತವಾದ ಸಂದೇಶ ನೀಡಿದ್ದಾರಲ್ಲವೇ? ಗಂಡು-ಹೆಣ್ಣಿನ ಸಂಯೋಗದಿಂದ ಫಲವಾಗಿ ಜನಿಸುವ ಮಗುವೊಂದು ಹೆತ್ತವರಿಗೆ ಸದ್ಗತಿ ದೊರಕಿಸಬಲ್ಲದೇ? ಮನುಷ್ಯ ತನ್ನಲ್ಲಿ ಅಂತರ್ಗತವಾಗಿಸಿಕೊಳ್ಳುವ ಸತ್ಯ, ಶಾಂತಿ, ಸಮಚಿತ್ತ, ಸದಾಚಾರಗಳೇ ಅವನ ಉದ್ಧಾರಕ್ಕೆ ಕಾರಣವಾಗುವುದರಿಂದ, ಆ ಮಾರ್ಗದಲ್ಲಿ ಸಾಗುವುದೇ ಬಾಳಿನ ಅಂತಿಮ ಗುರಿಯಾಗಬೇಕು ಎಂದು ಈ ಮೂಲಕ ಸಾರಿದ್ದಾರೆ. ಕುರುಡು ನಂಬಿಕೆಯತ್ತ ವಾಲುವ ಸಮಾಜಕ್ಕೆ ವಿವೇಕದ ಮಾರ್ಗವನ್ನು ತೋರಿಸಿಕೊಟ್ಟಿದ್ದಾರೆ.

**ಉಪಸಂಹಾರ:**

ಹರಿದಾಸ ಸಾಹಿತ್ಯ ಪ್ರಾರಂಭವಾಗಿದ್ದು ಮುಖ್ಯವಾಗಿ ಹರಿಭಕ್ತಿ ಪ್ರಚಾರಕ್ಕಾದರೂ, ಅದರ ಉಪವಿಭಾಗವಾಗಿ ಸಾಮಾಜಿಕ ಸುಧಾರಣೆಯನ್ನೂ ತನ್ನೊಳಗೆ ಸೇರಿಸಿಕೊಂಡಿತು. ಗಾಯನದೊಂದಿಗೆ ಭಕ್ತಿ, ನೀತಿ ಪ್ರಸಾರವೂ ಜೊತೆಜೊತೆಯಾಗಿ ಹರಿದು ಜನಮನಗಳಲ್ಲಿ ಶಾಶ್ವತ ಸ್ಥಾನವನ್ನು ಸಂಪಾದಿಸಿಕೊಂಡಿತು.

ಕನಕ-ಪುರಂದರರ ನಂತರ ಬಂದ ಇತರ ದಾಸರುಗಳು ಇವರದೇ ಮಾದರಿಯನ್ನನುಸರಿಸಿ, ಸಮಾಜ ಸರಿದಾರಿಯಲ್ಲಿ ಸಾಗಲು ತಮ್ಮದೇ ಮಾರ್ಗದಿಂದ ನೀತಿಬೋಧನೆಗೆ ತೊಡಗಿದರು. ಭಕ್ತಿಪಂಥ ಜನರನ್ನು ಮುಕ್ತಿ ಮಾರ್ಗದತ್ತ ಸಾಗುವ ದಾರಿ ತೋರಿಸಿದ್ದಲ್ಲದೆ, ಸನ್ಮಾರ್ಗದಲ್ಲಿ ಸಾಗುತ್ತಾ ಸತ್ಪ್ರಜೆಗಳನ್ನಾಗಿಸಲು ಸಹಕಾರಿಯಾಯಿತು. ಭಕ್ತಿ ಮಾರ್ಗ ಜನರ ಹೃದಯವನ್ನು ಗೆಲ್ಲುವ ಚಳುವಳಿಯಾಗಲು ಅದು ಒಳಗೊಂಡ ಇಂಥಾ ಸುಧಾರಣಾ ನಿಲುವುಗಳೂ ಕಾರಣವಾಯಿತು. ತನ್ನದೇ ಇತಿಮಿತಿಗಳ ನಡುವೆಯೂ ದಾಸಸಾಹಿತ್ಯವು, ಭಕ್ತಿಯೇ ಮುಕ್ತಿಗೆ ಸೋಪಾನ ಎಂಬ ಬೋಧನೆಯ ಜೊತೆಗೆ ಸಮಾಜದ ಅಂತಃಶಕ್ತಿ ಪ್ರಖರವಾಗಿ ಹೊಮ್ಮಲು ನೆರವಾಯಿತು.

■

# ಯಕ್ಷಗಾನ ಸಾಹಿತ್ಯದಲ್ಲಿ ಭಕ್ತಿ

–ಶಂಕರ ಹೆಗಡೆ

**ಕ**ರ್ನಾಟಕದ ಭಕ್ತಿ-ಆಂದೋಲನದಲ್ಲಿ ಯಕ್ಷಗಾನ ಸಾಹಿತ್ಯದ ಸ್ಥಾನ ಮತ್ತು ಕೊಡುಗೆಗಳನ್ನು ವಿವರಿಸುವದೇ ಈ ಲೇಖನದ ಉದ್ದೇಶ. ಯಕ್ಷಗಾನವು ಒಂದು ಸಂಕೀರ್ಣ ಕಲೆ. ಯಕ್ಷಗಾನ ಕಲೆಯಲ್ಲಿ ಲಿಖಿತ ಸಾಹಿತ್ಯದ ಜೊತೆಗೆ ತನ್ನದೇ ಆದ ವಿಶಿಷ್ಟ ಶೈಲಿಯ ಸಂಗೀತವಿದೆ, ನೃತ್ಯವೂ ಇದೆ, ಅಭಿನಯವೂ ಇದೆ. ಈ ಎಲ್ಲ ಆಂಶಗಳು ಹದವಾಗಿ ಕೂಡಿದಾಗಲೇ ಯಕ್ಷಗಾನದಲ್ಲಿ ಭಕ್ತಿಯ ಪರಿಪೂರ್ಣ ಅಭಿವ್ಯಕ್ತಿಯಾಗುತ್ತದೆ. ಯಕ್ಷಗಾನ ಎಂಬ ಹೆಸರು ಸಂದರ್ಭಕ್ಕನುಗುಣವಾಗಿ, ಯಕ್ಷಗಾನ ಕಲೆಯ ವಿಭಿನ್ನ ಅಂಗಗಳಾದ ಸಾಹಿತ್ಯಿಕ ಶೈಲಿ, ಲಿಖಿತ ಸಾಹಿತ್ಯ, ಗಾನಪದ್ಧತಿ, ತಾಳಮದ್ದಲೆ, ಮತ್ತು ರಂಗಪ್ರದರ್ಶನವನ್ನು ಸೂಚಿಸುತ್ತದೆ. ಆದ್ದರಿಂದ ಯಕ್ಷಗಾನ ಸಾಹಿತ್ಯವನ್ನು ಇತರ ಅಂಗಗಳ ಒಟ್ಟಿಗೆ ನೋಡಬೇಕೇ ಹೊರತು ಪ್ರತ್ಯೇಕಿಸಿ ಚರ್ಚಿಸುವಂತಿಲ್ಲ. ಈ ದೃಷ್ಟಿಯಿಂದ ಈ ಲೇಖನವನ್ನು ಮೂರು ಭಾಗಗಳಲ್ಲಿ ಪ್ರಸ್ತುತಪಡಿಸಲಾಗಿದೆ. ಮೊದಲ ಭಾಗದಲ್ಲಿ ಯಕ್ಷಗಾನ ಕಲೆಯ ಅಂಗಗಳನ್ನು ಉಳಿದೆರಡು ಭಾಗಗಳಿಗೆ ಪೂರಕವಾಗುವಂತೆ ಪರಿಚಯಿಸಿದೆ. ಎರಡನೆಯ ಭಾಗವನ್ನು ಹಲವು ಪ್ರಾತಿನಿಧಿಕ ಯಕ್ಷಗಾನ ಪ್ರಸಂಗಗಳಲ್ಲಿ ಅಭಿವ್ಯಕ್ತವಾಗಿರುವ ಭಕ್ತಿ–ಸನ್ನಿವೇಶಗಳ ಉದಾಹರಣೆಗಳಿಗೆ ಮೀಸಲಾಗಿದೆ. ಕರ್ನಾಟಕದ ಭಕ್ತಿ ಪರಂಪರೆಯ ಉಗಮ ಮತ್ತು ಬೆಳವಣಿಗೆಯಲ್ಲಿ ಯಕ್ಷಗಾನ ಕಲೆಯು ಹೇಗೆ ಹಾಸು–ಹೊಕ್ಕಾಗಿ ಬೆರೆತುಕೊಂಡಿದೆ ಎಂಬುದನ್ನು ಮೂರನೆಯ ಭಾಗದಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

## ಯಕ್ಷಗಾನ ರಂಗಭೂಮಿ ಮತ್ತು ಸಾಹಿತ್ಯ

ಯಕ್ಷಗಾನ ಸಾಹಿತ್ಯವೆಂದರೆ ಕವಿಗಳು ಬರೆದ "ಯಕ್ಷಗಾನ ಪ್ರಸಂಗ"ಗಳೆಂದು ಕರೆಯುವ ಗ್ರಂಥಗಳು. ಇವು ಯಕ್ಷಗಾನ ಸಂಗೀತ ಪದ್ಧತಿಯ ರಾಗ, ತಾಳಗಳನ್ನು ಬಳಸಿ ತನ್ನದೇ ಆದ ವಿಶಿಷ್ಟ ಶೈಲಿಯಲ್ಲಿ ಗೀತ ನಾಟಕಗಳ ರೂಪದಲ್ಲಿ ಬರೆದ ಪದ್ಯಗಳ ಸಂಗ್ರಹ. ಪ್ರಸಂಗವೊಂದರಲ್ಲಿ ಸುಮಾರು ಇನ್ನೂರರಿಂದ ನಾನೂರರ ತನಕ

ಪದ್ಯಗಳಿರುತ್ತವೆ. ಪ್ರಸಂಗಗಳಲ್ಲಿ ನಾಟಕೀಯತೆ ಇದ್ದರೂ, ಅವುಗಳ ನಿರೂಪಣೆಯ ಶೈಲಿ ಲೇಖಕನು ಶ್ರೋತೃಗಳಿಗೆ ಹೇಳುವ ಕಥೆಯಂತಿರುತ್ತದೆ. ಯಕ್ಷಗಾನ ಪದ್ಯಗಳೆಲ್ಲವನ್ನು ಹಳೆಗನ್ನಡದ ಛಂದಸ್ಸುಗಳನ್ನು ಉಪಯೋಗಿಸಿ ಹೆಣೆಯಲಾಗಿವೆ. ಇಡೀ ಪ್ರಸಂಗವೊಂದನ್ನು ಒಂದೇ ಛಂದಸ್ಸಿನಲ್ಲಿ ಬರೆದಿರಬೇಕೆಂದಿಲ್ಲ. ಪ್ರಸಂಗವೊಂದರಲ್ಲಿ ದ್ವಿಪದಿ, ಚೌಪದಿ, ಕಂದ, ಸಾಂಗತ್ಯ ಹಾಗೂ ಭಾಮಿನಿ ಮತ್ತು ವಾರ್ಧಿಕ ಷಟ್ಪದಿಗಳು ಎಲ್ಲವನ್ನೂ ಕಾಣಬಹುದು. ಪ್ರತಿ ಪದ್ಯದ ಪ್ರಾರಂಭದಲ್ಲಿ ಅದರ ಛಂದಸ್ಸು, ರಾಗ, ತಾಳಗಳನ್ನು ಉಲ್ಲೇಖಿಸುವ ಪದ್ಧತಿಯಿದೆ. ಕಥೆಯ ವಸ್ತುಗಳು ಮುಖ್ಯವಾಗಿ ವಿವಿಧ ರಾಮಾಯಣ, ಮಹಾಭಾರತಗಳು, ಅಥವಾ ಲಕ್ಷ್ಮೀಶನ ಜೈಮಿನಿ ಭಾರತದಿಂದ ಆಯ್ದುಕೊಂಡ ಸನ್ನಿವೇಶಗಳು. ಪ್ರಧಾನ ಪುರಾಣಗಳಾದ ಭಾಗವತ, ಪದ್ಮ, ಮತ್ತು ಸ್ಕಂದ ಪುರಾಣಗಳಿಂದ ಆಯ್ದ ಧಾರ್ಮಿಕ ಕಥೆಗಳನ್ನು ಆಧರಿಸಿ ಬರೆದ ಹಲವು ಪ್ರಸಂಗಗಳೂ ಇವೆ. ಕಳೆದ ಐವತ್ತು ವರ್ಷಗಳಿಂದೀಚೆಗೆ ಸಾಮಾಜಿಕ ಸನ್ನಿವೇಶ, ಕ್ಷೇತ್ರ ಮಹಾತ್ಮೆ, ಬಸವಣ್ಣನವರಂತಹ ಮಹಾತ್ಮರ ಜೀವನ ಇತ್ಯಾದಿ ವಿಷಯಗಳನ್ನಾಧರಿಸಿ ಅನೇಕ ಪ್ರಸಂಗಗಳು ಬಂದಿವೆ. ಒಂದೇ ಕಥೆಯನ್ನು ಎರಡು–ಮೂರು ಪ್ರಸಂಗಕಾರರು ತಮ್ಮದೇ ಆದ ಶೈಲಿಯಲ್ಲಿ ಬರೆದ ಸಾಕಷ್ಟು ಉದಾಹರಣೆಗಳೂ ಇವೆ.

ಯಕ್ಷಗಾನ ಸಾಹಿತ್ಯ ವಿಪುಲವಾಗಿದೆ. ಯಕ್ಷಗಾನ ಶೈಲಿಯ ಸಾಹಿತ್ಯ ರಚನೆ ಹದಿನೈದನೆ ಶತಮಾನದ ಸುಮಾರಿಗೆ ಪ್ರಾರಂಭವಾಗಿ ಇಂದಿನವರೆಗೂ ಅವ್ಯಾಹತವಾಗಿ ನಡೆದುಬಂದಿದೆ. ಯಕ್ಷಗಾನ ಕವಿಗಳಲ್ಲದೆ, ಕನ್ನಡ ಸಾಹಿತ್ಯಲೋಕಕ್ಕೆ ಚಿರಪರಿಚಿತರಾದ ಪುರಂದರದಾಸರು ಮತ್ತು ಮುದ್ದಣ ಅವರು ಕೂಡ ಪ್ರಸಿದ್ಧ ಪ್ರಸಂಗಗಳನ್ನು ಬರೆದಿದ್ದಾರೆ. ಪ್ರಕಟಿತ ಮತ್ತ ಅಪ್ರಕಟಿತ ಯಕ್ಷಗಾನ ಪ್ರಸಂಗಗಳ ಒಟ್ಟೂ ಸಂಖ್ಯೆ ಎರಡು ಸಾವಿರಕ್ಕೂ ಮಿಕ್ಕಿದೆಯೆಂದು ಅಂದಾಜು ಮಾಡಲಾಗಿದೆ. "ಯಕ್ಷಗಾನ" ಅಂತರ್ಜಾಲ ಪುಟದಲ್ಲಿ ಪ್ರಕಟಿಸಿದ ಯಾದಿಯಲ್ಲಿ (http://www.yakshagana.com/DIRVOL1.HTM) ೧೫೦೦ಕ್ಕೂ ಹೆಚ್ಚು ಪ್ರಸಂಗಗಳ ಹೆಸರುಗಳಿವೆ. ಸಮೃದ್ಧ ಯಕ್ಷಗಾನ ಸಾಹಿತ್ಯವನ್ನು ಕ್ರೋಡೀಕರಿಸಿ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು, ಯಕ್ಷಗಾನ ಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಮ್ಮಿಕೊಂಡಿದೆ. ಈ ಯೋಜನೆಯ ಅಡಿಯಲ್ಲಿ ಕರ್ನಾಟಕ ಸರ್ಕಾರದ ಜ್ಞಾನ ಆಯೋಗವು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಮತ್ತು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳ ಸಹಕಾರದೊಂದಿಗೆ ಸ್ಥಾಪಿಸಿದ ಅಂತರ್ಜಾಲ ಕನ್ನಡ ಜ್ಞಾನಕೋಶ "ಕಣಜ" (http://www.kanaja.in) ದಲ್ಲಿ ಸುಮಾರು ಒಂದು ನೂರು ಯಕ್ಷಗಾನ ಪ್ರಸಂಗಗಳನ್ನು ವಿದ್ವಾಂಸರ ಮೂಲಕ ಸಂಪಾದಿಸಿ, ವಿಸ್ತಾರವಾದ ಪ್ರಸ್ತಾವನೆಗಳೊಂದಿಗೆ ಈಗಾಗಲೇ ಪ್ರಕಟಿಸಲಾಗಿದೆ.

ಯಕ್ಷಗಾನದ ಜೀವಾಳ ರಂಗಪ್ರದರ್ಶನ. ಯಕ್ಷಗಾನ ಆಟಗಳು ಸಾಹಿತ್ಯ, ಸಂಗೀತ, ವರ್ಣ-ರಂಜಿತ ವೇಷ-ಭೂಷಣ, ನೃತ್ಯ, ಅಭಿನಯ, ಆಶುಸಂಭಾಷಣೆ ಎಲ್ಲವನ್ನೂ ಒಳಗೊಂಡು ಪ್ರೇಕ್ಷಕರನ್ನು ಸಂಪೂರ್ಣ ತಲ್ಲೀನಗೊಳಿಸುತ್ತವೆ. ಹೊಸದಾಗಿ ನೋಡುವವರಿಗೆ ಇದೊಂದು ಸಂಗೀತ-ನಾಟಕವಾಗಿ ಕಂಡರೂ, ಯಕ್ಷಗಾನ ರಂಗಪ್ರದರ್ಶನಕ್ಕೆ "ನಾಟಕ" ಶಬ್ದವನ್ನು ಎಂದೂ ಉಪಯೋಗಿಸುವುದಿಲ್ಲ. ಈ ಸಂಕೀರ್ಣ ಕಲೆಗೆ ಅದು ಸಮಂಜಸವೂ ಅಲ್ಲ. ಸುಮಾರು ೧೯೬೦ರ ದಶಕದವರೆಗೂ ಯಕ್ಷಗಾನ ಪ್ರದರ್ಶನಗಳು ಬೇಸಿಗೆಯಲ್ಲಿ ಊರಿನ ಬಯಲುಗಳಲ್ಲಿ ತಾತ್ಕಾಲಿಕ ರಂಗಸ್ಥಳ ನಿರ್ಮಿಸಿ ರಾತ್ರಿಯಿಡೀ ಆಡುವ ಬಯಲಾಟಗಳಾಗಿದ್ದವು. ಕಳೆದ ಐವತ್ತು ವರ್ಷಗಳಿಂದೀಚೆಗೆ ಯಕ್ಷಗಾನ ಆಟಗಳು ಸೀಮಿತ ಅವಧಿಯ ಪ್ರದರ್ಶನಗಳಾಗಿ ಬದಲಾಗುತ್ತಿದ್ದರೂ ಕೆಲವು ಮೂಲಭೂತ ದೈವಿಕ ಅಂಶಗಳನ್ನು ರಕ್ಷಿಸಿಕೊಳ್ಳಲಾಗಿದೆ. ಬಯಲಾಟ ಎಂಬ ಹೆಸರು ಕೂಡ ಅಲ್ಲಲ್ಲಿ ಸ್ವಲ್ಪ ಬಳಕೆಯಲ್ಲಿದೆ.

ಯಕ್ಷಗಾನ ಪ್ರದರ್ಶನಗಳು ಧಾರ್ಮಿಕ ಕಾರ್ಯಗಳಂತೆ ಯಾವಾಗಲೂ ವಿಘ್ನೇಶ್ವರನ ಪೂಜೆಯಿಂದಲೇ ಪ್ರಾರಂಭವಾಗುತ್ತದೆ. ರಂಗಸ್ಥಳದ ಮೇಲೆ ಭಾಗವತರು ಹಾಡುವ ಮೊದಲ ಪದ್ಯ ಗಣೇಶ ಸ್ತುತಿ. ಇದಾದ ಮೇಲೆ ಇತರ ದೇವತಾಸ್ತುತಿಗಳು. ಪ್ರಸಂಗಕರ್ತನ ಇಷ್ಟದೇವತೆಯ ಪ್ರಾರ್ಥನೆ ಕೂಡ ಇರಬಹುದು. ಅಂದಿನ ಪ್ರದರ್ಶನದ ಕಥೆ ಯಾವುದೆಂದು ಪ್ರಸಂಗಕರ್ತ ಹೇಳುವ ಪದ್ಯದ ನಂತರವೇ ಪ್ರಸಂಗದ ಕಥೆ ಆರಂಭವಾಗುತ್ತದೆ. ರಾತ್ರಿಯಿಡೀ ನಡೆಯುತ್ತಿದ್ದ ಯಕ್ಷಗಾನ ಬಯಲಾಟದ ದಿನಗಳಲ್ಲಿ, ವಿಸ್ತಾರವಾದ ಪ್ರಸ್ತಾವನೆಯ ದೃಶ್ಯಗಳಿರುತ್ತಿದ್ದವು. ಬಲರಾಮ-ಕೃಷ್ಣರಾಗಿ ಬಾಲ ವೇಷಗಳು, ಅಂದಿನ ಪ್ರಸಂಗ ಕುರಿತು ವಿದೂಷಕ-ಭಾಗವತರ ಹಾಸ್ಯಮಯ ಸಂಭಾಷಣೆ, ಸ್ತ್ರೀ ವೇಷಗಳು, ಕೊನೆಯದಾಗಿ ಮುಖ್ಯ ಪಾತ್ರಧಾರಿಗಳ ಒಡ್ಡೋಲಗಗಳ ನಂತರವೇ ಮುಖ್ಯ ಕಥೆ ಪ್ರಾರಂಭವಾಗುತ್ತಿತ್ತು.

ಯಕ್ಷಗಾನ ಪ್ರದರ್ಶನಕ್ಕೆ ಭಾಗವತರೇ ನಿರ್ದೇಶಕರು. ಅವರಿಗೆ ಮೊದಲ ವೇಷಧಾರಿ ಎಂದೇ ಹೆಸರು. ಅನುಭವಸ್ಥ ಭಾಗವತರಿಗೆ ೧೦-೧೫ ಪ್ರಸಂಗಗಳಾದರೂ ಬಾಯಿಪಾಠವಾಗಿರುತ್ತವೆ. ಪುಸ್ತಕ ನೋಡಬೇಕಾಗಿಲ್ಲ. ಭಾಗವತರು ತಾಳ ಹಾಕುತ್ತ, ಮದ್ದಲೆ, ಚಂಡೆಗಳ ಪಕ್ಕ-ವಾದ್ಯಗಳೊಂದಿಗೆ ಸನ್ನಿವೇಶಕ್ಕೆ ತಕ್ಕ ರಾಗ-ಭಾವಗಳಿಂದ ಪದ್ಯವೊಂದನ್ನು ಹಾಡುತ್ತಿದ್ದಂತೆ, ವೇಷಧಾರಿಗಳು ನೃತ್ಯದೊಂದಿಗೆ ರಂಗಸ್ಥಳದ ಮೇಲೆ ಅಭಿನಯಿಸುತ್ತಾರೆ. ಶೃಂಗಾರ, ರೌದ್ರ, ವೀರ, ಹಾಸ್ಯ, ಅದ್ಭುತ, ಕರುಣಾ ಇತ್ಯಾದಿ ನವರಸಗಳ ಅಭಿವ್ಯಕ್ತಿ ಯಕ್ಷಗಾನ ಅಭಿನಯದ ಪ್ರಮುಖ ಅಂಶ. ಯಕ್ಷಗಾನ ಕಲೆಗೆ ತನ್ನದೇ ಆದ ವಿಶಿಷ್ಟತೆಯುಳ್ಳ ಶಾಸ್ತ್ರೀಯ ಸಂಗೀತದ ಶೈಲಿ ಮತ್ತು ನೃತ್ಯ ಪದ್ಧತಿಯಿದೆ. ರಂಗಸ್ಥಳದ ಮೇಲೆ ಇತರ ವೇಷಧಾರಿಗಳು ಇದ್ದರೂ ಯುದ್ಧದ ಸನ್ನಿವೇಶಗಳನ್ನು

ಬಿಟ್ಟರೆ, ಏಕ ಕಾಲದಲ್ಲಿ ಒಬ್ಬರೇ ನೃತ್ಯ ಮಾಡುತ್ತಾರೆ. ಹಿರಿಯ ವೇಷಧಾರಿಗಳು ಕೆಲವೊಮ್ಮೆ ಭಾಗವತರ ಜೊತೆ ಮಧ್ಯ-ಮಧ್ಯದಲ್ಲಿ ಹಾಡುವದೂ ಉಂಟು. ಪದ್ಯದ ಕೊನೆಯಲ್ಲಿ, ವೇಷಧಾರಿಗಳು ಪದ್ಯವನ್ನು ಆಧರಿಸಿ ಆಶು-ಸಂಭಾಷಣೆ ಅಥವಾ ವಾಚಿಕಾಭಿನಯವನ್ನು ಪ್ರಾರಂಭಿಸುತ್ತಾರೆ. ಇದಕ್ಕೆ ಅರ್ಥ ಹೇಳುವುದು ಎಂದು ಕರೆಯುತ್ತಾರೆ. ಇಲ್ಲಿ ಭಾಗವತರ ಜೊತೆಗೆ ಸಂಭಾಷಿಸುವುದು ಕೂಡಾ ಇದ್ದು, ಇದೊಂದು ಯಕ್ಷಗಾನದ ವೈಶಿಷ್ಟ್ಯವಾಗಿರುತ್ತದೆ. ಬಳಸುವ ಭಾಷೆ ಶುದ್ಧ ಕನ್ನಡ, ಮಾತನಾಡುವ ಶೈಲಿ ಯಕ್ಷಗಾನಕ್ಕೆ ವಿಶಿಷ್ಟವಾದದ್ದು. ವೇಷಧಾರಿಗಳು ವ್ಯಾಖ್ಯಾನ ಮುಗಿಸುವ ಹೊತ್ತಿಗೆ ಭಾಗವತರು ಮುಂದಿನ ಪದ್ಯ ಪ್ರಾರಂಭಿಸುತ್ತಾರೆ, ಕಥೆ ಮುಂದುವರಿಯುತ್ತದೆ. ಪ್ರದರ್ಶನ ಯಾವಾಗಲೂ ದೇವರನಾಮಗಳ ಮಂಗಳ ಪದ್ಯಗಳೊಂದಿಗೆ ಮುಕ್ತಾಯವಾಗುತ್ತದೆ.

ಯಕ್ಷಗಾನದ ಇನ್ನೊಂದು ರಂಗಪ್ರಕಾರ ತಾಳಮದ್ದಲೆ. ಇದರಲ್ಲಿ ವೇಷ-ಭೂಷಣ ಮತ್ತು ನೃತ್ಯಗಳಿಲ್ಲ. ಪಾತ್ರಧಾರಿಗಳು ದಿನ-ನಿತ್ಯದ ಪಂಚೆ-ಶಾಲು ಹೊದ್ದುಕೊಂಡು ಎದುರು ಬದಿರಾಗಿ ಕುಳಿತುಕೊಂಡೇ ಅರ್ಥ ಹೇಳುತ್ತಾರೆ. ವೇಷ-ಭೂಷಣಗಳಿಲ್ಲದೆ, ಬರಿಯ ಮಾತೇ ಪ್ರಧಾನವಾಗಿರುವ ಕಲೆ ತಾಳಮದ್ದಲೆ. ವಿವರವಾದ ಪಾತ್ರವಿಶ್ಲೇಷಣೆ, ವಿಮರ್ಶೆ, ಚರ್ಚೆಗಳಿಗೆ ಇಲ್ಲಿ ಹೆಚ್ಚಿನ ಅವಕಾಶವಿರುತ್ತದೆ.

## ಯಕ್ಷಗಾನ ಸಾಹಿತ್ಯದಲ್ಲಿ ಭಕ್ತಿಯ ಅಭಿವ್ಯಕ್ತಿ

ಯಕ್ಷಗಾನ ಪ್ರಸಂಗಗಳಲ್ಲಿ ಕೆಲವು ಸಂಪೂರ್ಣವಾಗಿ ಭಕ್ತಿ-ಪ್ರಧಾನ ಕಥೆಗಳಾಗಿದ್ದರೆ, ಇನ್ನು ಹಲವು ಪ್ರಸಂಗಗಳು ಭಕ್ತಿಯ ಸನ್ನಿವೇಶಗಳನ್ನೊಳಗೊಂಡಿವೆ. ಈ ಭಾಗದಲ್ಲಿ ಈ ಎರಡು ರೀತಿಯ ಪ್ರಸಂಗಗಳನ್ನೂ ಉದಾಹರಿಸಲಾಗುವದು. ಬಹುಮಟ್ಟಿನ ಯಕ್ಷಗಾನ ಪ್ರಸಂಗಗಳ ಹೆಸರು "ಕಾಳಗ" ಅಥವಾ "ಕಲ್ಯಾಣ"ಗಳಾಗಿದ್ದರೂ ಅವುಗಳ ಉದ್ದೇಶ ದುಷ್ಟ ಶಿಕ್ಷೆ ಹಾಗೂ ಶಿಷ್ಟ ಪರಿಪಾಲನೆಯ ಕಥೆಗಳನ್ನು ನಿರೂಪಿಸುವುದೇ ಆಗಿದೆ.

ಭಕ್ತ-ಭಗವಂತರ ನಡುವಿನ ಸಂಬಂಧವನ್ನು ನಾಲ್ಕು ಪ್ರಕಾರಗಳಲ್ಲಿ ವಿಭಾಗಿಸ-ಬಹುದು: ವಾತ್ಸಲ್ಯ-ಭಾವ ಭಕ್ತಿ, ಸಖ್ಯ-ಭಾವ ಭಕ್ತಿ, ದಾಸ್ಯ-ಭಾವ ಭಕ್ತಿ ಮತ್ತು ಮಾಧುರ್ಯ-ಭಾವ ಭಕ್ತಿ. ಯಶೋದೆ ಶ್ರೀಕೃಷ್ಣನನ್ನು ಮಗನಾಗಿ ಪ್ರೀತಿಸಿದಂತೆ, ರಾಧೆ ಪ್ರಿಯಕರನಾಗಿ ಕಂಡಂತೆ, ಅರ್ಜುನ ಕೃಷ್ಣನನ್ನು ಮಿತ್ರನಾಗಿ ನೋಡಿದಂತೆ, ಅಥವಾ ಹನುಮಂತನು ಶ್ರೀರಾಮನನ್ನು ತನ್ನ ಸ್ವಾಮಿಯಾಗಿ ಸೇವಿಸಿದಂತೆ ಭಕ್ತನು ದೇವನನ್ನು ವಿವಿಧ ರೂಪದಲ್ಲಿ ಕಾಣುತ್ತಾನೆ. ಯಕ್ಷಗಾನ ಪ್ರಸಂಗಗಳಲ್ಲಿ ಈ ನಾಲ್ಕೂ ಭಾವಗಳ ಭಕ್ತಿಯ ಅಭಿವ್ಯಕ್ತಿಯನ್ನು ಕಾಣಬಹುದು.

ಹದಿನೇಳನೇ ಶತಮಾನದ ಪ್ರಸಂಗ ಕರ್ತ ದೇವಿದಾಸನಿಂದ ವಿರಚಿತ "ದೇವಿ ಮಹಾತ್ಮೆ" ಭಕ್ತಿ-ಪ್ರಧಾನ ದೀರ್ಘ ಪ್ರಸಂಗಗಳಲ್ಲೊಂದು. ಇಡೀ ರಾತ್ರಿ ಆಡುತ್ತಿದ್ದ ಬಯಲಾಟದ ದಿನಗಳಲ್ಲಿ ತುಂಬ ಜನಪ್ರಿಯವಾದ ಯಕ್ಷಗಾನವಿದು. ಅತ್ಯಂತ ಹೆಚ್ಚು ಪ್ರದರ್ಶನಗಳನ್ನು ಕಂಡ ಯಕ್ಷಗಾನ ಎಂಬ ಪ್ರತೀತಿಯೂ ಇದೆ. ದೇವಿ ಮಹಾತ್ಮೆಯಲ್ಲಿ ಜಗತ್ತಿನ ಸೃಷ್ಟಿ, ನಂತರದಲ್ಲಿ ಜಗದ ಉದ್ಧಾರಕ್ಕಾಗಿ ಜಗಜ್ಜನನಿಯ ಅವತಾರಗಳು ಮತ್ತು ರೂಪಾಂತರಗಳ ಚಿತ್ರಣವಿದೆ.

ಹತ್ತೊಂಭತ್ತು ಮತ್ತು ಇಪ್ಪತ್ತನೇ ಶತಮಾನಗಳಲ್ಲಿ ರಚಿತವಾದ ಸುಮಾರು ಮೂವತ್ತಕ್ಕೂ ಹೆಚ್ಚು ಪ್ರಸಂಗಗಳು ಪುಣ್ಯ ಕ್ಷೇತ್ರಗಳ ಮಹಿಮೆಯನ್ನು ಮತ್ತು ದೇವಿ-ದೇವತೆಗಳ ಅವತಾರದ ಕಥೆಗಳನ್ನು ಕುರಿತಾಗಿವೆ. ಇವೆಲ್ಲವೂ ಭಕ್ತಿ-ಪ್ರಧಾನ ಯಕ್ಷಗಾನಗಳು.

ಶ್ರೀ ವಿಷ್ಣುವಿನ ಅವತಾರಗಳ ಕಥೆಗಳನ್ನೇ ಪ್ರಾಧಾನ್ಯವಾಗಿಟ್ಟುಕೊಂಡು ಬರೆದ ಪ್ರಸಂಗಗಳೂ ಸಾಕಷ್ಟಿವೆ. "ಕಣಜ" ಅಂತರ್ಜಾಲದಲ್ಲಿ "ಅವತಾರ ಪ್ರಸಂಗಗಳು" ಎಂಬ ಸಂಪುಟದಲ್ಲಿ "ಪ್ರಹ್ಲಾದ ಚರಿತ್ರೆ", "ವಾಮನ ಚರಿತ್ರೆ", "ಹಿರಣ್ಯಾಕ್ಷ ವಧೆ" ಮುಂತಾಗಿ ಹತ್ತು ಸಂಪೂರ್ಣ ಪ್ರಸಂಗಗಳನ್ನು ಪಟ್ಟಿ ಮಾಡಿದ್ದಾರೆ. "ಯಕ್ಷಗಾನದ ವಾಲ್ಮೀಕಿ" ಎಂದು ಹೆಸರಾದ ಪಾರ್ತಿಸುಬ್ಬ (ಸುಮಾರು ಕ್ರಿ.ಶ. ೧೬೦೦) ರಾಮಾಯಣದ ಹತ್ತು ಪ್ರಸಂಗಗಳು, "ಕುಶಲವರ ಕಾಳಗ" ಎಂಬ ಉತ್ತರ ಕಾಂಡಕ್ಕೆ ಸಂಬಂಧಿಸಿದ ಪ್ರಸಂಗ, "ಶ್ರೀಕೃಷ್ಣ ಚರಿತೆ" ಎಂಬ ಭಾಗವತದ ಪ್ರಸಂಗ ಹಾಗೂ "ಐರಾವತ" ಎಂಬ ಭಾರತಕ್ಕೆ ಸಂಬಂಧಿಸಿದ ಪ್ರಸಂಗಗಳನ್ನು ರಚಿಸಿದ್ದಾನೆ. ಶ್ರೀಕೃಷ್ಣನ ಬಾಲಲೀಲೆಗಳನ್ನು ಮತ್ತು ಯಶೋದೆಯ ವಾತ್ಸಲ್ಯ-ಭಾವದ ಭಕ್ತಿಯನ್ನು ರಸವತ್ತಾಗಿ ಚಿತ್ರಿಸುವ "ಶ್ರೀಕೃಷ್ಣ ಚರಿತೆ" ಪಾರ್ತಿಸುಬ್ಬನ ಪ್ರಾತಿನಿಧಿಕ ಪ್ರಸಂಗಳಲ್ಲೊಂದಾಗಿದ್ದು ರಂಗತಾಂತ್ರಿಕತೆಯ ದೃಷ್ಟಿಯಿಂದಲೂ ಬಹಳ ಯಶಸ್ವಿಯಾಗಿದೆ.

"ಕೃಷ್ಣಾರ್ಜುನರ ಕಾಳಗ" ಮತ್ತು "ರಾಮಾಂಜನೇಯ ಕಾಳಗ" ಎರಡು ಸ್ವಾರಸ್ಯಕರ ಪ್ರಸಂಗಗಳು. ಶ್ರೇಷ್ಠ ಭಕ್ತರೇ ತಮ್ಮ ಸ್ವಾಮಿಯೊಂದಿಗೆ ಕಾಳಗಕ್ಕೆ ಇಳಿಯಬೇಕಾಗಿ ಬಂದ ವಿಚಿತ್ರ ಸನ್ನಿವೇಶಗಳನ್ನು ಇಲ್ಲಿಯ ಕಥೆಗಳು ಚಿತ್ರಿಸುತ್ತವೆ. ಈ ಎರಡೂ ಸ್ವಾಮಿಯೇ ತನ್ನ ಭಕ್ತರನ್ನು ಪರೀಕ್ಷಿಸಲೆಂದು ನಿರ್ಮಿಸಿದ ಸನ್ನಿವೇಶಗಳೆಂಬ ದೃಢ ನಂಬಿಕೆಯಿದೆ. ಆದ್ದರಿಂದಲೇ ಇವು ಭಕ್ತಿಪ್ರಧಾನ ಯಕ್ಷಗಾನಗಳ ಗುಂಪಿಗೆ ಸೇರುತ್ತವೆ. ಇವೆರಡೂ ಪ್ರಸಂಗಗಳು ರಂಗಪ್ರದರ್ಶನಗಳಲ್ಲಿಯೂ ಪ್ರಸಿದ್ಧಿಯಾಗಿವೆ.

ಮುಂದಿನ ಪರಿಚ್ಛೇದಗಳಲ್ಲಿ, ಕೆಲವು ಆಯ್ದ ಪ್ರಸಂಗಗಳಿಂದ ಭಕ್ತಿರಸ ಪ್ರಧಾನ ಸನ್ನಿವೇಶಗಳನ್ನು ಉದಾಹರಿಸಲಾಗುವದು. ಹೆಚ್ಚಿನ ಸನ್ನಿವೇಶಗಳಲ್ಲಿ ಭಕ್ತರು ದೇವರನ್ನು ಸ್ತುತಿಸುವ ಅಥವಾ ಪ್ರಾರ್ಥಿಸುವ ಪದ್ಯಗಳಿಂದ ತಮ್ಮ ಭಕ್ತಿಯನ್ನು ವ್ಯಕ್ತಪಡಿಸುತ್ತಾರೆ.

ಇಲ್ಲಿ ಒಂದು ಮಾತನ್ನು ಮಾತ್ರ ನಾನು ಒತ್ತಿ ಹೇಳಲೇಬೇಕು. ಈ ಉದಾಹರಣೆಗಳಲ್ಲಿ ವಿವರಿಸಿದ ಸನ್ನಿವೇಶ ಹಾಗೂ ಪದ್ಯಗಳಲ್ಲಿ ಅಭಿವ್ಯಕ್ತವಾದ ಭಕ್ತಿರಸದ ನಿಜವಾದ ಅನುಭವವಾಗಬೇಕಾದರೆ, ಪಳಗಿದ ಯಕ್ಷಗಾನ ಕಲಾವಿದರಿಂದ ರಂಗಮಂಚದ ಮೇಲೆ ಈ ಸನ್ನಿವೇಶಗಳ ಪ್ರದರ್ಶನವನ್ನು ನೋಡಬೇಕು. ಕಾವ್ಯಗಳಲ್ಲಿ ಮತ್ತು ಕರ್ನಾಟಕಿಯಲ್ಲಿ ಭಕ್ತಿಯನ್ನು ಹೆಚ್ಚಾಗಿ ಸ್ತುತಿ, ಆರಾಧನೆ, ನಿರೂಪಣೆಯಲ್ಲಿ ತೋರಿಸಿದರೆ ಯಕ್ಷಗಾನದಲ್ಲಿ ಅವೆಲ್ಲದರ ಜೊತೆಗೆ ಸಂಭಾಷಣೆ ಮತ್ತು ಅಭಿನಯಗಳ ಮೂಲಕವೂ ಭಕ್ತಿ ವ್ಯಕ್ತವಾಗುತ್ತದೆ. ಯಕ್ಷಗಾನದ ಪದ್ಯಗಳು ಹಾಡಿ, ಆಡಿ, ನೋಡಿಸುವ ಉದ್ದೇಶವನ್ನು ಲಕ್ಷ್ಯದಲ್ಲಿಟ್ಟೇ ಬರೆದಂತಹ ಕೃತಿಗಳು. ಗಾಯನ, ನರ್ತನ, ಅಭಿನಯಗಳ ಸಮರಸವಾದಾಗಲೇ ಭಕ್ತಿರಸದ ಸಂಪೂರ್ಣ ಅಭಿವ್ಯಕ್ತಿಯಾಗುತ್ತದೆ.

ದೇವಿದಾಸ ವಿರಚಿತ "ಕೃಷ್ಣ ಸಂಧಾನ" ರಂಗಪ್ರದರ್ಶನಗಳಲ್ಲಿಯೂ, ತಾಳಮದ್ದಲೆಗಳಲ್ಲಿಯೂ ಅತ್ಯಂತ ಯಶಸ್ವಿಯಾದ ಪ್ರಸಂಗ. ಶ್ರೀಕೃಷ್ಣ ಸಂಧಾನಕ್ಕೆಂದು ಹಸ್ತಿನಾಪುರಕ್ಕೆ ಬಂದವನು ಕೌರವನ ಅರಮನೆಗೆ ಹೋಗದೆ, ನೇರವಾಗಿ ಭಕ್ತ ವಿದುರನ ಮನೆಗೆ ಹೋಗುತ್ತಾನೆ. ಅನಿರೀಕ್ಷಿತವಾಗಿ ಮನೆಗೆ ಬಂದ ತನ್ನ ಸ್ವಾಮಿಯನ್ನು ಕಂಡು ವಿದುರನು ಭಾವಪರವಶನಾಗಿ ಶ್ರೀಕೃಷ್ಣನನ್ನು ಕೊಂಡಾಡುವ ಈ ಪದ್ಯ ಕೇಳಿ:

**ವಾರ್ಧಕ (ತಾಳರಹಿತ)**

**ನೋಡಿದಂ ಕಣ್ದಣಿಯೆ ಚಿನ್ಮಯನ ಮೂರ್ತಿಯಂ ।**
**ಮಾಡಿದಂ ನಿಯತ ಸಂಸ್ತುತಿಗಳಂ ಪಿರಿದು ಕೊಂ ।**
**ಡಾಡಿದಂ ತನಗೆ ಲಕ್ಷ್ಮೀರಮಣ ದಯವಾದನೆನುತಲಾ ವಿದುರನಂದು ॥**
**ಪಾಡಿದಂ ಗುಣಗಣವ ಬೇಕಾದ ವರಗಳಂ ।**
**ಬೇಡಿದಂ ಮನದೊಳಾನಂದಸಾಗರದೊಳೋ ।**
**ಲಾಡಿದಂ ಕೈಮುಗಿದು ನಿಂದಿರಲ್ಕವನ ತಕ್ಕಯ್ಸಿ ಮುರಹರನೆಂದನು ॥**

**ರಾಗ ಮಧುಮಾಧವಿ, ತ್ರಿವುಡೆತಾಳ**

**ಮಗುಳೆ ಪುರುಷೋತ್ತಮನ ಸುಪ್ಪ । ತ್ತಿಗೆಯನೇರಿಸಿ ಸಿರಿಪದಾಂಬುಜ ॥**
**ಯುಗಳವರ್ಚಿಸಿ ನಮಿಸಿ ಪೇಳ್ದನು । ನಗುತ ತನ್ನಯ ಸತಿಯೊಳು । ತೋಷದಿಂದ ।**

ನಾಲ್ಕು ಬೇರೆ-ಬೇರೆ ಕವಿಗಳು ಬರೆದ "ಭೀಷ್ಮ ಪರ್ವ" ಪ್ರಸಂಗಗಳು ದೊರಕಿವೆ. ಅವುಗಳಲ್ಲಿ ದೇವಿದಾಸ ಮತ್ತು ಯೆಣ್ಣೆಮಾಡಿ ವೆಂಕಟರಮಣಯ್ಯ ಅವರ ಕೃತಿಗಳು ಪ್ರಸಿದ್ಧವಾಗಿವೆ. ಮಹಾಭಾರತ ಯುದ್ಧದಲ್ಲಿ ಭೀಷ್ಮನ 'ಆಸಿರತ್ನ' ಬಾಣವು ಹಣೆಗೆ ತಾಗಿದಾಗ ಶ್ರೀಕೃಷ್ಣ ಸಿಟ್ಟಿನಿಂದ ತನ್ನ ಚಕ್ರವನ್ನು ಮೇಲೆತ್ತುತ್ತಾನೆ. ಭೀಷ್ಮ ಕೃಷ್ಣ ಭಕ್ತ.

ಚಕ್ರಧಾರಿ ಶ್ರೀ ಕೃಷ್ಣನನ್ನು ನೋಡಿ ಕೃಷ್ಣನನ್ನು ಸ್ತುತಿಸಹತ್ತುತ್ತಾನೆ. ಯೆಣ್ಣೆಮಾಡಿ ವೆಂಕಟರಮಣಯ್ಯ ಅವರು ಬರೆದ "ಭೀಷ್ಮ ಪರ್ವ" ಪ್ರಸಂಗದಿಂದ:

ಆದಿತಾಳ

**ಅಕ್ಷಯಾತ್ಮನೆ ಕೇಶವ । ಸುರನರ ಭುಜಗ । ಪಕ್ಷಿ ವಂದಿತ ಮಾಧವ ॥**
**ತ್ರ್ಯಕ್ಷಸಖನೆ ಖಳ । ಶಿಕ್ಷ, ಸಜ್ಜನ ರಕ್ಷ । ರಕ್ಷಮಾಮ್ । ಚೇತನ ।**
**ವೃಕ್ಷ ಕೌಸ್ತುಭ ವಕ್ಷ ॥**
**ಧರಣಿ ನಿನ್ನಯ ಪಾದವು । ಮೇಲಂತರಿಕ್ಷ । ದುರಿತಾರಿ ತವ ನಾಭಿಯು ।**
**ಮೆರೆವ ದಿಕ್ಕುಗಳ್ನಿನ್ನ । ಶ್ರೋತ್ರ ರವಿಶಶಿ ನೇತ್ರ ।**
**ಮರುತ ಶ್ವಾಸವು ಪರಮ । ವಿಶ್ವ ಮೂರುತಿ ದೇವ ॥**
**ಹರಿ ನೀನಾಡುವೆ ಪಗಡೆಯ । ಧರಣಿಯೆ ದಿವ್ಯ ತರದ ದ್ಯೂತದ ಮಣೆಯು ।**
**ಹರುಷದಿಂದಲೆ ಸೃಜಿಸಿ । ದಿವನಿಸಿ ಕವಡೆಯ ।**
**ಭರದಿಲತ್ತೆಯ ನಿಕ್ಕಿ । ಜೀವ ಕಾಯ್ಗಳ ನಡಿಪೆ ॥**

ದೇವಿದಾಸನ "ಭೀಷ್ಮ ಪರ್ವ" ದಲ್ಲಿ ಕೂಡ ಈ ಸನ್ನಿವೇಶದ ಪದ್ಯಗಳು ತುಂಬ ಜನಪ್ರಿಯವಾಗಿವೆ.

**ಶ್ರೀ ಮನೋಹರ ಸ್ವಾಮಿ ಪರಾಕು**
**ಪ್ರೇಮದೊಳೆನ್ನಯ ಮಾತ ಲಾಲಿಸಬೇಕು ॥**

ಎಂದು ಆರಂಭವಾಗುವ ಮೂರು ಪದ್ಯಗಳಲ್ಲಿ ಭಾವ, ಭಾಷೆ, ಪದ ಬಂಧಗಳು ಅತ್ಯಂತ ಸುಂದರವಾಗಿ ಮೂಡಿ ಬಂದಿವೆ.

"ಸುಧನ್ವಾರ್ಜುನ ಕಾಳಗ" ಮಹಾಭಾರತದ ಅಶ್ವಮೇಧದ ಕಥೆಯನ್ನು ಆಧರಿಸಿದ ಅತ್ಯಂತ ಜನಪ್ರಿಯ ಪ್ರಸಂಗಗಳಲ್ಲೊಂದು. "ಕಣಜ" ಅಂತರ್ಜಾಲದಲ್ಲಿ ಪ್ರಸಂಗ ಕರ್ತೃ ವೆಂಕಟೇಶನ ಭಕ್ತ ಎಂದಿಷ್ಟೆ ಇದೆ. ಅಶ್ವಮೇಧ ಕುದುರೆ ಹಂಸಧ್ವಜ ರಾಜ ಆಳುತ್ತಿದ್ದ ಚಂಪಕಾನಗರವನ್ನು ಪ್ರವೇಶಿಸಿದಾಗ ಹಂಸಧ್ವಜ ಕುದುರೆಯನ್ನು ಕಟ್ಟಿ ಯುದ್ಧಕ್ಕೆ ಸಿದ್ಧನಾದ. ಹರಿಯ ದರ್ಶನಕ್ಕೆ ಅನುಕೂಲವಾಯಿತೆಂದು ಹಿಗ್ಗಿದ. ಮಗ ಸುಧನ್ವ ಯುದ್ಧಕ್ಕೆ ಬಾರದೆ ರಾತ್ರಿಯನ್ನು ತನ್ನ ಪತ್ನಿಯೊಂದಿಗೆ ಕಳೆಯಲು ನಿರ್ಧರಿಸಿದ. ಕೋಪಗೊಂಡ ಹಂಸಧ್ವಜ ಸುಧನ್ವನನ್ನು ಕಾದ ಎಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿದಾಗ, "ಈ ಪರಿಯಲಿ ಪುರಜನ ಮರುಗಲು ಇತ್ತ ಶ್ರೀಪತಿಭಜಕ ಸುಧನ್ವ ತಾನು ತಾಪಿಸಿದೆಣ್ಣೆ ಕೊಪ್ಪರಿಗೆಯೊಳ್ಮುಳುಗಿ ಪ್ರಲಾಪಿಸಿ ನುತಿಸಿದ ಹರಿಯನ್ನು":

**ರಾಗ ರೇವಗುಪ್ತಿ, ಏಕತಾಳ**

**ಮಾಧವಹರಿಮಧುಸೂದನ ವಿಷ್ಣು ದಾ । ಮೋದರ ಕೃಷ್ಣ ಶುಭೋದಯ ॥**
**ಶ್ರೀಧರ ವಿಘ್ನ ವಿಚ್ಛೇದನ ಹರಿ ಪ್ರ । ಹ್ಲಾದವರದ ಈಕ್ಷಿಸೆನ್ನಯ ॥**
**ವಾಸುದೇವಾಚ್ಯುತ ಕೇಶವ ಶ್ರೀಹೃಷೀ । ಕೇಶ ಸದ್ಭಕ್ತಸುಪೋಷಣ ॥**
**ಸಾಸಿರನಾಮ ಸರ್ವೇಶ ಲಕ್ಷ್ಮೀಶಾಂಬ । ರೀಶವರದ ನಮೋ ಎಂದನು ॥**
**ತ್ರಾಹಿ ಮುಕುಂದ ಗೋವಿಂದ ಸಚ್ಚಿದಾನಂದ । ತ್ರಾಹಿ ತ್ರಾಹಿ ನಂದನಂದನ ॥**
**ತ್ರಾಹಿ ದುರ್ಜನಶಿಕ್ಷ ತ್ರಾಹಿ ಸಜ್ಜನರಕ್ಷ । ತ್ರಾಹಿ ಶ್ರೀಹರಿ ನಮೋ ಎಂದನು ॥**

ವೆಂಕಟರಮಣಯ್ಯನವರು ಬರೆದ "ಪ್ರಹ್ಲಾದ ಚರಿತ್ರೆ" ನಾರಸಿಂಹಾವತಾರದ ಕಥೆ. ಉಗ್ರ ನರಸಿಂಹನ ರೂಪದಲ್ಲಿ ಬಂದು ಹಿರಣ್ಯಕಶ್ಯಪುನನ್ನು ಕೊಂದ ಬಳಿಕ "ನರಹರಿಯು ತಾನಿಂತು ದಾನವನ ಸಂಹರಿಸಿ ಕರುಳಮಾಲೆಯ ಕೊರಳೊಳಾಂತರೆಯು ಕೋಪಮಂ ತೊರೆಯದತ್ಯುಗ್ರದಿಂದಿರಲದರ ತಾಪದಿಂದೀರೇಳು ಲೋಕಮ್ಮೈದೇ ಪರಿಭವಕೆ ಸಲಲಖಿಳ ಸುರವರರು ಬೆಂಡಾಗಿ ತರಹರಿಸದತಿ ನೊಂದು ನೆರದೊಡನೆ ವೊಂದಾಗಿ ಯೆರಗಿ ಸಾಷ್ಟಾಂಗದಿಂದಿರೆದೆದ್ದು ಕೈಮುಗಿದು ಸ್ತುತಿಗೈದರಾ ಹರಿಯನೂ":

**ರಾಗ ಶಹನ, ಏಕತಾಳ**

**ತ್ರಾಹಿ ಸಾರಸದಳಲೋಚನಾ । ತ್ರಾಹಿ । ತ್ರಾಹಿ ನಿರಘ ತಾರ್ಕ್ಷ್ಯ ವಾಹನಾ ।**
**ತ್ರಾಹಿ ನಿಗಮನುತ । ತ್ರಾಹಿ ಬೊಮ್ಮನಪಿತ । ತ್ರಾಹಿ ನಿತ್ಯಾನಂದ ।**
**ತ್ರಾಹಿ ಗೋವಿಂದಾ ॥ ತ್ರಾಹಿ ॥**
**ಜಾತರಹಿತ ಪುರುಷೋತ್ತುಮಾ । ಜಗ । ನ್ನಾಥ ಮುಕುಂದ ನಿತ್ಯಾತುಮಾ ॥**
**ಭೂತಭಾವನತೀತ ನಿರಂಜನ । ಖ್ಯಾತ ದುರಿತಹರ । ಶ್ರೀತರುಣೀವರ ॥ ತ್ರಾಹಿ ॥**
**ಕರುಣಸಾಗರ ಮಧುಸೂದನಾ । ಕರಿ । ವರದ ಶಾಶ್ವತ ಶತ್ರು ಭಂಜನಾ ॥**
**ಮರೆಹೊಕ್ಕವರ ಕಾವ । ಶರಣರಿಷ್ಟವನೀವ । ಉರಗಶಯನ ಜಗ ।**
**ದ್ಭರಿತ ಜನಾರ್ದನ ॥ ತ್ರಾಹಿ ॥**

ನರಸಿಂಹಶಾಸ್ತ್ರಿಯವರು ಬರೆದ "ವಾಮನ ಚರಿತ್ರೆ" ವಾಮನಾವತಾರದಲ್ಲಿ ಶ್ರೀವಿಷ್ಣು ಬಲಿಚಕ್ರವರ್ತಿಯ ದಾನಶೂರತೆಯನ್ನು ಪರೀಕ್ಷಿಸಿದ ಕಥೆ. ಬ್ರಾಹ್ಮಣ ವಟುವಿನ ರೂಪದಲ್ಲಿ ಬಂದ ವಾಮನಮೂರ್ತಿ "ಮೇದಿನಿಯನೀ ನನ್ನ ಪದದೊಳಗಾದ ಮೂರಡಿಯನ್ನು ಕರುಣಿಸು" ಎಂದು ಕೇಳಿದಾಗ, ಇದರಲ್ಲೇನೋ ಮೋಸವಿದೆ, ಒಪ್ಪಿಕೊಳ್ಳಬೇಡವೆಂದು ಗುರುಗಳು ಮತ್ತೆ-ಮತ್ತೆ ಒತ್ತಾಯಿಸಿದರೂ, ಉದಾರಿ ಬಲಿಚಕ್ರವರ್ತಿ ಸಂತೋಷದಿಂದ ಕೊಡಲೊಪ್ಪುತ್ತಾನೆ. ಬಲಿಚಕ್ರವರ್ತಿ ವಾಮನಮೂರ್ತಿಯನ್ನು ಭಕ್ತಿಪೂರ್ವಕವಾಗಿ ಸ್ತುತಿಸುತ್ತ ಮೂರಡಿ ಭುವನವನ್ನು ಅರ್ಪಣ ಮಾಡುವ ಪದ್ಯಗಳು ಭಕ್ತಿರಸಭರಿತವಾಗಿದೆ.

ಹದಿನೇಳನೆ ಶತಮಾನದ ಅಜಪುರದ ಸುಬ್ಬನ "ಪಾರಿಜಾತ", ನರಕಾಸುರನ ವಧೆಯ ಕಥೆಯನ್ನಾಧರಿಸಿ ಬರೆದ ಮೊದಲ ಪ್ರಸಂಗ. ಇಪ್ಪತ್ತನೇ ಶತಮಾನದಲ್ಲಿ ನರಕಾಸುರ ವಧೆಯನ್ನು ಕುರಿತು ನಾಲ್ಕೈದು ಪ್ರಸಂಗಗಳು ಬಂದಿವೆ. ಬಲಿಪೆ ನಾರಯಣ ಭಾಗವತರ (೧೮೮೯-೧೯೭೩) ಪ್ರಸಂಗ ಹೆಚ್ಚು ಜನಪ್ರಿಯವಾಗಿದೆ. ಶ್ರೀಕೃಷ್ಣ-ಸತ್ಯಭಾಮೆಯರಿಂದ ನರಕಾಸುರನ ವಧೆ ಆದ ನಂತರ, ಇಂದ್ರಾದಿ ದೇವತೆಗಳು ಸಂತುಷ್ಟರಾಗಿ ಶ್ರೀಕೃಷ್ಣ-ಸತ್ಯಭಾಮೆಯರನ್ನು ಹೀಗೆ ಸ್ತುತಿಸುತ್ತಾರೆ:

**ಅಷ್ಟತಾಳ**

**ನೀನೇ ಜಗದೋಧ್ಧಾರ । ಲೀಲಾವತಾರ । ಜ್ಞಾನ ತತ್ವ ಪ್ರಸಾರ ।**
**ನಿಗಮ ವಿಚಾರ ॥ ಪಲ್ಲವಿ ॥**
**ಈ ನಿನ್ನ ಮಹಿಮೆಯ ವರ್ಣಿಸಲಾರದೆ । ಮೌನಿಗಳೆಲ್ಲರು ಮೂಕರಾಗಿರುವರು ॥**
**ಜಾಣೆಯೆನಿಸಿರುವೆ ಓ ಸತ್ಯಭಾಮೆ । ಕಾಣೆ ನೀ ಚೆಲುವೆ ಮೂಜಗದಿ ಮೆರೆವೆ ॥**
**ಆನಂದಸಾಗರನರ್ಧಾಂಗಿಯಾಗಿಹೆ ।**
**ಏನೆಂಬೆ ನಿನ್ನ ಭಾಗ್ಯವು ಯಾರಿಗಿರುವುದೆ ॥**

ಭಾಗವತದ ಕಥೆಯೊಂದನ್ನಾಧರಿಸಿದ "ಜಾಂಬವತಿ ಕಲ್ಯಾಣ" ಪ್ರಸಂಗದ ಲೇಖಕ ವೆಂಕಟರಮಣ ಭಟ್ಟ ಎಂಬವರು. ಯಾರಿಗೂ ಕಾಳಗದಲ್ಲಿ ಸೋಲದ ಜಾಂಬವ, ಕೃಷ್ಣನಿಗೆ ಸೋತಾಗ "ಜಾಣ ನೀನ್ಯಾರೆನ್ನ ಗೆಲಿದ ಧೀರನು, ಲಕ್ಷ್ಮೀ ಪ್ರಾಣೇಶನಾದ ಶ್ರೀಹರಿಯೊ, ಸ್ಥಾಣುವೆನಿಪ ಮಹೇಶ್ವರನೊ ಪೇಳೆನ್ನೊಳು, ವಾಣಿಯರಸ ಕಮಲಜನೊ" ಎಂದು ದುಃಖಿಸುತ್ತ ಜಾಂಬವ ನೊಂದುಕೊಳ್ಳುತ್ತಿರುವಾಗ ಅನನಿಗೆ ಶ್ರೀಕೃಷ್ಣನು ಶ್ರೀರಾಮನ ರೂಪದಲ್ಲಿ ದರ್ಶನ ಕೊಡುತ್ತಾನೆ. ಆಗ ಜಾಂಬವಂತನು ದುಃಖಪೂರಿತನಾಗಿ ಶ್ರೀರಾಮನನ್ನು ಸ್ತುತಿಸುವ ಸನ್ನಿವೇಶ ಅತ್ಯಂತ ಭಾವಪೂರ್ಣವೂ, ಭಕ್ತಿರಸಭರಿತವೂ ಆಗಿದೆ.

**ವಾರ್ಧಕ**

**ಜಯ ದಶರಥನ ಬಾಲ ಮುನಿಯಜ್ಞಪರಿಪಾಲ ।**
**ಜಯ ತಾಟಕೀಮಥನ ಜಯ ಅಹಲ್ಯೋದ್ಧರಣ ।**
**ಜಯ ಜನಕಜಾರಮಣ ವಿಮಳರತ್ನಾಭರಣ ಜಯ ತ್ರಿಶಿರಖರನಾಶನ ॥**
**ಜಯ ಶಬರಿಯಘನಾಶ ತರಣಿಯಾತ್ಮಜ ಪೋಷ ।**
**ಜಯ ಸುರಪಸುತಶಿಕ್ಷ ಭಕ್ತಜನಸಂರಕ್ಷ ।**
**ಜಯ ದೈತ್ಯಕುಲಕಾಲ ಜಯ ವಿಭೀಷಣಪಾಲ ಜಯ ಜಯೆಂದೆರಗಿರ್ದನು ॥**

ಇದೇ ಯಕ್ಷಗಾನದ ಇನ್ನೊಂದು ಸನ್ನಿವೇಶದಲ್ಲಿ, ಶ್ರೀಕೃಷ್ಣನು ಶಮಂತಕಮಣಿ ಮಾಲೆಯನ್ನು ಸತ್ರಾಜಿತನಿಗೆ ಒಪ್ಪಿಸಿದಾಗ ಸತ್ರಾಜಿತನು ತನ್ನ ತಪ್ಪಿಗೆ ಕ್ಷಮೆ ಕೇಳಿ ಕೃಷ್ಣನನ್ನು ಸ್ತುತಿಸುವ ಸನ್ನಿವೇಶ ಕೂಡ ಭಕ್ತಿಪರವಾಗಿ ಮೂಡಿಬಂದಿದೆ.

"ವಾಲಿ ಸಂಹಾರ" ಪ್ರಸಂಗ ಪಾರ್ತಿಸುಬ್ಬನ ಕೃತಿಗಳಲ್ಲೊಂದು. ವಾಲಿ-ಸುಗ್ರೀವರ ಕಾಳಗದಲ್ಲಿ ರಾಮನ ಬಾಣ ತಾಗಿದ ವಾಲಿಗೆ, ರಾಮನ ನಿಜ ದರ್ಶನವಾಗುತ್ತದೆ. ಆಗ ವಾಲಿ ರಾಮನನ್ನು ಸ್ತುತಿಸುವ ಹೃದಯಸ್ಪರ್ಶಿ ಭಕ್ತಿ ಸನ್ನಿವೇಶದ ಪದ್ಯ ನೋಡಿ:

**ರಾಗ ಕಾಪಿ, ಏಕತಾಳ**

**ಕರುಣವಿದ್ದರೆ ಸಾಕು । ನಿನ್ನ ಪಾದದ । ಕರುಣವಿದ್ದರೆ ಸಾಕು**
**ಪರಿಪೂರ್ಣ ಪಾಲಿಸಬೇಕೆಂಬ ॥ಪಲ್ಲವಿ॥**
**ಮೂರು ದಿನದ ಈ ಸಂ । ಸಾರ ಶಾಶ್ವತವಲ್ಲ ।**
**ಘೋರದುಃಖಗಳ ಸಂ । ಹಾರ ಮಾಡುವದೊಂದು ॥ ಕರುಣ ॥**
**ಭೂತ ಪಂಚಕ ದೇಹ । ಏತಕಿಷ್ಟರ ಮೋಹ ।**
**ಚೇತನಾತ್ಮಕ ನಿನ್ನ । ಮೂರ್ತಿಪದಾಂಬುಜದ ॥ ಕರುಣ ॥**
**ತಂದೆ ತಾಯಿಗಳೆಂಬು । ದೊಂದು ಸ್ವಪ್ನವಿಚಾರ ।**
**ಎಂದೂ ನಿನ್ನ ಪದಾರ । ವಿಂದ ಪೂಜಿಸುವಂಥ ॥ ಕರುಣ ॥**

ಸುಬ್ರಾಯ ಪಂಡಿತ ವಿರಚಿತ "ರಾವಣ ವಧೆ"ಯಲ್ಲಿ ಎರಡು ದೀರ್ಘ ಭಕ್ತಿಪ್ರಧಾನ ಸನ್ನಿವೇಶಗಳಿವೆ. ಮೊದಲನೆಯದು ರಾವಣ ರಾಮನೊಡನೆ ಯುದ್ಧಕ್ಕೆ ಹೊರಟಾಗ ಮಂಡೋದರಿ ಮತ್ತು ರಾವಣನ ನಡುವೆ ನಡೆಯುವ ಸಂಭಾಷಣೆ. ಮಂಡೋದರಿ ರಾವಣನೊಡನೆ "ನಾರಾಯಣನು ಕಾಣೋ ರಾಮಾ, ನಾರಿಯವಳು ಧಾರಿಣೀಸುತೆ ಲಕ್ಷ್ಮಿ ಕೇಳು, ನಿಸ್ಸೀಮ ಚಾರು ಮಹಶೇಷ ಲಕ್ಷ್ಮಣನು, ಮಿಕ್ಕಿರುವ ವೀರ ಕಪಿಗಳು ದೇವತಾಂಶ ಕೇಳಿನ್ನು. ತ್ಯಜಿಸು ಕಡು ಮೂರ್ಖತೆಯ ನೀನಾ ಭಜಕಕುಲ ದೈವದೊಳು ಹಗೆಯನು" ಎಂದು ಪರಿಪರಿಯಾಗಿ ಬಿನ್ನೈಸುತ್ತಾಳೆ. ಎರಡನೆ ಸನ್ನಿವೇಶ, ರಾಮ-ರಾವಣರ ಯುದ್ಧದ ನಡುವೆ ರಾವಣನಿಗೆ ಅವತಾರ ಪುರುಷ ಶ್ರೀರಾಮನ ನಿಜರೂಪ ದರ್ಶನವಾಗುತ್ತದೆ. ಆಗ ರಾವಣ ರಾಮನನ್ನು ಯಾವ ರೂಪಗಳಲ್ಲಿ ಕಾಣುತ್ತಾನೆ ಎಂಬುದನ್ನು, ಪ್ರಸಂಗಕಾರ ಆರು ಪದ್ಯಗಳಲ್ಲಿ ಸುಂದರವಾಗಿ ವರ್ಣಿಸುತ್ತಾನೆ. ಪಲ್ಲವಿಯ ಪದ್ಯ ಹೀಗಿದೆ:

**ರಾಗ ಯರಕಲ ಕಾಂಭೋಜಿ, ತ್ರಿವುಡೆತಾಳ**

**ಕಂಡನು ದಶವದನ । ಕೋದಂಡರಾಮನ ॥ ಪಲ್ಲವಿ ॥**
**ಪುಂಡರೀಕಾಂಬಕನ ಜಗದೋ ।**
**ದ್ದಂಡರೂಪನ ಖಂಡಬಲ ಬ್ರ ।**
**ಹ್ಮಾಂಡಕೋಟಿಯ ತಂಡಗಳ ಕಪೆ ।**
**ಗೊಂಡು ಸಲಹುವ ಜಾಂಡಧೀಶನ ॥ ಅನುಪಲ್ಲವಿ ॥**

ಈ ಮೊದಲೇ ಉಲ್ಲೇಖಿಸಿದ "ರಾಮಾಂಜನೇಯ ಕಾಳಗ" ಪ್ರಸಂಗದಲ್ಲಿ ಶಕುಂತ ಎಂಬ ಅರಸು ಬಿಟ್ಟ ಬಾಣಕ್ಕೆ ಬಲಿಯಾದ ಪಕ್ಷಿಯು ಮಹರ್ಷಿ ವಿಶ್ವಾಮಿತ್ರ ನಡೆಸುತ್ತಿದ್ದ ಹೋಮಕುಂಡದಲ್ಲಿ ಬಿದ್ದಾಗ, ಕೋಪಿಷ್ಠನಾದ ಋಷಿ, ಈ ಅವಘಡಕ್ಕೆ ಕಾರಣನಾದ ವ್ಯಕ್ತಿಯನ್ನು ಶ್ರೀರಾಮನ ಮೂಲಕ ಕೊಲ್ಲಿಸುವದಾಗಿ ಶಪಥ ಮಾಡುತ್ತಾನೆ. ಇದನ್ನು ತಿಳಿದ ಅರಸು ಶಕುಂತ ಅಂಜನಾದೇವಿಯ ಮೊರೆ ಹೋದಾಗ ಆಕೆ ತನ್ನ ಪುತ್ರ ಹನುಮಂತನ ಮೂಲಕ ರಕ್ಷಣೆ ಕೊಡಿಸುವದಾಗಿ ಭರವಸೆ ನೀಡುತ್ತಾಳೆ. ರಾಮಭಕ್ತ ಹನುಮಂತ ತಾಯಿಯ ಆಸೆಯಂತೆ ಶಕುಂತ ಅರಸನ ರಕ್ಷಣೆಗೆ ತನ್ನ ಆರಾಧ್ಯ ದೇವ ಶ್ರೀರಾಮನ ವಿರುದ್ಧವೇ ಕಾಳಗ ನಡೆಸಬೇಕಾದ ಸಂದಿಗ್ಧತೆ ಎದುರಿಸುವದು ಈ ಆಖ್ಯಾನದ ಕಥಾನಕ. ಹನುಮಂತ ಶಕುಂತ ರಾಜನಿಗೆ 'ಶ್ರೀರಾಮ' ಮಂತ್ರ ಮಹಿಮೆಯನ್ನು ಬಿತ್ತರಿಸುವ ಈ ಪದ್ಯವನ್ನು ನೋಡಿ:

**ರಾಗ ಹಿಂದೋಳ, ಅಷ್ಟತಾಳ**

**ಸ್ಮರಿಸಯ್ಯ ರಾಮಮಂತ್ರ ನಿನ್ನ । ಮರಣ ಭೀತಿಯ**
**ಪರಿಹರಿಸುವದೀ ಮಂತ್ರ ॥ ಪಲ್ಲವಿ ॥**
**ಜಗದಿ ವಾಲ್ಮೀಕಿಯ ಉದ್ಧರಿಸಿದ ಮಂತ್ರ । ಬಗೆ ಬಗೆ**
**ದುರಿತವ ಸುಡುವ ಮಂತ್ರ ॥ ವಿಗಡ ರೋಗಂಗಳ**
**ದೂರ ಮಾಡುವ ಮಂತ್ರ । ಸುಗುಣರ್ಗೆ ಸುಜ್ಞಾನ**
**ಕೊಡುವ ಮಂತ್ರ ॥**

ತುಳಸಿ ರಾಮಾಯಣದಲ್ಲಿ ಶ್ರೀರಾಮನೊಂದಿಗೆ ಶಬರಿಯ ಭೇಟಿಯು ಅತ್ಯಂತ ಹೃದಯಸ್ಪರ್ಶಿಯಾದ ಹಾಗೂ ಭಕ್ತಿಪೂರಿತವಾದ ಸಂದರ್ಭವಾಗಿರುತ್ತದೆ. ಈ ಸನ್ನಿವೇಶವನ್ನು ಆಧರಿಸಿ ಬರೆದ "ಶಬರಿ ಮೋಕ್ಷ" ಮತ್ತು "ಪಾದ ಪ್ರತೀಕ್ಷಾ" ಎಂಬ ಎರಡು ಯಕ್ಷಗಾನ ಪ್ರಸಂಗಳು ಸಾಕಷ್ಟು ತಾಳಮದ್ದಲೆ ಮತ್ತು ರಂಗಪ್ರದರ್ಶನಗಳನ್ನು ಕಂಡಿವೆ.

ರಾಮಾಯಣದ ಕಥೆಯನ್ನಾಧರಿಸಿ ಬರೆದ ಇನ್ನೊಂದು ಜನಪ್ರಿಯ ಯಕ್ಷಗಾನ "ಅತಿಕಾಯ ಕಾಳಗ". ಹಟ್ಟಿಯಂಗಡಿ ರಾಮಭಟ್ಟರ ಈ ಕೃತಿ ಪ್ರದರ್ಶನದ ದೃಷ್ಟಿಯಿಂದ ಅತ್ಯಂತ ಯಶಸ್ವಿಯಾಗಿರುವುದು. ಬಹು ಪರಾಕ್ರಮಿಯಾದ ರಾವಣನ ಮಗ ಅತಿಕಾಯ ಚಿಕ್ಕಂದಿನಿಂದಲೂ ರಾಮಭಕ್ತ. ರಾವಣ ಅತಿಕಾಯನನ್ನು ರಾಮಸೈನ್ಯದೊಂದಿಗೆ ಯುದ್ಧಕ್ಕೆ ಹೋಗಲು ಆಜ್ಞಾಪಿಸಿದಾಗ, ಅತಿಕಾಯ ತಂದೆಗೆ ಅಭಿವಂದಿಸಿ ಶ್ರೀರಾಮನನ್ನು ಕೆಣಕುವುದು, ಅವನೊಟ್ಟಿಗೆ ಹೋರಾಟ ಮಾಡುವುದು ಕೇವಲ ವ್ಯರ್ಥ ಪ್ರಯತ್ನ "ಇರಿತಕಂಬರವಳುಕುವುದೆ, ನೊರಜುರಿಬಿದಡಗ್ನಿಗೆ ನೋವುತಾಗುವುದೇ, ಇರುವೆ ಕಚ್ಚಿದರೆ ಬೆಚ್ಚುವುದೆ ಸುರ ಗಿರಿಯು, ನಿನ್ನಧಟು ರಾಘವನೊಳೊಪ್ಪುವುದೇ" ಎನ್ನುತ್ತ ಶ್ರೀರಾಮನ ಮಹಿಮೆಯನ್ನು ಸ್ತುತಿಸುತ್ತಾನೆ.

ಇನ್ನೂ ಹಲವು ಉದಾಹರಣೆಗಳನ್ನು ಕೊಡಬಹುದು. ಮಹಾಭಾರತ, ರಾಮಾಯಣ, ಭಾಗವತದ ಕಥೆಗಳನ್ನಾಶ್ರಯಿಸಿ ರಚಿಸಿದ ಬಹುಮಟ್ಟಿನ ಪ್ರಸಂಗಗಳು ಒಂದಾದರೂ ಭಕ್ತಿರಸ ಪ್ರಧಾನ ಸನ್ನಿವೇಶಗಳ ಪದ್ಯಗಳನ್ನು ಒಳಗೊಂಡಿರುತ್ತವೆ. ವಿಷ್ಣು ಭಕ್ತಿಯಲ್ಲದೆ ಶಿವ ಭಕ್ತಿ ಮತ್ತು ಇತರ ದೇವಿ-ದೇವತೆಗಳ ಭಕ್ತಿ ಸನ್ನಿವೇಶಗಳುಳ್ಳ ಶ್ವೇತಕುಮಾರ ಚರಿತ್ರೆ, ವೀರಮಣಿ ಕಾಳಗದಂತಹ ಯಕ್ಷಗಾನ ಪ್ರಸಂಗಗಳೂ ಸಾಕಷ್ಟಿವೆ. ಶಿವಭಕ್ತರ ಜೀವನಗಳನ್ನು ಕುರಿತ ಯಕ್ಷಗಾನಗಳೂ ಬಂದಿವೆ.

## ಯಕ್ಷಗಾನ ರಂಗಪ್ರದರ್ಶನ ಮತ್ತು ಭಕ್ತಿಪಂಥ

ಯಕ್ಷಗಾನವು ಮೂಲತಃ ವಿಷ್ಣುಭಕ್ತಿಯನ್ನು ಜನಸಾಮಾನ್ಯರಿಗೆ ಪ್ರಸರಿಸುವ ಉದ್ದೇಶದಿಂದ ಹುಟ್ಟಿಕೊಂಡಿತು ಎಂಬ ಬಗೆಗೆ ಪರೋಕ್ಷವಾಗಿ ಸಾಕಷ್ಟು ಆಧಾರಗಳಿವೆ. ಕರ್ನಾಟಕದಲ್ಲಿ ಹರಿದಾಸ ಭಕ್ತಿಪಂಥದ ಉಗಮ ಮತ್ತು ಬೆಳವಣಿಗೆ ಹಾಗೂ ಯಕ್ಷಗಾನದ ವಿಕಾಸ ಸಮಕಾಲೀನವಾಗಿದ್ದು ಎರಡಲ್ಲಿ ಬಹಳಷ್ಟು ಸಾಮ್ಯಗಳಿವೆ.

ಸುಮಾರು ಕ್ರಿ.ಶ. ೧೫೫೦ ರ ಹೊತ್ತಿಗೆ ಯಕ್ಷಗಾನ ತಾಳಮದ್ದಲೆಗಳು ಒಂದು ರೀತಿಯ ದೇವರ ಸೇವೆಯಾಗಿ ಆಚರಣೆಗೆ ಬಂದಂತೆ ಕಾಣುತ್ತದೆ. ಬಳ್ಳಾರಿ ಜಿಲ್ಲೆಯ ಸೋಮಸಮುದ್ರ ಎಂಬಲ್ಲಿನ ಲಕ್ಷ್ಮೀನಾರಾಯಣ ದೇವಸ್ಥಾನದಲ್ಲಿ ಒಂದು ಹಳೆಯ ದಾನ ಶಾಸನ ಸಿಕ್ಕಿದೆ. ಇದರ ಕಾಲ ಕ್ರಿ.ಶ. ೧೫೫೬. ಈ ಶಾಸನವು ಆ ದೇವಾಲಯದಲ್ಲಿ ತಾಳಮದ್ದಲೆ ಸೇವೆಯನ್ನು ನಡೆಸಿದ ಇಬ್ಬರು ಬ್ರಾಹ್ಮಣರಿಗೆ ಉಂಬಳಿ ಕೊಟ್ಟ ದಾಖಲೆಯನ್ನು ಹೊಂದಿದೆ.

ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಕರ್ನಾಟಕದಲ್ಲಿ ಹರಿದಾಸ ಆಂದೋಲನದ ಉಗಮವಾಯಿತು. ಕನ್ನಡ ಸಾಹಿತ್ಯಕ್ಕೆ ತಮ್ಮ ಸರಳ, ಸುಂದರ

ಆಡುಮಾತುಗಳಲ್ಲಿ ಬರೆದ ಹರಿಕೀರ್ತನೆಗಳಿಂದ ಹರಿದಾಸರು ಕೊಟ್ಟ ಕೊಡುಗೆ ಅಪಾರ. ಹರಿದಾಸರಲ್ಲಿ ಮುಖ್ಯರೆಂದರೆ ಪುರಂದರದಾಸರು ಮತ್ತು ಕನಕದಾಸರು. ಪುರಂದರದಾಸರ "ಅನಸೂಯ ಚರಿತ್ರೆ" ಈವರೆಗೆ ದೊರೆತ ಮೊಟ್ಟ-ಮೊದಲನೆಯ ಯಕ್ಷಗಾನ ಪ್ರಸಂಗ. ಇದರಿಂದ ಆ ಹೊತ್ತಿಗಾಗಲೇ ಯಕ್ಷಗಾನ ಸಂಗೀತ ಶೈಲಿ ಮತ್ತು ಸಾಹಿತ್ಯಪ್ರಕಾರಗಳು ಸಾಕಷ್ಟು ಪ್ರಚಲಿತವಿದ್ದಿರಬೇಕೆಂದು ವೇದ್ಯವಾಗುತ್ತದೆ. ಯಕ್ಷಗಾನ ರಂಗಮಾಧ್ಯಮವು ಈ ಹರಿದಾಸ ಆಂದೋಲನದಿಂದಲೆ ಮೊಳಕೆಯೊಡೆಯಿತೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಯಕ್ಷಗಾನ ರಂಗಪ್ರದರ್ಶನಗಳ ಉಗಮ ಎಂದಾಯಿತೆಂದು ನಿಖರವಾಗಿ ಗೊತ್ತಿಲ್ಲವಾದರೂ, ಕ್ರಿ.ಶ. ೧೬೦೦ರ ಹೊತ್ತಿಗೆ ಬಯಲಾಟಗಳು ಸಾಕಷ್ಟು ಪ್ರಚಲಿತವಾಗಿದ್ದವು.

ಭಕ್ತನೊಬ್ಬನು ತನ್ನ ಇಷ್ಟ ದೇವರ ಮೇಲಿನ ಅಚಲ ಪ್ರೀತಿಯನ್ನು ಅಭಿವ್ಯಕ್ತಪಡಿಸುವ ಹಲವು ಮಾರ್ಗಗಳಿವೆ. ಭಾಗವತದಲ್ಲಿ ಹೇಳಿದ ನವಧಾ ಭಕ್ತಿಯಲ್ಲೂ ಮತ್ತು ತುಳಸಿ ರಾಮಾಯಣದಲ್ಲಿ ಶ್ರೀರಾಮಚಂದ್ರ ಶಬರಿಗೆ ಉಪದೇಶಿಸಿದ ನವಧಾ ಭಕ್ತಿಯಲ್ಲೂ ಶ್ರವಣ ಮತ್ತು ಕೀರ್ತನಗಳು ಭಕ್ತಿಯ ಎರಡು ಮುಖ್ಯ ಸೋಪಾನಗಳು. ಯಕ್ಷಗಾನಗಳ ರಂಗಪ್ರದರ್ಶನಗಳಲ್ಲಿ ಭಾಗವತರ ಹಾಡು ಕೀರ್ತನೆಗಳಾದರೆ, ಪ್ರೇಕ್ಷಕರ ಅನುಭವ ಹರಿ ಮಹಿಮೆಗಳ ಶ್ರವಣ ಮತ್ತು ಪ್ರೇಕ್ಷಣ. ವೇಷಧಾರಿಗಳ ಯಕ್ಷಗಾನ ಕಲಾಸೇವೆ ಹರಿಯ ಅರ್ಚನೆ ಎನ್ನಬಹುದು.

ಯಕ್ಷಗಾನ ಬಯಲಾಟಗಳು ವಿಷ್ಣುವಿನ ಅವತಾರಗಳ ಮಹಿಮೆಯನ್ನು ಜನಸಾಮಾನ್ಯರಿಗೆ ತಲುಪಿಸುವ ಉದ್ದೇಶದಿಂದಲೇ ಹುಟ್ಟಿಕೊಂಡಿರಬೇಕೆಂಬುದಕ್ಕೆ ಇನ್ನೊಂದು ಸಾಕ್ಷಿ ಹೆಸರಿನ ಬಳಕೆ. ರಂಗಸ್ಥಳ ಪ್ರದರ್ಶನಕ್ಕೆ "ಯಕ್ಷಗಾನ" ಶಬ್ದದ ಬಳಕೆ ಹೆಚ್ಚೆಂದರೆ ನೂರು ವರ್ಷ ಇತ್ತೀಚಿನದು. ಇದಕ್ಕೂ ಮೊದಲು ಬಯಲಾಟಗಳನ್ನು "ದಶಾವತಾರ ಆಟ" ಅಥವಾ "ಭಾಗವತರ ಆಟ" ಎಂದು ಕರೆಯುತ್ತಿದ್ದರು. "ಭಾಗವತರು" ಎಂಬ ಶಬ್ದ ಶ್ರೀಮದ್ ಭಾಗವತದ ಪದ್ಯಗಳನ್ನು ಹಾಡುವವರು ಎಂಬ ಅರ್ಥದಲ್ಲಿ ಹುಟ್ಟಿರಬೇಕು. ಆ ಕಾಲದ ಬಹುಮಟ್ಟಿನ ಪ್ರಸಂಗಗಳೆಲ್ಲವೂ ಶ್ರೀರಾಮ, ಶ್ರೀಕೃಷ್ಣರ ಜೀವನದ ಕಥೆಗಳೇ ಆಗಿದ್ದವು. ಉತ್ತರ ಕನ್ನಡ, ದಕ್ಷಿಣ ಕನ್ನಡ, ಶಿವಮೊಗ್ಗೆ ಜಿಲ್ಲೆಗಳ ಬಹಳಷ್ಟು ಜನರಿಗೆ ಚಿಕ್ಕಂದಿನಲ್ಲಿ ಮಹಾಭಾರತ, ರಾಮಾಯಣಗಳ ಮೊದಲ ಪಾಠಗಳು ದೊರಕಿದ್ದು ಯಕ್ಷಗಾನ ಆಟಗಳ ಮೂಲಕವೇ ಹೊರತು ಪುಸ್ತಕಗಳ ಓದಿನಿಂದಲ್ಲ.

ಯಕ್ಷಗಾನ ಪ್ರದರ್ಶನಗಳಿಗೂ ಹಾಗೂ ಇತರ ಜನಪ್ರಿಯ ಭಕ್ತಿಪ್ರಸಾರ ಮಾಧ್ಯಮಗಳಿಗೂ ಸಾಮ್ಯತೆಯಿದೆ. ಹರಿಕಥೆ, ಹರಿಕೀರ್ತನೆ, ಕಥಾಕಾಲಕ್ಷೇಪ, ಪುರಾಣ ಪ್ರವಚನ ಇವೆಲ್ಲವೂ ಮೂಲತಃ ವಿವಿಧ ಸ್ತರಗಳ ಮನೋರಂಜನೆಯ ಮಾಧ್ಯಮದ

ಮೂಲಕ ಶ್ರೋತೃಗಳನ್ನು ಕೆಲವು ಗಂಟೆಗಳ ಕಾಲ ಭಗವಂತನ ಚಿಂತನೆಯಲ್ಲಿ ತಲ್ಲೀನರಾಗಿಸುವದು. ಹರಿಕಥೆ, ಹರಿಕೀರ್ತನೆಗಳಲ್ಲಿ ಕೀರ್ತನದಾಸರು ಸಂಗೀತ, ಉಪ-ಕಥೆಗಳೊಂದಿಗೆ, ನಾಟಕೀಯವಾಗಿ ಜನಸಾಮಾನ್ಯರಿಗಾಗಿ ರಂಜಿಸುವಂತೆ ರಾಮಾಯಣ, ಭಾರತ, ಭಾಗವತ, ಪುರಾಣಗಳ ಕಥೆಯೊಂದನ್ನು ನಿರೂಪಿಸುತ್ತಾರೆ. ಕಥಾಕಾಲಕ್ಷೇಪ ಮತ್ತು ಪುರಾಣ ಪ್ರವಚನಗಳಲ್ಲಿ ಪಂಡಿತರು ಅಥವಾ ಪುರಾಣಿಕರು ಸಂಸ್ಕೃತ ಪಠ್ಯವೊಂದರಿಂದ ಶ್ಲೋಕಗಳನ್ನು ಓದಿ ಅವುಗಳ ಮೇಲೆ ವ್ಯಾಖಾನ ಮಾಡುತ್ತಾರೆ. ತಾಳಮದ್ದಲೆಗಳಲ್ಲಿ ಸಂಗೀತ ಮತ್ತು ದೇವಮಹಿಮೆಗಳ ಕಥಾನಿರೂಪಣೆಗಳ ಜೊತೆಗೆ ನಾಟಕೀಯತೆಯೂ ಇದೆ. ಯಕ್ಷಗಾನ ರಂಗಪ್ರದರ್ಶನ ಈ ಮಾದರಿಯ ಮಾಧ್ಯಮದಲ್ಲಿ ಅತ್ಯುಚ್ಚ ಸ್ತರ ಎನ್ನಬಹುದು. ಇದರಲ್ಲಿ ತಾಳಮದ್ದಲೆಯ ಎಲ್ಲ ಅಂಶಗಳ ಜೊತೆಗೆ, ವೇಷ-ಭೂಷಣ, ನೃತ್ಯ ಮತ್ತು ಅಭಿನಯವೂ ಇವೆ.

ಯಕ್ಷಗಾನ ಕಲೆಯಲ್ಲಿ ದೇವತಾರಾಧನೆಯ ಅಂಶ ಅಡಕವಾಗಿದೆಯೆಂಬುದಕ್ಕೆ ಇನ್ನೊಂದು ಉದಾಹರಣೆ ಇಂದಿಗೂ ರೂಢಿಯಲ್ಲಿರುವ ದೇವರ ಸೇವೆಯ ಆಟಗಳು. ಬಹುತೇಕ ಎಲ್ಲ ಯಕ್ಷಗಾನ ಮಂಡಳಿಗಳು ವರ್ಷಕ್ಕೆ ಒಮ್ಮೆಯಾದರೂ, "ದೇವರ ಸೇವೆಯ ಆಟ" ವೆಂದು ದೇವಸ್ಥಾನಗಳ ಆವರಣಗಳಲ್ಲಿ ಪ್ರದರ್ಶಿಸುವ ರೂಢಿ ಇದೆ. ಇಂಥ ಪ್ರದರ್ಶನಗಳಿಗೆ ಸಾರ್ವಜನಿಕರಿಗೆ ಮುಕ್ತ ಪ್ರವೇಶವಿರುತ್ತದೆ. ಸಾಮಾನ್ಯವಾಗಿ ಭಕ್ತಿಪ್ರಧಾನ ಪ್ರಸಂಗಗಳನ್ನೇ ಆಯ್ಕೆ ಮಾಡಿಕೊಂಡಿರುತ್ತಾರೆ.

ಹೊನ್ನಾವರದ ಹತ್ತಿರ ಇರುವ ಗುಂಡಬಾಳದ ಹನುಮಾನ ಮಂದಿರದಲ್ಲಿ, ಪ್ರತಿದಿನ ವಿಜಯದಶಮಿಯಿಂದ ಹಿಡಿದು ಮಳೆಗಾಲದ ಪ್ರಾರಂಭದತನಕವೂ ಸೇವಾ ಯಕ್ಷಗಾನ ಆಟ ನಡೆಯುತ್ತದೆ. ಈ ಉದ್ದೇಶಕ್ಕಾಗಿ ದೇವಸ್ಥಾನದ ಆವರಣದಲ್ಲಿ ಒಂದು ಖಾಯಂ ರಂಗಸ್ಥಳ ಇದೆ. ದೇವಸ್ಥಾನದ ಯಕ್ಷಗಾನ ಮಂಡಳಿಯಲ್ಲದೆ ಇತರ ಮಂಡಳಿಗಳೂ ಅಲ್ಲಿ ಆಗಾಗ ಪ್ರದರ್ಶನ ನೀಡುತ್ತಿವೆ. ಪ್ರೇಕ್ಷಕರು ಎಷ್ಟೇ ಇರಲಿ, ಆಟಗಳು ಮಾತ್ರ ಪ್ರತಿ ರಾತ್ರಿ ತಪ್ಪದೆ ನಡೆಯುತ್ತವೆ ಎಂದು ಕೇಳಿದ್ದೇನೆ.

ಒಟ್ಟಿನಲ್ಲಿ ಹೇಳಬೇಕೆಂದರೆ, ಯಕ್ಷಗಾನವು ಇಪ್ಪತ್ತನೇ ಶತಮಾನದ ಪೂರ್ವಾರ್ಧದ-ವರೆಗೂ ಉತ್ತರ ಮತ್ತು ದಕ್ಷಿಣಕನ್ನಡ ಜಿಲ್ಲೆಗಳ ಹಳ್ಳಿಗರ ಜೀವನದ ಒಂದು ಪ್ರಮುಖ ಅಂಗವಾಗಿ ಬೆಳೆದುಬಂದಿತು. ಇತರ ಜಾನಪದ ಕಲೆಗಳಂತೆ ಯಕ್ಷಗಾನವೂ ಮೂಲತಃ ಗ್ರಾಮ್ಯ ಕಲೆ. ಹಿಂದಿನ ದಿನಗಳ ಬಯಲಾಟಗಳು ನಡೆಯುತ್ತಿದ್ದುದು ಹಳ್ಳಿಗಳಲ್ಲಿ ಮಾತ್ರ. ಬಹುಮಟ್ಟಿನ ಯಕ್ಷಗಾನ ಕಲಾವಿದರು ಹಳ್ಳಿಗಳಲ್ಲಿಯೇ ಹುಟ್ಟಿ, ಬೆಳೆದು ಅಲ್ಲಿಯೇ ಬದುಕುತ್ತಿರುವವರು. ಪಟ್ಟಣದ ಸಂಪರ್ಕ ದುರ್ಲಭವಾಗಿದ್ದ ಹಳ್ಳಿಗರಿಗೆ ಅಂದಿನ ದಿನಗಳಲ್ಲಿ ಯಕ್ಷಗಾನ ಬಯಲಾಟಗಳು ಮನೋರಂಜನೆಯ ಮುಖ್ಯ ಮಾಧ್ಯಮವಾಗಿದ್ದಿತು. ಜೊತೆಗೆ ರಾಮ, ಕೃಷ್ಣ, ದೇವಿ-ದೇವತೆಗಳ ಮಹಿಮೆಯ ರಸವತ್ತಾದ

ಕಥೆಗಳನ್ನು ಗಾಯನ, ಅಭಿನಯ, ಆಶು-ಸಂಭಾಷಣೆ, ಬೆರಗುಗೊಳಿಸುವಂಥ ವೈಭವದ ವೇಷಭೂಷಣ, ಹಾಗೂ ನೃತ್ಯಗಳೊಂದಿಗೆ ರಂಗಸ್ಥಳದ ಮೇಲೆ ಕೇಳಿ, ನೋಡಿ ಆನಂದಿಸಿದಾಗ ಅಂತರಂಗದ ಭಕ್ತಿ-ಭಾವ ತನ್ನಿಂದ-ತಾನೆ ಅರಳಿ ಒಂದು ರೀತಿಯ ಪವಿತ್ರ ಧಾರ್ಮಿಕ ಅನುಭವವನ್ನು ಒದಗಿಸುತ್ತಿತ್ತು. ಆಧುನಿಕ ಯಕ್ಷಗಾನ ಪ್ರದರ್ಶನಗಳು ಸಾಕಷ್ಟು ಬದಲಾಗಿದ್ದರೂ, ಕೆಲವು ಮೂಲಭೂತ ದೇವ-ಭಕ್ತಿಯ ಅಂಶಗಳನ್ನು ಉಳಿಸಿಕೊಂಡಿರುವದು ಸಂತೋಷದ ಸಂಗತಿ.

ಇಲ್ಲಿ ಉಲ್ಲೇಖಿಸಿದ ಕೆಲವು ಪದ್ಯಗಳನ್ನು ಒದಗಿಸಿದ ಶ್ರೀ ಸುಬ್ರಹ್ಮಣ್ಯ ಧಾರೇಶ್ವರ ಅವರಿಗೆ, ಮತ್ತು ಲೇಖನದ ಕರಡು ಪ್ರತಿಯನ್ನು ಓದಿ ಕೆಲವು ಸಲಹೆಗಳನ್ನಿತ್ತ ಡಾ. ಪ್ರಭಾಕರ ಜೋಶಿ, ಶ್ರೀ ರಾಗು ಕಟ್ಟಿನಕೆರೆ ಹಾಗೂ ಡಾ. ನವೀನ ಹೆಗಡೆ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

**ಪ್ರಮುಖ ಆಧಾರಗಳು:**

1. K. Shivarama Karanth: "Yakshgana", New Edition (Revised and Enlarged) 1997, Published by Indira Gandhi National Centre for Arts, New Delhi.

2. Martha Bush Ashton & Bruce Christie: "Yakshagana", First Published 1977, Publisher: Shakti Malik, Abhinav Publications, New Delhi.

   Yakshagana Articles and Prasangas in the "ಸಮಗ್ರ ಕನ್ನಡ ಜನಪದ ಮತ್ತು ಯಕ್ಷಗಾನ ಸಾಹಿತ್ಯ ಮಾಲೆ" sections of the website http://www.kanaja.in/topic



# ಜನಪದ ಸಾಹಿತ್ಯದಲ್ಲಿ ಭಕ್ತಿ ಸಿಂಚನ

–ಆಹಿತಾನಲ

**ಪ್ರಾಸ್ತಾವಿಕ:**

"ಭಕ್ತಿ" ಎಂಬ ಶಬ್ದ "ಭಗತ್" ಎಂಬ ಶಬ್ದದಿಂದ ಮೂಡಿ ಬಂದುದೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಮಾನವ ತನ್ನ ಲೌಕಿಕ ನಡತೆಗೆ ನೀತಿಯ ನಿಯಂತ್ರಣವೊಂದನ್ನು ನಿರ್ಮಿಸಲು, ಈ "ದೇವರು" ಎಂಬ ಕಲ್ಪನೆಯನ್ನು ಸೃಷ್ಟಿಸಿಕೊಂಡಿರಬಹುದೇ? ದೇವರ ಮೇಲಿನ ನಂಬಿಕೆ ಇದರಿಂದ ಹುಟ್ಟಿರಬಹುದು. ಅಂದರೆ, "ಭಕ್ತಿ" ಎನ್ನುವುದು ಒಂದು ನಂಬಿಕೆ. ಶಿವರಾಮ ಕಾರಂತರು, ತಮ್ಮ "ಅಳಿದ ಮೇಲೆ" ಎಂಬ ಕಾದಂಬರಿಯಲ್ಲಿ, ಯಶವಂತರ ಬಗ್ಗೆ ಪಾರ್ವತಮ್ಮ ನುಡಿದ – "ಮಗೂ, ದೇವರಿದ್ದಾನೆ ಎಂದು ನಂಬಿದವರಿಗೆ ಅವನಿದ್ದಾನೆ" ಎಂಬ ಮಾತನ್ನು ನಾನಿಲ್ಲಿ ನೆನೆಸಿಕೊಳ್ಳುತ್ತಿದ್ದೇನೆ. ಅಂದರೆ, "ದೇವರು", "ಭಕ್ತಿ" ಎಂಬುದು ಅವರವರ ನಂಬಿಕೆಯ ಪರಿಣಾಮ. ಭಕ್ತಿ, ಈ ನಂಬಿಕೆಯ ಅಭಿವ್ಯಕ್ತಿ ಎಂದರೆ ತಪ್ಪಾಗಲಾರದು. ದೇವರನ್ನು ನೆನೆಸಿಕೊಂಡಾಗ, ಅದ್ಯಾವುದೋ ಒಂದು ಅತಿಮಾನುಷ ಶಕ್ತಿ ತಮ್ಮ ರಕ್ಷಣೆಗಿದೆ ಎಂಬ ನಂಬಿಕೆ ಮಾನವನಲ್ಲಿ ಬೆಳೆದು ಬಂದಿರಬಹುದು.

ಭಕ್ತಿಯು ಬಾಹ್ಯವಾಗಿ ಪ್ರಕಟವಾಗುವ ದೇವರ ಸ್ತುತಿ, ಪ್ರಾರ್ಥನೆ ಎಂದು ಹೇಳಬಹುದೇನೋ! ದೇವರ ಸ್ತುತಿಯನ್ನು ಗೀತೆಗಳ ಮೂಲಕ, ಅವುಗಳನ್ನು ಹಾಡಿ, ಮನಸ್ಸಿಗೆ ಶಾಂತಿ ಹಾಗೂ ಆತ್ಮ ತೃಪ್ತಿ ತಂದುಕೊಳ್ಳುವುದು ಒಂದು ವಿಧದ ಪ್ರಾರ್ಥನೆ. ಆದರೆ, ದೇವರ ಸ್ತುತಿಯನ್ನು ಮನಸ್ಸಿನಲ್ಲೇ ಮಾಡುವುದು ಧ್ಯಾನದ ಒಂದು ಲಕ್ಷಣ. ಧ್ಯಾನಕ್ಕೆ ಏಕಾಗ್ರತೆ ಬೇಕು. ಮನಸ್ಸು ಕದಡಿದಾಗ, ಶಾಂತಿ ಬಯಸಿ ಏಕಾಗ್ರತೆಯಿಂದ ದೇವರ ಧ್ಯಾನ ಮಾಡುವುದು ಪ್ರಾರ್ಥನೆಯ ಒಂದು ಅನನ್ಯ ಲಕ್ಷಣ. ಈಗಿನ ಕಾಲದ counsellingಗೆ ಇದೊಂದು ನಿದರ್ಶನವೆಂದು ಹೇಳಬಹುದು. ಇಲ್ಲಿ "ದೇವರು" ಎಂಬ ಅಗೋಚರ, ಅಮೂರ್ತ ಚೇತನವೇ counsellor ಆಗಿ ನಮ್ಮ ಮನಸ್ಸಿಗೆ ಶಾಂತಿ ದೊರಕಿಸುವವನು. ಅಂದರೆ, ನಮ್ಮ ಅಂತರಾತ್ಮವೇ ಇಲ್ಲಿಯ counsellor. ಹಾಗಾಗಿ, ಪ್ರಾರ್ಥನೆ ಎಂದರೆ self-counselling ಎಂದರೆ ತಪ್ಪಾಗಲಾರದು. ಆದರೆ,

ಕಷ್ಟ ಬಂದಾಗ ಮಾತ್ರ ದೇವರ ಸ್ಮರಣೆ ಎಂದು ತಿಳಿಯಬಾರದು. ನಮ್ಮ ಸುತ್ತಲಿನ ಪ್ರಪಂಚವನ್ನು ಸೃಷ್ಟಿಸಿದ ಆ "ಸೃಷ್ಟಿಕರ್ತ"ನಿಗೆ ಧನ್ಯವಾದ ಹೇಳುವ ಒಂದು ವಿಧಾನವೂ ಪ್ರಾರ್ಥನೆಯೇ!

ಜನಪದ ಸಾಹಿತ್ಯಕ್ಕೆ ಆ ತಲೆಬರಹವನ್ನಿತ್ತದ್ದು ಶಿಷ್ಟ ಸಾಹಿತ್ಯದ ಸಾಹಿತಿಗಳೇ ಎಂದು ನನ್ನ ಅಭಿಪ್ರಾಯ. ಶಿಷ್ಟ ಸಾಹಿತ್ಯಕ್ಕೆ ಮುಂಚೆಯೇ ಜನಪದ ಸಾಹಿತ್ಯವಿರಲಿಲ್ಲವೇ? ಜನಪದದ ಬೇರೆ-ಬೇರೆ ಪೂರಕ ವಿಭಾಗಗಳಾದ, ಜನಪದ ಸಾಹಿತ್ಯ, ಜನಪದ ಸಂಗೀತ ಮತ್ತು ಕಲೆ, ಜನಪದ ಕ್ರೀಡೆ, ಮುಂತಾದುವುಗಳು, ಹಳ್ಳಿಗರೂ, ಅನಕ್ಷರಸ್ಥರೂ ಆದ ಗ್ರಾಮೀಣರಲ್ಲಿ ಕಂಡುಬರುವ ವಿಶೇಷ ಕೌಶಲವೆಂಬ ನಂಬಿಕೆ ಬೆಳೆದು ಬಂದಿರುವುದು ಸಹಜ! ಶಿಷ್ಟ ಸಾಹಿತಿಗಳು ಆ ಕುಶಲತೆಯನ್ನು ಗುರುತಿಸಿ, ಅದನ್ನು ಶಿಷ್ಟ ಸಾಹಿತ್ಯದ ಗಮನಕ್ಕೆ ತಂದುದಲ್ಲದೆ, ಅದಕ್ಕೊಂದು ಅಮೂಲ್ಯ ಸ್ಥಾನವನ್ನು ಕೊಟ್ಟಿದ್ದಾರೆ. ಇಂತಹ ಗ್ರಾಮೀಣರು ಅನಕ್ಷರಸ್ಥರಾಗಿರಬಹುದು; ಆದರೆ, ಅವಿದ್ಯಾವಂತರಂತೂ ಅಲ್ಲ ಎಂಬುದು ಅಂಥವರು ರಚಿಸಿದ ಅನೇಕ ಹಾಡುಗಳಿಂದ ವ್ಯಕ್ತವಾಗುತ್ತದೆ. ಅವರು, ಭತ್ತ ಕುಟ್ಟುವಾಗ, ರಾಗಿ ಬೀಸುವಾಗ, ಕೋಲಾಟವಾಡುವಾಗ, ಮದುವೆಯ ಸಮಾರಂಭಗಳಲ್ಲಿ ಪಾತ್ರ ವಹಿಸಿದಾಗ, ತೊಟ್ಟಿಲು ತೂಗುವಾಗ, ಹಬ್ಬ-ಹರಿದಿನಗಳನ್ನು ಆಚರಿಸುವಾಗ - ಹೀಗೆ ತಮ್ಮ ಅನೇಕ ದೈನಂದಿನದ ಕೆಲಸಗಳ ಮಧ್ಯೆ ದಣಿವಾರಿಸಿಕೊಳ್ಳಲೋ, ಮನರಂಜನೆಗೋ ಹಾಡುವ ಹಾಡುಗಳು ಸ್ವಾಭಾವಿಕವಾಗಿ ಹೊರಗಿನ ಯಾರ ಪ್ರೇರಣೆ ಇಲ್ಲದೆ, ಸ್ವಯಂಪ್ರೇರಣೆಯಿಂದ ತನ್ನಷ್ಟಕ್ಕೆ ತಾನೇ ಸೃಷ್ಟಿಯಾದ ಹಾಡುಗಳಾಗಿದ್ದು, ಕನ್ನಡ ಸಾಹಿತ್ಯಕ್ಕೆ ಅತ್ಯುತ್ತಮ ಕೊಡುಗೆಗಳಾಗಿರುತ್ತವೆ. ಉದಾಹರಣೆಗೆ, ನನ್ನ ತಾಯಿ ನನ್ನ ತಮ್ಮ-ತಂಗಿಯರನ್ನು ತೊಟ್ಟಿಲಲ್ಲಿ ಮಲಗಿಸಿ ಹಾಡುವ, spontaneously ಹೊರಟ ಈ ಕೆಳಗೆ ಕಾಣಿಸಿದ ಹಾಡುಗಳು ನನ್ನ ಸ್ಮರಣೆಯಲ್ಲಿ ಅಳಿಯದೇ ಉಳಿದಿವೆ:

**ತುತ್ತುರ್ವಿಗ್ ತುಪ್ಪನ್ನ ನಮ್ಮಗೀಗ್ ಉಪ್ಪನ್ನ**
**ಸಂಗಡಾಡುವವ್ರಿಗ್ ಮೊಸರನ್ನ ನಮ್ಮಗಿನ್**
**ಬಯ್ಯುವವ್ರಿಗ್ ಕಲ್ಲನ್ನ**

**ಅತ್ತರೆ ನಮ್ಮಗು ಮುತ್ತು ಬಾಯ್ಬಿಟ್ಟಂತೆ**
**ಮತ್ತೆ ಕೋಗಿಲೆ ಸ್ವರದಂತೆ ಕೆಂದುಟಿ**
**ಹಚ್ಚ ಹಸುರಿನ ಗಿಳಿಯಂತೆ**

ಈ ಎರಡು (ಹಾಗೂ ಇನ್ನಿತರ ಹಲವು) ಹಾಡುಗಳಲ್ಲಿ ವ್ಯಕ್ತವಾಗಿರುವ ಮಾತೃ ಪ್ರೇಮ ಜನಪದ ಸಾಹಿತ್ಯ ಕನ್ನಡಕ್ಕೆ ನೀಡಿದ ಅಪಾರ ಕೊಡುಗೆಗೆ ಚಿಕ್ಕ ಪ್ರಮಾಣದ ನಿದರ್ಶನವೆಂದೇ ಹೇಳಬಹುದು. ತನ್ನ ಮಗು ಅತ್ತರೆ, ಆ ಅಳುವಿನಲ್ಲೇ ಸೊಗಸು ಕಾಣುವ ದೃಷ್ಟಿ ತಾಯಿಗೆ. ಮಗುವಿನ ಕೆಂದುಟಿಯನ್ನು "ಹಚ್ಚ ಹಸುರಿನ ಗಿಳಿ" ಯ

ಅಚ್ಚ ಕೆಂಪಿನ ಕೊಕ್ಕಿಗೆ ಹೋಲಿಸಿ ಬಳಸಿದ ಉಪಮೆ, ಜನಪದ ಸಾಹಿತಿಗಳ ಕುಶಲತೆಯನ್ನು ವ್ಯಕ್ತಪಡಿಸುವುದಿಲ್ಲವೇ?

ಹೀಗೆ, ಜನಪದ ಸಾಹಿತ್ಯ, ಕನ್ನಡ ಸಾಹಿತ್ಯಕ್ಕೊಂದು ವಿಶಿಷ್ಟ ಮೆರಗನ್ನು ಕೊಟ್ಟು, ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿ, ಬೆಳಗಿಸಿದೆ.

**ಜನಪದ ಮತ್ತು ಭಕ್ತಿ:**

"ಭಕ್ತಿ ಸಾಹಿತ್ಯ"ವೆಂಬ ಪ್ರಕಾರದ ಬಗ್ಗೆ ಒಂದೆರಡು ಮಾತುಗಳು. ಕನ್ನಡದಲ್ಲಿ ಈ ಪ್ರಕಾರ ಉಗಮವಾಗುವ ಮೊದಲು, ಎಲ್ಲ ಪ್ರಾರ್ಥನಾ ಹಾಗೂ ಪೂಜಾವಿಧಿಗಳು ಸಂಸ್ಕೃತದಲ್ಲೇ ನಡೆಯುತ್ತಿದ್ದವು ಎಂಬುದನ್ನು ಗುರುತಿಸಲೇ ಬೇಕು. ಸಂಸ್ಕೃತ ಬಾರದವರು ಅದನ್ನು ಒಪ್ಪಿಕೊಂಡು, ಎಲ್ಲ ಪೂಜಾ ವಿಧಿಗಳನ್ನು ಸಂಸ್ಕೃತ ಪಂಡಿತರಿಂದಲೇ ಮಾಡಿಸುತ್ತಿದ್ದರು. ಕ್ರಮೇಣ ತಮ್ಮ ಆಡುಭಾಷೆಯಲ್ಲೇ ಪ್ರಾರ್ಥನೆ ಮಾಡುವ ಒಂದು ಕ್ರಮ, ಪ್ರಾಯಶಃ ದಾಸಸಾಹಿತ್ಯದ ಮೂಲಕ ಹುಟ್ಟಿರಬಹುದು. ಇದನ್ನು, ನಾನು "ಜನ-ಪರ ಸಾಹಿತ್ಯ"ವೆಂದು ಕರೆಯಲಿಚ್ಛಿಸುತ್ತೇನೆ. ಈ ಪದಪುಂಜವನ್ನು "ಜನಪದ ಸಾಹಿತ್ಯ"ದೊಡನೆ ಅವೆರಡರಲ್ಲಿಯ ಸೂಕ್ಷ್ಮ ವ್ಯತ್ಯಾಸವನ್ನು ವಿವರಿಸಲು ಉಪಯೋಗಿಸಲು ಇಚ್ಛಿಸುತ್ತೇನೆ. "ಜನಪರ ಸಾಹಿತ್ಯ" ಶಿಷ್ಟ ಸಾಹಿತ್ಯಕ್ಕೆ ("ಜನಪದ ಸಾಹಿತ್ಯ"ಕ್ಕೆ ಭಿನ್ನವಾಗಿ) ಸಂಬಂಧಿಸಿದ್ದೆಂದು ಇಲ್ಲಿ ಅರ್ಥೈಸಬೇಕು.

**ಜನ-ಪರ ಮತ್ತು ಜನಪದ ಸಾಹಿತ್ಯ:**

ಒಮ್ಮೆ, ಕನ್ನಡ ಸಾಹಿತ್ಯದಲ್ಲಿನ ಒಬ್ಬ ಹೆಸರಾಂತ ವಿಮರ್ಶಕ, ಶ್ರೀ ನರಹಳ್ಳಿ ಬಾಲಸುಬ್ರಮಣ್ಯ ಅವರ ಜೊತೆ ಭಕ್ತಿ ಸಾಹಿತ್ಯದ ಕುರಿತು ಮಾತಾಡುತ್ತಿದ್ದಾಗ, ಅವರು ಭಕ್ತಿ ಸಾಹಿತ್ಯ ಒಂದು ವಿಧದಲ್ಲಿ ಆಂದೋಲನ (revolutionary ಪ್ರಕ್ರಿಯೆ) (ಅಥವಾ ಬಂಡಾಯ?) ಎಂದು ಹೇಳಿದುದು ನನ್ನ ಮನಸ್ಸನ್ನು ಸೆಳೆದು ಹಿಡಿಯಿತು. ಹಿಂದಿನಿಂದಲೂ, "ದೇವರ ಭಾಷೆ" ಎಂದು ಪರಿಗಣಿಸಿದ ಸಂಸ್ಕೃತದಲ್ಲಿಯೇ ವೇದ-ಮಂತ್ರಗಳಿದ್ದು, ನಮ್ಮ ಪ್ರಾರ್ಥನೆ ದೇವರಿಗೆ ತಲುಪಬೇಕಾದಲ್ಲಿ, ಸಂಸ್ಕೃತವೇ ಮಾಧ್ಯಮವಾಗಿತ್ತು. ಹೀಗೆ, ಹಿಂದಿನ ಸಮಾಜದಲ್ಲಿ ಭಾಷೆಯ ಬಗ್ಗೆ ಒಂದು ಬಗೆಯ "ಶೋಷಣೆ" ಬೆಳೆದು ಬಂದಿತ್ತು ಎಂದರೆ ತಪ್ಪಾಗಲಾರದು. ಅದಕ್ಕೆ ಪ್ರತಿಯಾಗಿ ಜನರು ಆಡುವ ಭಾಷೆಯಲ್ಲಿ ಪ್ರಾರ್ಥನೆ ಸಲ್ಲಿಸುವ ಬಂಡಾಯ ಪ್ರಕ್ರಿಯೆ ಬೆಳೆಯಿತು ಎಂದಾಗ, ಅದು ನಿಜವೆನಿಸುತ್ತದೆ. ಈ ನಿಟ್ಟಿನಲ್ಲಿ ನಾನು ಹಿಂದೊಮ್ಮೆ "ದಾಸ ಸಾಹಿತ್ಯ"ದ ಕುರಿತು ಪ್ರತಿಕ್ರಿಯಿಸುತ್ತ, ಅಂಥದ್ದೇ ಅಭಿಪ್ರಾಯ ವ್ಯಕ್ತಪಡಿಸಿದ ಜ್ಞಾಪಕ ಬಂತು. ಹಾಗಾಗಿ,

"ದಾಸ ಸಾಹಿತ್ಯ" ಒಂದು ವಿಧದಲ್ಲಿ "ಜನ-ಪರ"ವಾಗಿ ಸಾಮಾನ್ಯ ಜನರಿಗಾಗಿ ಪ್ರಾರಂಭವಾದುದು ಎಂದು ಹೇಳಬಹುದು. ಅಲ್ಲಿ ಬೆಳೆಸಿದ ಭಾಷೆ ಶಿಷ್ಟ ಸಾಹಿತ್ಯದಲ್ಲಿ ಬಳಸಿದ ಭಾಷೆ ಇರಬಹುದು. ಆದರೂ, ಅದು ಜನ-ಪರವಾಗಿದ್ದು, ಜನಪದ ಸಾಹಿತ್ಯಕ್ಕೆ ಸಮೀಪವೆಂದೂ ಹೇಳಬಹುದೇನೋ! ಆದರೆ, ದಾಸ ಸಾಹಿತ್ಯಕ್ಕೂ ಮೊದಲು ಗ್ರಾಮೀಣ ಜನರು ತಮ್ಮ ದೈನಂದಿನದ ಕೆಲಸಗಳ ಮಧ್ಯೆ ದೇವರ ಸ್ಮರಣೆ ಮಾಡುತ್ತಿದ್ದರೆಂಬುದನ್ನೂ ನಾವು ಗುರುತಿಸಲೇ ಬೇಕು. ಈ ನಿಟ್ಟಿನಲ್ಲಿ "ಭಕ್ತಿ ಸಾಹಿತ್ಯ" ಒಂದು revolutionary ಪ್ರಕ್ರಿಯೆ ಎಂದಾಗ, ಪೌರೋಹಿತ ಸಾಹಿತ್ಯಕ್ಕೆ ಹೋಲಿಸಿದಾಗ ಮಾತ್ರ ಇದು ಸಮಂಜಸವೆಂದು ನಾವು ಗುರುತಿಸಬೇಕು. ಈ ಸಂದರ್ಭದಲ್ಲಿ, ಹಿಂದೊಮ್ಮೆ ಬೀಚಿಯವರು ಹೇಳಿದ ಹಾಸ್ಯ ಸಂಗತಿಯೊಂದು ಜ್ಞಾಪಕಕ್ಕೆ ಬರುರುತ್ತಿದೆ. ಬೀಚಿಯವರಿಗೆ ಸಂಧ್ಯಾವಂದನೆ ಹೇಳಿಕೊಡುವ ಪುರೋಹಿತರೊಬ್ಬರಿದ್ದರು. ಒಮ್ಮೆ ಮಂತ್ರ ಹೇಳಿಕೊಡುತ್ತಿದ್ದಾಗ, ಒಂದು ಮಂತ್ರದ ಅರ್ಥವನ್ನು ಬೀಚಿಯವರು ಪುರೋಹಿತರನ್ನು ಕೇಳಿದಾಗ, "ಅದರ ಅರ್ಥ ಕಟ್ಟಿಕೊಂಡು ನಿನಗೇನಾಗಬೇಕಾಗಿದೆ? ಬಾಯಿ ಮುಚ್ಚಿಕೊಂಡು ನಾನು ಹೇಳಿದ್ದನ್ನು ಪುನರುಚ್ಚರಿಸು ... '..................' ..." ಎಂದು ಹೇಳಿದರಂತೆ. (ಇಲ್ಲಿ, '..................', ಒಂದು ಅವಾಚ್ಯ ಗ್ರಾಮೀಣ ಬೈಗುಳ.) ಆಗ, ಬೀಚಿಯವರು "...ಬಾಯಿ ಮುಚ್ಚಿಕೊಂಡು ನಾನು ಹೇಳಿದ್ದನ್ನು ಪುನರುಚ್ಚರಿಸು '..................'..." (ಕ್ಷಮಿಸಿ, ಅದನ್ನು ಇಲ್ಲಿ ಬರೆಯಲು ಮುಜುಗರ) ಎಂದು ಪುರೋಹಿತರ ಮಾತನ್ನೇ ಪುನರುಚ್ಚರಿಸಿದರು. ಅಂದರೆ, ಸಂಸ್ಕೃತದಲ್ಲಿ ಮಂತ್ರದ ಅರ್ಥ ತಿಳಿಯದೆ ಪೂಜೆ ಸಲ್ಲಿಸಿದರೂ, ಅದು ದೇವರನ್ನು ಮುಟ್ಟುತ್ತದೆ ಎಂಬ ಹಿಂದಿನಿಂದ ಬಂದ ಗೊಡ್ಡು ನಂಬಿಕೆ ಇಲ್ಲಿ ವ್ಯಕ್ತವಾಗುತ್ತದೆ. ಹಾಗೆಯೇ, ಜಾತಿ ಶೋಷಣೆಯ ಉದಾಹರಣೆಗಳನ್ನು ಕನಕದಾಸ ಮತ್ತು ಶಿಶುನಾಳರು ಅನುಭವಿಸಿದ ಸಂಗತಿಗಳಿಂದಲೂ ಕಾಣಬಹುದು. ಕುರುಬರೆಂಬ ಕಾರಣದಿಂದ ಕನಕದಾಸರಿಗೆ ಕೃಷ್ಣದೇವಾಲಯದಲ್ಲಿ ಪ್ರವೇಶ ಸಿಕ್ಕಿರಲಿಲ್ಲ. ಆದರೆ, ಕನಕದಾಸರು ಹೊರಗಿನಿಂದಲೇ ಕನ್ನಡದಲ್ಲಿ (ಒಳಗೆ ಸಂಸ್ಕೃತದ ಮಂತ್ರಘೋಷಕ್ಕೆ ಬದಲಾಗಿ) ಭಕ್ತಿಯಿಂದ ಹಾಡಿದಾಗ, ಕೃಷ್ಣನ ವಿಗ್ರಹವೇ ತಿರುಗಿ, ಕನಕದಾಸರ ಭಕ್ತಿಯನ್ನು ಮೆಚ್ಚಿದ ಸಂಗತಿ ಎಲ್ಲರಿಗೂ ತಿಳಿದುದೇ! ಅಂದರೆ, ಕನ್ನಡವನ್ನೂ ದೇವರು ಅರ್ಥ ಮಾಡಿಕೊಳ್ಳುತ್ತಾರೆಂದಾಯ್ತು. ಶಿಶುನಾಳ ಶರೀಫರಿಗೂ ಅಂಥದೇ ಅನುಭವವಾಗಿತ್ತಂತೆ. ಮುಸ್ಲಿಮರಾದ ಅವರಿಗೆ ಒಮ್ಮೆ ಹನುಮ ದೇವಾಲಯದೊಳಗೆ ಪ್ರವೇಶ ಸಿಕ್ಕಿರದೆ, ಅವರು ಹೊರಗಿನಿಂದಲೇ ಕನ್ನಡ ಭಕ್ತಿಗೀತಗಳನ್ನು ಹಾಡಿದಾಗ ಹನುಮ ದೇವರು ಪ್ರಸನ್ನರಾದ ಒಂದು ಕತೆಯೂ ಇದೆ. ಹೀಗೆ ಭಾಷೆ ಮತ್ತು ಜಾತಿ ಶೋಷಣೆಗಳ ವಿರುದ್ಧ ಕನ್ನಡದಲ್ಲಿ ಭಕ್ತಿ ಪಂಥ ಹುಟ್ಟಿತು ಎಂದಾಗ ಅದೊಂದು revolutionary ಪ್ರತಿಕ್ರಿಯೆಯೆಂದರೆ ತಪ್ಪಾಗಲಾರದು.

**ಜನಪದ ಭಕ್ತಿ ಗೀತಗಳು:**

ನಮ್ಮ ಹಳ್ಳಿಗರು ಜನಪದ ಸಾಹಿತ್ಯವನ್ನು ತಮ್ಮಷ್ಟಕ್ಕೆ ತಾವೇ ಯಾವ ಶಿಷ್ಟ ಸಾಹಿತ್ಯದ ಒತ್ತಡವಿಲ್ಲದೆ (influence) ಪ್ರಾರಂಭಿಸಿ, ಮುನ್ನಡೆಸಿಕೊಂಡು ಬಂದು, ನಮ್ಮ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಈ ಕೆಳಗಿನ ಕೃಷ್ಣನ ಲೀಲೆಯನ್ನು ಮತ್ತು ಲೂಟಿಯನ್ನು ವಿವರಿಸುವ ಹಾಗೂ ಹೊಗಳುವ ಜನಪದ ಹಾಡನ್ನು ಗಮನಿಸಿ:

**ನಿನ್ನ ಮಗನ ಲೂಟಿ ಘನವಮ್ಮಾ:**

ನಿನ್ನ ಮಗನ ಲೂಟಿ ಘನವಮ್ಮಾ – ಗೋಪೀ
ಕರೆದು ಕೃಷ್ಣಗೆ ಬುದ್ಧಿ ಹೇಳಮ್ಮಾ ॥ ಪಲ್ಲವಿ ॥

ಮೂರಾಳು ಸ್ತ್ರೀಯರು ಗೋಪಮ್ಮಾ – ನಾವು
ನೀರಿಗೆ ಹೋಗುತಿದ್ದೋ ಗೋಪಮ್ಮಾ
ಹಾರಿ ಹಾರೀ ಬಂದು ಗೋಪಮ್ಮಾ ನಮ್ಮ
ನೀರ ಕೊಡಗಳೊಡೆದ ಗೋಪಮ್ಮಾ –ನಿನ್ನ ಮಗನ

ಆರಾಳು ಸ್ತ್ರೀಯರು ಗೋಪಮ್ಮಾ – ನಾವು
ಮೊಸರು ಮಾರುತ ಬಂದೋ ಗೋಪಮ್ಮಾ
ವಾರೆ ವಾರೆಲೆ ಬಂದು ಗೋಪಮ್ಮಾ ನಮ್ಮ
ಮೊಸರು ಬೆಣ್ಣೇ ತಿಂದ ಗೋಪಮ್ಮಾ – ನಿನ್ನ ಮಗನ

ಎಂಟಾಳು ಸ್ತ್ರೀಯರು ಗೋಪಮ್ಮಾ – ನಾವು
ಬೆಣ್ಣೆ ಮಾರುತ ಬಂದೋ ಗೋಪಮ್ಮಾ
ಬಿಂಕದಿಂದಲೆ ಬಂದು ಗೋಪಮ್ಮಾ ನಮ್ಮ
ಬೆಣ್ಣೆ ಮೊಸರಾ ತಿಂದ ಗೋಪಮ್ಮಾ – ನಿನ್ನ ಮಗನ

ಹನ್ನೆರಡು ಸ್ತ್ರೀಯರು ಗೋಪಮ್ಮಾ – ನಾವು
ತಾನವ ಮಾಡುತಿದ್ದೋ ಗೋಪಮ್ಮಾ
ಸೀರೆನೆಲ್ಲ ಕದ್ದು ಗೋಪಮ್ಮಾ ನಮ್ಮ
ಕಣ್ಣ ಸನ್ನೆಲಿ ಕರೆದ ಗೋಪಮ್ಮಾ – ನಿನ್ನ ಮಗನ

ಈ ಹಾಡು, ದಾಸರ ಕೃತಿಯಾದ "ಮೆಲ್ಲಮೆಲ್ಲನೆ ಬಂದನೆ" ಹಾಡಿಗೆ ತುಂಬಾ ಹೋಲಿಕೆ ಇರುವುದು ವ್ಯಕ್ತವಾಗುತ್ತದೆ.

**ಮೆಲ್ಲಮೆಲ್ಲನೆ ಬಂದನೆ:**

**ಮೆಲ್ಲಮೆಲ್ಲನೆ ಬಂದನೇ ಗೋಪಮ್ಮ ಕೇಳೇ**
**ಮೆಲ್ಲಮೆಲ್ಲನೆ ಬಂದನೇ**
**ಮೆಲ್ಲಮೆಲ್ಲನೆ ಬಂದು ಗಲ್ಲಕ್ಕೆ ಮುತ್ತು ಕೊಟ್ಟು**
**ನಿಲ್ಲದೆ ಓಡಿ ಪೋದ ಕಳ್ಳಗೆ ಬುದ್ಧಿ ಪೇಳೆ –ಮೆಲ್ಲಮೆಲ್ಲನೆ**

ಇತ್ಯಾದಿ

ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ದಾಸ ಸಾಹಿತ್ಯ, ಹಾಗೂ ಜನಪದ ಹಾಡುಗಳಲ್ಲಿ ಕಂಡುಬರುವ ಹೋಲಿಕೆ! ಇವೆರಡರಲ್ಲಿ ಮೂಲ ಯಾವುದೆಂದು ಹೇಳಲು ಸಾಧ್ಯವಿಲ್ಲ. ದಾಸರ ಪದ "ಜನ–ಪರ" ಸಾಹಿತ್ಯಕ್ಕೆ ಬೆಂಬಲ ಕೊಟ್ಟರೆ, ಜನಪದ ಹಾಡು ಜನಪದ ಸಾಹಿತ್ಯಕ್ಕೆ ಬೆಂಬಲ ನೀಡುತ್ತದೆ – ಎಂಬುದು ಮಾತ್ರ ನನ್ನ ಅನಿಸಿಕೆ. ಇನ್ನೊಂದು ದಾಸ ಸಾಹಿತ್ಯದ "ನೋಡು ನೋಡು ಗೋಪಿ ನಿನ್ನ ಮಗನ ಲೀಲೆಯ; ಮಾಡುತಾನೆ ಮನೆಗೆ ಬಂದು ಬಹಳ ಲೂಟಿಯ..." ಹಾಡನ್ನೂ ಇಲ್ಲಿ ನೆನೆಯಬಹುದು.

ಕೃಷ್ಣನ ಲೂಟಿಯ ಬಗ್ಗೆ ಗೋಪಿಯರ ದೂರಿಗೆ ಯಶೋದೆ ಪ್ರತಿಕ್ರಯಿಸಿದ ಹಾಡು ಹೀಗಿದೆ:

**ನಿಜವೇನೋ ಕೃಷ್ಣ:**

**ನಿಜವೇನೋ ಕೃಷ್ಣಾ ನಿಜವೇನೋ – ಇಂಥ**
**ದುರುಳ ಬುದ್ಧಿ ನಿನಗೆ ತರವೇನೋ**
**ಕೃಷ್ಣಾ – ತರವೇನೋ ॥ ಪ ॥**

**ಹಾಲನ್ನು ಕುಡಿದ್ಯಂತೆ ಗೊಲ್ಲರ ಮsನೇ**
**ಬಾಲೆಯರ ಹೊಡೆದೆಯಂತೇ**
**ಜಾಲುಗಾರಿಕೆಯಿಂದ ಸಾಲು ಮರವನೇರಿ**
**ಸೀರೆಯ ವೈದೆಯಂತೇ – ನಿಜವೇನೋ**

**ಮೊಸರನ್ನ ಕುಡಿದ್ಯಂತೆ – ಗೊಲ್ಲರ ಮsನೇ**
**ಸೊಸೆಯರ ಹೊಡೆದೆಯಂತೇ**
**ನಸುನಗೆಯಿಂದಲಿ ಹಸನಾದ ಹೆಣ್ಣುಗಳ**
**ಕುಚಗಳ ಪಿಡಿದೆಯಂತೆ – ನಿಜವೇನೋ**

ಬೆಣ್ಣೆಯ ತಿಂದ್ಯಂತೆ – ಗೊಲ್ಲರ ಮsನೇ
ಹೆಣ್ಣುಗಳ ಕರೆದೆಯಂತೇ
ಕಣ್ಣು ಸನ್ನೆಯ ಮಾಡಿ ಮೆಲ್ಲಮೆಲ್ಲನೆ ಪೋಗಿ
ಕೆನ್ನೆಯ ಕಡಿದೆಯಂತೇ – ನಿಜವೇನೋ

ತುಪ್ಪವ ತಿಂದ್ಯಂತೆ – ಗೊಲ್ಲರ ಮsನೇ
ಮಕ್ಕsಳ ಹೊಡೆದೆಯಂತೇ
ನೆಪ್ಪು ಕಾಣದಂತೆ ಮೆಲ್ಲ ಮೆಲ್ಲನೆ ಪೋಗಿ
ಸರ್ಪಾನ ಕೊಂದೆಯಂತೇ – ನಿಜವೇನೋ

ಮೇಲಿನ, ಹಾಗೂ "ನಿನ್ನ ಮಗನ ಲೂಟಿ ಘನವಮ್ಮಾ" ಎಂಬ ಜನಪದ ಹಾಡುಗಳೆರಡೂ ಕೃಷ್ಣನ ತುಂಟತನವನ್ನು ಪ್ರಸ್ತಾಪಿಸುತ್ತಲೇ ಅವನ ಸ್ತುತಿ ಮಾಡಿ, ಒಂದು ವಿಧದ ಹೊಗಳುವ ಮತ್ತು ಕೃಷ್ಣನ ಸ್ಮರಣೆ ಮಾಡುವ ಹಾಡುಗಳೂ ಆಗಿರುವುದನ್ನು ಗಮನಿಸಬೇಕು.

ಜನಪದ ಸಾಹಿತ್ಯದಲ್ಲಿ ಅರಳಿದ ಭಕ್ತಿ ಹಾಡುಗಳು ಕೋಲಾಟದ, ರಾಗಿ ಬೀಸುವ, ನಾಡ ಹಬ್ಬಗಳ, ಲಾವಣಿ, ಮುಂತಾದ ಹಾಡುಗಳಲ್ಲಿ ವ್ಯಕ್ತವಾಗಿ ಜನಪ್ರಿಯತೆಯನ್ನು ಗಳಿಸಿವೆ. ಉದಾಹರಣೆಗೆ ಈ ಕೆಳಗಿನ ಕೋಲಾಟದ ಹಾಡನ್ನು ಗಮನಿಸಿ:

**ಬೆನವಣ್ಣ :**

ಮsದಾಲು ನೆನೆದೆನೆ ಸ್ವಾಮಿ ಲಿಂಗನ
ಸನುಮತ ಶಿವಗಂಗೆ ಬೆನವಾನ ॥ ಪಲ್ಲವಿ ॥

ಶಿವಗಂಗೆ ಬೆನವನ ಸುಟಿಕೆ ಕಾಳಿಂಗನ
ದಂಡೆsಯನಾಯ್ಕೊಂದ್ ಇನಿಯಂಕs
ದಂಡೆsಯನಾಯ್ಕೊಂದ್ ಇನಿಯಂಕ ಗೌರಿಯ
ಮುದ್ದುs ಕುಮಾರಾ ಕೊಡುಮತಿಯ – ಮsದಾಲು –

ಕಿತ್ ಹುಲಿ ನೇ ಕೆರೆ ಒತ್ತೀಲೆ ಇರುವೋನೆ
ಮುತ್ತೈದೆ ಮಗನೇ ಬೆನವಣ್ಣ
ಮುತ್ತೈದೆ ಮಗನೇ ಬೆನವಣ್ಣ್ ಬೆಳ್ಳೀದೇವ
ಚಿತ್ತೈಸಿ ಪದನ ಬರಕೊಡೋ – ಮsದಾಲು –

ಹಾರನಹಳ್ಳಿಯ ಓರೆಲಿ ಇರುವೋನೆ
ನಾರೀಯ ಮಗನೆ ಬೆನವಣ್ಣಾ
ನಾರೀಯ ಮಗನೆ ಬೆನವಣ್ಣ ಬೆಳ್ಳೀದೇವ
ಬಾರಾದ ಪದನ ಬರಕೊಡೋ –ಮsದಾಲು –

ಬಾಣಾವರದ ಬಾಗಿಲಲ್ಲಿರುವೋನೆ
ಬಾಲೆಯ ಮಗನೆ ಬೆನವಣ್ಣಾ
ಬಾಲೆಯ ಮಗನೆ ಬೆನವಣ್ಣ ಬೆಳ್ಳೀದೇವ
ಮೇಲಾದ ಪದವಾ ಬರಕೊಡೋ –ಮsದಾಲು –

ಹೆಬ್ಬಾಕಲ್ಲಿರುವೋ ಕಬ್ಬಲ್ಲ ಬೆನವಗೆ
ಕಬ್ಬಿನ ಜಲ್ಲೆ ನೆನಗಡಲೆ
ಕಬ್ಬಿನ ಜಲ್ಲೆ ನೆನಗಡಲೆ ಸಲಿಸುವೆ
ಕಬಲ್ಲ ಬೆನವಾ ಕೊಡು ಮತಿಯಾ – ಮsದಾಲು –

ಎಳ್ಳು ಹೊಲದಾಗಿರೋ ಡೊಳ್ಳ್ ಹೊಟ್ಟೆ ಬೆನವಣ್ಣ
ಎಳ್ಳುಂಡೆ ತುಪ್ಪಾ ತಿಳಿದುಪ್ಪಾ
ಎಳ್ಳುಂಡೆ ತುಪ್ಪಾ ತಿಳಿದುಪ್ಪಾ ತಿನಿಸುವೆ
ಡೊಳ್ಳ್ ಹೊಟ್ಟೆ ಬೆನವಾ ಕೊಡು ಮತಿಯಾ – ಮsದಾಲು –

ಈ ಹಾಡಿನಲ್ಲಿ, ದೇವಲೋಕದ ಬೆನವನನ್ನು ನೆನೆಯದೆ ತಮಗೆ ಸಮೀಪವಾದ ಶಿವಗಂಗೆ, ಹಾರನಹಳ್ಳಿ, ಬಾಣಾವರ, ಮೊದಲಾದ ಸ್ಥಳೀಯ ಗುಡಿಗಳ ವಿನಾಯಕನನ್ನೇ ಜನಪದ ಗಾಯಕರು ನೆನೆದು ಹಾಡಿರುವುದನ್ನು ಗಮನಿಸಬೇಕು. ಇದು ಜನಪದದ ವೈಶಿಷ್ಟ್ಯ! ಮನರಂಜನೆಗೆಂದು ಕೋಲಾಟವಾಡುವ ಮೊದಲು ವಿನಾಯಕನನ್ನು ಪ್ರಾರ್ಥಿಸುವುದನ್ನು ಇಲ್ಲಿ ಕಾಣಬಹುದು. ನಮ್ಮ ಸಂಸ್ಕೃತಿಯಲ್ಲಿ ಗಣೇಶನ ಪ್ರಾರ್ಥನೆ ಮಾಡಿ, ಮುಂದೆ ಬರುವಂಥ ವಿಘ್ನಗಳಿಂದ ಮುಕ್ತಿ ಪಡೆಯುವ ರೂಢಿ ಬೆಳೆದು ಬಂದಿದೆ. "ಮೊದಲೊಂದಿಪೆ ನಿನಗೆ ಗಣನಾಥಾ..." ಎಂಬ ಹಾಡನ್ನು ಇಲ್ಲಿ ನೆನೆಯಬಹುದು. ಇನ್ನೊಂದು ಕೋಲಾಟದ ಹಾಡು,

ಶರಣೆನ್ನುರಯ್ಯಾ ಶರಣೆನ್ನಿರೋ
ಮಾಮುದ್ದು ಮಲಕಿನ ಕೋಲೆನ್ನಿರೊ
ಮಾಮುದ್ದು ಮಲಕಿನ ಕೋಲೆನ್ನಿರೊ
ಗಿರಿಜಾ ರಮಣಗೆ ಶರಣೆನ್ನಿರೋ

ಎಂದು ಪ್ರಾರಂಭಿಸಿ,

ತಂದೆ ತಾಯೀಗೊಮ್ಮೆ ಶರಣೆನ್ನಿರೋ
ಮಳೆಕೊಡೋ ಮೋಡಕ್ಕೆ ಶರಣೆನ್ನಿರೋ
ಮಳೆಕೊಡೋ ಮೋಡಕ್ಕೆ ಶರಣೆನ್ನಿರೋ
ಬೆಳೆ ಕೊಡೋ ಭೂಮಿಗೆ ಶರಣೆನ್ನಿರೋ

ಎಂದು ಹಾಡಿದಾಗ, ಆ ಹಾಡಿನಲ್ಲಿ ತಂದೆ ತಾಯಿ, ಮಳೆ ಮೋಡ, ಭೂತಾಯಿಯರನ್ನು ದೇವರ ಸ್ಥಾನಕ್ಕೇರಿಸಿದುದು ಗಮನೀಯವಾದುದು. ಹಳ್ಳಿಗರು ಪ್ರಕೃತಿಯನ್ನು ಪೂಜಿಸುವ ವಿಧಾನ ಸೋಜಿಗವೆನಿಸುವುದಿಲ್ಲವೇ?

ರಾಗಿ, ಅಕ್ಕಿ, ಬೇಳೆಕಾಳುಗಳನ್ನು ಬೀಸುವಾಗಲೂ ಹಳ್ಳಿಯ ಹೆಂಗಳೆಯರು ದೇವರ ಧ್ಯಾನ ಮಾಡುವಈ ಕೆಳಗಿನ ಹಾಡನ್ನು ಗಮನಿಸಿ:

**ನಿದ್ರೆಗಣ್ಣಾಗೆ ನಮ್ಮ ಗ್ಯಾನ:**

ನಿಂಬಿಯಾ ಬನsದ ಮ್ಯಾಗಳ
ಚಂದ್ರsಮಾ ಚೆಂಡಾಡಿದಾs ॥ ಪ ॥

ಎದ್ದುsನೇ ನಿಮ ಗ್ಯಾನ ಏಳುತಲೇ ನಿಮ ಗ್ಯಾನಾ
ಸಿದ್ಧsರ ಗ್ಯಾನಾ ಶಿವಗ್ಯಾನಾ – ನಿಂಬಿಯಾs
ಸಿದ್ಧsರನೇ ಗ್ಯಾನs ಶಿವ ಗ್ಯಾನಾ ಮಾ ಶಿವನೇ
ನಿದ್ರೆಗಣ್ಣಾಗೇ ನಿಮ ಗ್ಯಾನಾ – ನಿಂಬಿಯಾs

..............................................................

ಕಲ್ಲವ್ವಾ ಮಾತಾಯೀ ಮೆಲ್ಲವ್ವಾ ರಾಗೀಯಾ
ನೀ ಜಲ್ಲಾ ಜಲ್ಲಾನೇ ಉದುರವ್ವಾ – ನಿಂಬಿಯಾs
ಜಲ್ಲಾನೇ ಜಲ್ಲಾನೇ ಉದುರವ್ವಾ ನಾ ನಿಮಗೆ
ಬೆಲ್ಲದಾರತಿಯಾ ಬೆಳsಗೇನುs – ನಿಂಬಿಯಾs

ನಿಂಬಿಯಾ ಬನsದ ಮ್ಯಾಗಳ
ಚಂದ್ರಮಾ ಚೆಂಡಾಡಿದಾs

ಎಂದು ಬೀಸುವ ಕಲ್ಲನ್ನೇ ದೇವರ ಸ್ಥಾನಕ್ಕೇರಿಸಿ, ಬೆಲ್ಲದಾರತಿಯನ್ನು ಬೆಳಗಿದ ಸೊಲ್ಲು, ಹಳ್ಳಿಯವರ ಉಪಮೆಯ ಚಾತುರ್ಯವನ್ನು ಪ್ರದರ್ಶಿಸುತ್ತದೆ.

ಅಥವಾ,

ಶಿವನೇ ಗುರುವೆಂದು ಹಿಡಿದೇವು ರಾಗಿಕಲ್ಲಾ
ಶಿವನೇ ಕೊಡು ನಮಗೆ ಮತಿಯಾ ಸಂಗನ ಬಸವಾ
ಗುರುವೇ ಕೊಡು ನಮಗೆ ಸುಖsಗsಳs

ಎಂಬ ಹಾಡಿನಲ್ಲೂ, ಮತ್ತಿತರ ಹಾಡುಗಳಲ್ಲೂ ದೇವರ ಧ್ಯಾನ ಮಾಡುತ್ತಿರುವುದು ವ್ಯಕ್ತವಾಗುತ್ತದೆ.

ಮದುವೆಯ ಸಂದರ್ಭದಲ್ಲಿ ದೇವರನ್ನು ನೆನೆಯುವ ಹಾಡುಗಳೂ ಇವೆ. ಉದಾಹರಣೆಗೆ, ಮದುಮಗನನ್ನು ಮಂಟಪದ ಹಸೆಗೆ ಕರೆಯುವ ಹಾಡೊಂದನ್ನು ನೋಡಿ:

**ಹಸೆಗೆದ್ದು ಬರುವಾಗ:**

ಹಸೆಗೆದ್ದು ಬರುವಾಗ ಋಷಿಗsಳ ನೆನೆ ಮಗನೆ
ದೆಸೆ ಮೂರುತಿ ನಮ್ಮ ಗುರುವಿನs – ಸೋ
ದೆಸೆ ಮೂರುತಿ ನಮ್ಮ ಗುರುವಿನ ಪಾದಾ ನೆನೆದು
ಸಿಸುವೇ ಬಂದೇರು ಹಸೇ ಮೇಲೇ – ಸೋ

ಅತ್ತ ಶರಣೆನ್ನು ಇತ್ತ ಶರಣೆನ್ನು
ಸುತ್ತೆಲ್ಲ ದೇವರಿಗೆ ಶರಣೆನ್ನು – ನಮ ಭಾಗದ
ಅಪ್ಪ ಮಲ್ಲಯ್ಗೇ ಶರಣೆನ್ನು – ಸೋ

ಹಾಗೆ ಶರಣೆನ್ನು ಹೀಗೆ ಶರಣೆನ್ನು
ದೂರಲ ದೇವರಿಗೆ ಶರಣೆನ್ನು – ನಮ ಭಾಗದ
ಸ್ವಾಮೀ ತಿಮ್ಮಪ್ಗೇ ಶರಣೆನ್ನು – ಸೋ

ಅಥವಾ ಧಾರೆ ಸಮಯ ಹಾಡುವ, ಹಾಡಿನಲ್ಲೂ ದೇವರ ಸ್ಮರಣೆ ಮಾಡಿದುದು ಗಮನಕ್ಕೆ ಬಾರದಿರದು:

ಏಳುತಲೆದ್ದು ಏನ್ಕಂಡ್ಯೋ ಮಗನೇ?
ಆಚಳ್ತು ಮಾಚಳ್ತು ಮಾದೇವ್ರ ಕಂಡೆ
ಮಾದೇವರೇರುವ ನಂದಿಯ ಕಂಡೆ
ನಂದಿಯ ಮ್ಯಾಲೆ ಗಂಗೆ ಗೌರಿಯ ಕಂಡೆ

ಗಂಗವ್ವ ಗೌರವ್ವ ಏನ್ಕೊಟ್ರೋ ಮಗನೇ?
ಕೈತುಂಬ ಕರ್ಪೂರದೀಳ್ಯಾವ ಕೊಟ್ರು

ಮೈತುಂಬ ಮುತ್ತಿನ ಸಾಸ್ಟೀನೆ ಕೊಟ್ರು

..................................................

ಹಸಿಗ್ವಾಡಿ ಮುಂದೆ ದೊಡ್ಡಸಿಯ ಬರೆದು
ದೊಡ್ಡಸಿಯ ಮೇಲೆ ಮದುಮಕ್ಕ್ ಮೂರ್‌ತ್ವಾಗಿ
ನಾವಿಟ್ಟ ಸಾಸ್ವೀ ಶಿವಕೊಟ್ಟ ಬಾಸೀ
ಜಯಾ ಜಯಾಽ ಸೋಬಾನಽ ಬನ್ನೀ

ಇನ್ನು ಹಬ್ಬ-ಹರಿದಿನಗಳಲ್ಲಂತೂ ದೇವರ ಸ್ಮರಣೆ ಮಾಡುವುದು ನಮ್ಮ ಸಂಸ್ಕೃತಿಯಲ್ಲಿ ಬೆಳೆದು ಬಂದಿದೆ. ಉದಾಹರಣೆಗೆ, ದೀಪಾವಳಿ ಹಬ್ಬದ ಸಮಯದಲ್ಲಿ ಬಲೀಂದ್ರ ಪೂಜೆ, ಗೋಪೂಜೆ, ಮಾಡುವಾಗ ಹಾಡುವ ಹಾಡುಗಳನ್ನು ಗಮನಿಸಿ:

ಸತ್ಯವ ಮೆರೆಸಬೇಕೆನುತ ತಾನುದಿಸಿದ ಶ್ರೀಹರಿಯು
ಅದಿತಿ ದೇವಿಗೆ ಮಗನಾಗಿ ಭರದಲಿ ಧರೆಯೊಳಗೆ
ಲೇಸು ಲೇಸೆನುತಲೆ ತಾಯೇ ನಿನ್ನುದರದಿ ನಾ ಜನಿಸಿದೆನು
ಮೂರಡಿ ದಾನವ ಬೇಡುವೆ ಧರೆಯೊಳಗೆಂದ
ಬಂದನೆ ಬಲಿ ಅರಮನೆಗೆ ನಿಂದು ಕೇಳಿದ ಮೂರಡಿಯ
ಧಾರುಣಿಯನು ನೆವ ಮಾತ್ರದಿ ಕೊಡು ಎಂದೆನುತ
ಆ ಮಾತ ಕೇಳುತ ಹರಿಯ ಮೂರಡಿ ಧಾರುಣಿಗಳನು
ಪ್ರೇಮದಲಿ ಬಲಿಯೇಂದ್ರನು ಕೊಟ್ಟನೆ ದಾನವನು
ಆಗ ಮೂರಡಿಯ ಧಾರುಣಿಯು ಸಾಲದೆ ಮನದಲಿ ನಗುತ
ಶಿರ ಒಡ್ಡಿದ ಬಲಿಯೇಂದ್ರ ಪಾತಾಳಕೆ ಇಳಿದ
ಪಾತಾಳಕೆ ಇಳಿದ್ ಬಂದ ಬಲಿಯೇಂದ್ರನ ಅರಮನೆಯ
ಬಾಗಿಲ ಕಾಯದೆನೆ ಹರಿಯು ಅತಿ ಹರುಷದಲಿ

ಮೇಲಿನ ಹಾಡಿನಲ್ಲಿ ಒಂದು ಕತೆಯೇ ಹೆಣೆದು ಬಂದುದನ್ನು ಗಮನಿಸಬಹುದು. ಗೋಪೂಜೆಯಲ್ಲಿ,

ವರ್ಷಽಕೆ ಬರುವುದು ಅರಸು ದೀಪಾವಳಿ
ಅರಿಶಿನವದ್ದೀ ಮಡಿಯುಟ್ಟು – ಮಂಡೇ ಕಟ್ಟಿ
ಗೋವಿಗಾರತಿಯ ಬೆಳಗ್ಯಾರೇ
ಕಾರ್ತೀಕ ಶುದ್ಧ ಪಾಡ್ಯ ವಿಶಾಖೆ ನಕ್ಷತ್ರ
ಗೋಪೂಜೆ ಮಾಡ ಕರೆದರೇ – ಅಪ್ಪಯ್ಯ
ಹೋಗಿ ಜೋಯಿಸರ ಬೆಸಽಗೊಂಡ

..................................................

**ಗೋವ ಶೃಂಗರ ಮಾಡಿ ಅರಮನೆಯೊಲ್ಲೊಯಿದಾಳೆ**
**ಚಿಕ್ಕ ಕೃಷ್ಣಯ್ಯ ಕೊಳಲ-ನೂದುತ ಬಂದ**
**ಗೋವಿನ ಹಿಂಡ ಬಿಡಿರೆಂದ**

ಇಲ್ಲಿ ಗೋಪೂಜೆಯ ಸಮಯ ಗೋಪಾಲಕ ಕೃಷ್ಣನನ್ನು ನೆನೆದುದು ಗಮನೀಯ.

**ಗಣಪತಿಯ ಮೇಲಿನ ಒಂದು ಸುಂದರ ಲಾವಣಿ:**

ಇತ್ತೀಚೆಗೆ ನಾನು ಶಿವಮೊಗ್ಗೆಗೆ ಹೋದಾಗ, ಕುವೆಂಪು ವಿಶ್ವವಿದ್ಯಾಲಯದ ನಿವೃತ್ತ ಕನ್ನಡ ಅಧ್ಯಾಪಕರಾದ, ಶ್ರೀ ತೀ. ನಂ. ಶಂಕರನಾರಾಯಣರನ್ನು ಭೇಟಿ ಮಾಡುವ ಅವಕಾಶ ಸಿಕ್ಕಿತ್ತು. ಅವರ ಹೆಂಡತಿ ನಾಗಲಕ್ಷ್ಮಿಯವರು, ಕನ್ನಡ ಜನಪದ ಸಾಹಿತ್ಯದ ಹೆಸರಾಂತ ಲೇಖಕರೂ ಹಾಗೂ ಸಂಗ್ರಹಕಾರರೂ, ಸಾಹಿತಿ ಎಲ್. ಗುಂಡಪ್ಪನವರ ಸಹೋದರರೂ ಆದ, ಶ್ರೀ ಮತಿಘಟ್ಟ ಕೃಷ್ಣಮೂರ್ತಿಯವರ ಮಗಳು. ಆ ಭೇಟಿಯಲ್ಲಿ ನನಗೆ ನಾಗಲಕ್ಷ್ಮಿಯವರಿಂದ, ಲಾವಣಿ ರೂಪದ ಜನಪದ ಹಾಡನ್ನು ಕೇಳುವ ಒಂದು ಅಪರೂಪದ ಅವಕಾಶ ದೊರಕಿತ್ತು. ಇಲ್ಲಿ ಗಣೇಶ ಸ್ತುತಿಯ ಆ ಹಾಡನ್ನು ಪ್ರಸ್ತುತಪಡಿಸುತ್ತಿದ್ದೇನೆ:

**ಗಣಪತಿ ನಿನ್ನ ಸ್ತುತಿ ಮಾಡುತೇನ ಸಭಿದಾಗಮತಿಕೊಡು**
**ವಿದ್ಯೆಯೆ ದಯ ಕರುಣಾ**
**ಜನನನ ನನನನ ಝೇಂಕಾರ ನುಡಿಸುತ ತಾಳದೊಳಗ**
**ಮಾಡುವೆ ಶರಣಾ ॥ ಪ ॥**

**ಏಕದಂತ ಚತುರ್ಭುಜ ಶಂಖು ಚಕ್ರ ಹಿಡಕೊಂಡು ಸಾರಾರಾರಾ**
**ಬಂದು ಇಳಿದ ಕಲಿಯೊಳಗ**
**ಹತ್ತಿ ಬಂದ ಇಳೆಯ ಮ್ಯಾಗ ಸುತ್ತ ಮುತ್ತ ಯಾರ್ ಯಾರಿಲ್ಲೊ**
**ಹೊತ್ತಿಗೆ ಹಿಡಿದನೊ ಬಲಗೈಯಾಗ**

**ನೀತಿವಂತ್ರ ಮನೆಗೆ ಹೋಗಿ ಊಟ ಮಾಡಿ ಬರುವಾಗ**
**ತೊತ್ತಡ್ಸ್ಯಾಡಿ ಬಿದ್ದ ನಡು ದಾರಿಯೊಳಗಾ**
**ಫಥಾಥಾಥಾ ಹೊಟ್ಟೆಯೊಡದು ಪಾಯಸ ಹೊರಾಗ**
**ಬಂತು ಥಾಥಾಥಾಥಾ ತುಂಬಿದ್ ಕೇರಿ ಒಡೆದ್ ಹಾಂಗಾ**

**ಬಳಬಳದು ತುಂಬುತಾನು ದಿಟ್ಟಿ**
**ಸರಪಿಡಿದು ಹಾಕುತಾನ ಕಟ್ಟಾ**
**ಚಂದ್ರಮಾ ನೋಡಿ ನಕ್ಕನಕ್ಕಟಾ**
**ಗಣಪತಿಗೆ ಬಂತೋ ಬಹು ಸಿಟ್ಟಾ**

ಅತಿಶಯ ಕೋಪದಿಂದ ಚಂದ್ರಮಾಗೆ ಹೇಳುತಾನೆ

**ಚೌತಿದಿನ ನೋಡಬಾರ್ದು ನಿಮ್ಮ ಕಿರುಣಾ**
**ಜನನನ ನನನನ ಝೇಂಕಾರ ನುಡಿಸುತ ತಾಳದೊಳಗ ಮಾಡುವೆ ಶರಣಾ**

ಈ ಹಾಡಿನಲ್ಲಿ ಗಣೇಶನ ಸ್ತುತಿಯೊಡನೆ ಒಂದು ಜನಪದ ಕತೆಯೂ ಅನಾವರಣವಾಗಿರುವುದನ್ನು ಗಮನಿಸಬೇಕು. ಹಾಗಾಗಿ, ಇದೊಂದು ಅಪರೂಪದ ಲಾವಣಿ ಹಾಡೆಂದು ನನ್ನ ಅನಿಸಿಕೆ. ನಾಗಲಕ್ಷ್ಮಿಯವರು ಹಾಡಿದ ಈ ಲಾವಣಿಯನ್ನು ಕೇಳಿಯೇ ನನಗೆ ಈ ಲೇಖನ ಬರೆಯುವ ಉತ್ಸಾಹ ಮೂಡಿ ಬಂದುದು! ಕತೆ ಹೇಳುತ್ತ ದೇವರ ಸ್ತುತಿ ಮಾಡುವ ಇಂಥ ಹಾಡುಗಳು ಜನಪದ ಸಾಹಿತ್ಯದಲ್ಲಿ ಬಹಳಷ್ಟಿವೆ. ಅವುಗಳನ್ನೆಲ್ಲಾ ಮತಿಘಟ್ಟ ಕೃಷ್ಣಮೂರ್ತಿಯವರು ಸಂಗ್ರಹಿಸಿದುದಲ್ಲದೆ, ಅವುಗಳನ್ನು ಹಾಡುವ ವಿಧಾನಗಳನ್ನು ಸಂಗೀತ ಹಾಡುವವರಿಗೆ ಕಲಿಸಿಕೊಟ್ಟಿದ್ದಾರೆ. ಅವರ ಪ್ರೋತ್ಸಾಹದಿಂದಲೇ ಜನಪ್ರಿಯ ಜನಪದ ಹಾಡುಗಾರರಾದ, ಎಲ್.ಜಿ. ಸಹೋದರಿಯರು (ನಮ್ಮವರೇ ಆದ ಶ್ರೀಮತಿ ವಿಮಲಾ ರಾಜಗೋಪಾಲ್ ಅವರಲ್ಲೊಬ್ಬರು), ಬಿ. ಕೆ. ಸುಮಿತ್ರ, ಮೊದಲಾದವರು ಅಂತಹ ಹಾಡುಗಳನ್ನು ಹಾಡಿ, ಅವುಗಳಿಗೆ ಇನ್ನಷ್ಟು ಮೆರುಗು ಕೊಟ್ಟಿದ್ದಾರೆ.

**ತೊಟ್ಟಿಲು ತೂಗುವ (ಜೋಗುಳ, ಲಾಲಿ) ಹಾಡುಗಳು:**

ನನ್ನ ತಾಯಿ ಜೋಗುಳ ಹಾಡುವ ಪ್ರಸ್ತಾಪ ಮಾಡಿದ್ದೇನಲ್ಲವೇ? ನನ್ನ ಸ್ಮರಣೆಯಲ್ಲಿ ಅವಳು ಹಾಡಿದ ಅನೇಕ ಜೋಗುಳ ಹಾಡುಗಳು ಅಚ್ಚಳಿಯದೆ ಉಳಿದಿದೆ. ನನ್ನ ತಮ್ಮಂದಿರು, ತಂಗಿಯರನ್ನು ತೊಟ್ಟಿಲಲ್ಲಿ ಮಲಗಿಸಿ ಹಾಡಿದ ಅಂತಹ ಕೆಲವು ಹಾಡುಗಳನ್ನು ಇಲ್ಲಿ ಪಸ್ತುತಪಡಿಸುತ್ತಿದ್ದೇನೆ:

ಕರ್ನಾಟಕ ಕರಾವಳಿಯ ನಮ್ಮೂರು, ಕೋಟದ ಅಮೃತೇಶ್ವರಿ ದೇವಿಯೆಂದರೆ ಎಲ್ಲರಿಗೂ ಗೌರವ, ಶ್ರದ್ಧೆ ಹಾಗೂ ಅಗಾಧ ನಂಬಿಕೆ. ಆ ದೇವಿಯನ್ನು ನೆನೆಯುತ್ತ ತೊಟ್ಟಿಲಲ್ಲಿ ಮಲಗಿದ ಮಗುವಿನ ಶ್ರೇಯಸ್ಸನ್ನು ಬಯಸಿ ಹಾಡಿದ ಒಂದು ತ್ರಿಪದಿ ಹೀಗಿದೆ:

**ಏನೇ ಬಂದರೂ ಕಾಯ್ವಳ್ ಅಮೃತೇಶ್ವರಿ**
**ಮಾಯದಿಂದ್ಬಂದ ದುರಿತವ ಮಾತಾಯಿ**
**ಕಾದಿರಿ ನಮ್ಮ ಬಳಗವ**

ಮಗುವನ್ನು ಶಿವನ ಜೊತೆಗಾರನಾಗಿ ಮಾಡಿ, ಶಿವಸ್ತುತಿ ಮಾಡಿದ ಒಂದು ಜೋಗುಳ ಹೀಗಿದೆ:

ಮಧ್ಯಾನ್ನದ ಹೊತ್ತೀಲಿ ಬಿದ್ದಿಗೆ ಬಂದವರ ಯಾರೊ
ನಾರಾಯ್ಣನೊಬ್ಬ ಶಿವನೊಬ್ಬ ಅವ್ನ ಸಂಗ್ಡ
ಗೆಜ್ಜೆ ಕಾಲಿನ ಮಗುವೊಬ್ಬ

ಅಂತೆಯೆ, ತೊಟ್ಟಿಲಲ್ಲಿ ಮಲಗಿದ ಮಗುವನ್ನು ದೇವತೆಯರೂ ಬಂದು ಹಾಡಿ ತೂಗಲು ಬಯಸಿದ ತಾಯಿಯ ಈ ಕೆಳಗಿನ ಹಾಡನ್ನು ಗಮನಿಸಿ. ದೇವತೆಯರ ಆಶೀರ್ವಾದವೇ ಮಗುವಿಗೆ ಸುಖ ನಿದ್ರೆ ತರುತ್ತದೆ ಎಂದು ತಾಯಂದಿರು ನಂಬಿದಂತಿದೆ:

ನಾ ತೂಗೂ ತೊಟ್ಲಿಗೆ ಕಾಲ್ನಾಕು ಬೆಳ್ಳಿಯದು
ನಾ ತೂಗಿ ವನದ ಗಿಳಿ ತೂಗಿ ಸ್ವರ್ಗದ
ದೇವ್ತೆಕ್ಳು ತೂಗಿ ಸುಖ ನಿದ್ರಿ

ತನ್ನ ಗಂಡು ಮಗುವನ್ನು ಶ್ರೀಕೃಷ್ಣನಿಗೆ ಹೋಲಿಸುವುದೆಂದರೆ, ಎಲ್ಲ ತಾಯಂದಿರಿಗೆ ಅದೇನೋ ತೃಪ್ತಿ! ಈ ಕೆಳಗಿನ ತ್ರಿಪದಿಗಳು ಅಂತಹ ಬಯಕೆಯನ್ನು ವ್ಯಕ್ತಪಡಿಸುತ್ತವೆ:

ಗೋಕುಲದೊಳಗೆಲ್ಲ ಏನೆಲ್ಲ ಐಭೋಗ
ಗೋಕುಲದ ಕಿಷ್ಣ ಕೊಳಲೂದಿ ಬಪ್ಪಂಗೆ
ಗೋಪಿಯಾರತಿ ಅನುಮಾಡಿ

ಹಾಗೆಯೇ, ಈ ಕೆಳಗಿನ ಹಾಡನ್ನು ಗಮನಿಸಿ:

"ಬಾಗಿ ಬಾಗಿ ಬಂಗಾರ ತೂಗೀ
ಬೆಳ್ಳಿ ಮೂಡಿ ಬೆಳಗಾದುವಮ್ಮಾ

ಗೋಕುಲದೊಳಗೇ ಸಂಭ್ರಮವೇನಿರೆ
ನಂದನ ಕಂದ ಗೋವಿಂದ – ಬಾಗಿ ಬಾಗಿ
ನಂದನ ಕಂದ ಗೋವಿಂದ ಕೃಷ್ಣನ್ನ
ಚೆಂದದಿ ತೊಟ್ಟಿಲೊಳಿಟ್ಟು – ಬಾಗಿ ಬಾಗಿ
ಚಂದದಿ ತೊಟ್ಟಿಲೊಳಿಟ್ಟು ಗೋಪಮ್ಮ
ನಂದದಿ ತೂಗುತ್ತ ಪಾಡಿದಳೇ – ಬಾಗಿ ಬಾಗಿ"

ಈ ಎರಡು ಹಾಡುಗಳಲ್ಲಿ ಹತ್ತಿರದ ಹೋಲಿಕೆ ಇರುವುದು ನಮ್ಮ ಗಮನಕ್ಕೆ ಬಾರದಿರಲಾರದು. ಕೃಷ್ಣನನ್ನು ನೆನೆದು ಹಾಡುವ ಈ ಕೆಳಗಿನ ಜೋಗುಳವನ್ನು ನೋಡಿ:

ಅಕ್ಕ ತಂಗಿಯರಾಟ ಅರಳೆ ಕಟ್ಟಿಯ ಕೂಟ
ಗುಬ್ಬಚ್ಚಿ ಕಾಟ ಬಯಲಲ್ಲಿ ಉಡುಪಿಯಾ
ಕ್ರಿಷ್ಣನ ಕಾಟ ಕೊಳಲಲ್ಲಿ

ಇಲ್ಲಿ, "ಕೃಷ್ಣನ ಕಾಟ" ಎಂಬಲ್ಲಿ, ಅದು ಮಲಗಲು ತೊಂದರೆ ಕೊಡುತ್ತಿರುವ ಮಗುವಿನ "ಕಾಟ"ವೂ ಹೌದು, ಜೊತೆಯಲ್ಲಿ ಮಗುವಿಗೆ ನಿದ್ರೆ ಹತ್ತುವಲ್ಲಿ ತೃಪ್ತಿಕರ ಕೃಷ್ಣನ ಕೊಳಲಿನ ಸುಶ್ರಾವ್ಯ ನಾದವೂ ಹೌದು ಎಂದುದು ಅರ್ಥೈಸಬಹುದೇ? ಇಲ್ಲಿಯೂ ಪ್ರದೇಶಿಕ "ಉಡುಪಿಯಾ ಕೃಷ್ಣ"ನನ್ನು ನೆನೆದುದು ಗಮನೀಯವಾದುದು.

ಮಕ್ಕಳನ್ನು ದೇವರಿಗೆ ಸಮನಾಗಿ ಹೋಲಿಸಿ, ದೇವರನ್ನು ದೂರದಿರುವಂತೆ ಮಕ್ಕಳನ್ನೂ, ಅದೂ ಮಹಾಲಕ್ಷ್ಮಿ ದೇವಿ ಬರುತ್ತಾಳೆಂಬ ನಂಬಿಕೆಯ ಸಂಜೆ ಹೊತ್ತಿನಲ್ಲಿ ಬಯ್ದು, ಆ ಮಹಾದೇವಿಗೆ ಅಸಮಾಧಾನ ಮೂಡುವಂತೆ ವರ್ತಿಸಬೇಡಿರೆಂಬ ಈ ಕೆಳಗಿನ ತ್ರಿಪದಿಯಲ್ಲಿ ದೇವರಿಗೆ ಸಮಾನವಾದ ಪಶುಗಳ ಮೇಲಿನ ಮಮತೆಯನ್ನೂ ಗಮನಿಸಬಹುದು:

**ಮುಸ್ಸಂಜೆ ಹೊತ್ತಿಲಿ ಬಯ್ಬೇಡಿ ಮಕ್ಳನ್ನ**
**ಹೊಡಿಬ್ಯಾಡಿ ಗಂಟಿ ಪಶುಗಳನ್ನ ದೇವಿ ಮಾಲಕ್ಷ್ಮಿ**
**ತಾಯಿ ಬರುವ ಸಮಯವು**

ಹೀಗೆ, ಗ್ರಾಮೀಣರು ತಮ್ಮ ಬದುಕಿನಲ್ಲಿ ಎದುರಿಸುವ ಕಷ್ಟ-ಸುಖಗಳನ್ನು ಒಪ್ಪಿಕೊಂಡು, ತಮ್ಮ ದೈನಂದಿಕ ಬದುಕನ್ನು ಸ್ಪಂದಿಸುತ್ತ, ತಮ್ಮೆಲ್ಲ ಕಾರ್ಯಗಳ ಮಧ್ಯೆ ದೇವರ ಸ್ಮರಣೆ ಮಾಡುತ್ತ, ತಮ್ಮ ಜೀವನವನ್ನು ಸಾಗಿಸುವ ಕ್ರಮ ವಿಶಿಷ್ಟವಾದುದು. ತಮ್ಮ ಜೀವನ ಸುಗಮವಾಗಿ ಸಾಗಲು, ಅಂತಹ ಭಕ್ತಿ ಸಿಂಚನ ಸಹಾಯವಾಗುವುದೆಂಬ ನಂಬಿಕೆ ಅವರಲ್ಲಿ ಬಲವಾಗಿ ಬೇರೂರಿದೆ. ಮಾನವ ಶಕ್ತಿಗಿಂತ ಮಿಗಿಲಾದ ದೈವಶಕ್ತಿ ಇದೆ ಎಂಬ ನಂಬಿಕೆಯೇ ಇದಕ್ಕೆ ಕಾರಣವಿರಬಹುದು. ಇಂಥ ಜನಪದ ಜೀವನ ನಮ್ಮ ಸಾಹಿತ್ಯದ ಸೊಗಡನ್ನು ಹೆಚ್ಚಿಸಿದೆ. ಜನಪದ ಸಾಹಿತ್ಯದಲ್ಲಿ, ಮೇಲೆ ಪ್ರಸ್ತುತಪಡಿಸಿ-ದಂತಹ (ಭಕ್ತಿಗೆ ಸಂಬಂಧಪಟ್ಟ) ಅನೇಕ ಕವನ ಗುಚ್ಛಗಳು ಕಾಣಸಿಗುತ್ತವೆ. ಇವು, ಸರ್ವಲಕ್ಷಣಗಳನ್ನು ಹೊಂದಿದ ಕ್ರಮಬದ್ಧ ಪ್ರಾರ್ಥನೆಗಳಲ್ಲದಿರಬಹುದು; ಆದರೆ ಅವುಗಳಲ್ಲಿನ ಭಕ್ತಿ ಸಿಂಚನವನ್ನು ಗಮನಿಸದೆ ಇರಲು ಸಾಧ್ಯವಿಲ್ಲ. ಇಂಥ ಗೀತಗಳು ನಮ್ಮ ಸಾಹಿತ್ಯಕ್ಕೆ ಅನನ್ಯ ಮೆರುಗನ್ನು ಕೊಟ್ಟಿವೆ ಎಂದಾಗ, ಆ ಮಾತನ್ನು ಅಲ್ಲಗಳೆಯುವಂತಿಲ್ಲ. ಇಲ್ಲಿ ಪ್ರಸ್ತುತಪಡಿಸಿದ ಕೆಲವೇ ಗೀತಗಳು ಒಂದು ಪಕ್ಷಿನೋಟದಂತೆ. ಸುಂದರ ತಾವರೆಯ ಕೊಳಗಳಲ್ಲಿ ಅರಳಿದ ಅಂದದ ಕಮಲಗಳ ಸಮೂಹದಂತೆ, ಸಾಹಿತ್ಯ ಕ್ಷೇತ್ರದಲ್ಲಿ ಇಂಥ ಅನೇಕ ಕವನಗುಚ್ಛಗಳು ಹರಡಿಕೊಂಡಿದ್ದು, ನಮ್ಮ ಸಾಹಿತ್ಯದ ಕಂಪನ್ನು ಹೆಚ್ಚಿಸಿದುದಲ್ಲದೆ, ನಮ್ಮ ಎದೆಯುಬ್ಬುವಂತೆ ಮಾಡಿವೆ. ಅವುಗಳನ್ನೋದಿ ತೃಪ್ತಿಪಡುವುದೇ ಒಂದು ಅನನ್ಯ ಅನುಭವ! ಅದಕ್ಕಾಗಿ ನಾವು ಜನಪದ ಸಾಹಿತಿಗಳನ್ನು ಹಾಗೂ ಕಲಾವಿದರನ್ನು ಎಷ್ಟು ಅಭಿನಂದಿಸಿದರೂ ಅದು ಕಡಿಮೆಯೇ!

■

# ಗ್ರಾಮೀಣ ಮಹಿಳೆಯರ ಜೀವನದ ಅಂತರ್ಗಾಮಿ ಭಕ್ತಿ

–ಮಂಜುನಾಥ್ ಪೆಂಡಕೂರು (ಇಂಗ್ಲಿಷ್‌ನಲ್ಲಿ)
–ನಳಿನಿ ಮೈಯ (ಕನ್ನಡಕ್ಕೆ ಅನುವಾದ)

*(ಸಂ.– ಕರ್ನಾಟಕದ ಹಳ್ಳಿ ಹಳ್ಳಿಗಳಲ್ಲಿ ಮಹಿಳೆಯರ ದೈನಂದಿನ ಚಟುವಟಿಕೆಗಳಲ್ಲಿ ಭಕ್ತಿ ಅಂತರ್ಗಾಮಿಯಾಗಿ ಹರಿಯುತ್ತಿದೆ. ಅಂಥ ಮಹಿಳೆಯರನ್ನು ಬಿಂಬಿಸುವ ಒಂದು ಪ್ರಾತಿನಿಧಿಕ ಲೇಖನ)*

ನಮ್ಮ ತಾಯಿಯವರಾದ ರಾಮಕ್ಕ ಒಬ್ಬ ಅಪ್ರಕಟಿತ ಕವಯಿತ್ರಿ! ಅವರು ನಮಗೆ ಬಿಟ್ಟುಹೋದ ಬೆಲೆ ಬಾಳುವ ಆಸ್ತಿ ಎಂದರೆ ತಮ್ಮ ಜೀವಮಾನವೆಲ್ಲ ಒಟ್ಟುಹಾಕಿ ಬರೆದಿಟ್ಟಿದ್ದ ತಮ್ಮ ಸಮಕಾಲೀನರ, ಗುರುಗಳ, ಬಂಧು ಬಾಂಧವರ ಮತ್ತು ಮಿತ್ರರ ಅನೇಕ ಸಂಗೀತ ರಚನೆಗಳು. ಸ್ವತಃ ಅವರೂ ಕರ್ನಾಟಕ ಭಕ್ತಿ ಸಂಪ್ರದಾಯದ ಹಲವಾರು ಗೀತೆಗಳನ್ನು ರಚಿಸಿದವರು. ಅವರು ಹಾಡಿದ ಜೋಗುಳಗಳಲ್ಲಿ ಮತ್ತು ಮಕ್ಕಳಿಂದ ದೂರಾದಾಗ ಉಂಟಾದ ದುಃಖವನ್ನು ಹೊಮ್ಮಿಸುವ ಗೀತೆಗಳಲ್ಲಿ ಕೂಡಾ ಭಕ್ತಿಯೇ ಪ್ರಧಾನವಾದ ಅಂಶವಾಗಿತ್ತು.

ರಾಮಕ್ಕ ಅವರು ವಿರುಪಣ್ಣ ಪೆಂಡಕೂರು ಅವರನ್ನು ಮದುವೆಯಾಗಿ ಸಂಸಾರ ಹೂಡಿದ್ದು ಬಳ್ಳಾರಿ ಜಿಲ್ಲೆಯಲ್ಲಿ ಒಂದು ಸಣ್ಣ ಊರಾದ ನಾರಾಯಣ ದೇವರಕೆರೆಯಲ್ಲಿ. ತುಂಗಭದ್ರಾ ನದಿಗೆ ೧೯೫೩ರಲ್ಲಿ ಅಣೆಕಟ್ಟು ನಿರ್ಮಿಸಿದಾಗ ಈ ಗ್ರಾಮ ಮುಳುಗಡೆಯಾಗಿ ಹೋಯಿತು. ಅಲ್ಲಿಂದ ಅನತಿ ದೂರದಲ್ಲಿದ್ದ ಹಗರಿಬೊಮ್ಮನ ಹಳ್ಳಿ ಎಂಬ ಜಾಗದಲ್ಲಿ ನೆಲೆಸಿದ ರಾಮಕ್ಕ ತಮ್ಮ ಓದು, ಬರಹ ಸಂಗೀತ ರಚನೆಗಳನ್ನು ಮುಂದುವರಿಸಿದರು. ಹಲವಾರು ಧಾರ್ಮಿಕ ಮತ್ತು ಸಾಮಾಜಿಕ ಸಮಾರಂಭಗಳಲ್ಲಿ ಹಾಡುತ್ತಿದ್ದರು. ಆಗತಾನೆ ಸ್ವಾತಂತ್ರ್ಯ ಪಡೆದಿದ್ದ ಭಾರತದಲ್ಲಿ ವಿದ್ಯುಚ್ಛಕ್ತಿ ಬಂದಿತ್ತಷ್ಟೆ. ರೇಡಿಯೊ ಎಂಬ ಹೊಸ ತಂತ್ರಜ್ಞಾನ ಎಲ್ಲರಲ್ಲೂ ಆಶ್ಚರ್ಯಾನಂದಗಳನ್ನು ಮೂಡಿಸಿತ್ತು. ಎಲ್ಲರ ರಚನೆಗಳೂ ಎಲ್ಲರ ಬಾಯಲ್ಲೂ ನಲಿದಿದ್ದವು. ಈಗಿನಂತೆ ತಮ್ಮ ಕೃತಿಗಳಿಗೆ ಕಾಪಿರೈಟ್

ಮಾಡಿಸಬೇಕೆಂಬ ತುರ್ತು ಯಾರಿಗೂ ಇರಲಿಲ್ಲ. ಸಾಂಸ್ಕೃತಿಕವಾದ ಯಾವ ಕೃತಿಯಾದರೂ ಎಲ್ಲರಿಗೂ ಸೇರಿದ ವಸ್ತುವಾಗಿತ್ತು. ಗಾಳಿಯಂತೆ, ನೀರಿನಂತೆ!!! ಮೌಖಿಕವಾಗಿ ಬಂದ ಈ ಶ್ರೀಮಂತ ಸಂಗೀತ ಪರಂಪರೆಯಲ್ಲಿ ಪಳಗಿದ ರಾಮಕ್ಕನವರು ಬಳ್ಳಾರಿಯ ಗ್ರಾಮ್ಯ ಭಾಷೆಯ ಸೊಗಡಿನಲ್ಲಿ ಬರೆದರು.

ಅಂದಿನ ಗ್ರಾಮ ಜೀವನದಲ್ಲಿ ಹಬ್ಬ-ಹರಿದಿನಗಳು, ಮದುವೆ, ಮುಂಜಿ, ನಾಮಕರಣ ಸಮಾರಂಭಗಳು, ಹರಿಕಥೆ-ಪುರಾಣಗಳು...ಹೀಗೇ ವೈವಿಧ್ಯಮಯವಾದ ಸಾಂಸ್ಕೃತಿಕ ಚಟುವಟಿಕೆಗಳಿದ್ದವು. ಜಮೀನ್ದಾರರು ವಿವಿಧ ನಾಟಕ ಕಂಪನಿಗಳಿಗೆ ಪ್ರೋತ್ಸಾಹ ಕೊಟ್ಟು ಪ್ರದರ್ಶನಗಳನ್ನು ಏರ್ಪಡಿಸಲು ಪೈಪೋಟಿ ನಡೆಸುತ್ತಿದ್ದರು! ಹಲವಾರು ಊರ ಜಾತ್ರೆಗಳಲ್ಲಿ ಅಂದು "ಹೇಮರೆಡ್ಡಿ ಮಲ್ಲಮ್ಮನ ಕಥೆ" ತುಂಬ ಜನಪ್ರಿಯವಾದ ನಾಟಕವಾಗಿತ್ತಂತೆ. ಪ್ರಖ್ಯಾತ ಗುಬ್ಬಿ ವೀರಣ್ಣನ ಕಂಪನಿಯೂ ಪುರಾಣ ಕಥೆಗಳನ್ನಾಧರಿಸಿದ ನಾಟಕ ಪ್ರದರ್ಶನಗಳನ್ನು ನೀಡಿತ್ತು. (ಹಳ್ಳಿಹಳ್ಳಿಗಳಲ್ಲೂ ಕಲೆ, ಸಂಸ್ಕೃತಿಗಳ ರಸದ ಊಟೆಯೇ ಚಿಮ್ಮಿತ್ತು ಅಂತ ಯೋಚಿಸುವಾಗ ಇಂದಿನ ಹಳ್ಳಿಗಳ ಸ್ಥಿತಿಯನ್ನು ನೆನೆದು ಬೇಸರವಾಗುತ್ತದೆ!) ಇಂತಹ ಶ್ರೀಮಂತ ಸಾಂಸ್ಕೃತಿಕ ಪರಿಸರದಲ್ಲಿ ಬೆಳೆದ ರಾಮಕ್ಕ ಸ್ವತಃ ಅನೇಕ ಗೀತೆಗಳನ್ನು ರಚಿಸಿದರು. ಇವುಗಳಲ್ಲಿ ಹೆಚ್ಚಿನವು ಅವರ ಮೆಚ್ಚಿನ ಗ್ರಂಥ 'ಭಾಗವತ'ದಿಂದ ಪ್ರೇರಿತವಾಗಿದ್ದು ಶ್ರೀಕೃಷ್ಣನ ಬಾಲ ಲೀಲೆಗಳನ್ನು ವರ್ಣಿಸುವಂಥವು. ಈ ಕೆಳಗೆ ಉದಾಹರಿಸಿದ ಗೀತೆಯನ್ನೇ ನೋಡಿ- ಹಾಲು ಕುಡಿಯಲು ಒಲ್ಲೆ ಎನ್ನುತ್ತಿರುವ ಮಗುವಿಗಾಗಿ ಬರೆದದ್ದು. ಇಂತಹ ಒಂದು ದಿನ ನಿತ್ಯದ ಘಟನೆಯಲ್ಲಿ ಶ್ರೀಕೃಷ್ಣನ ದಶಾವತಾರದ ವರ್ಣನೆಯನ್ನೊಳಗೊಂಡ ಗೀತೆ ನಿರ್ಮಿತವಾಗಿದೆ-

**ಕುಡಿ ಹಾಲನು ಬಾಲ**

**ಕುಡಿ ಹಾಲನು ಬಾಲ**
**ಗೋಪಾಲ ಶೀಲ ಕುಡಿ ಹಾಲನು ಬಾಲ (ಪ)**

**ಕುಡಿಯೊ ಹಾಲನು ಪೊಡವಿ ಪಾಲನೆ**
**ಕಡಲ ಶಯನನೆ ಗರುಡ ಗಮನನೆ**
**ತಡವು ಮಾಡದೆ ತಂದ ಮೀಸಲು**
**ಹಳಿಯದಿರು ಎನ್ನ ಮೃಡನ ಸಖನೆ (ಪ)**

**ದೇವಕಿ ವಸುದೇವರ ಉದರದಿ ಜನಿಸಿ ಬಾಲ ಲೀಲೆಯ ತೋರಿದ**
**ಮಾವ ಕಂಸನ ಕೊಂದು ಪೂತನಿ ಅಸುವ ಹೀರಿ**
**ಗೋಪಿಗೆ ಮೂರು ಜಗವನು ತೋರಿದಂಥ ನೀಲವರ್ಣನೆ**
**ನಿನ್ನ ವದನದಿ (ಪ)**

ಆನಂದ ಪ್ರಣವ ರೂಪ ಗೋವಿಂದ ಪರಮಾನಂದಾತ್ಮನೆ ಬಾ
ತಾನೆ ತನ್ಮಯವಾದ ನಿರ್ಮಲ ಜ್ಞಾನ ಮೂರ್ತಿ
ಯುದ್ಧದಲ್ಲಿ ನೂರು ರೂಪವ ತೋರಿದಂಥ ನೀಲವರ್ಣನೆ
ನಿನ್ನ ಹೃದಯದಲ್ಲಿ (ಪ)

ಓಂಕಾರ ಪ್ರಣವ ರೂಪ ಭಕ್ತ ರಕ್ಷಕ ಚಿದ್ರೂಪ
ಪಂಚ ಮುಖ ಸಖ ಪಾವನಾತ್ಮಕ ಪಾರಮಾರ್ಥಿಕ ಪಾದಸೇವಕ
ಪಂಚ ತತ್ವದ ಮಿಂಚು ತೋರಿದ ವಂಚಿಸದೆ ವೈಕುಂಠ ನಾಯಕ (ಪ)

ಭಾಷೆ ಶೃತಿಗಳಿಂದಲಿ ಪೊಗಳುವರು ನಿನ್ನನು ಬಾಯೊಳಂಗುಲಿ ತೆಗೆದು
ವಾಸುದೇವನೆ ನಿನ್ನ ಪಾದಕೆ ಸಾಸಿರ ನಾಮದಿ ಪೂಜಿಪೆ
ಶೇಷ ಶಯನನೆ ಲಕ್ಷ್ಮಿಗೊಡೆಯನೆ ಭಾಸುರಾಂಗನೆ ನಿದ್ರೈಯುತ (ಪ)

ಮತ್ಸ್ಯ ಕೂರ್ಮ ವರಾಹ ನರಸಿಂಹ ವಿಪ್ರ ವಾಮನ ಭಾರ್ಗವ
ಭಕ್ತವತ್ಸಲ ರಾಮ ಕೃಷ್ಣನೆ ಬುದ್ಧ ಕಲ್ಕಿ ನಿನ್ನ ಕೊರಳಿಗೆ
ಮುತ್ತಿನ ಹಾರ ಹಾಕಿ ಚಿನ್ನದ ತೊಟ್ಟಿಲೊಳಿಟ್ಟು ತೂಗುವೆ (ಪ)

ಕೃಷ್ಣನೇ ತನ್ನ ಎದುರಿಗೆ ಇರುವನೋ ಎಂಬಂತೆ ಪ್ರಾಸಬದ್ಧವಾಗಿ ಲಯಬದ್ಧವಾಗಿ ರಚಿಸಿದ ಈ ಗೀತೆಯಲ್ಲಿ ಭಕ್ತಿ ರಸ ತುಂಬಿ ತುಳುಕುತ್ತಿದೆ.

ಭಾಗವತವನ್ನಾಧರಿಸಿದ ಅವರ ಇನ್ನೊಂದು ರಚನೆ–

ನಂದಗೋಕುಲದ ಗೋಪಿ ಕಂದನೆಂದು ಕರೆಯಲು
ಮುಕುಂದನ್ನ ಪಡೆದಳು ಹರುಷದಿಂದಲಿ (ಪ)

ಬೃಂದಾವನ ಸಾರಿಸಿ ಗೋವಿಂದನ ಕರೆಯಿಸಿ
ಬಂಗಾರದುಂಬ್ಲದೊಳಗೆ ತಂದಳು ಗಂಗೆ ಉದಕವ (ಅ–ಪ)

(ಈ ಮೇಲ್ಕಂಡ ರಚನೆಯಲ್ಲಿ ಒಟ್ಟು ಹತ್ತೊಂಭತ್ತು ನುಡಿಗಳಿವೆ!)

ಓದಿದ್ದು ಕೇವಲ ನಾಲ್ಕನೆಯ ತರಗತಿಯವರೆಗಾದರೂ ಈ ಬಗೆಯಲ್ಲಿ ವಿಪುಲ ಸಂಗೀತ ನಿರ್ಮಾಣಕ್ಕೆ, ಇಷ್ಟು ಸುಂದರ ಬರವಣಿಗೆಗೆ ಅವರನ್ನು ಪ್ರಭಾವಿಸಿದ ಶಕ್ತಿ ಯಾವುದು ಎಂದು ನಾನು ಅನೇಕ ಬಾರಿ ಯೋಚಿಸಿದ್ದೇನೆ. ಬಾಲ್ಯದ ನೆನಪುಗಳು ಮಾಸಿಹೋಗುತ್ತಿರುವ ಈ ವೇಳೆಯಲ್ಲಿ ನನ್ನ ಸೋದರರ ನೆನಪುಗಳನ್ನೂ ಆಧರಿಸಿ ರಾಮಕ್ಕನವರನ್ನು ಬರಹಗಾರ್ತಿಯನ್ನಾಗಿ ರೂಪಿಸಿದ ಹಿನ್ನೆಲೆಯ ಕಥೆಯನ್ನು ಇಲ್ಲಿ ನಿರೂಪಿಸಿದ್ದೇನೆ.

ರಾಮಕ್ಕನವರು ಬೆಳೆದ ವಾತಾವರಣ ಅವರ ಮೇಲೆ ಗಾಢ ಪ್ರಭಾವ ಬೀರಿತ್ತು. ಅವರು ಹುಟ್ಟಿದ್ದು ೧೯೧೩ರಲ್ಲಿ. ಮಗುವಾಗಿದ್ದಾಗಲೆ ತಾಯಿಯನ್ನು ಕಳೆದುಕೊಂಡ ಆಕೆ ತನ್ನ ದೊಡ್ಡಮ್ಮನ ಮನೆಯಲ್ಲಿ ಹರಪನಹಳ್ಳಿಯಲ್ಲಿ ಬೆಳೆದರು. ಇನ್ನೊಬ್ಬ ದೊಡ್ಡಮ್ಮ ಮಲ್ಲಮ್ಮನೂ ಅವರಿಗೆ ಚಿಕ್ಕಂದಿನಲ್ಲೇ ಭಕ್ತಿಗೀತೆಗಳನ್ನೂ, ಜೋಗುಳ ಹಾಡುಗಳನ್ನೂ ಕಲಿಸಿದರು. ಅವರ ಜೊತೆ ಈ ಅನ್ಯೋನ್ಯ ಒಡನಾಟ ಮಲ್ಲಮ್ಮನ ಕಡೆಗಾಲದವರೆಗೂ ಇತ್ತು. ಹರಪನಹಳ್ಳಿ ಭೀಮವ್ವ ಸುತ್ತಮುತ್ತಲೂ ಜನಪ್ರಿಯ ಕವಯಿತ್ರಿಯಾಗಿದ್ದರು. ಅವರ ಸಾಹಿತ್ಯದ ಛಾಪು ಕೂಡಾ ರಾಮಕ್ಕನವರ ವ್ಯಕ್ತಿತ್ವದ ಮೇಲೆ ಉಂಟಾಗಿತ್ತು.

ರಾಮಕ್ಕನಿಗೆ ಜೀವನದುದ್ದಕ್ಕೂ ಓದಿನ ಗೀಳು ಬಹಳವೇ ಇತ್ತು. ಕನ್ನಡ ಸಾಹಿತ್ಯದ ಉತ್ಕರ್ಷ ಕಾಲವಾದ ೧೯೫೦ರ ದಶಕದಲ್ಲಿ ಅವರು ಅನಕೃ, ತರಾಸು, ಕುವೆಂಪು ಮೊದಲಾದ ಎಲ್ಲ ಸಾಹಿತಿಗಳ ಪುಸ್ತಕಗಳನ್ನೂ ಬಿಡದೆ ಓದುತ್ತಿದ್ದರು. ಅಳಸಿಂಗಾಚಾರ್ಯರ ಭಾರತೀಯ ರಾಮಾಯಣ ಮತ್ತು ಭಾಗವತ ಅವರ ಅಚ್ಚುಮೆಚ್ಚಿನ ಕೃತಿಗಳಾಗಿದ್ದವು. ಚಂದಮಾಮ ಮತ್ತು ಬಾಲಮಿತ್ರ ಸಂಚಿಕೆಗಳು ಮನೆಗೆ ಬರುತ್ತಿದ್ದವು. ಮಕ್ಕಳನ್ನೆಲ್ಲ ತುಳಸಿ ಕಟ್ಟೆಯಲ್ಲಿ ಅರ್ಧ ಚಂದ್ರಾಕಾರದಲ್ಲಿ ಕೂರಿಸಿ ಕಥೆ, ಕಾದಂಬರಿ, ಪುರಾಣಗಳನ್ನು ಓದಿ ಹೇಳುತ್ತಿದ್ದರು. ನಾವು ಎಂಟು ವರ್ಷದವರಿದ್ದಾಗಲೇ "ಶುದ್ಧಬ್ರಹ್ಮ ಪರಾತ್ಪರ ರಾಮ" ಎಂದು ಇಡೀ ರಾಮಾಯಣವನ್ನು ಕಾವ್ಯ ರೂಪದಲ್ಲಿ ಹೇಳಬಲ್ಲವರಾಗಿದ್ದೆವು. ಪುರಾಣ, ಹರಿಕಥೆಗಳೇನಿದ್ದರೂ ಅವಕ್ಕೆ ತಪ್ಪದೆ ಹೋಗುತ್ತಿದ್ದರು.

ನಾರಾಯಣ ದೇವರಕೆರೆಯಲ್ಲಿ ಮಾಧ್ವ ಮಹಿಳೆಯರು ಊರಿನ ಧಾರ್ಮಿಕ ಕಾರ್ಯಕಲಾಪಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಎಲ್ಲರೂ ರಾಯರ ಮಠದಲ್ಲಿ ಸೇರಿ ಕಥಾ ಕಾಲಕ್ಷೇಪ, ಸಂಗೀತ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದರು. ಬೋಸಿ ಸೀತಮ್ಮ ಮತ್ತು ಕೃಷ್ಣವೇಣಮ್ಮ ಎಂಬ ಇಬ್ಬರು ವಯಸ್ಸಾದ ಮಹಿಳೆಯರು ರಾಮಕ್ಕನವರ ಸಂಗೀತ ರಚನೆಗಳನ್ನು ಹುರಿದುಂಬಿಸುತ್ತಿದ್ದರು. ಹೀಗೆ ಮೌಖಿಕ ಸಂಗೀತ ಸಂಪ್ರದಾಯದಲ್ಲಿ ಅರಳಿದ ಪ್ರತಿಭೆ ರಾಮಕ್ಕನವರದ್ದು.

ನನಗೆ ಪ್ರಿಯವಾದ ಗೀತೆಗಳೆಂದರೆ ರಾಮಾಯಣ, ಮಹಾಭಾರತದ ಸನ್ನಿವೇಶಗಳನ್ನು ಆಧರಿಸಿದ ಹಾಡುಗಳು. ಸರಳ, ಸುಂದರವಾದ ಈ ಜೋಗುಳಗಳಲ್ಲಿ ಕಥೆಯೊಂದು ಸದ್ದಿಲ್ಲದೆ ಅಡಗಿದೆ! ಈ ಕೆಳಗಿನ ಸಾಲುಗಳನ್ನು ನೋಡಿ–

**ಏಕೆ ಬಾರನೋ ಶ್ರೀನಿವಾಸ**
**ಕೌರವರು ಪಾಂಡವರು ಕದನವ ಮಾಡುವಾಗ**
**ವಿದುರನ ಮನೆಯಲ್ಲಿ ಪಾಲುಂಡ ದೇವ**

ಅಥವಾ ಕೃಷ್ಣನ ಬಾಲ ಲೀಲೆಯನ್ನೇ ಮಗುವನ್ನು ಸಂತೈಸುವ ಜೋಗುಳ ವನ್ನಾಗಿಸಿದ ಈ ಕೆಳಗಿನ ಹಾಡು–

ಲಾಲಿ ಲಾಲಿ ಲಾಲಿ ಬಾಲ
ಸುಮ್ಮನೆ ಮಲಗು ಸುಶೀಲ (ಪ)

ಕರಕರೆಯ ಮಾಡದಿರು
ನೊರೆ ಹಾಲ ಕೊಡುವೆ ನಾನು
ಸಣ್ಣವರೊಡನೆ ನೀನು
ನಲಿಯುತ ಕುಣಿಯುತ ಬಾ ಸುಶೀಲ (ಪ)

ಚಿಣ್ಣಿ ಕೋಲು ಚಂಡು ಬಗರಿ
ವಿಧ ವಿಧ ಆಟಗಳನು
ಸಣ್ಣವರೊಡನೆ ನೀನು
ನಲಿಯುತ ಕುಣಿಯುತ ಬಾ ಸುಶೀಲ (ಪ)

ಹುಟ್ಟಿದ್ದು ಮಧುರೆಯಲಿ
ಬೆಳೆದಿದ್ದು ಗೋಕುಲದಿ
ಮಾವ ಕಂಸನ ಕೊಂದು
ತಾಯಿಯ ಸೆರೆ ಬಿಡಿಸಿದ (ಪ)

ರಾಮಕ್ಕನವರ ಹಿರಿಯ ಮಗ ವೆಂಕಟಾಚಲ ೧೯೫೫ರಲ್ಲಿ ಕೆನಡಾಗೆ ವಲಸೆ ಹೋದಾಗ ತನ್ನ ದುಃಖವನ್ನು ತೋಡಿಕೊಂಡ ರಚನೆ ಇದು–

ಮನಸು ನಿಲ್ಲದೊ ಮಾತನಾಡೊ ವೆಂಕಟೇಶ
ಮನಸು ನಿಲ್ಲದೊ (ಪ)

ಕನಸಿನೊಳಗೆ ನೀನು
ಕಳವಳಿಸುತಲಿರುವಿ
ಮುಂದೆ ಬಂದು ಮಾತನಾಡೊ ವೆಂಕಟೇಶ (ಪ)

ನಾನು ನಿನ್ನವಳೆಂದು
ಬಾಳ ನಂಬಿದೆನು
ಪ್ರೇಮವಿಲ್ಲವೆ ನಿನಗೆ
ಎನ್ನ ಮ್ಯಾಲೆ ವೆಂಕಟೇಶ (ಪ)

ಎಂದು ಬರುವಿ ನೀನು
ದಾರಿ ನೋಡುವೆ ನಾನು

**ನಗುತ ನಗುತ ಬಂದು**
**ಮಾತನಾಡೊ ವೆಂಕಟೇಶ (ಪ)**

**ಅಲ್ಲಿ ಇಲ್ಲಿಗೆ ವಾಸ**
**ಮಧ್ಯ ಸಮುದ್ರ ತೀರ**
**ಮಕ್ಕಳಿದ್ದಲ್ಲೆ ಕೈಲಾಸ ವೆಂಕಟೇಶ (ಪ)**

ರಾಮಕ್ಕನವರು ರಚಿಸಿದ ಇನ್ನೊಂದು ಗೀತೆ ಇಂದಿಗೂ ನಮ್ಮ ಕುಟುಂಬದಲ್ಲಿ ಕಾಪಾಡಿಕೊಂಡು ಬಂದ ಅನರ್ಘ್ಯ ರತ್ನ. ಈ ಗೀತೆಯಲ್ಲಿ ತನ್ನ ಪತಿವರ್ಯರಿಗೆ ಶುಭಾಶಯಗಳನ್ನು ಕೋರುತ್ತಾ ಅವರ ಬಗ್ಗೆ ತನಗಿರುವ ಕನಸು, ನಿರೀಕ್ಷೆಗಳನ್ನು ಹೇಳಿಕೊಳ್ಳುತ್ತಾರೆ. ಗಂಡನನ್ನು ಮಹಾರಾಜನೆಂದು ಕರೆಯುತ್ತಾ ತನ್ನ ಐಶ್ವರ್ಯವನ್ನು ದಾನವಾಗಿ ನೀಡಿ ಸತ್ಕಾರ್ಯಗಳಿಗೆ ವಿನಿಯೋಗಿಸಬೇಕೆಂದು ಕೇಳಿಕೊಳ್ಳುತ್ತಾರೆ. ಬಹುಶಃ ಇದೇ ಕಾರಣಕ್ಕಾಗಿ ನಮ್ಮ ತಂದೆಯವರು ದೇವಸ್ಥಾನ, ಶಾಲೆ ಮುಂತಾದವುಗಳನ್ನು ಕಟ್ಟಲು ಧಾರಾಳವಾಗಿ ಧನಸಹಾಯ ನೀಡಿದ್ದರು. ಯುಗಾದಿ, ದಸರಾ, ದೀಪಾವಳಿ ಮುಂತಾದ ಹಬ್ಬಗಳಂದು ಎಲ್ಲರ ಅಭ್ಯಂಜನ ಸ್ನಾನವೂ ಆದ ಮೇಲೆ ಹೊಸ ಬಟ್ಟೆಗಳನ್ನು ಧರಿಸಿ ನಾವೆಲ್ಲರೂ ಸಾಲಾಗಿ ಕುಳಿತಾಗ ತಾಯಿಯವರು ಇಂತಹ ಗೀತೆಗಳನ್ನು ಹಾಡುತ್ತಿದ್ದರು. ಇಂದಿಗೂ ಅವು ನನ್ನ ಕಿವಿಯಲ್ಲಿ ಅನುರಣಿಸುತ್ತಿವೆ!

**ಮಹಾರಾಜನೆ ನೀ ಬಲು ಸುಖಿಯಾಗಿರೈ**
**ಪ್ರೇಮದಿಂದಲಿ ರಾಜ್ಯ ಪರಿಪಾಲಿಸೈ (ಪ)**

**ಅನ್ನ ದಾನವ ಮಾಡು, ಕನ್ಯಾ ದಾನವ ಮಾಡು**
**ಅರವಂಟಿಗಿ ಅನ್ನ ಛತ್ರವನಿಡಿಸೈ (ಪ)**

**ಅಕ್ಕ ತಂಗಿಯರಲಿ ಅಕ್ಕರೆಯಿಂದಲಿ**
**ತೌರು ಮನೆಯ ನಡೆಸು ಕಡೆತನಕ (ಪ)**

**ತಂದೆ ತಾಯ್ಗಳ ಮಾತು ಒಂದೂ ಮೀರಲು ಬ್ಯಾಡ**
**ತಂದೆ ರಾಮೇಶ್ವರನ ದಯದಿ ನೀ ಬಾಳೈ (ಪ)**

ರಾಮಕ್ಕನವರಿಗೆ ಬಸವಣ್ಣನವರ ಜಾತ್ಯಾತೀತ ಸಮಾಜ, ಅಕ್ಕ ಮಹಾದೇವಿಯ ಸಮರ್ಪಣ ಭಾವ, ಅಲ್ಲಮರ ದಾರ್ಶನಿಕತೆ ಎಲ್ಲವೂ ಪ್ರಿಯವಾಗಿದ್ದವು. ಸ್ವಂತ ಜೀವನದಲ್ಲೂ ಮಕ್ಕಳು ಮೊಮ್ಮಕ್ಕಳು ಅಂತರ್ಜಾತೀಯ ವಿವಾಹವನ್ನು ಮಾಡಿಕೊಂಡಾಗ ಅವರು ಯಾವ ಆಕ್ಷೇಪಣೆಯನ್ನೂ ಎತ್ತಲಿಲ್ಲ. ವೈಯಕ್ತಿಕ ಧಾರ್ಮಿಕತೆ ಮಾತ್ರ

ರಾಮಾಯಣ, ಮಹಾಭಾರತ, ಭಾಗವತಗಳಲ್ಲಿ ಆಳವಾಗಿ ಬೇರು ಬಿಟ್ಟಿತ್ತು. ಕೃತಿಗಳಲ್ಲಿ ಬಳ್ಳಾರಿಯ ಗ್ರಾಮೀಣ ಭಾಷೆಯ ಗಂಧವಿತ್ತು.

ರಾಮಕ್ಕನವರು ತಮ್ಮ ಬದುಕಿನ ಅನುಭವಗಳ ಮೇಲೆ ಯಾವ ಗದ್ಯವನ್ನೂ ಬರೆಯಲಿಲ್ಲ. ಸಂಗೀತವೇ ಅವರ ಮೂಲ ಸಂವಹನ ಮಾಧ್ಯಮವಾಗಿತ್ತು. ಯಾವುದೇ ಸಂಗೀತ ಶಿಕ್ಷಣವಿಲ್ಲದಿದ್ದರೂ ತಮ್ಮ ಕೃತಿಗಳಲ್ಲಿ ರಾಗ ತಾಳಗಳನ್ನು ನಮೂದಿಸುತ್ತಿದ್ದರು. ಒಬ್ಬ ಗ್ರಾಮೀಣ ಮಹಿಳೆಯಾಗಿ ತಮ್ಮ ಸ್ವಸಂತೋಷಕ್ಕಾಗಿ, ತನ್ನ ಕುಟುಂಬಕ್ಕಾಗಿ ಗೀತೆಗಳನ್ನು ರಚಿಸಿ ಹಾಡಿದರು. ತಮ್ಮ ಮನಸ್ಸಿನ ಭಾವೋದ್ವೇಗಗಳನ್ನು, ದೈವಭಕ್ತಿಯನ್ನು ಗೀತೆಗಳಾಗಿ ಹೊರಹೊಮ್ಮಿಸಿದರು. ಈ ಸಂಗೀತ, ಸಾಹಿತ್ಯದ ಒಲವು, ಸೌಂದರ್ಯ ಪ್ರಜ್ಞೆ, ದೈವದಲ್ಲಿ ಅಚಲ ನಂಬಿಕೆ ಮತ್ತು ಭಕ್ತಿ...ಇವೇ ಅವರು ತಮ್ಮ ಮಕ್ಕಳಿಗೆ ಬಿಟ್ಟು ಹೋದ ಆಸ್ತಿ.

*

**ವಿ. ಸೂ.** ಪ್ರಖ್ಯಾತ ಗಾಯಕ ಡಾ. ನಾಗರಾಜ ಹವಾಲ್ದಾರ್ ಅವರು ರಾಮಕ್ಕನವರೂ ಸೇರಿದಂತೆ ಅನೇಕ ಅಪ್ರಕಟಿತ ಕವಿಗಳ ರಚನೆಗಳನ್ನು ರಾಗ ಸಂಯೋಜನೆ ಮಾಡಿ ಹಾಡಿದ್ದಾರೆ. ಮೂಲತಃ ಬಳ್ಳಾರಿಯ ಆಸುಪಾಸಿನವರಾದ ಅವರಿಗೆ ಅಲ್ಲಿಯ ಗ್ರಾಮೀಣ ಕಲೆಯ ಪರಂಪರೆ ರಕ್ತಗತವಾಗಿದೆ.

■

# ವಚನಗಳಲ್ಲಿ ಮಧುರ ಭಾವದ ಅಭಿವ್ಯಕ್ತಿ

–ಸುಮತಿ ಮುದ್ದೇನಹಳ್ಳಿ

**ಭ**ಗವದ್ಗೀತೆ, ಉಪನಿಷತ್ತು, ಹಾಗು ಇನ್ನಿತರ ಧರ್ಮಗ್ರಂಥಗಳಲ್ಲಿ ವ್ಯಾಖ್ಯಾನಿಸಿರುವ ಭಕ್ತಿಯ ಪಥದಲ್ಲಿ 'ಭಕ್ತಿಯೋಗ' ಒಂದು ಪ್ರಮುಖವಾದ ಪ್ರತಿಪಾದನೆ. ಈ ಪ್ರಕಾರದಲ್ಲಿ ಭಕ್ತಿಯ ಐದು ಬಗೆಯ ಮನಸ್ಥಿತಿಗಳನ್ನು ಹೆಸರಿಸಲಾಗುತ್ತದೆ: ಶಾಂತ, ದಾಸ್ಯ, ಸಖ್ಯ, ವಾತ್ಸಲ್ಯ, ಮತ್ತು, ಮಧುರವೆಂಬ ಭಾವಗಳು. ಈ ಮನಸ್ಥಿತಿಗಳಲ್ಲಿ ಮಧುರಭಾವವು ಭಕ್ತಿರಸದ ಅತ್ಯುನ್ನತ ಮಟ್ಟದ ಬೆಳವಣಿಗೆಯೆಂದು ಗುರುತಿಸಬಹುದು; ಈ ಬಗೆಯಲ್ಲಿ ಭಕ್ತಿಯ ಪರಿಶುದ್ಧ ಆನಂದದ ಅನುಭವವಾಗುತ್ತದೆ ಎನ್ನಲಾಗುತ್ತದೆ. ಗೋಪಿಕೆಯರು ಕೃಷ್ಣನೊಂದಿಗೆ ಈ ಅನನ್ಯ ಭಕ್ತಿಭಾವದ ಆನಂದದಲ್ಲಿ ಮೀಯುತ್ತಿದ್ದರು ಎಂಬ ಉಲ್ಲೇಖಗಳಿವೆ. ಕೃಷ್ಣಾರಾಧನೆಯ ಪುಣ್ಯಕ್ಷೇತ್ರಗಳಾದ ಬೃಂದಾವನ ಮತ್ತು ಮಥುರಾದಲ್ಲಿ ಪುರುಷ ಭಕ್ತರೂ ಹೆಣ್ಣಿನ ವೇಷ ಧರಿಸಿ ನರ್ತಿಸುವುದು ಸಹ ಈ ಮಧುರಭಾವದ ಮನಸ್ಥಿತಿಯ ಒಂದು ಪ್ರಕಾರವೇ ಆಗಿರುತ್ತದೆ.

'ಮಧುರಭಾವ' ಎಂದು ವೈಷ್ಣವ ಪರಂಪರೆಯಲ್ಲಿ ಗುರುತಿಸಲಾದ ಭಕ್ತಿಯ ಅಭಿವ್ಯಕ್ತಿಯನ್ನು ಹೋಲುವಂತಹ ಒಂದು ವಿಧಾನವನ್ನು ತಮ್ಮದಾಗಿಸಿಕೊಂಡ ಹಲವಾರು ಶಿವಶರಣರು, ಭಕ್ತಿಯ ಉತ್ಕಟಾವಸ್ಥೆಯಲ್ಲಿ, ಜೀವಾತ್ಮ–ಪರಮಾತ್ಮರ ಅನುಸಂಧಾನದ ಕುರಿತು ಬಹುಸಂಖ್ಯೆಯ ವಚನಗಳನ್ನು ರಚಿಸಿದರು. ಈ ವಚನಗಳಲ್ಲಿ, ಭಗವಂತನಿಗೆ ತಮ್ಮ ಅಂತರಂಗವನ್ನು ಅತಿ ಆಪ್ತ ನೆಲೆಯಿಂದ ನಿವೇದಿಸಿಕೊಳ್ಳುವ ನಿಲುವೊಂದನ್ನು ಕಂಡುಕೊಂಡರು: ಈ ನಿಲುವನ್ನೇ ಸತಿ–ಪತಿ ಭಾವ ಅಥವಾ ಶರಣಸತಿ–ಲಿಂಗಪತಿ ಭಾವ ಎಂದು ಗುರುತಿಸಲಾಗುತ್ತದೆ. ವಚನಗಳಲ್ಲಿನ ಈ ವಿಶಿಷ್ಟ ಪ್ರಕಾರದ ಮಧುರಭಾವದಲ್ಲಿ, ಶರಣರು, ಲಿಂಗವನ್ನು ತಮ್ಮ ಬಾಳಸಂಗಾತಿಯಾಗಿಯೋ ಅಥವಾ ನಲ್ಲ/ನಲ್ಲೆಯಾಗಿಯೋ ಪರಿಭಾವಿಸಿ, ತಮ್ಮ ಉತ್ಕಟವಾದ ಭಕ್ತಿಯನ್ನು, ಲೌಕಿಕದ ನೆಲೆಯಲ್ಲಿ ವಿವಿಧ ಶೈಲಿ–ಸನ್ನಿವೇಶಗಳ ಪ್ರೇಮಾಭಿವ್ಯಕ್ತಿಯಾಗಿಸುವುದನ್ನು ಕಾಣಬಹುದು. ಈ ಪ್ರೇಮಾಭಿವ್ಯಕ್ತಿಯ ಹಲವಾರು ಬಗೆಗಳನ್ನು ಅರಿತುಕೊಳ್ಳುವ ದೊಡ್ಡ ಸಾಹಸವನ್ನು ಈ ಪುಟ್ಟ ಲೇಖನದಲ್ಲಿ ಪ್ರಯತ್ನಿಸುತ್ತಿದ್ದೇನೆ.

ಭಕ್ತಿ ಯೋಗದಲ್ಲಿ ಉಕ್ತಿಯಾಗಿರುವ ಇನ್ನಿತರ ಭಾವಗಳಾದ ಶಾಂತ, ದಾಸ್ಯ, ವಾತ್ಸಲ್ಯವೆಂಬ ನಾಲ್ಕು ಭಾವಗಳಿಗಿಂತ, ಮಧುರ ಭಾವವು ಭಕ್ತರಿಗೆ ಹೆಚ್ಚಿನ ಮಟ್ಟದಲ್ಲಿ ಆಪ್ಯಾಯಮಾನವಾಗಿರುವುದನ್ನು ಗಮನಿಸಬಹುದು. ಅಕ್ಕ ಮಹಾದೇವಿ, ಬಸವಣ್ಣ, ಆಂಡಾಳ್, ಮೀರಾರಲ್ಲದೇ ಇನ್ನಿತರ ಹಲವಾರು ಭಕ್ತ ಜನ ಈ ಪ್ರಕಾರವನ್ನು ತಮ್ಮ ಅಭಿವ್ಯಕ್ತಿಯ ವಿಧಾನವಾಗಿ ಬಳಸಿಕೊಂಡಿರುವುದನ್ನು ಕಾಣಬಹುದು. ಈ ಭಾವದಲ್ಲಿ ತೋರಲು ಸಾಧ್ಯವಾಗಬಹುದಾದ ಸಾಮೀಪ್ಯ, ಅರ್ಪಣೆ, ಪರಸ್ಪರ ಪ್ರೀತಿಯೇ ಇದಕ್ಕೆ ಮುಖ್ಯ ಕಾರಣವೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ (ಸಂದರ್ಶನ: ಡಾ. ಜಿ. ಎಸ್. ಸಿದ್ಧಲಿಂಗಯ್ಯ). ಈ ವಿಧಾನ ಅಳವಡಿಸಿಕೊಳ್ಳಲು, ಇದರಲ್ಲಿನ ರೋಮಾಂಚಕತೆ, ಉತ್ತೇಜಕತೆ, ಮತ್ತು ಉದ್ದೀಪಕತೆಯೂ ಕಾರಣವಾಗಿತ್ತೆಂಬ ಅಭಿಪ್ರಾಯ ಕೇಳಬರುತ್ತದೆ.

ಇನ್ನು ಈ ಶರಣಸತಿ-ಲಿಂಗಪತಿ ಭಾವದ ಮೂಲವೆಲ್ಲಿಯದು ಎಂದು ಹುಡುಕಿಕೊಂಡು ಹೊರಟವರಿಗೆ, ಖಚಿತವಾದ ಉತ್ತರ ಸಿಗದೆ ಕೊಂಚ ನಿರಾಶೆಯಾಗುತ್ತದೆ. ಈ ಪ್ರಕಾರದ ಮೂಲವು, ಏಳು, ಎಂಟು, ಮತ್ತು ಒಂಬತ್ತನೇ ಶತಮಾನದಲ್ಲಿ ರಚಿಸಲಾಗಿರುವ ತಮಿಳುನಾಡಿನ ನಾಯನ್ಮಾರರ ಭಕ್ತಿಗೀತೆಗಳಲ್ಲಿ (ತೇವಾರಂಗಳಲ್ಲಿ) ಹಾಗೂ ವೈಷ್ಣವ ಆಳ್ವಾರರುಗಳ ಹಾಡುಗಳಲ್ಲಿ ಕಾಣಿಸಿಕೊಂಡಿದ್ದು, ಬಹುಶಃ ವಚನಕಾರರಿಗೆ ಪ್ರೇರಣೆಯಾಗಿರಬಹುದೆಂಬ ಅಭಿಪ್ರಾಯವನ್ನು ಡಾ. ಎಸ್. ವಿದ್ಯಾಶಂಕರರು ವ್ಯಕ್ತಪಡಿಸುತ್ತಾರೆ. ಪ್ರೊ. ಡಿ. ಎಲ್. ನರಸಿಂಹಾಚಾರ್‌ರವರು ಕೂಡಾ ಈ ಅನಿಸಿಕೆಯನ್ನು ಪುಷ್ಟೀಕರಿಸುತ್ತಾರೆ: ತೇವಾರಂ ಗೀತೆಗಳಲ್ಲಿ ಕಂಡುಬರುವ "ಸಮಾನ ಮನೋಧರ್ಮ, ಧೋರಣೆ, ಆಲೋಚನಾ ವಿಧಾನ, ಹಾಗೂ ಶೈಲಿಗಳು" ವಚನಗಳಲ್ಲೂ ಕಂಡುಬರುವುದರಿಂದ, ನಾಯನ್ಮಾರರ ಹಾಗೂ ಆಳ್ವಾರರ ಪ್ರಭಾವದ ಸುಳಿವು ಕಾಣಬರುತ್ತದೆ ಎಂದು ತರ್ಕಿಸುತ್ತಾರೆ. ಈ ವಾದಕ್ಕೆ ಪೂರಕವಾದ ಯಾವುದೇ ಸಂಶೋಧನೆ ಆಗಿಲ್ಲದಿರುವುದರಿಂದ, ಇದನ್ನು ಒಪ್ಪಿಕೊಳ್ಳಲು ತೊಡಕೆನಿಸುತ್ತದೆ ಎಂದು ಈ ಇಬ್ಬರು ವಿದ್ವಾಂಸರು ಸ್ಪಷ್ಟವಾಗಿ ಹೇಳಿರುವರು. ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯನವರು, ತಮಿಳು ಭಕ್ತಿ ಸಾಹಿತ್ಯದಲ್ಲಿ ಮೂಲದ ಅನ್ವೇಷಣೆ ನಡೆದಿದೆ, ಆದರೆ ಇದುವರೆಗೂ ಪುರಾವೆ ಸಿಕ್ಕಿಲ್ಲವೆಂಬ ಅಭಿಪ್ರಾಯವನ್ನೇ ವ್ಯಕ್ತಪಡಿಸಿ, ಮೇಲಿನ ಅಭಿಮತಗಳನ್ನು ಸಮರ್ಥಿಸುತ್ತಾರೆ.

ಈ ಲೇಖನದಲ್ಲಿ, ಸತಿ-ಪತಿ ಭಾವದ ವಚನಕಾರರನ್ನು ಯಾವ ಕ್ರಮದಲ್ಲಿ ಪರಿಚಯ ಮಾಡಿಕೊಡಬೇಕೆಂಬ ಗೊಂದಲ ಮೂಡಿ, ಸದರಿ ಸಮಸ್ಯೆಯ ಪರಿಹಾರಕ್ಕೆ ಮುಂಬರುವ ಕ್ರಮವನ್ನು ಅನುಸರಿಸಲಿದ್ದೇನೆ. ಸತಿ-ಪತಿ ಭಾವದ ಹೆಚ್ಚಿನ ಸಂಖ್ಯೆಯ ವಚನಗಳನ್ನು ಬರೆದ ವಚನಕಾರರನ್ನು, ಅವರ ಕಾಲಮಾನವನ್ನು ಅಭ್ಯಸಿಸಿ, ಬಸವಕಾಲ ಮತ್ತು ಬಸವೋತ್ತರ ಕಾಲ ಎಂದು ಮೊದಲನೆಯದಾಗಿ ವಿಭಾಗಿಸಿಕೊಳ್ಳುತ್ತಿದ್ದೇನೆ. ಈ

ಬಗೆಯ ವಿಭಾಗದಲ್ಲಿ, ಪ್ರತಿ ವಚನಕಾರರ ರಚನೆಯಲ್ಲಿ ಕಾಣಬರುವ ವಿಶಿಷ್ಟ ಮನೋಧರ್ಮವನ್ನು ಅಭ್ಯಸಿಸುವುದು ಪ್ರಸ್ತುತ ಬರವಣಿಗೆಯ ಕೇಂದ್ರಬಿಂದುವಾಗಿರುತ್ತದೆ: ಪ್ರಾಯಶಃ ಅಧ್ಯಯನದ ದೃಷ್ಟಿಯಿಂದ, ಓದುಗನಿಗೆ ಅನುಕೂಲಕರವಾದ ಮಾರ್ಗವಿದು ಎಂದು ಭಾವಿಸಿ, ಆ ಪ್ರಕಾರವಾಗಿ ಈ ಲೇಖನವನ್ನು ಮುಂದುವರೆಸುತ್ತಿದ್ದೇನೆ. ವಚನ ಸಾಹಿತ್ಯವನ್ನು ಆಳವಾಗಿ ಅಭ್ಯಸಿಸಿರುವ ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯನವರು, ಅತಿ ಹೆಚ್ಚಿನ ಶರಣಸತಿ-ಲಿಂಗಪತಿ ಭಾವದ ವಚನಗಳನ್ನು ಬರೆದಿರುವ ವಚನಕಾರರೆಂದು ಕ್ರಮವಾಗಿ ಅಕ್ಕಮಹಾದೇವಿ, ಉರಿಲಿಂಗ ದೇವ, ಗಜೇಶ ಮಸಣಯ್ಯ, ಬಸವಣ್ಣ, ಸಿದ್ಧರಾಮ, ಮತ್ತು ಘನಲಿಂಗದೇವರನ್ನು ಹೆಸರಿಸುತ್ತಾರೆ. ಈ ಶಿವಶರಣರುಗಳಲ್ಲಿ, ಮೊದಲ ಸ್ಥಾನ ಅಕ್ಕಮಹಾದೇವಿಯದಾಗಿದ್ದು, ಉರಿಲಿಂಗದೇವ ಮತ್ತು ಗಜೇಶ ಮಸಣಯ್ಯ ನಂತರದ ಸ್ಥಾನ ಪಡೆಯುತ್ತಾರೆ. ಈ ಮೂವರು ವಚನಕಾರರ ಲಭ್ಯವಿರುವ ಸಾಕಷ್ಟು ವಚನಗಳಲ್ಲಿನ ವಸ್ತುವಿಷಯವು ಸತಿ-ಪತಿ ಭಾವದ ಕುರಿತೋ ಇಲ್ಲವೇ ಈ ಭಾವದ ಸುಳಿವು ಕೊಡಬಲ್ಲವಂತಹ ರಚನೆಯೋ ಆಗಿರುವುದು ಕಂಡುಬರುತ್ತದೆ ಎಂಬುದು ಸಿದ್ಧಲಿಂಗಯ್ಯನವರ ಅಭಿಪ್ರಾಯವಾಗಿರುತ್ತದೆ. ಈ ಲೇಖನದ ಅನುಕ್ರಮಣಿಕೆಯಲ್ಲಿ, ಮೊದಲನೆಯದಾಗಿ, ಬಸವ ಕಾಲದ ಪ್ರಮುಖ ವಚನಕಾರರಾದ, ಅಕ್ಕಮಹಾದೇವಿ, ಉರಿಲಿಂಗದೇವ, ಗಜೇಶ ಮಸಣಯ್ಯ, ಬಸವಣ್ಣ, ಸಿದ್ಧರಾಮೇಶ್ವರ, ಚನ್ನಬಸವಣ್ಣ, ಮರುಳಶಂಕರದೇವ, ಮತ್ತು ಅಂಬಿಗರ ಚೌಡಯ್ಯರನ್ನು ಓದಿಕೊಂಡು ನಂತರದಲ್ಲಿ, ಬಸವೋತ್ತರ ಕಾಲದ ಘನಲಿಂಗದೇವ ಮತ್ತು ಕಾಡು ಸಿದ್ಧೇಶ್ವರರ ರಚನೆಗಳ ಸೊಬಗನ್ನು ಆಸ್ವಾದಿಸೋಣ.

**ಅಕ್ಕಮಹಾದೇವಿ:** ಹನ್ನೆರಡನೇ ಶತಮಾನದಲ್ಲಿ ಜೀವಿಸಿದ್ದ ಅಕ್ಕ ತನ್ನ ಬಾಲ್ಯದಿಂದಲೂ ಪರಮಾರ್ಥದ ಕಡೆಗೆ ದೃಷ್ಟಿ ಇಟ್ಟವಳು: ಹರಿಹರನ "ಮಹದೇವಿಯಕ್ಕಳ ರಗಳೆ"ಯ ಪ್ರಕಾರ, ಊರಿನ ಮುಖ್ಯಸ್ಥ ಕೌಶಿಕ ಮಹದೇವಿಯನ್ನು ಮದುವೆಯಾಗಲು ಬಯಸಿ ಒತ್ತಾಯಿಸುತ್ತಾನೆ. ಅಕ್ಕ ಶರತ್ತುಗಳನ್ನು ವಿಧಿಸಿ ಮದುವೆಗೆ ಒಪ್ಪಿದರೂ, ಕೌಶಿಕ ವಚನ ಭಂಗ ಮಾಡಿದಾಗ ಉಡುಗೆಯನ್ನೂ ತೊರೆದು ಮನೆ ಬಿಟ್ಟು ಹೊರಟುಬಿಡುತ್ತಾಳೆ. ಇನ್ನು ಕೆಲವು ಕಥನಪರಂಪರೆಗಳಲ್ಲಿ ಅಕ್ಕ ಎಳವೆಯಲ್ಲೇ ಚನ್ನಮಲ್ಲಿಕಾರ್ಜುನನನ್ನು ವರಿಸಿದವಳು ಅಂತಲೂ ಉಂಟು. ಪರ್ಯಟನೆ ಮಾಡುತ್ತ ಮಹದೇವಿ ಕಲ್ಯಾಣಕ್ಕೆ ಹೋದಳು, ಅಲ್ಲಿಂದ ಶ್ರೀಶೈಲದ ಕದಳಿಯಲ್ಲಿ ಐಕ್ಯಳಾದಳು ಎಂಬ ವಿವರಗಳಿವೆ. ಭಾವ ತೀವ್ರತೆ ಈಕೆಯ ರಚನೆಗಳ ಮುಖ್ಯ ಲಕ್ಷಣ (ವಚನ ಸಂಚಯ ಬ್ಲಾಗ್).

"ಆಶೆಯೇ ನಿಲ್ಲು ನಿಲ್ಲು, ಹಸಿವೇ ನೀನು ನಿಲ್ಲು ನಿಲ್ಲು, ತೃಷೆಯೇ ನೀನು ನಿಲ್ಲು ನಿಲ್ಲು" (ವ: ೪೧೫) ಎಂದು ಮಾನವ ಅಧಃಪತನದ ಅಂಶಗಳನ್ನೆಲ್ಲ ಹೊಸಕಿ ಹಾಕಿದ ಮಹಾದೇವಿಯಕ್ಕಳ ಮುಂದೆ ಶರಣಸತಿ-ಲಿಂಗಪತಿಯೆಂಬ ಭಕ್ತಿಪಥದ ಭಾವ

ದೊಡ್ಡ ಸಾಧ್ಯತೆಯನ್ನು ತೆರೆದುಕೊಟ್ಟಿತ್ತು. ಮನಸ್ಸಿನಲ್ಲಿ ಚನ್ನಮಲ್ಲಿಕಾರ್ಜುನನನ್ನು ಇರಿಸಿಕೊಂಡು, ಇಹಕ್ಕೊಬ್ಬ ಗಂಡ ಎಂಬ ದ್ವಂದ್ವವೇ ಬೇಡ ಎಂದು, ಗಂಡನೆಂಬುವನು ಇರಲೇ ಬೇಕಾಗಿದ್ದರೆ, "ಗಂಡಗಂಡರೆಲ್ಲರ ಹೆಂಡಿರಾಗಿ ಆಳುವ" (ವ: ೪೩೨) ಶಿವನೇ ಗಂಡನಾಗಿರಲಿ ಎಂದು ಆರಿಸಿಕೊಂಡವಳು.

**ಇಹಕ್ಕೊಬ್ಬ ಗಂಡನೆ ಪರಕ್ಕೊಬ್ಬ ಗಂಡನೆ?**
**ಲೌಕಿಕಕ್ಕೊಬ್ಬ ಗಂಡನೆ ಪಾರಮಾರ್ಥಕ್ಕೊಬ್ಬ ಗಂಡನೆ?**
**ಎನ್ನ ಗಂಡ ಚೆನ್ನಮಲ್ಲಿಕಾರ್ಜುನದೇವರಲ್ಲದೆ ಮಿಕ್ಕಿನ ಗಂಡರೆಲ್ಲ**
**ಮುಗಿಲಮರೆಯ ಬೊಂಬೆಯಂತೆ.** (ವ: ೭೭)

ಈ ಒಂದು ಆಯ್ಕೆಯಲ್ಲಿ, ಅಕ್ಕ, ವೈಚಾರಿಕ ನೆಲೆಗಟ್ಟಿನ ಮೇಲೆ ನಿಂತಿದ್ದಳು. ಇನ್ನೊಂದು ವಚನದಲ್ಲಿ, ಚನ್ನಮಲ್ಲಿಕಾರ್ಜುನನ ಒಲವು ಗಳಿಸುವ ದಾರಿಯನ್ನು ಆರಿಸಿಕೊಂಡು, ತನ್ನ ಲೌಕಿಕ ಜೀವನದಲ್ಲಿ ಎದುರಿಸಿದ ಕಷ್ಟಗಳನ್ನು ಸೂಕ್ಷ್ಮವಾದ ಪ್ರತಿಮೆಗಳಲ್ಲಿ ಹೀಗೆ ಕಟ್ಟಿಕೊಡುತ್ತಾಳೆ:

**ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವಾ.**
**ಏರಿಲ್ಲದ ಗಾಯದಲ್ಲಿ ನೊಂದೆನವ್ವಾ.**
**ಸುಖವಿಲ್ಲದೆ ಧಾವತಿಗೊಂಡೆನವ್ವಾ.**
**ಚೆನ್ನಮಲ್ಲಿಕಾರ್ಜುನದೇವಂಗೊಲಿದು ಬಾರದ ಭವಂಗಳಲ್ಲಿ ಬಂದೆನವ್ವಾ.**
(ವ: ೧೭೧)

ಬೆಂಕಿಯಿಲ್ಲದ ಬೇಗೆ, ಮತ್ತು ಗಾಯವಿಲ್ಲದ ನೋವು ಎಂಬರ್ಥದ ಪದಗಳ ಬಳಕೆ ಈಕೆಯ ಅಂತರಂಗದ ನೋವನ್ನು ಸಹಜವಾಗಿ ಧ್ವನಿಸುತ್ತದೆ. ತೀ. ನಂ. ಶ್ರೀಕಂಠಯ್ಯನವರು ಹೇಳುವಂತೆ ಈಕೆಯದು "ಕವಿ ಹೃದಯ" (ಕನ್ನಡ: ವಚನಸಾಹಿತ್ಯ). ಅಕ್ಕನ ಪದಗಳ ಆಯ್ಕೆಯ ಚಮತ್ಕಾರದ ಸೊಗಸನ್ನು, ತನ್ನ ಚನ್ನಮಲ್ಲಿಕಾರ್ಜುನನನ್ನು ವಿಧವಿಧವಾಗಿ ಬಣ್ಣಿಸಿದ ರೀತಿಯಲ್ಲಿ ಅವಲೋಕಿಸಬಹುದು. ತನ್ನ ಅಲೌಕಿಕ ಪತಿಯನ್ನು ಈಕೆ "ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ," "ಕಡೆಯಿಲ್ಲದ," "ಭವವಿಲ್ಲದ," "ಭಯವಿಲ್ಲದ, ನಿರ್ಭಯ ಚಲುವ"ನೆಂದು ವರ್ಣಿಸುತ್ತಾಳೆ (ವ: ೩೯೮). ಹಾಗೆಯೇ, ಆತನ ರೂಪವೆಂತಹುದು? "ಹೊಳೆವ ಕೆಂಜೆಡೆಗಳ, ಮಣಿಮಕುಟದ, ಒಪ್ಪುವ ಸುಲಿಪಲ್ಗಳ, ನಗೆಮೊಗದ, ಕಂಗಳ ಕಾಂತಿಯ, ಈರೇಳುಭುವನವ ಬೆಳಗುವ ದಿವ್ಯಸ್ವರೂಪ" (ವ: ೪೩೨) ವೆಂದು ಸ್ತುತಿಸಿ ಕೊಂಡಾಡುತ್ತಾಳೆ.

ಚನ್ನಮಲ್ಲಿಕಾರ್ಜುನನನ್ನೇ ಪತಿಯಾಗಿ ಪಡೆಯಬೇಕೆಂದು ನಿಶ್ಚಯಿಸಿದ ಅಕ್ಕನಿಗೆ, ಅನುಭವ ಮಂಟಪದಲ್ಲಿ ಈ ಆಸೆಯ ಸಾಕ್ಷಾತ್ಕಾರವಾಯ್ತು ಎಂದು ಪ್ರತೀತಿಯಿದೆ

(ಶರಣಸತಿ ಲೇಖನ). ಅಕ್ಕನ ದೃಢ ನಿಶ್ಚಯ ಮೆಚ್ಚಿ, ಬಸವಣ್ಣನವರು ಇಷ್ಟಲಿಂಗವನ್ನು ಕೊಟ್ಟು ಗುರುವಾದರು ಎಂದು ಹಲವಾರು ಗ್ರಂಥಗಳು ಉಲ್ಲೇಖಿಸುತ್ತವೆ. ಈ ಕೆಳಗಿನ ವಚನದಲ್ಲಿ ಅಂತಹ ಅನುಭವದ ಚಿತ್ರಣವಿದೆ:

**ಗುರುವೆ ತೆತ್ತಿಗನಾದ,**
**ಲಿಂಗವೆ ಮದುವಣಿಗನಾದ, ನಾನೆ ಮದುವಳಿಗೆಯಾದೆನು.**
**ಈ ಭುವನವೆಲ್ಲರಿಯಲು ಅಸಂಖ್ಯಾತರೆನಗೆ ತಾಯಿತಂದೆಗಳು.**
**ಕೊಟ್ಟರು ಸಾದೃಶ್ಯವಪ್ಪ ವರನ ನೋಡಿ.**
**ಇದು ಕಾರಣ ಚೆನ್ನಮಲ್ಲಿಕಾರ್ಜುನನೆ ಗಂಡನೆನಗೆ.**
**ಮಿಕ್ಕಿನ ಲೋಕದವರೆನಗೆ ಸಂಬಂಧವಿಲ್ಲವಯ್ಯಾ ಪ್ರಭುವೆ. (ವ: ೨೦೩)**

ಸದ್ಗುರುವಾಗಿ ಬಸವಣ್ಣನವರನ್ನು, ವಧುವಾಗಿ ತನ್ನನ್ನು, ಪತಿಯಾಗಿ ಇಷ್ಟಲಿಂಗ-ವನ್ನು, ದಿಬ್ಬಣಿಗರಾಗಿ ಶಿವಶರಣ ಸಮೂಹವನ್ನು ಚಿತ್ರಿಸಿರುವ ರೀತಿ ಆಕೆಯ ಭಕ್ತಿಯ ಆಳವನ್ನು, ಕಲ್ಪನಾಶಕ್ತಿಯ ಅಗಾಧತೆಯನ್ನು ತೋರುತ್ತದೆ.

ಅಕ್ಕನ ಮಧುರಭಾವದ ಅಭಿವ್ಯಕ್ತಿ ಅತ್ಯಂತ ತೀವ್ರ ಸ್ವರೂಪದ್ದು ಎನ್ನುವುದರಲ್ಲಿ ಎರಡು ಮಾತಿಲ್ಲ. ಈ ಬಗೆಯ ಅಭಿವ್ಯಕ್ತಿ ಆಕೆಯ ಜೀವನವಿಧಾನವಾಗಿತ್ತು. ತನ್ನೆಲ್ಲಾ ದಾರಿಗಳನ್ನೂ ಚನ್ನಮಲ್ಲಿಕಾರ್ಜುನನೆಡೆಗೆ ಮಾತ್ರ ತೆರೆಯುವಂತಹ ಆಯ್ಕೆಗಳನ್ನು ಜೀವನದುದ್ದಕ್ಕೂ ಮಾಡಿಕೊಂಡು ಬಂದ ಅಕ್ಕನಿಗೆ, ಈ ಮಾರ್ಗವನ್ನು ಬಿಟ್ಟು, ಬೇರೆಯ ಕಡೆಗೆ ಚಿತ್ತ ಹೊರಳುವ ಸಾಧ್ಯತೆಯಿರಲಿಲ್ಲ. ಆತನೆಡೆಗಿನ ಭಕ್ತಿ ಆಕೆಯ ಜೀವನಾಧಾರ-ವಾಗಿತ್ತು. ಈ ಭಕ್ತಿಯ ನಿಲುವನ್ನು ನೆಚ್ಚಿಕೊಂಡ ಇನ್ನಿಬ್ಬರು ವಚನಕಾರರಾದ ಉರಿಲಿಂಗದೇವನಿಗಾಗಲಿ, ಗಜೇಶ ಮಸಣಯ್ಯನಿಗಾಗಲೀ, ಇದು ಕೇವಲ ಒಂದು ಅಭಿವ್ಯಕ್ತಿಯ ಸಾಧನವಾಗಿತ್ತು (ಡಾ. ಜಿ.ಎಸ್.ಎಸ್).

## ಉರಿಲಿಂಗದೇವ:

ಅಕ್ಕಮಹಾದೇವಿಯ ಶೈಲಿ ಮತ್ತು ಮನೋಧರ್ಮಗಳು ಈ ಸಮಕಾಲೀನ ಶಿವಶರಣನ ರಚನೆಗಳಲ್ಲೂ ಕಾಣುತ್ತವೆ. ಉರಿಲಿಂಗದೇವನ ಲಿಂಗನಿಷ್ಠೆಯನ್ನು ಪರೀಕ್ಷಿಸ-ಲೆಂದು ಅನ್ಯಮತೀಯರು ಈತನ ಗುಡಿಸಿಲಿಗೆ ಬೆಂಕಿ ಇಟ್ಟರೂ, ವಿಚಲಿತನಾಗದೆ ಪೂಜಾಮಗ್ನನಾಗಿದ್ದ ಎಂಬ ಕಥೆ ಪ್ರಚಲಿತವಾಗಿದೆ. ಮಠಾಧಿಪತಿಯೂ ಆಗಿದ್ದ ಈತನ ಭಕ್ತಿಭಾವವು ಶೃಂಗಾರ ರಸವಾಗಿ ಪರಿವರ್ತಿತಗೊಂಡಿರುವ ರೀತಿ ಅಸಾಮಾನ್ಯವಾಗಿದೆ. ತನ್ನನ್ನೇ ಪತ್ನಿ ಎಂದು, ಶಿವನನ್ನು ಪತಿ ಎಂದು ಭಾವಿಸಿದ ನಿಲುವು ಈತನ ವಚನಗಳಲ್ಲಿ ಸ್ಪಷ್ಟ.

ತನ್ನ ಮನದ ಆಪ್ತ ಭಾವಗಳನ್ನು ಹತ್ತಿರದ ಗೆಳತಿಯರೊಂದಿಗೆ ಗುಟ್ಟಿನಲ್ಲಿ ಹೇಳುವ ಭಾವದಲ್ಲಿ ಕೆಲವು ರಚನೆಗಳಿವೆ. ಅವುಗಳಲ್ಲಿ ಒಂದು,

**ಎಮ್ಮ ನಲ್ಲನ ಕೂಡಿದ ಕೂಟವ ಇದಿರಿಗೆ ಹೇಳಬಾರದವ್ವಾ.**
**ನೀವೆಲ್ಲಾ ನಿಮ್ಮ ನಲ್ಲನ ಕೂಡಿದ ಸುಖವ ಬಲ್ಲಂತೆ ಹೇಳಿ.**
**ಉರಿಲಿಂಗದೇವ ಬಂದು ನಿರಿಯ ಸೆರಗ ಸಡಿಲಿಸಲೊಡನೆ**
**ನಾನೊ ತಾನೊ ಏನೆಂದರಿಯೆನು.** (ವ: ೧೨೩೩)

ತನ್ನ ಪತಿಯಾದ ಉರಿಲಿಂಗದೇವನು ತನ್ನ ನಿರಿಗೆ, ಸೆರಗು ಸಡಲಿಸಿ ತನ್ನೊಡನೆ ಸುಖಿಸಲು ಬಂದಾಗ, ಸಮಾಗಮದ ಕ್ರಿಯೆಯಲ್ಲಿ, ತನ್ನತನದ ಅರಿವನ್ನೇ ಕಳೆದುಕೊಂಡಿದ್ದನ್ನು ನಿರೂಪಿಸುತ್ತಾ, ತಮ್ಮ ಸಂಬಂಧ ದ್ವೈತದಿಂದ ಅದ್ವೈತದ ಸ್ಥಿತಿಗೆ ಮಾರ್ಪಾಟಾಗುವುದನ್ನು ವರ್ಣಿಸುತ್ತಾನೆ. ಹೀಗೆ ಜೀವಾತ್ಮ-ಪರಮಾತ್ಮರ ಸಮಾಗಮವನ್ನು ಕಾವ್ಯಮಯವಾಗಿ ಸೃಷ್ಟಿಸಲು ವಚನಗಳಲ್ಲಿನ ಸತಿ-ಪತಿ ಭಾವ ಯುಕ್ತವಾದ ವಿಧಾನವಾಗು-ತ್ತದೆ, ಹಾಗೂ ಈ ವಿಧಾನವನ್ನು ಉರಿಲಿಂಗದೇವ ಸಮರ್ಪಕವಾಗಿ ಬಳಸಿಕೊಳ್ಳುವ ಕುಶಲತೆ ಮೆರೆಯುತ್ತಾನೆ ಎಂಬುದನ್ನು ನಾವು ಮನಗಾಣಬಹುದು.

ಇದೇ ಭಾವದ ಇನ್ನೊಂದು ವಚನ ಹೀಗಿದೆ:

**ಈ ನಲ್ಲನ ಬೇಟದ ಕೂಟದ ಪರಿಯನು**
**ಏನೆಂದು ಹೇಳುವೆ? ವಿಪರೀತ ಕೆಳದಿ.**
**ಪುರುಷ ಶಕ್ತಿಯಾಗಿ, ಶಕ್ತಿ ಪುರುಷನಾಗಿ**
**ನೆರೆದು ಸುಖಿಸುವನು ಕೇಳಾ ಕೆಳದಿ.**
**ಅತಿ ಕಾಮಿ ವಿಪರೀತನು ಉರಿಲಿಂಗದೇವನು,**
**ನೆರೆಯಲು ನೆರೆವುದು ಮನದಿಚ್ಛೆ ಕೆಳದಿ.** (ವ: ೧೨೨೯)

ತನ್ನ ಗೆಳತಿಯಲ್ಲಿ, ತನ್ನ ಅತಿಕಾಮಿಯಾದ ಪತಿಯ ಬಗ್ಗೆ ಹೇಳಿಕೊಂಡು ಆನಂದ ಪಡುವ ಚಿತ್ರಣವಿದು. ಇಂತಹ ಪತಿಯನ್ನು ಕೂಡಲು ತನ್ನ ಮನದಿಚ್ಛೆ ಈಡೇರುತ್ತದೆ ಎಂದು ಹೇಳುವ ಮೂಲಕ, ಶಿವನಾತ್ಮದೊಂದಿಗೆ ಭಕ್ತನ ಆತ್ಮ ಒಂದಾಗುವ ಪರಿಯನ್ನು ಬಣ್ಣಿಸುತ್ತಾನೆ.

ಈತನ ಮುಂದಿನ ವಚನದಲ್ಲಿ, ನಲ್ಲೆಯೊಬ್ಬಳು ತನ್ನನ್ನು ಅಪ್ಪಿ ಮುದ್ದಾಡಲು ಬಂದ ಪರಪುರುಷರಿಗೆ ಗದರಿಸಿ, ತನ್ನ ದೇಹದ ಮೇಲೆ ತನ್ನ ನಲ್ಲನ ಸ್ವಾಮಿತ್ವವಿದೆ ಎಂದು ವಿವರಿಸುವ ಚಿತ್ರಣ ಕಾಣುತ್ತದೆ:

**ಆತನ ಬಿರುದೆನ್ನ ಉರದಲ್ಲಿ ಇದೆ ಕಂಡಯ್ಯಾ.**
**ಏಕೆ ಬಂದಿರೋ ಎಲೆ ಅಣ್ಣಗಳಿರಾ.**

**ನಿಮಗಪ್ಪುವುದಕ್ಕೆಡೆಯಿಲ್ಲ.**
**ನಿಮಗಪ್ಪುವದಕ್ಕೆಡ್ಡಬಂದಹನೆಮ್ಮ ನಲ್ಲ.**
**ಏಕೆ ಬಂದಿರೋ,**
**ಉರಿಲಿಂಗದೇವನನಪ್ಪಿ ಸೊಪ್ಪಾದ ಹಿಪ್ಪೆಗೆ? (ವ: ೧೨೨೩)**

ಬಹುಶಃ ಇದು ವೀರಶೈವ ಧರ್ಮದ ಆಚರಣೆಗೆ ವಿರೋಧ ಒಡ್ಡುತ್ತಿದ್ದ ಶಕ್ತಿಗಳ ವಿರುದ್ಧ ಧ್ವನಿಯೆತ್ತಿರುವ ರಚನೆಯಾಗಿದ್ದಿರಬಹುದು. ಈ ರಚನೆಯಲ್ಲಿ ಗುರುತರ-ವಾದ ರೂಪಕವು, "ಉರಿಲಿಂಗದೇವನನಪ್ಪಿ ಸೊಪ್ಪಾದ ಹಿಪ್ಪೆ"ಯೆಂದು ತನ್ನನ್ನು ತಾನು ಗುರುತಿಸಿಕೊಳ್ಳುವುದು.

ಸಮರ್ಪಣಾ ಭಾವವನ್ನು ವ್ಯಕ್ತಪಡಿಸುವ ಮುಗ್ಧ ಚಿತ್ರಣವೊಂದರಲ್ಲಿ, "ನೀ ನುಡಿಸಲು ನುಡಿವೆನು, ನಡೆಸಲು ನಡೆವೆನು, ನೀನಲ್ಲದರಿಯೆನು," ಎಂದು ಹೇಳಿಕೊಂಡು, "ನೀನೇ ಗತಿ, ನೀನೇ ಮತಿ" (ವ: ೧೨೨೭) ಎಂದು ಮೊರೆಯಿಡುತ್ತಾನೆ. ಕೆಲವು ಕಡೆ, "ಕಾಮನ ಕೊಂದು ಪಟ್ಟಕ್ಕೆ ನಿಂದ ಕಾಮರಾಜರಾಜನು," ಮತ್ತು "ಗಂಡಂದಿರನೆಲ್ಲ ಹೆಂಡಿರ ಮಾಡಿ ನೆರೆವ ವೈಶಿಕ," ಹಾಗೂ "ಕಾಮಸಿದ್ಧಿ" (ವ: ೧೨೩೭)ಯ ಕೊಡುವಂತಹವನು ಎಂದು ತನ್ನ ಕಾಲ್ಪನಿಕ ಪತಿಯ ಭೋಗಲೋಲುಪತೆಯನ್ನು ವಿಸ್ತಾರವಾಗಿ ಹೇಳುತ್ತಾನೆ.

ಉರಿಲಿಂಗದೇವನ ವಚನಗಳಲ್ಲಿ ಪರಮಾತ್ಮನ ಅನುಸಂಧಾನವು ತೀವ್ರಸ್ವರೂಪದಲ್ಲಿ ವ್ಯಕ್ತವಾಗಿದ್ದು, ಲೈಂಗಿಕ ಪ್ರತಿಮೆಗಳ ಮೂಲಕ ಓದುಗರ ಭಾವಪ್ರಪಂಚವನ್ನು ಆವರಿಸುತ್ತದೆ (ವಚನಾನುಶೀಲ). ಡಾ. ಎಸ್. ಚಿದಾನಂದಮೂರ್ತಿಯವರು "ಅತ್ಯಂತ ರಾಗೋದ್ರಿಕ್ತ ಭಾಷೆಯನ್ನು ಬಳಸಿರುವ ಉರಿಲಿಂಗದೇವ ತನ್ನ ಬಗೆಬಗೆಯ ಅನುಭವಗಳಿಗೆ ತನ್ನ ಕೃತಿಗಳಲ್ಲಿ ಅಭಿವ್ಯಕ್ತಿ ನೀಡಿದ್ದಾನೆ" ಎಂದು ಅಭಿಪ್ರಾಯಪಡುತ್ತಾರೆ (ಕನ್ನಡ: ವಚನಸಾಹಿತ್ಯ).

### ಗಜೇಶ ಮಸಣಯ್ಯ:

ಈತ ಹನ್ನೆರಡನೇ ಶತಮಾನದ ಮತ್ತೋರ್ವ ಶ್ರೇಷ್ಠ ಶರಣಸತಿ ಭಾವದ ಹರಿಕಾರನು. ಈತನ ಲಭ್ಯವಾಗಿರುವ ಪ್ರತಿ ವಚನವು ಸತಿಪತಿ ಭಾವದ ಉತ್ಕಟತೆಯನ್ನು ಪ್ರಕಟಿಸುತ್ತದೆ. ಈತನ ವಚನಗಳು ಸರಳ ಭಾಷೆ, ಮಧುರ ಭಾವ, ಕಾವ್ಯಾತ್ಮಕ ಶೈಲಿಯಿಂದಾಗಿ ತುಂಬ ಆಕರ್ಷಕವೆನಿಸಿವೆ (ವಚನ ಸಂಚಯ ಬ್ಲಾಗ್). ಉರಿಲಿಂಗದೇವ-ನಂತೆಯೇ ತನ್ನೊಳಗಿನ ಭಕ್ತನಲ್ಲಿ ಸತಿಭಾವ ಆರೋಪಿಸಿಕೊಂಡು, ಶಿವನನ್ನು ಪತಿಯಾಗಿ ಕಂಡ ಮತ್ತೋರ್ವ ಸಾಧಕ. ಇವನ ವಚನಗಳನ್ನು ಸೂಕ್ಷ್ಮವೆಂದು, ರಾಗೋದ್ರಿಕ್ತವೆಂದು, ಮತ್ತು ಸುಕುಮಾರ ಪ್ರತಿಮೆಗಳ ಬಳಕೆಯಿಂದಾಗಿ, ವಚನ ಸಾಹಿತ್ಯದಲ್ಲಿ ಅಪೂರ್ವವಾದ

ಕೃತಿಗಳನ್ನು ನೀಡಿದವನೆಂದು ಡಾ. ಎಂ. ಚಿದಾನಂದಮೂರ್ತಿಯವರು ತಿಳಿಸುತ್ತಾರೆ (ಕನ್ನಡ: ವಚನಸಾಹಿತ್ಯ).

ಒಂದು ವಚನದಲ್ಲಿ, ತನ್ನ ಗಜೇಶ್ವರನನ್ನು ತಾನು ಕೂಡುವ ಅನುಭವವನ್ನು ಮಾತಿನಲ್ಲಿ ಹೇಳಬಾರದು ಎಂದು ಪ್ರಸ್ತಾಪಿಸಿ, ಕರ್ಪೂರಕ್ಕೆ ಬೆಂಕಿ ಹತ್ತಿದಂತೆ ತಮ್ಮ ಸಮಾಗಮವಾಯ್ತು ಎಂಬ ಸುಂದರ ಪ್ರತಿಮೆಯನ್ನು ಸೃಷ್ಟಿಸುತ್ತಾನೆ.

**ಆತನ ಬೆರಸಿದ ಕೂಟವನೇನೆಂದು ಹೇಳುವೆನವ್ವಾ,**
**ಹೇಳಲೂಬಾರದು, ಕೇಳಲೂಬಾರದು;**
**ಏನ ಹೇಳುವೆನವ್ವಾ, ಶಿಖಿ ಕರ್ಪೂರ ಬೆರಸಿದಂತೆ.**
**ಮಹಾಲಿಂಗ ಗಜೇಶ್ವರನ ಕೂಡಿದ ಕೂಟವ**
**ಹೇಳಲು ಬಾರದವ್ವಾ. (ವ: ೨೦೩)**

ಉರಿಲಿಂಗದೇವನ ಹಾಗೆಯೇ ಈತನ ಭಾವವೂ ರಾಗೋದ್ರಿಕ್ತವಾಗಿದ್ದರೂ, ಪ್ರತಿಮಾ ವಿಧಾನದ ಬಳಕೆಯಿಂದ ತನ್ನ ನಿರೂಪಣೆಯಲ್ಲಿ ಘನತೆ ತರುವ ವಿಶೇಷ ಮಾಂತ್ರಿಕತೆಯನ್ನು ಗಜೇಶ ಮಸಣಯ್ಯನ ವಚನಗಳಲ್ಲಿ ನೋಡಬಹುದು. ಕೆಳಗೆ ಉದಾಹರಿಸಿರುವ ಕವನದಲ್ಲಿ ಪ್ರಕೃತಿ ಹಾಗು ಪ್ರಾಣಿ–ಪಕ್ಷಿಗಳ ಸೌಂದರ್ಯ, ಹಾಗು ಇವುಗಳ ಇರುವಿಕೆಯು, ವಿರಹವನ್ನನುಭವಿಸುತ್ತಿರುವ ತನಗೆ ಹೇಗೆ ಆನಂದ ತರದೇ ದುಃಖ ತರುತ್ತಿದೆ ಎಂದು ಬಿಡಿಸಿ ಹೇಳುತ್ತಾನೆ:

**ಆಲಿಕಲ್ಲ ಮರದಡಿಯಲಿಹ ಮಘಮಘಿಸುವ ಗಿಳಿವಿಂಡು**
**ಉರವಣಿಸುವ ಪಕ್ಷಿಗಳು, ಸರಸಗೈವ ಕೋಗಿಲೆ,**
**ಗಗನದ ಚಂದ್ರಮ;**
**ಅಗಲಲಾರೆನು ಸಖಿಯೆ ಬೆಳುದಿಂಗಳು ಬಿಸಿಲಾದವೆ?**
**ಗಗನದ ದಶರಥನ ಬೀಡಿನಲ್ಲಿ ಕಾಮಿನಿ ಕೈವೋದಳೆ?**
**ದಶಾವಸ್ಥೆಗೊಂಡೆನು ಮಹಾಲಿಂಗ ಗಜೇಶ್ವರನುಳಿದಡೆ. (ವ: ೨೦೪)**

ತಣ್ಣನೆ ನೆರಳು, ಮಧುರವಾಗಿ ಕೂಗುತ್ತಿರುವ ಗಿಳಿವಿಂಡು, ಕೋಗಿಲೆಗಳು, ಪೂರ್ಣ ಚಂದಿರ. ಇವೆಲ್ಲವೂ ಈತನ ವಿರಹದುರಿಯನ್ನು ಇನ್ನಷ್ಟು ಹೆಚ್ಚಿಸುತ್ತಿವೆ. "ಬೆಳುದಿಂಗಳು ಬಿಸಿಲಾದವೆ? ದಶರಥನ ಬೀಡಿನಲ್ಲಿ ಕಾಮಿನಿ ಕೈವೋದಳೆ". ತಂಪಾಗಿರಬೇಕಾದ ನೆರಳು ಪ್ರಿಯೆತಮೆಯಾದ ನನಗೆ ಬಿಸಿಲಾಗಿ ಪರಿಣಮಿಸಿತೆ? ಕಾಮಿನಿಯಾದ ತಾನು ವಿರಹದ ಉರಿಬೆಂಕಿಯಲ್ಲಿ ಸೆರೆಸಿಕ್ಕು ಸುಟ್ಟುಹೋಗುತ್ತಿರುವೆನೆಂದು ಅಲಂಕಾರಿಕವಾಗಿ ಹೇಳುತ್ತಾನೆ. ಹೀಗೆ ತನ್ನ ವಿರಹದ ನೋವನ್ನು ಪ್ರಕೃತಿಯ ಅಸ್ತಿತ್ವಗಳೊಂದಿಗೆ, ಕ್ರಿಯೆಗಳೊಂದಿಗೆ ಹೋಲಿಸಿಕೊಂಡು ವ್ಯಥೆಪಡುವ ನಲ್ಲೆಯ ಚಿತ್ರ ವಚನ ಸಾಹಿತ್ಯದ ನಾಜೂಕಾದ ಅಭಿವ್ಯಕ್ತಿಗಳಲ್ಲೊಂದೆನ್ನಬಹುದು.

ಮಸಣಯ್ಯನ ಕೃತಿಗಳಲ್ಲಿನ ಮುಗ್ಧಭಾವಕ್ಕೆ ಉದಾಹರಣೆಯಾಗಿ, ತಮ್ಮ ಗಂಡಂದಿರನ್ನು ಚಲುವರೆಂದು ಹೊಗಳಿಕೊಳ್ಳುವ ಇತರೆ ಹೆಣ್ಣುಗಳ ಪುಣ್ಯವನ್ನು ಕೊಂಡಾಡುವ ಈ ಹೆಣ್ಣಿನ ಚಿತ್ರ ಮೋಹಕವಾಗಿದೆ: "ತಮ್ಮ ತಮ್ಮ ಗಂಡರು ಚೆಲುವರೆಂದು ಕೊಂಡಾಡುವ ಹೆಣ್ಣುಗಳು ಪುಣ್ಯಜೀವಿಗಳವ್ವಾ! ನಾನೆನ್ನ ನಲ್ಲನೆಂಥಾವನೆಂದರಿಯೆನವ್ವಾ!" (ವ: ೨೨೭) ಹೀಗೆ ನಿಟ್ಟುಸಿರಿಡುವ ಪತ್ನಿಯ ರೂಪದಲಿ ಗುರುತಿಸಿಕೊಳ್ಳುತ್ತಾನೆ.

ತನ್ನ ನಲ್ಲನೊಂದಿಗೆ ಕಳೆದ ಕ್ಷಣಗಳ ರೋಮಾಂಚನವನ್ನು ಈ ಶಿವಶರಣ ಹೀಗೆ ಹೇಳಿಕೊಳ್ಳುವನು:

**ಮಾಗಿಯ ಹುಲ್ಲಿನ ಸೋಂಕಿನಂತೆ**
**ತನು ಪುಳಕಿತಳಾದಳವ್ವೆ,**
**ನುಡಿ ತೊದಳು ಆತನ ಒಲವೆ ಆಧಾರವಾಗಿದ್ದಳವ್ವೆ.**
**ಬಿಳಿಯ ತುಂಬಿ ಕುಂಕುಮ ರಸದಲ್ಲಿ ಬಂಡುಂಡಂತೆ.**
**ಮಹಾಲಿಂಗ ಗಜೇಶ್ವರನಲ್ಲಿ**
**ತನ್ನಲ್ಲಿ ತಾನೆ ರತಿಯಾಗಿರ್ದಳವ್ವೆ. (ವ: ೨೪೮)**

ಈ ವಚನದಲ್ಲಿನ ಸೂಕ್ಷ್ಮತೆ ಪ್ರೇಮದಲ್ಲಿ ಮುಳುಗಿದ ಹೆಣ್ಣಿನ ಮನಸ್ಥಿತಿಗೆ ಸಾಕಷ್ಟು ಹತ್ತಿರವಿದ್ದು, ಓರ್ವ ಹೆಣ್ಣು ಬರೆದಿರುವ ವಚನವೆಂದು ಸುಲಭವಾಗಿ ನಂಬುವಂತಿದೆ. ನಲ್ಲನ ಅಪ್ಪುಗೆಗೆ, ಸ್ಪರ್ಶಕ್ಕೆ ಈ ಹೆಣ್ಣಿನ ಮನ ಹೇಗೆ ಸ್ಪಂದಿಸಿತೆಂದು ಹೇಳುವ ವಚನಕಾರ, ಮಾಗಿಯ ಹುಲ್ಲಿನ ಸ್ಪರ್ಶದಂತೆ ದೇಹ ಪುಳಕಿತವಾಯ್ತು, ನುಡಿ ತೊದಲಿತು ಎನ್ನುತ್ತಾನೆ. ಬಿಳಿಯ ದುಂಬಿ, ಕೆಂಪು ಬಣ್ಣದ ಹೂವಿನ ಮಧುಪಾನ ಮಾಡುವಂತೆ ತಮ್ಮ ಕೂಟ ಸಾಗಿತು ಎಂಬ ಆಕರ್ಷಕ ಪ್ರತಿಮೆಯನ್ನು ಹೆಣೆದು, ಗಜೇಶ್ವರನ ಪ್ರೀತಿಯಲ್ಲಿ ತನ್ನನ್ನು ರತಿಗೆ ಹೋಲಿಸಿಕೊಂಡು, ಅವನ ಒಲವೇ ತನಗೆ ಆಧಾರವಾಗಿತ್ತು ಎಂಬ ಅರ್ಥ ನುಡಿಸುವ ರಚನೆ ವಚನಕಾರನ ಸೂಕ್ಷ್ಮತೆಗೆ ಸೂಕ್ತ ನಿದರ್ಶನವಾಗಿ ಕಾಣುತ್ತದೆ.

ತನ್ನ ಪ್ರಿಯಕರನೊಡನೆ ಮೃದುವಾಗಿ ಸ್ಪಂದಿಸುವ ಪ್ರಿಯತಮೆಯ ಹಾಗೂ ಪತ್ನಿಯ ಚಿತ್ರಗಳನ್ನು ಮೂಡಿಸಿ, ವಿರಹ, ನೋವು, ಸಾಮೀಪ್ಯದ ಆನಂದ, ಸುಖದ ಅನುಭವ–ಹೀಗೆ ಹಲವಾರು ಸನ್ನಿವೇಶಗಳನ್ನು ಸೃಷ್ಟಿಸಿ, ತನ್ನ ಇಷ್ಟದೇವನೊಂದಿಗೆ ಅನುಸಂಧಾನ ನಡೆಸುವ ಪ್ರತಿಮಾ ವಿಧಾನದ, ವಿಶಿಷ್ಟ ಶೈಲಿಯ ವಚನಕಾರನಿವನು.

**ಬಸವಣ್ಣ:**

ಹನ್ನೆರಡನೇ ಶತಮಾನದ ವೀರಶೈವ ಧರ್ಮದ ಆಂದೋಲನದ ನಾಯಕ ಮತ್ತು ಕೇಂದ್ರವ್ಯಕ್ತಿಯಾದ ಬಸವಣ್ಣನೂ ತನ್ನ ಕೆಲವೇ ಕೆಲವು ವಚನಗಳಲ್ಲಿ ಸತಿ–ಪತಿ

ಭಾವದ ಕುರಿತು ಬರೆಯುತ್ತಾನೆ. ತನ್ನ ಆರಾಧ್ಯ ದೈವನಾದ ಕೂಡಲ ಸಂಗಮದೇವನ ಬಗೆಗೆ ಬಸವಣ್ಣನು ತನ್ನ ಗೆಳತಿಯೋರ್ವಳಿಗೆ ಹೇಳುವ ತೆರದಲಿ,

**"ಎಲ್ಲರ ಗಂಡರ ಪರಿಯಂತಲ್ಲ ನೋಡವ್ವಾ,**
**ನಮ್ಮ ನಲ್ಲ ಸುಳಿಯಲಿಲ್ಲ, ಸುಳಿದು ಸಿಂಗಾರವ ಮಾಡಲಿಲ್ಲ,**
**ಕೂಡಲಸಂಗಮದೇವನು ತನ್ನೊಳಗೆ ಬೈಚಿಟ್ಟನಾಗಿ."** (ವ: ೮೫೦)

ತನ್ನವನು ಎಂತಹ ಅಸಾಧಾರಣವಾದ ವ್ಯಕ್ತಿಯೆಂದು ಹೇಳಿಕೊಳ್ಳುತ್ತಾ, ಆತನು ತನ್ನ ಬಳಿ ಪ್ರಿಯಕರನ ಚೇಷ್ಟೆಗಳನ್ನು ಮಾಡದೇ ತನ್ನೊಳಗೆ ಎನ್ನನ್ನು ಬಚ್ಚಿಟ್ಟುಕೊಂಡನೆಂದು ಹೆಮ್ಮೆಪಡುತ್ತಾನೆ.

ಪತಿವ್ರತೆಯಾದ ತಾನು ಪರಪುರುಷರನ್ನು ಬಯಸಬಾರದು. ಹಾಗೊಮ್ಮೆ ನಾನು ಬಯಸಿದ್ದೇ ಆದರೆ, ನೀನು ನನಗೆ ಸೂಕ್ತವಾದ ಶಿಕ್ಷೆ ಕೊಡಬಹುದು ಎನ್ನುವನು: **"ಕುರುಳು ಬೆರಳು ಮುಡುಹು ಮುಂಬಲ್ಲ ಕೊಳ್ಳಾ, ... ಮುಖವ ನೋಡದಂತೆ ಮಾಡಾ,"** (ವ: ೫೦೦) ಎಂದು ಹೇಳುವುದರಲ್ಲಿ ಬಸವಣ್ಣ ತನ್ನ ಪತ್ನಿ ನಿಷ್ಠೆಯ ಪರಾಕಾಷ್ಠೆಯನ್ನು ಮೆರೆಯುತ್ತಾನೆ. ಇಲ್ಲಿನ ವಿಶೇಷವೇನೆಂದರೆ, ಯೌವನದಲ್ಲಿರುವ ಹೆಣ್ಣು ತನ್ನ ರೂಪದ ಮೇಲಿನ ಮೋಹವನ್ನೂ ಕಳೆದುಕೊಳ್ಳುವ ಮಾತನಾಡುವುದು: ಪರಪುರುಷರನ್ನು ಬಯಸಿದಲ್ಲಿ, ತನ್ನ "ಕುರುಳು ಬೆರಳು ಮುಡುಹು ಮುಂಬಲ್ಲ"ನ್ನು ತೆಗೆದುಕೊಂಡು ತನ್ನನ್ನು ವಿಕಾರಗೊಳಿಸಬಹುದು, ತನ್ನ ದೇಹ ಸೌಂದರ್ಯವನ್ನು ವಿಕೃತಗೊಳಿಸಬಹುದು ಎಂಬ ಭಾಷೆ! 'ಬಹುಶಃ, ಅನ್ಯದೈವಗಳನ್ನು ಪೂಜಿಸುವ ಪರಿಸ್ಥಿತಿ ಬಾರದಿರಲಿ ಎಂಬ ಆರ್ತ ಮೊರೆಯ' ಪಠ್ಯ ಸ್ವರೂಪವಾಗಿದ್ದಿರಬಹುದು ಈ ವಚನ.

ಮಗದೊಂದರಲ್ಲಿ,

**ಗಿಳಿಯ ಹಂಜರವಿಕ್ಕಿ, ಸೊಡರಿಂಗೆಣ್ಣೆಯನೆರೆದು, ಬತ್ತಿಯನಿಕ್ಕಿ**
**ಬರವ ಹಾರುತ್ತಿದ್ದೆನೆಲೆಗವ್ವಾ.**
**ತರಗೆಲೆ ಗಿರಿಕೆಂದಡೆ ಹೊರಗನಾಲಿಸುವೆ;**
**ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲೆಗವ್ವಾ.**
**ಕೂಡಲಸಂಗಮದೇವನ ಶರಣರು ಬಂದು, ಬಾಗಿಲ ಮುಂದೆ ನಿಂದು**
**'ಶಿವಾ' ಎಂದಡೆ, ಸಂತೋಷಪಟ್ಟೆನೆಲೆಗವ್ವಾ.** (ವ: ೩೭೫)

ಇಲ್ಲಿ ತನ್ನ ಪ್ರಿಯಕರ ಬರುವನೋ ಇಲ್ಲವೋ ಎಂಬ ಕಳವಳಕ್ಕೊಳಗಾದ ಹೆಣ್ಣು, ಗಿಳಿಯನ್ನು ಪಂಜರಕ್ಕೆ ಸೇರಿಸಿ, ಸೊಡರಿಗೆ ಎಣ್ಣೆಯಿಟ್ಟು, ಸಕಲ ತಯಾರಿಗಳನ್ನು ಮಾಡಿಕೊಂಡು ಸಂಜೆಯ ಸಮಯದಲ್ಲಿ ಕಾಯುತ್ತಿದ್ದಾಳೆ. ತರಗೆಲೆ ಸಣ್ಣ ಸಪ್ಪಳ

ಮಾಡಿದರೂ ತನ್ನ ಪ್ರಿಯಕರ ಬಂದನೇನೋ ಎಂದು ಕಾತರ ತೋರುತ್ತಾಳೆ. ಇಲ್ಲಿನ ಸನ್ನಿವೇಶದ ವಿಶೇಷವೇನೆಂದರೆ, ಬರಲಿರುವ ಪ್ರಿಯ ಒಬ್ಬನಲ್ಲ ಹಲವರು, ಅವರೇ ಶಿವಶರಣರು. ಇಲ್ಲಿ ಲಿಂಗಪತಿ ಭಾವದ ಬದಲು ಶರಣಪತಿಯರೆಂಬ ಬಹುವಚನದ ಭಾವ ಕಾಣಸಿಗುತ್ತದೆ. ವೀರಶೈವ ಧರ್ಮ ಪ್ರವರ್ತಕನಾದ ಈತನಿಗೆ ತನ್ನ ಅನುಚರರ ಮೇಲೆ ವಿಶೇಷ ಆದರ ವಾತ್ಸಲ್ಯಗಳಿರುವುದು ಓದುಗರು ನಿರೀಕ್ಷಿಸತಕ್ಕ ವಿಷಯವೇ.

**ಸಿದ್ಧರಾಮೇಶ್ವರ:**

ಸ್ವಾನುಭವದಿಂದ ಸಿದ್ಧಿಗಳಿಸುವ ಪ್ರಯತ್ನಗಳಲಿ ವಿಶ್ವಾಸವಿರಿಸಿದ ಈ ವಚನಕಾರ, ದೈನಂದಿನ ಜೀವನದ ಆಗುಹೋಗುಗಳಿಂದ ವಿವಿಧ ಪ್ರತಿಮಾಲಂಕಾರಗಳನ್ನು ಬಳಸಿಕೊಂಡು ಶರಣಸತಿಯ ಮನಸ್ಥಿತಿಯ ಸಂಕೀರ್ಣಭಾವಗಳ ಹಲವಾರು ಚಿತ್ರಣಗಳನ್ನು ಕೊಡುತ್ತಾನೆ.

**ಮುಂದಲೆವಿಡಿದು ಮೋಹಿಸುವ ಗಂಡನ ಕಾಣದೆ**
**ಬಾಯ್ಬಿಡುತ್ತಿದೇನೆ ಗುರುವೆ.**
**ಈ ಮಂದಮತಿಯ ಮುಂಡವ ಕೊಂಡೊಯ್ದು**
**ಸಂದೇಹವಿಲ್ಲದೆ ಎನ್ನ ಗಂಡನ ಎನಗೆ ತೋರಿದಡೆ,**
**ನೀನೆನ್ನ ತಂದೆ ಎಂಬೆನಯ್ಯಾ,**
**ಕಪಿಲಸಿದ್ಧಮಲ್ಲಿಕಾರ್ಜುನಾ. (ವ: ೯೦೪)**

ಮುಂದಲೆ ಹಿಡಿದು ಮೋಹಿಸುವ ಗಂಡನೊಂದಿಗಿನ ಪ್ರಣಯದ ಕ್ಷಣಗಳ ನೆನೆದು ಹಲುಬುತ್ತಾ, ಮಂದಮತಿಯಾದ ತನ್ನನ್ನು ತನ್ನ ಗಂಡನ ಬಳಿ ಕರೆದುಕೊಂಡು ಹೋಗಿ ತೋರಬಲ್ಲವರಿದ್ದಲ್ಲಿ, ಅವರನ್ನೇ ತನ್ನ ತಂದೆಯೆಂದು ಕರೆಯುವೆನೆಂದು ಹೇಳುತ್ತಾನೆ. ಈ ಅವಸ್ಥೆಯಲ್ಲಿ, ದೇವರನ್ನು ಕಾಣಲು ಹಂಬಲಿಸುವ ಭಕ್ತನ ಉತ್ಕಟವಾಸ್ಥೆ ಸೊಗಸಾಗಿ ಒಡಮೂಡಿದೆ.

ಪರಮಾತ್ಮನೊಡನೆ ಅನುಸಂಧಾನ ನಡೆಸುವಾಗ, ಶರಣಸತಿಯರು ಲಿಂಗದೊಡನೆ ರಾಣೀವಾಸ ನಡೆಸುವರೆಂದು ಕಲ್ಪಿಸಿಕೊಳ್ಳುವ ಈತ, ತನ್ನ ಸಹ ಶಿವಶರಣೆಯರಾದ ಅಕ್ಕಮಹಾದೇವಿ, ಗಂಗಾದೇವಿಯರನ್ನು ತನ್ನ ಸವತಿಯರನ್ನಾಗಿ ಕಾಣುವುದು ಈ ವಚನದ ಸೊಬಗು.

**... ಎಮ್ಮಕ್ಕ ಮಹಾದೇವಿ, ಎಮ್ಮಕ್ಕ ಗಂಗಾದೇವಿ,**
**ಹಿರಿಯಕ್ಕ ಚಿಕ್ಕಕ್ಕ ಎಂದಡೆ ವಿರೋಧ.**
**ವಿರೋಧಿಸಿದಡೇನು?**
**ನಾನು ಚಿಕ್ಕಾಕೆ ಕಪಿಲಸಿದ್ಧಮಲ್ಲಿಕಾರ್ಜುನಂಗೆ. (ವ: ೧೬೮೪)**

ತಾನು ಮಾತ್ರ ಚಿಕ್ಕ ಪತ್ನಿ, ಹಾಗಾಗಿ ಹತ್ತಿರದವಳು, ಸಹಜವಾಗಿ ಪತಿಯಿಂದ ಹೆಚ್ಚಿನ ಪ್ರೀತಿ ಗಳಿಸಬಲ್ಲವಳು ಎಂದು ಹೇಳುವನು.

ಇನ್ನೊಮ್ಮೆ,

**ಗಂಡ ಬಾರನು ಎನ್ನ ತವರೂರಿಗೆ ಹೋಗುವೆವೆನಲು,**
**ನೋಡೆ, ನೋಡೆಲಗವ್ವಾ**
**ಬೇಟೆಯನಾಡುವ ನಾಯತಲೆಯ ಕೊಯ್ದಿಟ್ಟು,**
**ತಾ ಬೇರೆ ಬೇಟಕಾರನಾದ.**
**ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನ ನೆಲೆಯಲ್ಲಿ ನಿಲವ ಕೊಂಡನು;**
**ಹುಚ್ಚನ ಸಂಗ ನಿಶ್ಚಯವಾಯಿತು.** (ವ: ೪೮೬)

ತನ್ನ ಪತಿಯ ನಿಷ್ಕರುಣೆಯನು ತನ್ನ ಕೆಳದಿಯಲ್ಲಿ ಹೇಳಿಕೊಳ್ಳುತ್ತಿರುವ ಈ ಹೆಣ್ಣು, ತನ್ನನ್ನು ನೋಡಲು ತವರೂರಿಗೆ ಬಾರದ ತನ್ನ ಗಂಡನ ಬಗ್ಗೆ ಆಕ್ಷೇಪ ವ್ಯಕ್ತಪಡಿಸುತ್ತಾಳೆ. ಬೇಟೆಯಾಡುವ ನಾಯಿಯ ತಲೆಯ ಕೊಯ್ದಿಡುವ ಕಟುಕನ ಗುಣ ಹೊಂದಿರುವ, ದುಡುಕಿನ ಸ್ವಭಾವದ ಗಂಡನ ಗುಣವನ್ನು ಟೀಕಿಸುತ್ತಾಳೆ. ಕೊನೆಯಲ್ಲಿ, ತನಗೆ ಹುಚ್ಚನೊಬ್ಬನ ಜೊತೆ ಜೀವನ ನಡೆಸುವ ಪರಿಸ್ಥಿತಿ ಬಂದಿದೆಯೆಂದು ಆಕ್ರೋಶ ವ್ಯಕ್ತಪಡಿಸುವ ಹೆಣ್ಣಿನ ಚಿತ್ರ ಮೂಡಿಸುತ್ತಾನೆ.

ಸಿದ್ಧರಾಮನ ರಚನೆಗಳಲ್ಲಿ, ಸಾಮಾನ್ಯ ಸ್ತ್ರೀಯ ಪ್ರತಿಮೆ ಬಳಸಿಕೊಂಡು ಮಾನಸಿಕವಾಗಿ ಸ್ಪಂದಿಸುತ್ತ ಲೌಕಿಕದ ರಾಗ, ದ್ವೇಷಗಳನ್ನು ಅಲೌಕಿಕದ ಎತ್ತರಕ್ಕೆ ಮಾರ್ಪಡಿಸಬಲ್ಲ ಚಾತುರ್ಯ ಕಾಣಿಸಿಕೊಳ್ಳುತ್ತದೆ. "ಅವನಲ್ಲಿ ಎಲ್ಲೂ ಲೈಂಗಿಕ ಕ್ರಿಯೆ ವಾಚ್ಯವಾಗುವುದಿಲ್ಲ; ಮಾತು ಸಂಯಮದ ಗೆರೆ ದಾಟುವುದಿಲ್ಲ"ವೆಂದು ವಿದ್ವಾಂಸರು ಕೊಂಡಾಡುತ್ತಾರೆ. "ಹೆಣ್ಣು ಮಾಯೆಯಲ್ಲ"ವೆಂದು ಘೋಷಿಸಿದ ಅಪರೂಪದ ವಿರಾಗಿಯಿವನು (ಡಾ. ಜಿ.ಎಸ್.ಎಸ್.).

## ಚನ್ನಬಸವಣ್ಣ:

ಬಸವಣ್ಣನ ಸೋದರಿ ಅಕ್ಕನಾಗಮ್ಮನ ಮಗನಾದ ಈತನನ್ನು ವೀರಶೈವ ಧರ್ಮಕ್ಕೆ ಒಂದು ತಾತ್ವಿಕ ನೆಲೆಗಟ್ಟನ್ನು ಒದಗಿಸಿದ ಬುದ್ಧಿಜೀವಿಯೆಂದು ಗುರುತಿಸಲಾಗುತ್ತದೆ. ಇವನ ಪಾಂಡಿತ್ಯಕ್ಕೆ ತಕ್ಕಂತೆ ಸಂಸ್ಕೃತ ಶ್ಲೋಕಗಳ ಉದ್ಧರಣೆ ಹೆಚ್ಚಾಗಿ ಇರುತ್ತದೆಯೆಂದು ಡಾ. ಎಂ. ಚಿದಾನಂದಮೂರ್ತಿಯವರು ತಿಳಿಸುತ್ತಾರೆ. ಅನುಭವ ಮಂಟಪದಲ್ಲಿ, ಷಟ್ಸ್ಥಳ ಚಕ್ರವರ್ತಿಯೆಂಬ ಬಿರುದನ್ನು ಚನ್ನಬಸವಣ್ಣನಿಗೆ ನೀಡಲಾಗುತ್ತದೆ. ಶರಣ ತತ್ವಗಳನ್ನು ಪ್ರತಿಪಾದಿಸಿದವರಲ್ಲೇ ಅಗ್ರಗಣ್ಯನಿವನು ಎಂದು ಹೇಳಲಾಗುತ್ತದೆ (ಕನ್ನಡ: ವಚನಸಾಹಿತ್ಯ).

ಈತ ತನ್ನ ಒಂದು ವಚನದಲ್ಲಿ,

**ಬಸವ ಮೈದೊಡಿಗೆ, ಸಂಗಯ್ಯ ಮದುವಣಿಗ**
**ವಸುಧೆಯ ಭಕ್ತರೆಲ್ಲರು ಮದವಳಿಗೆಯರಾಗಿ**
**ಅಂಗವಿಸಿಂ ಭೋ! ಶುದ್ಧಶಿವಾಚಾರಿಗಳೆಲ್ಲ.**
**ಕೂಡಲಚೆನ್ನಸಂಗಯ್ಯನು ಒಬ್ಬನೆ ಅಚಳ**
**ನಾವೆಲ್ಲರೂ ನಿತ್ಯಮುತ್ತೈದೆಯರಾಗಿ. (ವ: ೧೨೮)**

ಇಲ್ಲಿ, ತಾನು ಮದುವೆಯ ಹೆಣ್ಣೆಂದು, ಸಂಗಯ್ಯನನ್ನು ಮದುವೆ ಗಂಡೆಂದು, ಭಕ್ತರೆಲ್ಲರನು ದಿಬ್ಬಣಿಗರಾಗಿ ಕಲ್ಪಿಸಿಕೊಳ್ಳುವ ಆ ಕಾಲದ ಪ್ರಚಲಿತ ಚಿತ್ರವನ್ನು ಕಾಣಿಸುತ್ತಾನೆ. ಇಲ್ಲಿಯ ಅಸಮಾನ್ಯ ಕಲ್ಪನೆಯೆಂದರೆ, ತನ್ನನ್ನೊಡಗೂಡಿ ಎಲ್ಲಾ ಶರಣರನ್ನು ನಿತ್ಯಮುತ್ತೈದೆಯರನ್ನಾಗಿ ಪರಿಚಯಿಸುವುದು.

**ಮರುಳಶಂಕರದೇವ:**

ಬಸವಣ್ಣನ ಕೀರ್ತಿ ದೂರದೂರದವರೆಗೂ ಹಬ್ಬಿ, ಹಲವಾರು ವಿದ್ವಾಂಸರು, ಸಾಧುಗಳು ವೀರಶೈವ ಧರ್ಮದ ಅಧ್ಯಯನಕ್ಕೆ ದಕ್ಷಿಣ ಭಾರತಕ್ಕೆ ಬಂದಿದ್ದರು ಎಂದು ಗ್ರಂಥಗಳು ಉಲ್ಲೇಖಿಸುತ್ತವೆ. ಹಾಗೆ ಬಂದವರಲ್ಲಿ, ಮರುಳಶಂಕರದೇವ ಪ್ರಧಾನ ವ್ಯಕ್ತಿ. ಅಫ್ಘಾನಿಸ್ತಾನದಿಂದ ಬಂದು, ಬಸವನ ಶಿಷ್ಯನಾದ ಪ್ರಸಿದ್ಧ ವಚನಕಾರನಿವನು.

ಈತನ ಸತಿ-ಪತಿ ಭಾವದ ರಚನೆಗಳಲ್ಲಿ, ಈ ಕೆಳಗಿನ ರಚನೆ ಹೆಸರುವಾಸಿ-ಯಾದುದು. ಈ ವಚನದಲ್ಲಿ ದೀಕ್ಷೆಯ ವಿಧಿ-ವಿಧಾನಗಳನ್ನು ಪೂರ್ಣವಾಗಿ ವಿವರಿಸುತ್ತಾನೆ. ಲಿಂಗದೀಕ್ಷೆಯನ್ನೇ ತನ್ನ ವಿವಾಹದ ಶಾಸ್ತ್ರವನ್ನಾಗಿಸಿ, ಲಿಂಗವನ್ನೇ ಹೆಣ್ಣಾಗಿ ವರ್ಣಿಸುವುದನ್ನು ಇಲ್ಲಿ ಕಾಣಬಹುದು:

**ಮಹಾಶ್ರೀಗುರುವೆ ತಂದೆ, ಮಹಾಜಂಗಮವೆ ತಾಯಿ.**
**ಇವರಿಬ್ಬರ ಸಂಗಸಂಯೋಗದಿಂದ ನಾನು ಹುಟ್ಟಿದೆ ನೋಡಿರಯ್ಯಾ.**
**ಸರ್ವಾಂಗಸಾಹಿತ್ಯ ನಾನು ಹುಟ್ಟಿದ ಬಳಿಕ.**
**ತಂದೆ ತಾಯಿಗಳಿಬ್ಬರು ಲಿಂಗವೆಂಬ ಹೆಣ್ಣ ತಂದು,**
**ಎನ್ನ ಕೊರಳಲ್ಲಿ ಕಟ್ಟಿ ಮದುವೆಯ ಮಾಡಿದರಯ್ಯಾ ... (ವ: ೧೧೧೪)**

ಎಂದು ಮುಂತಾಗಿ ಬರೆಯುತ್ತಾನೆ. ಇವನ ನಿಲುವಿನಲ್ಲಿ, ಲಿಂಗವನ್ನು ಹೆಣ್ಣಾಗಿ ಊಹಿಸಿಕೊಳ್ಳುವ, ತನ್ನ ಪುರುಷ ಹುಟ್ಟನ್ನು ಬದಲಾಯಿಸದೆ ಇರುವಂತಹ ವೈಶಿಷ್ಟ್ಯವನ್ನು ನೋಡಬಹುದು.

**ಅಂಬಿಗರ ಚೌಡಯ್ಯ:**

ಬಸವಣ್ಣನ ಸಮಕಾಲೀನನಾದ ಈ ವಚನಕಾರ ದೋಣಿ ನಡೆಸುವ ಕಾಯಕದಲ್ಲಿ ತೊಡಗಿಕೊಂಡಿದ್ದವನು. ಕಸುಬಿನ ಅನುಭವಗಳನ್ನೇ ತನ್ನ ವಚನಗಳಲ್ಲಿ ರೂಪಕ, ನಿದರ್ಶನಗಳನ್ನಾಗಿ ಬಳಸಿಕೊಂಡಿದ್ದಾನೆ. ಸಾಮಾಜಿಕ ಅಸಮಾನತೆಗಳ ಬಗ್ಗೆ ತನ್ನ ವಚನಗಳ ಮೂಲಕ ಗಟ್ಟಿ ಧ್ವನಿಯೆತ್ತಿದವನು.

ಶರಣ ಸತಿ-ಲಿಂಗಪತಿ ಭಾವ ಒಂದು ಕಪಟತೆಯಿಂದ ಕೂಡಿದ ನಿಲುವು ಎಂದು ನಿಷ್ಠುರವಾಗಿ ಹೇಳಿರುತ್ತಾನೆ:

**ಶರಣ ಸತಿ, ಲಿಂಗ ಪತಿ ಎಂಬರು.**
**ಶರಣ ಹೆಣ್ಣಾದ ಪರಿಯಿನ್ನೆಂತು? ಲಿಂಗ ಗಂಡಾದ ಪರಿಯಿನ್ನೆಂತು?**
**ನೀರು ನೀರು ಕೂಡಿ ಬೆರೆದಲ್ಲಿ, ಭೇದಿಸಿ ಬೇರೆ ಮಾಡಬಹುದೆ?**
**ಗಂಡು ಹೆಣ್ಣು ಯೋಗವಾದಲ್ಲಿ ಆತುರ ಹಿಂಗೆ ಘಟ ಬೇರಾಯಿತ್ತು.**
**ಇದು ಕಾರಣ**
**ಶರಣ ಸತಿ, ಲಿಂಗ ಪತಿ ಎಂಬ ಮಾತು ಮೊದಲಿಂಗೆ**
**ಮೋಸ, ಲಾಭಕ್ಕಧೀನವುಂಟೆರಿ ಎಂದನಂಬಿಗ ಚೌಡಯ್ಯ.** (ವ: ೨೫೬)

ತನ್ನ ಕಾಯಕವನ್ನು ದೇವರಿಗೆ ಸಲ್ಲಿಸತಕ್ಕಂತಹ ಪೂಜೆಯೆಂದು, ತೃಪ್ತಿಯ ಬದುಕನ್ನು ಚಿಂತಿಸಿದ, ಬದುಕಿದ ಅಂಬಿಗ ಚೌಡಯ್ಯನಿಗೆ ಸಹಜವಾಗಿ ಅದ್ವೈತದ ಸ್ಥಿತಿಯಲ್ಲಿ ನಂಬಿಕೆಯಿತ್ತು. ತನ್ನ ಕಾಯಕವನ್ನೇ ದೇವರಾಗಿ ಮಾಡಿಕೊಂಡಿದ್ದವನಿಗೆ, ಜೀವಾತ್ಮ-ಪರಮಾತ್ಮ ಬೇರೆ ಬೇರೆಯೆಂಬ ದ್ವೈತದ ಅನುಭವಗಳನ್ನು ಒಪ್ಪಿಕೊಳ್ಳಲು ಸಾಧ್ಯವಿರಲಿಲ್ಲ. ಹಾಗಾಗಿ, ಇವನಲ್ಲಿ ಬೆರಸಿ ಭೇದಿಸಲರಿಯದ ಭಾವ ಕಂಡುಬರುತ್ತದೆ. ಹಾಗೆಂದೇ ನೀರು ನೀರನ್ನು ಕೂಡಿಸಿ ಬೆರೆಸಿದ ನಂತರ ಬೇರೆ ಮಾಡಬಹುದೇ? ಎಂಬ ಜಿಜ್ಞಾಸೆ ಕಂಡುಬರುತ್ತದೆ. ಶರಣ ಸತಿಯಾಗಿ ಲಿಂಗ ಪತಿಯಾಗಿ ಕೂಡಿದಾಗ, ಕೂಡಿದ ಆತುರ ಹಿಂಗಿದ ಮೇಲೆ ದೇಹವು ಬೇರೆ ಆಗಲೇ ಬೇಕಲ್ಲವೆ? ಎಂಬುದು ಇವನ ಪ್ರಶ್ನೆ. ಶರಣಸತಿ ಭಾವವನ್ನು ತಮ್ಮ ವಚನಗಳಲ್ಲಿ ಹೆಸರಿಸಿ, ಅದನ್ನು ತೀವ್ರವಾಗಿ ಟೀಕಿಸಿದವರಲ್ಲಿ ಅಂಬಿಗರ ಚೌಡಯ್ಯ ಮತ್ತು ಪ್ರಭುದೇವ ಪ್ರಮುಖರೆಂದು ಗುರುತಿಸಲಾಗಿದೆ (ವಚನಾನುಶೀಲ).

ಹನ್ನೆರಡನೇ ಶತಮಾನದಲ್ಲಿ ಬಂದಷ್ಟು ವಚನಗಳು ನಂತರದಲ್ಲಿ ಬರುವುದಿಲ್ಲ, ಇದಕ್ಕೆ ಕಾರಣ, ಕಲ್ಯಾಣದ ಕ್ರಾಂತಿ. ಕಲ್ಯಾಣದ ಕ್ರಾಂತಿಯಲ್ಲಿ ಮಂಕಾದ ಬರವಣಿಗೆ ಮತ್ತೆ ಪುನರುಜ್ಜೀವನಗೊಳ್ಳುವುದು ಹದಿನೈದನೇ ಶತಮಾನದಲ್ಲಿ. ವಿಜಯನಗರ ಸಾಮ್ರಾಜ್ಯದ ಪ್ರೌಢದೇವನ ಆಳ್ವಿಕೆಯಲ್ಲಿ ಲಭ್ಯವಿದ್ದ ವಚನಗಳ ಸಂಪಾದನಾ ಕಾರ್ಯ ನಡೆದು, ಶೂನ್ಯ ಸಂಪಾದನೆ ಮತ್ತು ಲಿಂಗ ಲೀಲಾ ವಿಲಾಸವೆಂಬ ಕೃತಿಗಳನ್ನು

ಪ್ರಕಟಿಸಲಾಗುತ್ತದೆ. ಅನಂತರದಲ್ಲಿ, ಎಡೆಯೂರಿನ ಸಿದ್ಧಲಿಂಗೇಶ್ವರರು ಷಟ್ಸ್ಥಳ ಜ್ಞಾನಸಾರಾಮೃತವೆಂಬ ಗ್ರಂಥವನ್ನು ರಚಿಸಿ, ವಚನ ಪರಂಪರೆಗೆ ಮತ್ತೊಂದು ಚಾಲನೆ ನೀಡುತ್ತಾರೆ. ಈ ಮಹಾ ಯೋಗಿಗಳ ಶಿಷ್ಯರಾಗಿ, ಘನಲಿಂಗದೇವ ಮತ್ತು ಕಾಡು ಸಿದ್ಧೇಶ್ವರರು ಈ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುವ ಕಾರ್ಯ ಮಾಡುತ್ತಾರೆ (Encyclopedia of Indian Literature).

ಹನ್ನೆರಡನೇ ಶತಮಾನದಲ್ಲಿ, ಬಸವನ ಸಮಕಾಲೀನರಲ್ಲಿ, ಸುಸಂಸ್ಕೃತ ನೆಲೆಗಟ್ಟಿನಲ್ಲಿ ಅಭಿವ್ಯಕ್ತಿಯಾದ ಈ ನಿಲುವು, ಬಸವಪೂರ್ವದಲ್ಲಿ ಸ್ವಲ್ಪಮಟ್ಟಿಗೆ ಅಶ್ಲೀಲದ ಕಡೆಗೆ ವಾಲುತ್ತದೆ. ಬಸವಪೂರ್ವದ ರಚನೆಗಳಲ್ಲಿ ಹೆಚ್ಚಿನ ಶಬ್ದದ ಬಳಕೆ, ತತ್ಪರಿಣಾಮವಾಗಿ ಉದ್ದುದ್ದವಾದ ರಚನೆಗಳು, ಹಾಗೂ ಭಾಷೆಯಲ್ಲಿ ಸಮಕಾಲೀನತೆ ಕಾಣಿಸುತ್ತದೆ (ಡಾ. ಜಿ.ಎಸ್.ಎಸ್.).

**ಘನಲಿಂಗಿದೇವ:**

ಈತನ ಅಭಿವ್ಯಕ್ತಿಯಲ್ಲಿ ಶೃಂಗಾರ ರಸ ಎಷ್ಟು ಗಾಢವಾಗಿ ಮೂಡಿದೆಯೆಂದು ಈ ಮುಂಬರುವ ವಚನ ನಿದರ್ಶಿಸುತ್ತದೆ. ತಾನು ಶರಣಸತಿಯೆಂದು, ಮಾತು ತಪ್ಪುವ ಕುಟಿಲ ಹೆಣ್ಣಲ್ಲವೆಂದು ಹೇಳುತ್ತಾ, ಮಾನವ ಸಂಚಾರವಿಲ್ಲದ ಘೋರ ಅಡವಿಯಲ್ಲಿ ತಾನು ಹಾದು ಹೋಗುತ್ತಿದ್ದ ಸಂದರ್ಭದಲ್ಲಿ, ತನ್ನನ್ನು ಕಂಡು ಸುಂದರ ಸ್ತ್ರೀಯೊಬ್ಬಳು ತನ್ನೊಡನೆ ರತಿಕ್ರೀಡೆಯೆಸಗುವ ಪ್ರಯತ್ನ ಮಾಡಿದಳೆಂದು ಈ ಪತಿವ್ರತೆಯ ಬಾಯಲ್ಲಿ ರಸಪೂರ್ಣವಾಗಿ ಹೇಳಿಸುತ್ತಾನೆ. ಆ ಇನ್ನೋರ್ವ ಸ್ತ್ರೀಯ ವರ್ಣನೆ ಹೀಗಿದೆ:

**"ಅಲರ್ಗಣ್ಣ ಅಂಬುಜಮುಖಿ ಮುಗುಳ್ನಗೆಯ ಸೊಬಗುವೆಣ್ಣು**
**ಬಂದುಗೆಯ ಬಾಯ ಅಂದವುಳ್ಳವಳು**
**ನಳಿತೋಳ ನಾಯಕಿ ಕಕ್ಕಸ ಕುಚದ ಸೊಕ್ಕುಜವ್ವನೆ**
**ಸೆಳೆನಡುವಿನ ಸಿರಿವಂತೆ ಕುಂಭಸ್ಥಳದ ನಿತಂಬಿನಿ**
**ಪೊಂಬಾಳೆದೊಡೆಯ ಕಂಬುಕಂಧರೆ**
**ಕೆಂದಳಿರಚರಣದ ಮಂದಗಮನೆ"**

ಎಂದು ವರ್ಣಿಸುತ್ತಾನೆ. ಇಂತಹ ರತಿರೂಪಿ ಸ್ತ್ರೀ ತನ್ನನ್ನು ಹೀಗೆ ಬಲಾತ್ಕರಿಸಿದಳು,

**"ಎನ್ನ ಅಮರ್ದಪ್ಪಿ ಆಲಂಗಿಸಿ ಮೋಹಿಸಿ**
**ಮುದ್ದುಮಾಡಿ ಕಾಮಾತುರದ ಭಕ್ತಿಯಿಂದ**
**ಎನ್ನ ಕರಮಂ ಪಿಡಿದು ತನ್ನ ಕೂಟಕ್ಕೆ ಒಡಂಬಡಿಸುವ ಕಾಲದಲ್ಲಿ**
**ನಾನು ಹುಲಿಹಿಡಿದ ಕಪಿಲೆಯಂತೆ ನಡುಗುತಿರ್ದೆನೆ**
**ನಿನ್ನ ಸತಿಯೆಂದು ಕೈವಿಡಿದು ಎನ್ನ ರಕ್ಷಣೆಯಂ ಮಾಡು"**

ಎಂದು ಬೇಡಿಕೊಳ್ಳುತ್ತಾನೆ. ತನ್ನ ಪತಿನಿಷ್ಠೆಯ ನಿದರ್ಶನದ ಸಲುವಾಗಿ,

**"ನಿನಗಲ್ಲದೆ ಅನ್ಯರಿಗೆ ಕಿಂಚಿತ್ತು ಮನಸೋತೆನಾದೊಡೆ**
**ನೀಂ ನೂಂಕೆನ್ನ ಜನ್ಮಜನ್ಮಾಂತರ ಎಕ್ಕಲನರಕದಲ್ಲಿ...** (ವ: ೭೧೭)

ಎಂದು ಬಿನ್ನವಿಸಿಕೊಳ್ಳುತ್ತಾನೆ.

**ಕಾಡುಸಿದ್ಧೇಶ್ವರ:**

ಘನಲಿಂಗಿಯ ವಚನದಲ್ಲಿರುವಂತೆ ಶೃಂಗಾರ ರಸದ ವರ್ಣನೆ ಎಗ್ಗಿಲ್ಲದೆ ಕಾಣುವ, "ಮಂಗಳಾಂಗಿ ಮಧುರವಾಣಿ ಕೇಳವ್ವಾ," ಎಂದು ತನ್ನ ಗೆಳತಿಯಲ್ಲಿ ಒಂದು ಗುಟ್ಟು ಹೇಳುವಂತೆ ಆರಂಭವಾಗುವ ಈ ವಚನದಲ್ಲಿ, ಎಳೆಯ ವಯಸ್ಸಿನ ನಾಯಕಿ, "ಎಮ್ಮವರು ಎನಗೆ ಹಳೆಯ ಮುದುಕನ ತಂದು/ ಮದುವೆಯ ಮಾಡಿದರು ನೋಡವ್ವಾ!" ಎಂದು ಹೇಳಿಕೊಳ್ಳುತ್ತಾಳೆ. ತನ್ನ ಹೊಸ ಪತಿಯೊಂದಿಗೆ ತನ್ನ ಹಿಂದಿನ ರಾತ್ರಿಯ ಕೂಡುವಿಕೆ ಹೇಗಿತ್ತೆಂದು ನಾಯಕಿಯು ವರ್ಣಿಸುತ್ತಾಳೆ. ಅವಳ ಈ ಕಥೆಯಲ್ಲಿ, ಯಾರೂ ಇಲ್ಲದ ಸಂದರ್ಭದಲ್ಲಿ, ಕೋಣೆಯ ಮಂಚದ ಮೇಲೆ ತಾನು ಮಲಗಿದ್ದಾಗ, ಈ ಮುದುಕ ಪತಿ ಬಂದು ತನ್ನ ಮುಸುಕೆಳೆದು, ಬೆದರಿದ ತನ್ನ ಕೈ ಹಿಡಿದು, ಕಾಮದಾಟವನ್ನು ನಡೆಸಿದುದರ ವಿವರಗಳು ಬರುತ್ತವೆ. ಈ ಕೂಟದ ವರ್ಣನೆ ಹೀಗಿದೆ:

**"ಆ ಪುರುಷನ ಚಲ್ವಿಕೆಯ ನೋಡಿ**
**ಎನಗೆ ಕಾಮ ತೋರಿತ್ತು ನೋಡವ್ವಾ.**
**ಆ ಕಾಮದಿಂದ ಉಟ್ಟ ಶಾಲಿ ತೊಟ್ಟ ಕುಪ್ಪಸ ಸಡಲಿ**
**ಮುಡಿ ಬಿಚ್ಚಿದವು ನೋಡವ್ವಾ.**
**ತನ್ನ ಬಾಯೊಳಗಿನ ತಾಂಬೂಲವ**
**ಎನ್ನ ಬಾಯೊಳಗೆ ಇಕ್ಕಿದ ನೋಡವ್ವಾ.**
**ಹತ್ತೆ ಕರೆದು ಬಿಗಿದಪ್ಪಿ ತರ್ಕೈಸಿ**
**ಎನ್ನಂಗದ ಎಲುವು ಮುರಿದು ನುಗ್ಗುನುಸಿಯ ಮಾಡಿದ**
**ನೋಡವ್ವಾ" (ವ: ೨೮೨)**

ಈ ಭಾಗದ ಮುಂದುವರಿಕೆಯಾಗಿ, ಸ್ತ್ರೀ ಪುರುಷರ ದೈಹಿಕ ಸುಖದ ಆನಂದವನ್ನು "ಪುರುಷರಿಲ್ಲದ ಸ್ತ್ರೀಯರು ತಿಳಿಯರು ನೋಡವ್ವಾ" ಎಂದು ಹೇಳಿ, ಚನ್ನಕದಂಬ ಲಿಂಗನಿಗೆ ತನ್ನ ವಚನವನ್ನರ್ಪಿಸಿ ಈ ಶೃಂಗಾರದ ಕಥೆಯನ್ನು ಮುಗಿಸುತ್ತಾನೆ.

ಸತಿ-ಪತಿ ಭಾವದ ಅಭಿವ್ಯಕ್ತಿಯು ದೇವರನ್ನ ಒಲಿಸಿಕೊಳ್ಳಲು ಪ್ರಿಯವಾದ ಸಾಧನವಾಗಿರುತ್ತದೆ. ಶೃಂಗಾರದ ಅಭಿವ್ಯಕ್ತಿಯಲ್ಲಿ ಸುಖ ಪಡೆಯುವುದೇ ಮುಖ್ಯವಾಗಿರು-

ವಂತೆ, ಇಲ್ಲಿಯೂ ದೇವರನ್ನು ಅನೇಕ ಶೈಲಿಗಳನ್ನುಪಯೋಗಿಸಿಕೊಂಡು ಒಲಿಸಿಕೊಳ್ಳುವ ಪ್ರಯತ್ನವೇ ಮುಖ್ಯವಾದ ಗುರಿಯಾಗಿರುತ್ತದೆ. ಭಕ್ತಿಯು ಭಕ್ತನ ಅಂತರಂಗದ ವೈಯಕ್ತಿಕ ನಿವೇದನೆಯಾಗಿರುವುದರಿಂದ, ತಮ್ಮ ಭಕ್ತಿಯ ತೀವ್ರತೆಯನ್ನು ಸಂವಹನ ಮಾಡಲು ಇದೊಂದು ಸಂಭವನೀಯ ಸಾಧನವಾಯ್ತು. ಜೀವಾತ್ಮ, ಪರಮಾತ್ಮ ಬೇರೆ ಬೇರೆಯೆನ್ನುವ ದ್ವೈತದ ಸ್ಥಿತಿಯಿಂದ ಇಬ್ಬರೂ ಒಂದೇ ಎಂಬ ಅದ್ವೈತದ ಸ್ಥಿತಿಗೆ, ಪರಮಾತ್ಮನೊಡನೆ ಅನುಸಂಧಾನ ನಡೆಸಲು ಅನುವು ಮಾಡಿಕೊಡುವ ನಿಲುವು ಈ ಭಾವದ ಮುಖ್ಯ ಸೌಕರ್ಯ. ಈ ಭಾವಗಳನ್ನು ವ್ಯಕ್ತಪಡಿಸುವುದು ವಚನಕಾರರಿಗೆ ಒಂದು ಸವಾಲೂ ಆಗಿರಬಹುದು, ಏಕೆಂದರೆ, ಪುರುಷ ವಚನಕಾರರಿಗೆ ಸ್ತ್ರೀ ವ್ಯಕ್ತಿತ್ವವನ್ನು ಆರೋಪಿಸಿ-ಕೊಳ್ಳುವುದಾಗಲೀ, ಸ್ತ್ರೀಯರಿಗೆ ಮುಜುಗರ ಪಕ್ಕಕ್ಕಿಟ್ಟು, ತೀರಾ ವೈಯಕ್ತಿಕ ಅನುಭವಗಳನ್ನು ಬರೆಯುವುದಾಗಲೀ, ಒಂದು ಮಟ್ಟದ ಕಸರತ್ತೇ ಆಗಿದ್ದಿರಬಹುದು. ಪರಮಾರ್ಥದ ಕಡೆಗೆ ಮುಖ ಮಾಡಿ ನಿಂತಿದ್ದ ಈ ಎಲ್ಲ ಶಿವಶರಣರಲ್ಲಿ ಸಾಂಸಾರಿಕ ಜೀವನವನ್ನು ಕುರಿತು ಎಂತಹ ಕಲ್ಪನೆಗಳಿದ್ದವು ಹಾಗೂ ಆ ಕಲ್ಪನೆಗಳನ್ನು ಎಷ್ಟು ಆಕರ್ಷಕವಾಗಿ ಬಳಸಿದರು ಎಂಬುದನ್ನು ಕಾಣಲು ಈ ಲೇಖನದಲ್ಲಿ ಸಾಕಷ್ಟು ಉದಾಹರಣೆಗಳಿವೆ ಎಂದುಕೊಳ್ಳುವೆ. ಶರಣಸತಿ–ಲಿಂಗಪತಿ ಭಾವವೆಂದಾಕ್ಷಣ ಸಾಮಾನ್ಯವಾಗಿ ಅಕ್ಕನನ್ನು ಮಾತ್ರ ನೆನಪಿಗೆ ತರುತ್ತಿದ್ದ ನಮ್ಮ ಮನಗಳು, ಈ ಓದಿನಿಂದ, ಪುರುಷ ವಚನಕಾರರ ಸ್ಪಂದನೆಗಳನ್ನೂ ನೆನಪಿಸಿಕೊಳ್ಳುವಂತಾದರೆ ಈ ಲೇಖನ ಸಾರ್ಥಕವಾದೀತು.

**ಆಕರ ಗ್ರಂಥಗಳು:**


- ಜಿ. ಎಸ್. ಸಿದ್ಧಲಿಂಗಯ್ಯನವರೊಂದಿಗೆ ಲೇಖಕರ ಸಂದರ್ಶನ.
- ಎಸ್. ವಿದ್ಯಾಶಂಕರ್‌ರವರ "ವಚನಾನುಶೀಲ" ಪುಸ್ತಕದಲ್ಲಿ ವಚನಗಳಲ್ಲಿ "ಸತಿ–ಪತಿ ಭಾವ" ಎಂಬ ಲೇಖನ.
- ಎಂ. ಚಿದಾನಂದಮೂರ್ತಿಯವರ "ಕನ್ನಡ: ವಚನಸಾಹಿತ್ಯ".
- ಎಂ. ಆರ್. ಶ್ರೀನಿವಾಸ ಮೂರ್ತಿಗಳ "ವಚನ ಧರ್ಮಸಾರ" ಪುಸ್ತಕದಿಂದ "ಶರಣಸತಿ ಲಿಂಗಪತಿ –ಮಹಾದೇವಿಯಕ್ಕ" ಲೇಖನ.
- ಜಿ. ಎಸ್. ಶಿವರುದ್ರಪ್ಪನವರ "ಕನ್ನಡ ಶಿವಯೋಗಿ ಸಿದ್ಧರಾಮ".
- Edited by Mohan Lal, "Encyclopedia of Indian Literature: Sasay and Zorgot," published by Sahitya Akademi.
- ಲೇಖನದಲ್ಲಿ ಉಲ್ಲೇಖಿಸಿರುವ ಎಲ್ಲಾ ವಚನಗಳ ಪಠ್ಯವನ್ನು ವಚನಸಂಚಯ ಬ್ಲಾಗ್ ನೆಟ್‌ನಿಂದ ಆರಿಸಿಕೊಳ್ಳಲಾಗಿದೆ: <http://vachana.sanchaya.net/>


■

# ರಸಋಷಿಯ ಭಕ್ತಿಮುಖ: ಕುವೆಂಪು ಕವನಗಳ ಅವಲೋಕನ

–ಜ್ಯೋತಿ ಮಹಾದೇವ್

**ಪ್ರಸ್ತಾವನೆ:**

ಆದಿಕಾಲದಿಂದಲೂ ಕಾವ್ಯ ಮೀಮಾಂಸೆಯಲ್ಲಿ ನವರಸಗಳ ಪ್ರಸ್ತಾಪ ಬಹುಮುಖ್ಯ ಸ್ಥಾನದಲ್ಲಿದೆ. ಹಾಸ್ಯ, ಶೃಂಗಾರ, ಭಯಾನಕ, ಬೀಭತ್ಸ, ವೀರ, ರೌದ್ರ, ಕರುಣ, ಅದ್ಭುತ, ಶಾಂತರಸಗಳು ಸಾಹಿತ್ಯದ, ಅದರಲ್ಲೂ ಮಹಾಕಾವ್ಯಗಳ ಪ್ರಧಾನ ಭಾಗಗಳಾಗಿವೆ. ಕವಿಯೊಬ್ಬ ಮಹಾಕವಿಯಾಗಿ ಗುರುತಿಸಿಕೊಳ್ಳಲು ನವರಸಗಳನ್ನೆಲ್ಲ ಸಮರ್ಥವಾಗಿ ಬಳಸಿಕೊಂಡು, ದುಡಿಸಿಕೊಂಡು ಮಹಾಕಾವ್ಯ ರಚಿಸಿರಬೇಕಾದ ಅವಶ್ಯಕತೆ ಸಾಹಿತ್ಯ ವಲಯದಲ್ಲಿ ಗಾಢವಾಗಿತ್ತು. ಸಂಸ್ಕೃತವಾಗಲಿ ಕನ್ನಡವಾಗಲಿ ಯಾವುದೇ ಭಾಷಾಸಾಹಿತ್ಯದಲ್ಲಿಯೂ ಈ ಪ್ರಕಾರದಲ್ಲಿಯೇ ಮಹಾಕಾವ್ಯಗಳ ರಚನೆಯಾಗಿದೆ.

ನವರಸಗಳ ಜೊತೆಜೊತೆಗೇ ಭಕ್ತಿರಸವೂ ಧಾರಾಳವಾಗಿ ಕಾವ್ಯಾಂಶವಾಗಿರುವುದೂ ತನ್ನದೇ ಛಾಪಿನ ಮೂಲಕ ಪ್ರತ್ಯೇಕ ಸ್ರೋತವಾಗುಳಿದಿರುವುದೂ ಕಂಡುಬರುತ್ತದೆ. ಭಕ್ತಿರಸವನ್ನು ನವರಸಗಳಿಗಿಂತ ಭಿನ್ನವಾಗಿ, ನವಭಕ್ತಿವಿಧಾನಗಳೆಂದು ಗುರುತಿಸಿ, ಅದನ್ನೂ ಕಾವ್ಯಾಭಿವ್ಯಕ್ತಿಯ ಪ್ರಮುಖ ಅಂಗವಾಗಿಯೇ ಪರಿಗಣಿಸಲಾಗಿದೆ. ನವವಿಧ ಭಕ್ತಿಗಳೆಂದರೆ– ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ– ಎಂಬವು. ಪ್ರತಿಯೊಂದು ಕವನದಲ್ಲಿ ಯಾ ಕಾವ್ಯಭಾಗದಲ್ಲಿ ಈ ಎಲ್ಲವೂ ಇರಬೇಕಾದುದಿಲ್ಲ. ಒಂದೊಂದು ಭಾವವೂ ಪ್ರತ್ಯೇಕವಾಗಿ ಅಥವಾ ಒಂದೆರಡು ಇತರ ಭಾವಗಳೊಂದಿಗೆ ಅಭಿವ್ಯಕ್ತಿ ಪಡೆದಿರಬಹುದು. ಮೂಲಸ್ರೋತವಾದ ಭಕ್ತಿಯ ಈ ಎಲ್ಲ ನಾನಾ ಮುಖಗಳು ಮಹಾಕಾವ್ಯದ ಒಟ್ಟಂದದಲ್ಲಿ ವಿವಿಧ ಹಂತಗಳಲ್ಲಿ ಕಂಡುಬಂದರೆ, ಬಿಡಿ ಕವನಗಳಲ್ಲಿ ಬೇರೆ ಬೇರೆ ಕವನದಲ್ಲಿ ಬೇರೆ ಬೇರೆಯಾಗಿಯೇ ಭಾವಾಭಿವ್ಯಕ್ತವಾಗಿರುವ ಸಂಭವವೇ ಹೆಚ್ಚು.

ಕನ್ನಡ ಸಾಹಿತ್ಯದಲ್ಲಿಯೇ ನೋಡಿದರೂ ಪಂಪ, ರನ್ನ, ಜನ್ನ, ಲಕ್ಷ್ಮೀಶ, ನಾರಣಪ್ಪ, ರಾಘವಾಂಕ, ಹರಿಹರ, ಮುದ್ದಣ, ಮುಂತಾದ ಎಲ್ಲರ ಕಾವ್ಯಗಳಲ್ಲೂ ಭಕ್ತಿಭಾವದ

ವಿವಿಧ ರೂಪಗಳನ್ನು ಕಾಣಬಹುದಾಗಿದೆ. ಪ್ರಸ್ತುತ ಲೇಖನದಲ್ಲಿ, ರಸ'ಋಷಿಯೆಂದೇ ಹೆಸರಾದ, ಕನ್ನಡದ ಶ್ರೇಷ್ಠ ಕವಿಗಳಲ್ಲೊಬ್ಬರಾದ, ಜ್ಞಾನಪೀಠ ಪುರಸ್ಕೃತ, ರಾಷ್ಟ್ರಕವಿ ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ (ಕುವೆಂಪು)ರವರ ಕವನ ಸಾಹಿತ್ಯದಲ್ಲಿ (ಅವರ ಅಗಾಧ ಸಾಹಿತ್ಯಸಾಗರದಲ್ಲಿ– ಗದ್ಯಸಾಹಿತ್ಯ, ಮಹಾಕಾವ್ಯವಾದ ಶ್ರೀರಾಮಾಯಣ ದರ್ಶನಂ, ಕಥನಕಾವ್ಯ–ಖಂಡ ಕಾವ್ಯಗಳು, ಹಾಗೂ ನಾಟಕಗಳನ್ನು ಹೊರತುಪಡಿಸಿ) ಭಕ್ತಿಯ ಅಭಿವ್ಯಕ್ತಿಯನ್ನು ಪರಿಶೀಲಿಸುವ ನಮ್ರಯತ್ನ ಮಾಡಲಾಗಿದೆ.

ಒಂದು ಸಾವಿರಕ್ಕೂ ಮೇಲ್ಪಟ್ಟು ಕವನಗಳನ್ನು ಬರೆದು, ೩೧ (ಮೂವತ್ತೊಂದು) ಕವನ ಸಂಕಲನಗಳನ್ನು ಪ್ರಕಟಿಸಿದ, ವೈಜ್ಞಾನಿಕವಾಗಿ ತಾರ್ಕಿಕವಾಗಿ ಚಿಂತನ–ಮಂಥನಗಳಿಗೆ ಹೆಸರಾಗಿದ್ದ ಕುವೆಂಪು, ತಮ್ಮ ಸಾಹಿತ್ಯದಲ್ಲಿ ಭಕ್ತಿಗೆ ಸ್ಥಾನವಿತ್ತಿದ್ದರೆ? ಯಾವ ರೀತಿಯಲ್ಲಿ? ಅವರ ಭಕ್ತಿ ಯಾವ ತೆರನದು? ಶ್ರೀ ರಾಮಕೃಷ್ಣ ಮಿಶನ್ನಿನ ಸಂಪರ್ಕ ಮತ್ತು ಸಾಹಿತ್ಯ ಪ್ರಭಾವದಿಂದಾಗಿ ಅಧ್ಯಾತ್ಮದತ್ತ ಅವರಲ್ಲಿ ಹುಟ್ಟಿದ ಒಲವು, ಶ್ರೀ ರಾಮಕೃಷ್ಣ ಪರಮಹಂಸರ ಹಾಗೂ ಶಾರದಾ ಮಾತೆಯರ ಮೇಲಿನ ಶ್ರದ್ಧಾರೂಪವಾಗಿ ವಿವಿಧ ಕೃತಿಗಳಲ್ಲಿ ಹೊಮ್ಮಿದೆಯೆನ್ನುವುದು ಸರ್ವವಿದಿತ. ಅದಲ್ಲದೆ, ಬೇರೆ ಯಾವ ತೆರನಾದ ಭಕ್ತಿ ಸಾಹಿತ್ಯ ಅವರಿಂದ ಸೃಷ್ಟಿಯಾಗಿತ್ತು? ಈ ಪ್ರಶ್ನೆಗಳಿಗೆಲ್ಲ ಉತ್ತರ ಕಂಡುಕೊಳ್ಳುವ ಪ್ರಯತ್ನವಿಲ್ಲಿದೆ.

*

**ಪ್ರಸ್ತಾರ:**

ನವೋದಯ ಸಾಹಿತ್ಯಕಾಲದಲ್ಲಿಯೇ ಕಾವ್ಯಲೋಕಕ್ಕೆ ಕಾಲಿರಿಸಿದವರು ಕುವೆಂಪು. ಮೊದಮೊದಲು ಆಂಗ್ಲ ಕವನಗಳ ಮೂಲಕ ತನ್ನ ಲೇಖನಿ ಹರಿವನ್ನು ಕಂಡುಕೊಳ್ಳ ಹೊರಟರು. ಅದಕ್ಕವರು ಕಾರಣವನ್ನೂ ಹೀಗೆ ಕೊಡುತ್ತಾರೆ: "..ಇಂಗ್ಲಿಷ್ ಸಾಹಿತ್ಯಕ್ಕೆ ನಾನು ಮಾರುಹೋಗಿದ್ದೆ; ವಿಶೇಷವಾಗಿ ಇಂಗ್ಲಿಷ್ ಕವಿಗಳಿಗೆ... ಇಂಗ್ಲಿಷ್ ಕವನಗಳ ವಿಷಯದ ನೂತನತೆಯೂ, ಅವುಗಳ ಭಾವಗೀತಾತ್ಮಕತೆಯೂ ಇಂಗ್ಲಿಷ್ ಕವಿಗಳ ವ್ಯಕ್ತಿನಿಷ್ಠವಾದ ರಸಾನುಭವಗಳ ರಮಣೀಯತೆಯೂ ನಮ್ಮ ಕವಿಗಳ ಬರಿಯ ಪೌರಾಣಿಕವಾದ ಕಥನಾತ್ಮಕತೆಗಿಂತ ಹೆಚ್ಚು ಮನಮೋಹಿತವಾಗಿತ್ತು" ('ನೆನಪಿನ ದೋಣಿಯಲ್ಲಿ', ಉದಯರವಿ ಪ್ರಕಾಶನ, ಮೈಸೂರು, ೧೯೮೦).

ಎಸ್.ಎಸ್.ಎಲ್.ಸಿ. ಓದುತ್ತಿರುವ ಎಳೆ ವಯಸ್ಸಿನಲ್ಲಿಯೇ, 'ಬಿಗಿನರ್ಸ್ ಮ್ಯೂಸ್' ಎಂಬ ಹೆಸರಿನಲ್ಲಿ, ತಮ್ಮ ಕೆಲವು ಇಂಗ್ಲಿಷ್ ಕವಿತೆಗಳನ್ನು ಸಂಗ್ರಹಿಸಿ ಪುಟ್ಟ ಹೊತ್ತಗೆಯೊಂದನ್ನು ಸಿದ್ಧಪಡಿಸಿಕೊಂಡಿದ್ದರು. ಕಾಲಾಂತರದಲ್ಲಿ, ಕುವೆಂಪುರವರ ಎಲ್ಲ ೫೫ ಇಂಗ್ಲಿಷ್ ಕವಿತೆಗಳ ಸಂಕಲನ 'ಏಲಿಯನ್ ಹಾರ್ಪ್' ಪ್ರಕಟವಾಯಿತು; (ಶ್ರೀ ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೭೩). ಮಹಾರಾಜಾ ಹೈಸ್ಕೂಲಿನ ಇತಿಹಾಸ

ಅಧ್ಯಾಪಕರಾಗಿದ್ದ ಎಮ್. ಎಚ್. ಕೃಷ್ಣಯ್ಯಂಗಾರರ ನಿರ್ದೇಶನದಂತೆ ಆಗಿನ ವೈಸ್ ಛಾನ್ಸಲರ್ ಆಗಿದ್ದ ಬ್ರಜೇಂದ್ರನಾಥ್ ಶೀಲ್ ಅವರನ್ನು, ೧೯೨೪ರ ಜುಲೈ ೨ರಂದು ಭೇಟಿಯಾದದ್ದು, ಹೈಸ್ಕೂಲ್ ಹುಡುಗ ಪುಟ್ಟಪ್ಪನ ಜೀವನದ ದಿಕ್ಸೂಚಿ ಬದಲಾದಂತಾಯಿತು. ಶ್ರೀಯುತ ಶೀಲ್ ಅವರು, ವಿಶ್ವವಿದ್ಯಾನಿಲಯದಲ್ಲಿ ವಿಶೇಷ ಉಪನ್ಯಾಸಗಳನ್ನು ನೀಡಲು ಬಂದಿದ್ದ ಐರಿಷ್ ಕವಿ ಜೇಮ್ಸ್ ಎಚ್. ಕಸಿನ್ಸ್ ಅವರನ್ನು, ಇಂಗ್ಲಿಷ್ ಕವನಗಳ ಸಹಿತ ಭೇಟಿಯಾಗುವಂತೆ ಸೂಚಿಸಿದರು.

ಕಸಿನ್ಸ್ ಅವರು ಪುಟ್ಟಪ್ಪನ ಇಂಗ್ಲಿಷ್ ಕವನಗಳ ಕಟ್ಟನ್ನು ಗಮನಿಸಿ, ತುಸು ಅಸಮಾಧಾನದಿಂದಲೇ, "ನಿಮ್ಮ ಭಾಷೆಯಲ್ಲಿ ಏನಾದರೂ ಬರೆದಿದ್ದೀರಾ?" ಎಂದದ್ದು, ಎಳೆಯ ಪುಟ್ಟಪ್ಪನವರ ಮೌನ, ನಂತರ ತಾಳ್ಮೆಯಿಂದಲೇ, "...ಹುಟ್ಟಿನೊಡನೆ ಬಂದ ಭಾಷೆಯಲ್ಲಿ ಮಾತ್ರ ಉತ್ತಮ ಸೃಜನ ಸಾಹಿತ್ಯ ಸೃಷ್ಟಿಯಾಗಬಲ್ಲದು... ನಿಮ್ಮ ಭಾಷೆಯಲ್ಲಿಯೇ ಬರೆಯಿರಿ..." ಎಂದು ತಿಳಿಹೇಳಿ ಕಳುಹಿಸಿದ್ದು ಕುವೆಂಪು ಕನ್ನಡದತ್ತ ಹೊರಳಿಕೊಳ್ಳಲು ತಿರುಗೂಟವಾಯಿತು. ಅಲ್ಲಿಯೇ ಕವಿ ಕುವೆಂಪು ಹುಟ್ಟಿದ ಅನ್ನುವುದು ಅಸಂಗತ ಮಾತಾದೀತು (ಕಾರಣ, 'ಅಮಲನ ಕಥೆ' ಎನ್ನುವ ನೀಳ್ಗವನವನ್ನು ಕುವೆಂಪು ಅದಾಗಲೇ, ೧೯೨೩ರಲ್ಲಿಯೇ, ರಚಿಸಿದ್ದರು). ಆದರೆ, ಅಲ್ಲಿಂದಲೇ ಕುವೆಂಪು ಕನ್ನಡ ಕಂಪನ್ನು ತುಸು ಗಂಭೀರವಾಗಿ ಅರಸತೊಡಗಿದರು; ಕನ್ನಡ-ಇಂಗ್ಲಿಷ್ ಎರಡರಲ್ಲೂ ಪ್ರಯೋಗಾತ್ಮಕವಾಗಿ ಕವಿತೆಗಳನ್ನು ಬರೆಯುತ್ತಾ ತನ್ನ ಅಭಿವ್ಯಕ್ತಿ ಮಾಧ್ಯಮದ ಒಳಹೊರಗನ್ನು, ಶಕ್ತಿ-ಮಿತಿಗಳನ್ನು ಅರಿಯತೊಡಗಿದರು; ತಮ್ಮ ಭಾವ ಸಾಂದ್ರತೆಯನ್ನು ಭಾಷೆಯ ಒರೆಗೆ ಹಚ್ಚತೊಡಗಿದರು ಅಂದರೆ ಹೆಚ್ಚು ಸೂಕ್ತವಾದೀತು. ಈ ಕುರಿತು ನರಹಳ್ಳಿ ಬಾಲಸುಬ್ರಹ್ಮಣ್ಯರು ಸವಿಸ್ತಾರವಾಗಿ ತಮ್ಮ ಇತ್ತೀಚಿನ "ಕುವೆಂಪು ಕಾವ್ಯ - ಸಂಸ್ಕೃತಿ ಚರಿತ್ರೆಯ ರೂಪಕ" ಅನ್ನುವ ಹೊತ್ತಗೆಯಲ್ಲಿ ಹಂತಹಂತವಾಗಿ ತೆರೆದಿರಿಸಿದ್ದಾರೆ.

ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕೃತಿಗಳನ್ನು ರಚಿಸಿದವರು ಕುವೆಂಪು. ಕವನಗಳು, ನೀಳ್ಗವನಗಳು, ನಾಟಕಗಳು (ಗಂಭೀರ, ವೈಚಾರಿಕ, ಪೌರಾಣಿಕ, ಹಾಗೂ ಮಕ್ಕಳ ನಾಟಕಗಳು), ಕಾದಂಬರಿಗಳು, ಆತ್ಮಕಥೆ, ವಿಮರ್ಶಾತ್ಮಕ ಲೇಖನಗಳೂ ಅಲ್ಲದೆ ಅತ್ಯಂತ ದಾರ್ಶನಿಕ ಶಕ್ತಿಯ ಮಹಾಕಾವ್ಯ 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯವನ್ನೂ ಕನ್ನಡ ಸಾರಸ್ವತ ಲೋಕಕ್ಕೆ ಕೊಡುಗೆಯಾಗಿ ಇತ್ತಿದ್ದಾರೆ ಈ ಮಹಾಕವಿ, ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ರಾಷ್ಟ್ರಕವಿ. ಇಂತಹ ಮೇರು ಕವಿಯ ಕವನಗಳನ್ನು, ಅದರಲ್ಲಿಯೂ ಭಕ್ತಿಭಾವ ಪ್ರಧಾನವಾದ ಕವನಗಳನ್ನಷ್ಟೇ ಈ ಲೇಖನದ ವ್ಯಾಪ್ತಿಗೆ ಪರಿಗಣಿಸಿ, ಅಲ್ಲೂ ಕೆಲವೇ ಕೆಲವು ಕವನಗಳನ್ನು ಆರಿಸಿ ಉಲ್ಲೇಖಿಸಲಾಗಿದೆ.

ಭಕ್ತಿಯ ವಿಚಾರವಾಗಿ ಕುವೆಂಪು ಎಂದೂ ಮೌಢ್ಯದತ್ತ ವಾಲಿದವರಲ್ಲ, ಬದಲಾಗಿ ಮೌಢ್ಯಗಳನ್ನು ತೀಕ್ಷ್ಣವಾಗಿ ಖಂಡಿಸಿದವರು. ವೈಚಾರಿಕ ಬೌದ್ಧಿಕ ಸಮತೋಲಗಳ

ಭಾವಭಕ್ತಿ ಅವರದು. ಪ್ರಕೃತಿಯಲ್ಲೇ ದೈವಿಕತೆಯನ್ನು ಕಾಣುವ ಪಾರಿಸರಿಕ ಭಕ್ತಿ ಅವರದು. ಇಡೀ ಬ್ರಹ್ಮಾಂಡದ ಅಖಂಡ ಚಾಲಕಶಕ್ತಿಯ ಆರಾಧನಾ ಭಕ್ತಿ ಅವರದು. ಸಂಗೀತ ಲಯದಲ್ಲಿ ತನ್ಮಯರಾಗಿ ಪರವಶರಾಗುವ ನಾದಭಕ್ತಿ ಅವರದು. ಇವನ್ನೆಲ್ಲ ಒಂದೆಡೆಗಿರಿಸಿದರೆ, ಇನ್ನೊಂದೆಡೆಯಲ್ಲಿ– ತನ್ನೊಳಗಿನ ಆತ್ಮಶಕ್ತಿಯ ಅರಿವಿನೆಚ್ಚರ, ಅದನ್ನೇ ಪರಮೋಚ್ಚ ಗುರುವಾಗಿ ಕಾಣುವ ಸ್ವಾಂತಸಮಾಧಿ ತತ್ತ್ವ; ಮಾನವೀಯ ಸಂಬಂಧಗಳಲ್ಲಿರುವ ಪ್ರೀತಿ, ಮಮತೆ, ಸ್ನೇಹ, ಸೌಹಾರ್ದ, ವಾತ್ಸಲ್ಯ, ಬಾಂಧವ್ಯಗಳಿಗಿತ್ತ ಉನ್ನತ ಮೌಲ್ಯಸ್ಥಾನ; ತನ್ನದೇ ಕರ್ತೃತ್ವ ಶಕ್ತಿಯ ಬಗೆಗಿನ ಬೆರಗು; ತನ್ನೆಲ್ಲಾ ಕರ್ತವ್ಯಗಳೂ ದೈವಿಕವೆಂಬ ಶ್ರದ್ಧೆ. ಇವೆಲ್ಲ ಕವಿ ಕುವೆಂಪು ಅವರ ವ್ಯಕ್ತಿತ್ವದ ವಿವಿಧ ಆಯಾಮಗಳನ್ನು ತೆರೆದಿರಿಸುತ್ತವೆ. ಇಂಥ ಕುವೆಂಪು ಅವರನ್ನು ಮಾನವತಾವಾದಿ, ಸಮಾಜವಾದಿ, ಸಮಾನತಾವಾದಿ, ಹಾಗೂ ಪರಿಸರವಾದಿ ದೈವಭಕ್ತ ಎಂದರೆ ತಪ್ಪಾಗಲಾರದು.

**ಮೌಢ್ಯಖಂಡನೆ:**

ಕವಿ ಕುವೆಂಪು ಎಂದೂ ಮೌಢ್ಯಾಧಾರಿತ ಭಕ್ತಿಯನ್ನು ಒಪ್ಪಿಕೊಂಡವರಲ್ಲ. ಮೌಢ್ಯ ಕಂಡಾಗ ಸ್ಫೋಟಕ ಶಕ್ತಿಯಾಗುತ್ತಿದ್ದರು ಅಥವಾ ಅದನ್ನು ಸಂಪೂರ್ಣವಾಗಿ ತಪ್ಪಿಸಿಕೊಳ್ಳುತ್ತಿದ್ದರೆಂದು ತಾರಿಣಿ ಚಿದಾನಂದರು 'ಮಗಳು ಕಂಡ ಕುವೆಂಪು' ಕೃತಿಯುದ್ದಕ್ಕೂ ಕೆಲವಾರು ಪ್ರಸಂಗಗಳನ್ನು ನೆನಪಿಸಿಕೊಳ್ಳುತ್ತಾರೆ. ಕುವೆಂಪು ಅವರ ಈ ನಿಲುವಿಗೆ ಅತ್ಯುತ್ತಮ ಉದಾಹರಣೆ, ಅವರ ಅತ್ಯಂತ ಜನಪ್ರಿಯ ಗೀತೆಗಳಲ್ಲಿ ಒಂದಾದ "ಇಂದಿನ ದೇವರು" (೨-ಜುಲೈ-೧೯೩೧, ಪಾಂಚಜನ್ಯ, ೧೯೩೩).

**ನೂರು ದೇವರನೆಲ್ಲ ನೂಕಾಚೆ ದೂರ**
**ಭಾರತಾಂಬೆಯೆ ದೇವಿ ನಮಗಿಂದು, ಪೂಜಿಸುವ ಬಾರ!**

ಎಂದು ಆರಂಭವಾಗುವ ಕವನ, ಗುಡಿಗುಡಾರಗಳೊಳಗೆ ಪೂಜೆಗೊಳ್ಳುತ್ತಿರುವ ನೂರಾರು ಶಿಲಾ ದೇವರುಗಳನ್ನೂ, ಅವರ ಹೆಸರಿನಲ್ಲಿ ನಡೆಯುವ ಶೋಷಣೆಯನ್ನೂ ಡಾಂಭಿಕತೆಯನ್ನೂ ಸಾರಾಸಗಟು ಹಳಿದು, ದೇಶವೇ ದೇವರೆನುವ ದೇಶಭಕ್ತಿಯನ್ನು ಎತ್ತಿಹಿಡಿಯುವ ಕೆಲಸ ಮಾಡುತ್ತದೆ.

...

**ಗುಡಿಯೊಳಗೆ ಕಣ್ ಮುಚ್ಚಿ ಬೆಚ್ಚಗಿರುವರನೆಲ್ಲ,**
**ಭಕ್ತ ರಕ್ತವ ಹೀರಿ ಕೊಬ್ಬಿಹರನೆಲ್ಲ,**
**ಗಂಟೆ ಜಾಗಟೆಗಳಿಂ ಬಡಿದು, ಕುತ್ತಿಗೆ ಹಿಡಿದು**
**ಕಡಲಡಿಗೆ ತಳ್ಳಿರೈ ಶಂಖದಿಂ ನುಡಿದು!**

...

**ಸತ್ತ ಕಲ್ಗಳ ಮುಂದೆ ಅತ್ತು ಕರೆದುದು ಸಾಕು**
**ಜೀವದಾತೆಯನಿಂದು ಕೂಗಬೇಕು!**
...
**ಭಾರತಿಯೆ ನಮಗಿಂದು ಜೀವನದ ದೇವತೆಯು,**
**ವಿಶ್ವರೂಪಿಣಿಯವಳು, ವಿಶ್ವಮುಖಿಯೈ!**
**ನಮ್ಮೆಲ್ಲರಂಗಗಳೆ ನಮ್ಮಂಬೆಯಂಗವೈ,**
**ನಮ್ಮ ಸ್ವಾತಂತ್ರ್ಯದೊಳೆ ನಮ್ಮಮ್ಮ ಸುಖಿಯೈ!**
...

ಯಾವುದೇ ವಿವರಣೆ–ವಿಶ್ಲೇಷಣೆಗಳಿಲ್ಲದೆಯೇ ಓದಿಸಿಕೊಂಡು, ಓದುಗರ ಮನವನ್ನು ತನ್ನ ತೆಕ್ಕೆಗೆ ಸೆಳೆದುಕೊಂಡು ಅವರ ಮನದಂಗಳದಲ್ಲಿ ಆಡಂಬರದ ದೈವಭಕ್ತಿಯನ್ನು ಸರಿಸಿ ವಾಸ್ತವದಲ್ಲಿ ಅಗತ್ಯವಾದ ದೇಶಭಕ್ತಿಯನ್ನು ಸ್ಥಾಪಿಸುವಲ್ಲಿ ಸಫಲವಾಗುತ್ತದೆ ಈ ಕವನ. ಮತ್ತೊಂದು ವಿಶೇಷವೆಂದರೆ, ಇದು ಇಂದಿನ ಕಾಲಮಾನಕ್ಕೂ ಅಷ್ಟೇ ಪ್ರಸ್ತುತವಾಗಿರುವುದು. ಅಂದು ಬ್ರಿಟಿಷರ ಹಿಡಿತದಿಂದ ಸ್ವಾತಂತ್ರ್ಯ, ಇಂದು ನಮ್ಮ ದೇಶದೊಳಗೇ ಬೆಳೆದು ನಿಂತು ನಮ್ಮನ್ನೆಲ್ಲ ಭಕ್ಷಿಸುತ್ತಿರುವ ರಾಜಕೀಯಾಸುರರಿಂದ ಸ್ವಾತಂತ್ರ್ಯ. ಈ ಸಾರ್ವಕಾಲಿಕ ಗುಣವೇ ಉತ್ತಮ ಕವನದ ಶಕ್ತಿ.

ಇದೇ ಸಂಕಲನದಲ್ಲಿ ಏಸುಕ್ರಿಸ್ತನ ಕುರಿತಾಗಿರುವ ಕವನ 'ಅವತಾರ'ದಲ್ಲಿ, ಧರ್ಮಗಳ ಗಡಿ ದಾಟಿ ಮಾನವೀಯವಾಗಿ ಈ ಸಾಲುಗಳನ್ನು ಬರೆಯುತ್ತಾರೆ:

**...ಶಿಲುಬೆಯ ಮೇಗಡೆ ನೇತಾಡುತ್ತಿಹೆ!**
**ಮುಳ್ಳಿನ ಮುಡಿಯನು ಇನ್ನೂ ಹೊತ್ತಿಹೆ!**

ಮುಂದಕ್ಕೆ ಸಾಗುತ್ತಾ ಕವಿತೆ, ಕ್ರಿಸ್ತನ ಹೆಸರಿನಲ್ಲಿಯೂ ನಡೆಯುವ ಅಂಧಾನು–ಕರಣೆಯನ್ನು ಬೂಟಾಟಿಕೆಯನ್ನು ಅನಾವರಣಗೊಳಿಸುತ್ತದೆ:

**...ಕ್ರಿಸ್ತನು ಕ್ಷಮೆಯಾ ತವರೂರು:**

**"ದಿನದಿನ ದಿನವೂ ಶಿಲುಬೆಯನೇರಿ**
**ಕ್ಷಣಕ್ಷಣ ಕ್ಷಣವೂ ರಕ್ತವ ಸೋರಿ**
**ಲೋಕಕೆ ಪ್ರೇಮ ಅಹಿಂಸೆಯ ಸಾರಿ..."**

**"...ದಿನವೂ ದಿನವೂ ನಿಂದಿಸಿ ನೋಯಿಸಿ**
**ದಿನದಿನ ದಿನವೂ ಹಂಗಿಸಿ ಸಾಯಿಸಿ**
**ಆರಾಧಿಸುವರು ಮೂದಲಿಸಿ!..."**

"...ಅಂದು ಯಹೂದ್ಯರು ಮಾತ್ರವೆ ಅಲ್ಲ
ನನ್ನನು ಶಿಲುಬೆಗೆ ಹಾಕಿದರು;
ಇಂದು ಜಗತ್ತಿನ ಮಾನವರೆಲ್ಲ
ಈ ಗತಿಗೆನ್ನನು ನೂಕಿಹರು!..."

"...ಬಡಬಗ್ಗರ ಗುಡಿಸಲುಗಳ ಮುರಿದು
ಗುಡಿಗಳ ಕಟ್ಟುವರೆನಗಾಗಿ!
ನರಳುತ್ತಿರೆ ನಾ ನೆತ್ತರು ಹರಿದು
ಸಂಗೀತದಿ ನನ್ನನು ಕೂಗಿ
ಪ್ರಾರ್ಥನೆ ಮಾಡಿದೆವೆಂದೆನ್ನುವರು
ರಕ್ತ ಮಾಂಸವನೆ ತಿನ್ನುವರು!
ನನ್ನ ಧರ್ಮದಾ ಹೆಸರನೆ ಹೇಳಿ
ನನ್ನನೆ ಶಿಲುಬೆಗೆ ಕುತ್ತುವರು;
ನನ್ನ ರಕ್ತದಾ ಹೊಳೆಯಲಿ ತೇಲಿ
ಹೊಸಹೊಸ ಶಿಲುಬೆಯ ಕೆತ್ತುವರು!
ಮಾನವರರಿಯರು ಕ್ಷಮಿಸೈ, ತಂದೆ:
ಅಂದೂ ಇಂದೂ ಎರಡೂ ಒಂದೇ!
ಕ್ರೈಸ್ತ ಯಹೂದ್ಯರು ಮುಸಲರು ಹಿಂದೂ
ಎಲ್ಲರು ನನ್ನವರೇ ಎಂದೆಂದೂ!"

ಪ್ರತಿಯೊಂದು ಪದಗಳ, ಸಾಲುಗಳ ಅರ್ಥವಿವರಣೆಗಳಿಲ್ಲದೆ ತಂತಾನೇ ವಿಷದವಾಗಿ ತೆರೆದುಕೊಳುವ ಈ ಕವನಕ್ಕೆ ಯಾವುದೇ ವಿಶ್ಲೇಷಣೆಯ ಆಧಾರ ಬೇಕಾಗಿಲ್ಲ. ಸರ್ವ ಮಾನವರ ಏಳಿಗೆಗಾಗಿ ಬಂದನೆಂದು ನಂಬಲಾಗುವ ಏಸುಕ್ರಿಸ್ತನ ಹೆಸರಿನಲ್ಲಿಯೂ ನಡೆಯುವ ಅನಾಚಾರ, ಬಡವರ ಶೋಷಣೆ, ಧನಿಕರ ಧೋರಣೆಗಳನ್ನು ಹಳಿಯುತ್ತಾ "ವಿಶ್ವಮಾನವತ"ದ ಸೂಚನೆ ನೀಡುತ್ತಾರೆ ಕವಿ. ಕವನ ಇನ್ನೂ ಮುಂದುವರೆದು:

...ಹರಿಯುತ್ತಿರೆ ಶೋಣಿತ ವೇಣಿ,
ತೇಲುತ್ತಿರೆ ಬೆಂಕಿಯ ದೋಣಿ,
ಅವತಾರದ ಎದೆಯನು ಕಣೆ ಚುಚ್ಚಿರೆ,
ರಕ್ತದ ಹೊಳೆಯೋ ಕ್ಷಣ ಕ್ಷಣ ಹೆಚ್ಚಿರೆ,
ಯುಗಯುಗ ಯುಗವೂ ಹಗಲೂ ಇರುಳೂ
ಬೇಯುತ್ತಿದೆ ಜಗದೀಶನ ಕರುಳು!

–ಅಯ್ಯೋ ಇದೇನು?–
ನಿನಗೆಂದೆಂದೂ ಇದೆ ಗತಿಯೇನು?–

–ಎನ್ನುವ ವಿಷಾದದಲ್ಲಿ ಕೊನೆಯಾಗುತ್ತದೆ. ಮೊದಲ ಮಹಾಯುದ್ಧ ಮುಗಿದಿತ್ತು (೧೯೧೪–೧೯೧೮); ಎರಡನೇ ಮಹಾಯುದ್ಧ ಶುರುವಾಗಿರಲಿಲ್ಲ (೧೯೩೯–೧೯೪೫) ಈ ಕವನ ಬರೆದಾಗ (೨೮–ಜೂನ್–೧೯೩೩). ಆದರೆ, ಈ ಕವಿದೃಷ್ಟಿ ಅದಾಗಲೇ ಮುಂದಾಗುವ ರಕ್ತಪಾತವನ್ನು ಕಂಡರಿಸಿತ್ತೆ? ಅದಾವ ಮುನ್ನೋಟ ಅವರಿಂದ ಹೀಗೆ ಬರೆಸಿತ್ತು? ಭಾರತದೊಳಗೇ ಸ್ವಾತಂತ್ರ್ಯ ಸಂಗ್ರಾಮದ (ಬ್ರಿಟಿಷರಿಗೂ ಭಾರತೀಯರಿಗೂ) ಚಕಮಕಿ ನಡೆಯುತ್ತಲೇ ಇದ್ದ ಆ ಕಾಲಘಟ್ಟದಲ್ಲಿ ಕ್ರಿಸ್ತನನ್ನು ಪರದೇಸಿಗಳ ದೈವವಾಗಿ ಅನ್ಯೀಕರಿಸದೆ ಮಾನವತ್ವದ ಸಹಕಾರಿಯಾದ ದೇವತ್ವದ ಒಂದು ಮುಖವಾಗಿ ಅನನ್ಯವಾಗಿಯೇ ಕಂಡ ಕವಿಯ ಉದಾತ್ತತೆ ಇಲ್ಲಿದೆ. 'ದೇವರು ಎಂಬುದು ಅಖಂಡವಾದ ಒಂದು ಶಕ್ತಿ' ಎನ್ನುವ ಅಚಲ ವಿಶ್ವಾಸವಿಲ್ಲದೆ ಈ ಉದಾತ್ತತೆಯು ನಿಲುಕುವಂಥದ್ದಲ್ಲ. ಮೌಢ್ಯವಿಲ್ಲದ ಅಚಲ ವಿಶ್ವಾಸವೇ ಭಕ್ತಿ ತಾನೆ!

*

**ಭಕ್ತಿಮಂಡನೆ:**

'ಮಗಳು ಕಂಡ ಕುವೆಂಪು' ಹೊತ್ತಗೆಯಲ್ಲಿ ತಾರಿಣಿ ಚಿದಾನಂದರು ತಮ್ಮ ತಂದೆಯ ದಿನಚರಿಯನ್ನು, ಜೀವನ ಶೈಲಿಯನ್ನು ತೆರೆದಿರಿಸುತ್ತಾರೆ. ಸಾಂಸಾರಿಕ ವಿಷಯಗಳಲ್ಲಿ ಪತಿಯಾಗಿಯೂ ತಂದೆಯಾಗಿಯೂ ಪುಟ್ಟಪ್ಪನವರ ದೈನಂದಿನ ಕಾರ್ಯವೈಖರಿಯನ್ನು ಅವಲೋಕಿಸುತ್ತಾರೆ. ಮನೆಯ ಆಗುಹೋಗುಗಳಲ್ಲಿ ಅವರು ತೊಡಗಿಸಿಕೊಳ್ಳುತ್ತಿದ್ದುದನ್ನು, ಘಟನೆಗಳಿಗೆ ಸ್ಪಂದಿಸುತ್ತಿದ್ದ ರೀತಿಯನ್ನು ತಮ್ಮ ನೆನಪುಗಳ ಆಧಾರದಲ್ಲಿ ಕಟ್ಟಿಕೊಡುತ್ತಾರೆ. ಅದರಲ್ಲವರು ವೈಚಾರಿಕ ಚಿಂತನೆಯುಳ್ಳ ಕುವೆಂಪು ಅವರ ಭಕ್ತಿಮುಖ ಕಂಡುಬರುವ ಬಹಳಷ್ಟು ಸನ್ನಿವೇಶಗಳನ್ನು ನಿರೂಪಿಸುತ್ತಾರೆ. ಅದರಲ್ಲೊಂದು ಹೀಗಿದೆ: "ನಾನು (ತಾರಿಣಿ) ಒಮ್ಮೆ ಪರೀಕ್ಷೆಗೆ ಹೋಗಲು ತುಂಬಾ ಅಧೀರಳಾದೆ... ನನ್ನ ಫಜೀತಿ ನೋಡಿ ತಂದೆಯವರು, 'ಧೈರ್ಯವಾಗಿ ಹೋಗಿ ಬರೆ. ನಾನು ದೇವರ ಮನೆಯಲ್ಲಿ ಲಲಿತಾ ಸಹಸ್ರನಾಮ ಹೇಳುವೆ. ನಿನ್ನ ಮನಃಶಕ್ತಿ ಹೆಚ್ಚುತ್ತದೆ. (ನೀನು) ದೇವರ ಮನೆಗೆ ಹೋಗಿ, 'ಮಾತರ್ ಮಾತರ್ ನಮಸ್ತೇ, ದಹ ದಹ ಜಡತಾಂ, ದೇಹಿ ಬುದ್ಧಿ ಪ್ರಶಾಂತಾಂ' ಎಂದು ಪ್ರಾರ್ಥಿಸಿ ನಮಸ್ಕರಿಸಿ ಪರೀಕ್ಷೆಗೆ ಹೋಗು' ಎಂದು ಹೇಳಿದ್ದರು. ಹೀಗೆ ಎಲ್ಲಾ ಸಮಯಗಳಲ್ಲೂ ನಮ್ಮನ್ನು ಉತ್ತೇಜಿಸುತ್ತಾ ಧೈರ್ಯ ತುಂಬುತ್ತಿದ್ದರು" (ಪುಟ ೩೪).

ಪುಟ್ಟಪ್ಪನವರ ಕವನಗಳನ್ನು ಗಮನಿಸಿದರೆ, ದೈವಭಕ್ತಿಗೆ ಸೀಮಿತವಾದ ನೂರಾರು ಕವನಗಳು ಕಾಣಬರುತ್ತವೆ. ಎಚ್. ಆರ್. ಲೀಲಾವತಿ, ಮೈಸೂರು ಅನಂತಸ್ವಾಮಿ, ಶಿವಮೊಗ್ಗ ಸುಬ್ಬಣ್ಣ, ಸಿ. ಅಶ್ವಥ್, ರತ್ನಮಾಲ ಪ್ರಕಾಶ್, ಬಿ. ಕೆ. ಸುಮಿತ್ರ, ಮಾಲತಿ ಶರ್ಮ, ಡಾ. ಪಿ. ಬಿ. ಶ್ರೀನಿವಾಸ್, ಡಾ. ರಾಜ್‌ಕುಮಾರ್, ಡಾ. ಎಸ್. ಪಿ. ಬಾಲ ಸುಬ್ರಹ್ಮಣ್ಯಂ, ಮುಂತಾದವರ ಸುಶ್ರಾವ್ಯ ಕಂಠದಲ್ಲಿ ಹೊಮ್ಮಿ ಜನಜನಿತವಾದ ಗೀತೆಗಳೇ ಹಲವಿವೆ. "ತನುವು ನಿನ್ನದು ಮನವು ನಿನ್ನದು", "ತೇನ ವಿನಾ ತೃಣಮಪಿ ನ ಚಲತಿ", "ಅಂತರತಮ ನೀ ಗುರು", "ಮುಚ್ಚುಮರೆಯಿಲ್ಲದೆಯೆ", "ಆನಂದಮಯ ಈ ಜಗಹೃದಯ", "ನಿನ್ನೆಡೆಗೆ ಬರುವಾಗ", "ಬೃಂದಾವನಕೆ ಹಾಲನು ಮಾರಲು", "ಓ ನನ್ನ ಚೇತನ", "ಇಲ್ಲಿ ಬಾ ಸಂಭವಿಸು" (ಬಾ ಇಲ್ಲಿ ಸಂಭವಿಸು), "ಓಂ! ಸಚ್ಚಿದಾನಂದ ತ್ರಿತ್ವಮುಖವಾದ ಪರಬ್ರಹ್ಮನಲಿ" (ಇಳಿದು ಬಾ, ತಾಯೇ, ಇಳಿದು ಬಾ), "ಅಗಣಿತ ತಾರಾಗಣಗಳ ನಡುವೆ", ಮುಂತಾದ ಹಲವು ಜನಮಾನಸದಲ್ಲಿ ನೆಲೆಯಾಗುಳಿದ ಗೀತೆಗಳು. ಇವುಗಳಲ್ಲೆಲ್ಲ ಹೊಮ್ಮಿರುವ ಭಕ್ತಿಭಾವದ ಪರಿಚಯ ಉತ್ಕೃಷ್ಟವಾದ ಭಾವಗೀತ ಗಾಯನದಿಂದ ನಿಚ್ಚಳವಾಗಿದೆ. ಮನವಿಟ್ಟು ಕೇಳುವ ಕಿವಿಗಳಿಗೆ ರಸದೌತಣದ ಜೊತೆಗೆ ಮನಕೆ ಭಕ್ತಿಭಾವದ ಪುಳಕಾಭಿಸಿಂಚನ.

ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ ಎಂಬ ನವವಿಧ ಭಕ್ತಿಗಳಲ್ಲಿ ಕುವೆಂಪು ಎಲ್ಲವನ್ನೂ ಅವಲಂಬಿಸಿ ಅಳವಡಿಸಿಕೊಂಡಿದ್ದಾರೆ ಎನ್ನಬಹುದು. ಒಂದೊಂದರಲ್ಲಿ ಒಂದೊಂದು ಭಾವಗಳ ತೀವ್ರತೆ ಗುರುತರವಾಗಿದ್ದರೆ, ಇನ್ನು ಕೆಲವುದರಲ್ಲಿ ಮಂದ್ರಸ್ಥಾಯಿಯ ಮೆಲುಕು. ಓಂಕಾರದ ಗುಂಜಾರವದಂತೆ, ಮಂತ್ರಘೋಷದಂತೆ ಅನುರಣಿಸುವ "ಓಂ! ಸಚ್ಚಿದಾನಂದ ತ್ರಿತ್ವಮುಖವಾದ ಪರಬ್ರಹ್ಮನಲಿ" (ಇಳಿದು ಬಾ, ತಾಯೇ, ಇಳಿದು ಬಾ; ಸಂಕಲನ: ಅಗ್ನಿಹಂಸ) ಒಂದಾಗಿರುವ 'ಋತಚಿನ್ಮಯೀ ಜಗನ್ಮಾತೆ'ಯನ್ನು ಪರಿಪರಿಯಾಗಿ ಬಣ್ಣಿಸಿ, ಇಳೆಗೆ ಇಳಿದು ಬಾರೆಂದು ಕರೆವ ಕೀರ್ತನ ಕವನ ಒಂದೆಡೆಯಾದರೆ, "ನಿನ್ನೆಡೆಗೆ ಬರುವಾಗ ಸಿಂಗರದ ಹೊರೆಯೇಕೆ" (ಸಂಕಲನ: ಷೋಡಶಿ) ಎಂಬ ಚಿಂತನೆ ತುಸು ಶೃಂಗಾರದತ್ತ ವಾಲಿದ ಸಖ್ಯಭಾವದ್ದು. ತನ್ನ ಅಂತರಾತ್ಮವನ್ನೇ ಗುರುತರವಾದ ಗುರುವೆಂದೆಣಿಸುವ, ಶಂಕರರ ಅದ್ವೈತ ತತ್ತ್ವದ "ಅಹಂ ಬ್ರಹ್ಮಾಸ್ಮಿ"ಯ ಧ್ವನಿತಾರ್ಥವು "ಮುಚ್ಚುಮರೆಯಿಲ್ಲದೆಯೆ ನಿನ್ನ ಮುಂದೆಲ್ಲವನು ಬಿಚ್ಚಿಡುವೆ ಓ ಗುರುವೆ ಅಂತರಾತ್ಮಾ" (ಸಂಕಲನ: ಅಗ್ನಿಹಂಸ) ಎನ್ನುವಲ್ಲಿದೆ. "ಆನಂದಮಯ ಈ ಜಗಹೃದಯ" (ಸಂಕಲನ: ಪಕ್ಷಿಕಾಶಿ) ಹಾಡಂತೂ ಪ್ರಕೃತಿಯೇ 'ದೇವದಯೆ'ಯೆನ್ನುತ್ತದೆ. "ಅಗಣಿತ ತಾರಾಗಣಗಳ ನಡುವೆ" (ಸಂಕಲನ: ಕಲಾಸುಂದರಿ) ಶಾಶ್ವತನಾಗಿರುವ ಪರಬ್ರಹ್ಮಶಕ್ತಿಯನ್ನು ನೆಚ್ಚಿರುವ ಕವಿಗೆ ಮತ್ಯಾವುದೂ ಗಣನೆಗೇ ಬರುವುದಿಲ್ಲ; ಸಂಪೂರ್ಣ ಪರಾಧೀನ ಅವಲಂಬಿತ

ಸ್ಥಿತಿ ಕವಿಯದು. "ಓ ನನ್ನ ಚೇತನ"ದಲ್ಲಿ (ಸಂಕಲನ: ಅನಿಕೇತನ) ವ್ಯಕ್ತಿಯ ಆತ್ಮವು ಸಮಷ್ಟಿಯ ಶಕ್ತಿರೂಪದ ಅನಂತತೆಯನ್ನು ಹೊಂದಿ ಅನಿಕೇತನ ಆಗಬೇಕೆಂದು ಬಯಸುವುದು ಭಕ್ತಿಯ ಅಂತಿಮಪದವನ್ನು, ಮುಕ್ತಿಯನ್ನು.

ರಸಋಷಿಯ ರಚನೆಗಳಲ್ಲಿ ಬಹು ಜನಪ್ರಿಯವಾದ ಈ ಮೇಲಿನ ಹಲವು ಗೀತೆಗಳಲ್ಲದೆ, 'ಕುವೆಂಪು ಕವನಕಾನನ'ದ ದಟ್ಟಹಸುರಿನೆಡೆಯಲ್ಲಿರುವ ಭಕ್ತಿಮಲ್ಲಿಗೆಗಳಲ್ಲಿ ಕೆಲವೇ ಕೆಲವನ್ನು ಆಯ್ದು ಲೇಖನದ ಮುಂದಿನ ಭಾಗಕ್ಕೆ ಬಳಸಿಕೊಂಡಿದ್ದೇನೆ.

"ಮೂಕಂ ಕರೋತಿ ವಾಚಾಲಂ" (ಸಂಕಲನ: ಹೊನ್ನ ಹೊತ್ತಾರೆ) ಕವನವು ಸಂಪೂರ್ಣ ದೈವಕೃಪೆಯಿಲ್ಲದೆ ಯಾವುದೂ ಏನೂ ಸಾಗದೆನ್ನುವುದನ್ನು ಸಾರುತ್ತದೆ. ಆಂತರ್ಯದೊಳಗಿನ ಶೂನ್ಯತೆಯಿಂದಾಗಿ ತಾನೊಂದು ಕಿರುಬಿದಿರಿನಂತೆ ಎಂದು ನಿವೇದಿಸಿಕೊಳ್ಳುತ್ತಾ, ಈ 'ಬಿದಿರನ್ನು ಸವೆಯಿಸಿ, ಸಮಗೊಳಿಸಿ, ನಿನ್ನ ಉಸಿರೂಡಿ, ಗಾನ ಹೊಮ್ಮಿಸು' ಎಂದು ಹಂಬಲಿಸುತ್ತದೆ:

**...ಟೊಳ್ಳಿನಿಂದಿಂಚರದ ರಸಲಹರಿ ಹೊಮ್ಮುವುದು**
**ನಿನ್ನ ಕೈಯಲಿ ನಾನು ವೇಣುವಾಗೆ!**
**'ಮೂಕಂ ಕರೋತಿ ವಾಚಾಲಮ್' ಎಂಬಂದದಲಿ**
**ಸೊನ್ನೆಯಿಂದುಣ್ಮುವುದು ಸುರಗಾನವು!**

**ನೀನುಳಿಯೆ ನಾನೇನು? ಬರಿ ಬಿದಿರಿನಂತೆ!**
**ಶ್ರೀಕೃಷ್ಣನಿಲ್ಲದಿಹ ಕೊಳಲಿನಂತೆ!**
**ಶೇಷಾರ್ಯನಿಲ್ಲದಿಹ ವೀಣೆಯಂತೆ!**
**ಭಾವವಿಲ್ಲದ ಬರಿಯ ಜಡಮೂಕನಂತೆ!**

ಅವರ ಇನ್ನೊಂದು ಕವನ "ತೇನವಿನಾ ತೃಣಮಪಿ ನ ಚಲತಿ" (ಸಂಕಲನ: ಅಗ್ನಿಹಂಸ), ಆರಂಭದಲ್ಲಿ ಇದೇ ಭಾವವನ್ನು ಎತ್ತಿಕೊಂಡರೂ, ನಂತರದ ಸಾಲುಗಳಲ್ಲಿ ದೈವತ್ವದ, ದೈವಕೃಪೆಯ ಔನ್ನತ್ಯವನ್ನೂ ಅದರಲ್ಲಿರುವ ನೆಮ್ಮದಿಯನ್ನೂ ನೆಚ್ಚಿಕೊಳ್ಳುತ್ತದೆ:

**"...ಸತ್ ಚಿತ್ ಶಕ್ತಿಯ ಆನಂದವಿರಲ್**
**ಬಿಡು ಏತಕೆ ನಿನಗೆ ವಿಷಾದ!"**

ಎಂದು ನಿರಾಳವಾಗುವುದನ್ನು, ಸಂಪೂರ್ಣ ಶರಣಾಗತಿಯನ್ನು ಪ್ರತಿಪಾದಿಸುತ್ತದೆ.

'ಹೊನ್ನ ಹೊತ್ತಾರೆ' ಸಂಕಲನದ ಇನ್ನೊಂದು ಕವನ "ಐಕ್ಯ"ವು ಮಾನವ ಜೀವಿತದ ಅನಿಶ್ಚಿತತೆಯನ್ನು ಕುರಿತು ಪ್ರಸ್ತಾಪಿಸುತ್ತಾ, ಬಾಳೆನ್ನುವುದು ಬೆಳದಿಂಗಳಿನಲ್ಲಿ ಹೊಳೆಯಲ್ಲಿ ಅನಿರ್ದಿಷ್ಟವಾಗಿ ತೇಲುತ್ತಿರುವ ಪುಟ್ಟ ದೋಣಿಯಂತೆನ್ನುವ ಹೋಲಿಕೆಯಲ್ಲಿ

ಹರಿಯುತ್ತದೆ. ಬೆಳದಿಂಗಳಿನಲ್ಲಿ ಎಲ್ಲವೂ ಅಸ್ಪಷ್ಟ. ಕಂಡೂ ಕಾಣದಂತಹ ಪರಿಸರದಲ್ಲಿ ಪರಿಚಿತವೂ ಅಪರಿಚಿತವಾಗುವ, ಅಪರಿಚಿತವು ಬೀಭತ್ಸವಾಗುವ ಸಾಧ್ಯತೆಗಳೇ ಅಧಿಕ. ಅಂತಹ 'ಬೆಳದಿಂಗಳಿನಲ್ಲಿ ಜೀವನದಿಯಲ್ಲಿ ದೋಣಿಯಾನ' – ಅಸ್ಪಷ್ಟತೆಗಳು, ಅನಿರ್ದಿಷ್ಟಗಳು ತುಂಬಿದ ಪಯಣವಿದೆಂದು ಬೇರೆ ಹೇಳಬೇಕಿಲ್ಲ. ಜೀವನದ ಅನೂಹ್ಯ ಗತಿಗೆ ಇದೊಂದು ಉತ್ತಮ ಅಭಿವ್ಯಕ್ತಿ.

**ನಿನ್ನಿಂಚರದ ಹೊನಲೊಳೆನ್ನೋಡವೋಡುತಿದೆ;**
**ಸುತ್ತಲೂ ಬೆಳ್ದಿಂಗಳೆಸೆಯುತಿಹುದು.**
**ತೇಲುತಿದೆ, ತೇಲುತಿದೆ; ತುದಿಯಿಲ್ಲ, ಮೊದಲಿಲ್ಲ;**
**ಎಲ್ಲಿಯೂ ನೀರವತೆ ಹಬ್ಬಿರುವುದು.**

**ಎಂದೇತಕೆಂದಾನು ದೋಣಿಯಡರಿದೆನರಿಯೆ;**
**ಯಾವೆಡೆಗೆ ತೇಲುತಿಹೆನೆಂಬುದರಿಯೆ!**
**ದೋಣಿಯಲಿ ನಾನೊಬ್ಬನೇ ಮಲಗಿಹೆನು, ದೇವ,**
**ಕಣ್ಮುಚ್ಚದರಿಲುಗಳ ನಿಟ್ಟಿಸಿಹೆನು.**

ಕವನದ ಕೊನೆಯ ಚರಣವು, ತನ್ನ ಒಂಟಿತನದಲ್ಲೂ ಅಜ್ಞಾತವಾಗಿ ತನ್ನೊಂದಿಗಿರುವ ದೈವದ ಮೇಲಿನ ನಂಬಿಕೆಯನ್ನು, ಎಂದಾದರೂ ಆ ಶಕ್ತಿಯೊಂದಿಗೆ ತನ್ನ ಐಕ್ಯವಾಗುವುದೆನ್ನುವ ವಿಶ್ವಾಸವನ್ನು, ಆದರೂ ಎಲ್ಲೋ ಅಡಗಿರುವ ಒಂದೆಳೆ ಸಂಶಯ ಭಾವದೊಂದಿಗೇ ಹೆಣೆಯುತ್ತದೆ:

**ಎಲ್ಲಾದರೂ ತೀರವೊಂದಿರುವುದಿಲ್ಲವೇನು?**
**ಅಲ್ಲಾದರೂ ನನ್ನ ಜೊತೆಯಿರುವುದಿಲ್ಲವೇನು?**
**ಎಂದಾದರೂ ನೀನು ಮೈದೋರದಿರುವೆಯೇನು?**
**ಎಂತಾದರೇಕರಿಯೆ, ಕೂಡುವೆವು ನಾನು ನೀನು?**

'ತೀರವೊಂದಿದೆ, ಅಲ್ಲಿಯಾದರೂ ನೀನು ನನ್ನ ಜೊತೆಯಿರುವೆ' ಎನ್ನುವುದು ಭೌತಿಕ ಬದುಕಿನ ಬಳಿಕದ ಪಾರಮಾರ್ಥಿಕ ಪಥವನ್ನು, ಅಲ್ಲಿ ಭಗವಂತನೊಂದಿಗೆ ನಮ್ಮ ಆತ್ಮದ ಮಿಲನವನ್ನು ಆಶಿಸುತ್ತದೆ; ಮತ್ತು 'ಹೇಗೇ ಆಗಲಿ, ನಾನು ನೀನು ಕೂಡುವೆವು' ಎನ್ನುವ ಭರವಸೆಯಿರುವುದನ್ನೂ ತೋರುತ್ತದೆ.

ಸುಪ್ರಸಿದ್ಧ ಬಂಗಾಳಿ ಕವಿ ರಬೀಂದ್ರನಾಥ ಟಾಗೋರರ ಕವಿತೆಗಳಲ್ಲಿ ಕೆಲವನ್ನು ಕುವೆಂಪು ಕನ್ನಡಕ್ಕೆ ಅನುವಾದಿಸಿದ್ದಾರೆ. ಅವುಗಳಲ್ಲೊಂದು ಹೀಗಿದೆ:

**ಒಂದು ಪ್ರಾರ್ಥನೆ (ಸಂಕಲನ: ಕುಟೀಚಕ)**
**ಓ ನನ್ನ ಜೀವನದ ಜೀವನವೆ, ನಿಚ್ಚಮುಂ**
**ನಿನ್ನ ಮೆಯ್ ಸೋಂಕಿರುವುದೆನ್ನನೆಂದು**
**ತಿಳಿದಿರುವೆನದಕಾಗಿ ನನ್ನೊಡಲನೇಗಳುಂ**
**ಮಿಂದು ನಿನಗಾಗಿ ಮಡಿಮೀಸಲಿಡುವೆ.**

'ನನ್ನ ಜೀವನದ ಜೀವನ' – ಸುಂದರವಾದ ನಿರೂಪಣೆ. ಈ ಜೀವನ ತನ್ನದು; ಅದರ ಜೀವನ– ಎಂದರೆ – ಗುರಿ, ಧ್ಯೇಯ, ಆಶಯ... ಎಲ್ಲವೂ ಆ ಅದ್ವಿತೀಯ ಶಕ್ತಿ. ಅದು ಎಂದೆಂದೂ (ನಿಚ್ಚಮುಂ) ತನ್ನನ್ನು ಸೋಕಿರುತ್ತದೆ ('ಬಿ ಇನ್ ಟಚ್' ಅನ್ನುವ ಪದಗುಚ್ಛವನ್ನು ಕುವೆಂಪು ಅಂದೇ ಮುಂಗಂಡಿದ್ದರು, 'ನಿನ್ನ ಮೆಯ್ ಸೋಂಕಿರುವುದೆನ್ನನು' – ಬೀಯಿಂಗ್ ಇನ್ ಟಚ್). ಅಂಥ "ಸೋಂಕು" (ಇಲ್ಲಿ ಈ ಪದ ಜಾಡ್ಯದ ಸೋಂಕು ಅಥವಾ ಕಲುಷತೆ ಎಂದರ್ಥವಲ್ಲ; ಬದಲಾಗಿ ನಿರಂತರ ಸಂಪರ್ಕ, ಛಾಯೆ) ಇರುವ ತನ್ನೊಡಲನ್ನು ಸದಾ 'ಮಿಂದು ಮಡಿಗೊಳಿಸಿ ಮೀಸಲಾಗಿಡುವೆ' ಎನ್ನುವಲ್ಲಿ ಈ ದೇಹವು ಆ ದೇವರಿಗೆ ಮೀಸಲಾಗಿರುವ ವಸ್ತು; ಇದು ಆ 'ಅವನ' ಸೊತ್ತು. ಅಂದರೆ, ಈ ದೇಹಕ್ಕೆ ನಾವು ವಾರಸುದಾರರಲ್ಲ, ಯಜಮಾನರಲ್ಲ. ಆ ದೇವನಿಗೆ ಮೀಸಲಾಗಿರುವುದನ್ನು ನೋಡಿಕೊಳ್ಳುವ ಜವಾಬ್ದಾರಿ ಮಾತ್ರ ನಮ್ಮದೆನ್ನುವ ಭಾವ. ನಮ್ಮ ದೇಹಕ್ಕೂ ಒಡೆಯರಲ್ಲದ ನಾವು ಇನ್ಯಾವುದರ ಒಡೆಯರಾಗಬಹುದು? ಯೋಚಿಸಬೇಕಾದ ಮಾತಿದು.

**ನನ್ನ ಚಿತ್ತದಿ ತಿಳಿವುದೀವಿಗೆಯ ಹೊತ್ತಿಸಿದ**
**ನನ್ನಿ ನೀನೆಂದರಿತೆನದಕಾಗಿ ನಾ**
**ನನ್ನ ಮನದಿಂದೆಲ್ಲ ಮಿಥ್ಯೆಯನು ಹೊರದೂಡಿ**
**ಸತ್ಯಾರ್ಚನೆಗೆ ಸಮೆವೆ ತೈಲಾರ್ಚಿಯಂ.**

**ನನ್ನೆದೆಯ ಗುಡಿಯೆ ನಿನ್ನಡಿಗೆ ಮಣೆಯೆಂದರಿತು**
**ಗುಡಿಸುವೆನು ಕೇಡನೊಲುಮೆಯನು ಮುಡಿಸಿ;**
**ನೀನುಸಿರಿಗುಸಿರೆಂದರಿತು ನಡೆವೆನೇಗಳುಂ**
**ನಿಚ್ಚ ಬಾಳೊಳು ನೀನೆ ಬಿಚ್ಚುವಂತೆ.**

**(ರವೀಂದ್ರರ 'ಗೀತಾಂಜಲಿ – ೪')**

ಕೆಲವು ಕವನಗಳಲ್ಲಿ ತನ್ನ ಅಂತರಾತ್ಮವನ್ನು ಕುರಿತಾಗಿ, ಅನಂತತೆಯ ಶಕ್ತಿಯ ಕುರಿತಾಗಿ ಗುರುವೆಂದೋ, ದೇವನೆಂದೋ, ತಾಯಿಯೆಂದೋ ಬರೆದಿರುವ ಕುವೆಂಪು ಇಲ್ಲಿ (ಬಹುಶಃ ಮೂಲದಂತೆಯೇ) ಯಾವುದೇ ಹೆಸರನ್ನಿಡದೆ ನಿರಾಕಾರ ತತ್ತ್ವದ,

ದೇವರ ಸರ್ವವ್ಯಾಪಕತೆಯ ಒತ್ತು ಪಡೆಯುತ್ತಾರೆ. ಮೌನವಾಗಿಯೇ ಅದನ್ನು ಬೆಂಬಲಿಸಿ ಸಮರ್ಥಿಸುತ್ತಾರೆ. 'ನನ್ನೆದೆಯ ಗುಡಿ ನಿನ್ನಡಿಗೆ ಮಣೆ'ಯೆನ್ನುವಾಗ ನೀನು ಬಂದಿಲ್ಲಿ ನೆಲೆಯಾಗಬೇಕೆನ್ನುವ, ಕುಳಿತಿರಬೇಕೆನ್ನುವ ಆಶಯ, ಹಂಬಲ ಮಾತ್ರವಲ್ಲ ನಂಬಿಕೆ ವ್ಯಕ್ತವಾಗುತ್ತದೆ. ಉಸಿರಿಗೇ ಉಸಿರಾಗುವ ಶಕ್ತಿ ಇರುವುದು ದೈವೀಶಕ್ತಿಗೆ ಮಾತ್ರ.

ತನ್ನನ್ನು ಕುವೆಂಪುರವರು ವನಸುಮಕ್ಕೆ ಹೋಲಿಸಿಕೊಂಡು, 'ಹರಿಯೇ; ತ್ವರೆಯಿಂದ ಬಂದಿದನು ಸ್ವೀಕರಿಸು' ಎನ್ನುವ ಕವನವು ಶರಣಾಗತಿಯ ಮನಸ್ಥಿತಿಯನ್ನು, ದಾಸ್ಯವನ್ನು ನಿಚ್ಚಳವಾಗಿ ತೋರುತ್ತದೆ.

**ವನಸುಮ (ಸಂಕಲನ: ಷೋಡಶಿ)**

**ಅರಳಿತೀ ವನಸುಮವು ನಿನಗಾಗಿ, ಹರಿಯೇ;**
**ತ್ವರೆಯಿಂದ ಬಂದಿದನು ಸ್ವೀಕರಿಸು, ದೊರೆಯೇ.**

**ಹಗಲಿರುಳು ಮಳೆಬಿಸಿಲುಗಳಲಿ ವಿಕಸಿತಮಾಯ್ತು,**
**ನಿಗಮಗೋಚರ, ನಿನ್ನಡಿಯ ಹೊಂದಲೆಂದು;**
**ಅಗಲಿತೈ ಸಕಲ ಸೌಖ್ಯಂಗಳನು ನಿನಗಾಗಿ;**
**ಖಗರಾಜಗಮನ, ಒಲಿದಿದನು ನೀಂ ಧರಿಸು!**

**ಮಗಮಗಿಪ ವಾಸನೆಯು ಇದಕಿಲ್ಲದಿರಬಹುದು,**
**ಜಗವ ಮೋಹಿಸುವ ರೂಪಿಲ್ಲದಿರಬಹುದು;**
**ಸೊಗಯಿಪಾ ಪೆರ್ಮೆಯೊಂದಿದಕಿಲ್ಲದಾದೊಡೆಯು,**
**ನಗಧರನೆ, ಕರುಣೆಯಿಂದಿದನು ನೀಂ ಧರಿಸು!**

**ಸಂಪಗೆಯ ಸೊಂಪಿಲ್ಲ, ಕೇತಕಿಯ ಕಂಪಿಲ್ಲ,**
**ಪೆಂಪಿನಾ ಪಾದರಿಯ ಮಾಧುರ್ಯಮಿಲ್ಲ!**
**ಇಂಪುಬೆಡಗಿನಿತಿಲ್ಲದಾದೊಡೆಯು, ಮಾಧವನೆ,**
**ನೀಂ ಪೊರೆದಿದನು ಕೊರಳ ಹಾರದಲಿ ಧರಿಸು!**

ದಾಸರ ಪದಗಳಂತಹ ರಚನೆಯುಳ್ಳ ಈ ಕವನವು ಹರಿಯೆನ್ನುವ ಹೆಸರಿನ ಅಲಂಕಾರಪ್ರಿಯ ವಿಷ್ಣುವಿಗೆ ತನ್ನನ್ನು ಸಮರ್ಪಿಸಿಕೊಳ್ಳುವ ಭಕ್ತಮನೋಭಾವವನ್ನು, ಆತ್ಮನಿವೇದನವನ್ನು ಬಿಂಬಿಸುತ್ತದೆ. ದ್ವಿತೀಯಾಕ್ಷರ ಪ್ರಾಸ, ಹರಿಯ ವಿವಿಧ ನಾಮನಿರ್ದೇಶ, ಅರ್ಪಣಾಭಾವಗಳಿಂದ ದಾಸರ ಪದಗಳಂತೆಯೇ ಭಾಸವಾಗುತ್ತದೆ.

ಈ ಕವನದಲ್ಲಿ ಬಿಂಬಿತವಾಗಿರುವ ದಾಸ್ಯಭಾವವು ಕುವೆಂಪು ಅವರ ಸ್ಥಾಯೀಭಾವ (ಭಕ್ತಿಪಂಥದ ವಚನಕಾರರು ಮತ್ತು ದಾಸರುಗಳಂತೆ) ಎಂದೂ ಆಗಿರಲೇಯಿಲ್ಲ. ಅವರದು ಯಾವತ್ತಿಗೂ ವೈಚಾರಿಕ ಭಕ್ತಿ. ಅಂಥಾದ್ದರಲ್ಲೂ ಈ ಕವನದ ಮೂಲಕ ತನ್ನನ್ನು ತಾನು ಒಂದು ಸರ್ವೇಸಾಮಾನ್ಯವಾದ ಹೂವಿಗೆ, ಅದರಲ್ಲೂ ಮರೆಯಲ್ಲಿರುವ ವನಸುಮಕ್ಕೆ ಹೋಲಿಸಿಕೊಂಡು ಶ್ರೀಹರಿಗೆ ಸಮರ್ಪಿಸಿಕೊಳ್ಳುವ ಅರ್ಪಣಾಭಾವ ಅವರ ಸ್ವಭಾವಕ್ಕೆ ಅಪರೂಪವಾದುದು.

ಮುಂದಿನ ಕವನವು ಇನ್ನೊಂದು ಅಪರೂಪದ ರಚನೆ. “ನಾ ನಂಬಿದೆ” ಎಂದೇ ಶುರುವಾಗುವ ಸಾಲು ಮುಂದರಿಯುತ್ತ, ದೇವರ ಬಗ್ಗೆ ಸಾರ್ವತ್ರಿಕವಾಗಿ ಇರುವ ವಿಚಾರ-ವಿಶ್ಲೇಷಣೆಗಳನ್ನು, ನಂಬಿಕೆ-ಆಚಾರ-ಪದ್ಧತಿಗಳನ್ನು, ಮುಗ್ಧ ಮನಸಿನ ಮೇಲೆ ಅವೆಲ್ಲದರ ಪರಿಣಾಮಗಳನ್ನು ತೆರೆದಿಡುತ್ತದೆ. ಎಲ್ಲರೂ ಕೇಳಿ-ಹೇಳಿ-ನಂಬಿಕೊಂಡು ಬಂದಿರುವ ‘ದೇವ’ರ ಸರ್ವಸಿದ್ಧರೂಪವನ್ನು ಸರಿಸಿ, ಸರ್ವಶುದ್ಧ ಪ್ರೇಮರೂಪಿಯಾಗಿ ಕಡೆದಿರಿಸುತ್ತಾರೆ. ಮತ್ತು, ಅದೇ ರೀತಿಯ ಪ್ರೇಮದಿಂದ ತಬ್ಬಿ ಆರಾಧಿಸುತ್ತಾರೆ. ಎಲ್ಲರೂ ಒಪ್ಪಿಕೊಂಡ ರೂಪದ ಹೊರತಾಗಿಯೂ ದೇವರಿದ್ದಾನೆ ಮತ್ತು ಆತ ಸರ್ವ ಆಪ್ತನಿದ್ದಾನೆ. ಅತ್ಯಂತ ಶುದ್ಧಪ್ರೀತಿಯ ಭಕ್ತಿಯಿದು; ರಾಧೆಯ ಭಕ್ತಿ. ಒಪ್ಪಿಕೊಳ್ಳುವ, ಅಪ್ಪಿಕೊಳ್ಳುವ ಭಕ್ತಿ.

**ನಾ ನಂಬಿದೆ (ಸಂಕಲನ: ಅಗ್ನಿಹಂಸ)**

**ನಾ ನಂಬಿದೆ!–**
**ಹೇಳಿದರು ಅವರೆಲ್ಲ ನೀನು ಬಿರಿ ದೊರೆಯೆಂದು.**
**ನಾ ನಂಬಿದೆ.**

**ಮಿಂಚಿಹುದು ಕಣ್ಣಲ್ಲಿ, ಗುಡುಗಿಹುದು ದನಿಯಲ್ಲಿ,**
**ಕಾರ್ಮುಗಿಲು ಮೈಯಲ್ಲಿ; ನೀ ರುದ್ರನೆಂದು!**
**ಭಯ ಭಕ್ತಿ ಬೇಕೆಂದು, ಕೈ ಮುಗಿಯಬೇಕೆಂದು;**
**ನೀ ಬಂದ ಕಾಲದಲಿ ಕಾಲ್ಗೆರಗು ಎಂದು.**

**ನಾ ಕಾದು ನಿಂತಿದ್ದೆ, ಎದೆ ನಡುಗಿ ಹೆದರಿದ್ದೆ,**
**ಏನಂತೊ ಎಂದು;**
**ನೀ ಬಂದೆ ದೂರದಲಿ, ಸುಂದರಾಕಾರದಲಿ;**
**ಶಾರದಾಕಾಶದಲಿ, ಬೆಳ್ಮುಗಿಲ ವೇಷದಲಿ.**
**ಚಂದ್ರಿಕೆಯ ಸೌಂದರ್ಯ, ಚೈತ್ರ ಮಾಧುರ್ಯ!**

**ಮಿಂಚಿಲ್ಲ, ಗುಡುಗಿಲ್ಲ, ಕಾರ್ಮುಗಿಲು ಇಲ್ಲ.**
**ನೋಡಿದರೆ ದೊರೆಯಲ್ಲ! ನೀನೆನ್ನ ನಲ್ಲ!**

ಇಲ್ಲಿ, 'ನೀನೆನ್ನ ನಲ್ಲ' ಅನ್ನುವಲ್ಲಿನ ಅನುರಾಗ ಭಾವ ದೇವ–ಜೀವರ ಅವಿನಾಭಾವ ಸಂಬಂಧದ ಅಭಿವ್ಯಕ್ತಿ. ದಾಸರ ಪದಗಳಲ್ಲಿಯೂ ಇಂತಹ ಅನುರಾಗ ಅಭಿವ್ಯಕ್ತಿಯನ್ನು ಕಾಣಬಹುದು. ದೇವರನ್ನು ಏಕವಚನದಲ್ಲಿಯೂ ಬಂಧುವಾಗಿಯೂ ಅತ್ಯಾಪ್ತ ಸ್ನೇಹಿತನಂತೆಯೂ ಸಂಬೋಧಿಸುವಂತೆಯೇ ನಲ್ಲನಾಗಿಯೂ ಪತಿಯಂತೆಯೂ ಚಿತ್ರೀಕರಿಸುವುದು ಪರಂಪರಾನುಗತವಾಗಿ ನಡೆದುಬಂದಿರುವುದನ್ನು ಕುವೆಂಪು ಒಪ್ಪಿಕೊಂಡಂತಿದೆ. ವಿಶೇಷವೆಂದರೆ, ಯಾವುದೇ ಭಕ್ತಿ ಸಾಹಿತ್ಯದಲ್ಲಿಯೂ ದೇವರನ್ನು ಪತ್ನಿ (ನಲ್ಲೆ)ಯಾಗಿ ತನ್ನನ್ನು ಪತಿಯಾಗಿ (ನಲ್ಲನಾಗಿ) ಚಿತ್ರೀಕರಿಸಿರುವುದು ಅಪರೂಪ. ಬಹುಶಃ ನಾಗರಿಕತೆಯ ಉದ್ದಕ್ಕೂ ಪುರುಷ ಪಾರಮ್ಯವಿರುವುದನ್ನೂ, ಮನುಜನು ದೇವನೆಂಬ ಪರಮಪುರುಷನ ಪಾರಮ್ಯವನ್ನು ಒಪ್ಪಿಕೊಂಡಿರುವುದನ್ನೂ ಇದು ಅಯಾಚಿತವಾಗಿ ಎತ್ತಿತೋರುತ್ತದೆ.

**ಇದೇ ಕವಿತೆ ಮುಂದುವರಿದು:**

**ಕೈಮುಗಿಯಲಿಲ್ಲ ನಾ, ಕಾಲ್ಗೆರಗಲಿಲ್ಲ ನಾ;**
**ಬಿಗಿಯಪ್ಪಿ ಮುತ್ತಿಟ್ಟು ನಾ ನಂಬಿದೆ!**
**ಮೈ ಮರೆತು ಮುತ್ತಿಟ್ಟು ನಾ ನಂಬಿದೆ!**

ಹೀಗೆ ಕೊನೆಯಾಗುವ ಕವನವು, ಆತ್ಮೀಯ ಬಾಂಧವ್ಯದ ಸಖ್ಯ–ಸಹಯೋಗದ ಶೃಂಗಾರಾತ್ಮಕ ಸಂಯೋಗವನ್ನು ಮೆರೆಯುತ್ತದೆ. ನಲ್ಲ–ನಲ್ಲೆಯ ಅನುರಕ್ತಿ ಸಂಪೂರ್ಣಗೊಳ್ಳುವುದು ಮಿಲನದಲ್ಲಿಯೇ. ಅಂತೆಯೇ, ದೇವ–ಜೀವರ ಅನುರಕ್ತಿಯೂ ಎಂಬುದು ಕವಿಹೃದಯದ ಅಂಬೋಣವಿರಬೇಕು.

'ಶರಣು' ಎನುವ ಈ ಪದ್ಯವು ಸಹಜವಾಗಿಯೇ ಸಾಧಕನಿಗೆ ಒದಗುವ ಗೊಂದಲಗಳನ್ನು ಸಂಶಯಗಳನ್ನು ಮುಂದಿಟ್ಟುಕೊಂಡು, ನೇರ ಆ ದೇವನಿಂದಲೇ ಮಾರ್ಗದರ್ಶನವನ್ನು ಬಯಸುತ್ತದೆ. ದೇವ–ಮಾನವರ ನಡುವೆ ಸಂವಹನ ಎಂದಿಗೂ ಸಾಧ್ಯ. ಅದಕ್ಕಾಗಿ ಯಾವ ಮಧ್ಯವರ್ತಿಯ ಅವಶ್ಯಕತೆಯಿಲ್ಲವೆಂದು ಪ್ರತಿಪಾದಿಸುವ ಕುವೆಂಪು ಅದರಂತೆಯೇ ಬಾಳಿದವರು. ಸ್ವತಃ ಉತ್ತಮ ಮಾರ್ಗದರ್ಶಕರಾದವರು.

**ಶರಣು (ಸಂಕಲನ: ಅಗ್ನಿಹಂಸ)**

**ಇದುವರೆಗೆ ನೀನೆನ್ನ ಕೈಹಿಡಿದು ನಡೆಸಿರುವೆ,**
**ಇನ್ನಾದರೂ ನನ್ನ ಕೈಬಿಡದಿರು.**

ಅಂದಿನಂತೆಯೆ ಇಂದು ನಾನೊಂದು ಶಿಶು ಎಂದು
ಎಂದಿಗೂ ಕೈಬಿಡದೆ ಸಲಹೈ, ಗುರೂ!

ವೈರಾಗ್ಯವೊಂದು ಕಡೆ ತನ್ನ ಮಹಿಮೆಯ ತೋರಿ,
ಕೈಚಾಚಿ ಕರೆಯುತ್ತಿದೆ;
ಸೌಂದರ್ಯವೊಂದು ಕಡೆ ತನ್ನ ಮೋಹವ ಬೀರಿ
ಮೈಚಾಚಿ ಸೆಳೆಯುತ್ತಿದೆ.
ಒಂದುಕಡೆ ಸ್ವಾತಂತ್ರ್ಯ ಒಂದುಕಡೆ ಮಾಧುರ್ಯ,
ನಡುವಿಹೆನು ಬಟ್ಟೆಗೆಟ್ಟು.
ಮುಕ್ತಿಯನ್ನೊಪ್ಪಲೋ? ಮಾಯೆಯನ್ನಪ್ಪಲೋ?
ತಿಳಿದ ನೀನೆನ್ನನಟ್ಟು!

ಬಹಳಷ್ಟು ಸೌಮ್ಯವ್ಯಕ್ತಿತ್ವದವರಾಗಿದ್ದ ಕುವೆಂಪು, ತನ್ನೊಳಗನ್ನು ದೃಢಗೊಳಿಸೆಂದು ಕೇಳಿಕೊಳ್ಳುವ ಮುಂದಿನ ಕವನವು ವಿಶೇಷತರವಾಗಿದೆ. ನಮ್ಮೆದುರು ನಡೆಯುವ ಅನ್ಯಾಯ, ಅನಾಚಾರಗಳನ್ನು ಖಂಡಿಸಿ ದನಿಯೆತ್ತಲು ನಮ್ಮೊಳಗಿಂದ ದೃಢತೆಯಿರಬೇಕು. ಸುತ್ತಲಿರುವ ಅಲ್ಪಜ್ಞರ ಸಣ್ಣಬುದ್ಧಿಯ ನಡುವೆಯೂ ನಮ್ಮತನವನ್ನು ಉಳಿಸಿಕೊಳ್ಳಲು ಗಟ್ಟಿತನವಿರಬೇಕು. ಆಂತರ್ಯದ ದನಿಯನ್ನಾಲಿಸಿ ಅದರಂತೆ ನಡೆಯಲು, ಲೌಕಿಕದ ಆಮಿಷಗಳನ್ನು ಮೀರಿ ಇಂದ್ರಿಯನಿಗ್ರಹ ಸಾಧಿಸಿ ಸನ್ನಡತೆಯಲ್ಲಿ ಸಾಗಲು ಆತ್ಮಬಲವಿರಬೇಕು. ಯಾವುದೇ ಆಮಿಷಕ್ಕೆ ಬಲಿಯಾಗದಂತೆ, ಹೇಡಿತನ (ಕ್ಲೈಬ್ಯ = ನಪುಂಸಕತ್ವ, ಪರಿಸ್ಥಿತಿಗೆ ಅಂಜಿಕೊಳ್ಳುವ ಹೇಡಿತನ) ಇರದಂತೆ ಸರ್ವಶಕ್ತನಲ್ಲಿ ಕೇಳಿಕೊಳ್ಳುವ ಈ ಕವನದಲ್ಲಿ ಆರ್ತತೆಯಿಲ್ಲ; ಆತ್ಮಸ್ಥೈರ್ಯ ಉದ್ದೀಪಿಸು ಎನುವಲ್ಲೂ ವಿಶ್ವಾಸವಿದೆ.

### ಕ್ಲೈಬ್ಯವನು ಸಂಹರಿಸೊ (ಸಂಕಲನ: ಕೋಗಿಲೆ ಮತ್ತು ಸೋವಿಯಟ್ ರಷ್ಯಾ)

ಕ್ಲೈಬ್ಯವನು ಸಂಹರಿಸೊ, ದೌರ್ಬಲ್ಯವನು ದಹಿಸೊ,
ಹೃದಯಕ್ಕೆ ಪೌರುಷವ ದಯಪಾಲಿಸೊ!
ಮನವು ಸರಿ ಎಂದುದನು ಎದೆಯು ಅನುಸರಿಪಂತೆ
ದೃಢತೆಯಾ ನಡತೆಯನು ನನ್ನದೆನಿಸೊ!

ರಾಗಸಾಗರದಲ್ಲಿ ಭೋಗಾಭಿಲಾಷೆಗಳ
ಭೈರವ ತರಂಗಗಳು ಅಪ್ಪಳಿಸಲು,
ಲೋಕಮೋಹಕ ಇಂದ್ರಜಾಲ ಸಂಮ್ಮೋಹನಕೆ
ಇಂದ್ರಿಯ ವಿಹಂಗಗಳು ಮನವಳುಕಲು,

ಕ್ಲೈಬ್ಯವನು ಸಂಹರಿಸೊ, ದೌರ್ಬಲ್ಯವನು ದಹಿಸೊ,
ಹೃದಯಕ್ಕೆ ಪೌರುಷವ ದಯಪಾಲಿಸೊ!
ಮನವು ಸರಿ ಎಂದುದನು ಎದೆಯು ಅನುಸರಿಪಂತೆ
ದೃಢತೆಯಾ ನಡತೆಯನು ನನ್ನದೆನಿಸೊ!

ದೈವತ್ವದ ಹೊಗಳುಭಟ್ಟಂಗಿ ಕವನವನ್ನೂ ಕುವೆಂಪು ಬರೆದಿರುವುದು ಕುತೂಹಲಕರವಾಗಿದೆ.

ಶ್ರೀರಾಮಚಂದ್ರನ ಕುರಿತಾಗಿರುವ ಈ ಕವನ, ಮರ್ಯಾದಾ ಪುರುಷೋತ್ತಮ ಶ್ರೀರಾಮಚಂದ್ರನ ಹಲವು ನಾಮವಿಶೇಷಗಳನ್ನು ಗುಣವಿಶೇಷಗಳನ್ನೂ ಉಲ್ಲೇಖಿಸುವ, ಜಯಜಯವೆನ್ನುವ ಪರಿ ಆಸ್ಥಾನ ಕವಿಗಳನ್ನು ನೆನಪಿಸುತ್ತದೆ:

**ಶ್ರೀರಾಮನವಮಿ (ಸಂಕಲನ: ಕುಟೀಚಕ)**

ಸ್ವಾಗತಂ ಕೌಸಲೆಯ ಕಂದಂಗೆ!
ಜಯಮಕ್ಕೆ ಶ್ರೀರಾಮಚಂದ್ರಂಗೆ!

೧.
ಸ್ವಾಗತಂ ಮುನಿವರರ ಶಿಷ್ಯಂಗೆ,
ಜಯಮಕ್ಕೆ ಮುನಿಸತಿಯ ಪೊರೆದಂಗೆ!
ಸ್ವಾಗತಂ ಹರಧನುವ ಮುರಿದಂಗೆ,
ಜಯಮಕ್ಕೆ ಜಾನಕಿಯನೊಲಿದಂಗೆ!

೨.
ಮಂಗಳಂ ಗಿರಿವನ ಪ್ರಿಯಮೂರ್ತಿಗೆ,
ಮಂಗಳಂ ರವಿವಂಶ ಸತ್ಕೀರ್ತಿಗೆ!
ಮಂಗಳಂ ತ್ಯಾಗೀಶಶೀಲಂಗೆ,
ಮಂಗಳಂ ಯೋಗೀಶಪಾಲಂಗೆ!

೩.
ಸ್ವಾಗತಂ ಮೈಥಿಲೀ ಲೋಲಂಗೆ,
ಜಯಮಕ್ಕೆ ದಶಕಂಠ ಕಾಲಂಗೆ!
ಸ್ವಾಗತಂ ಸತ್ಯಾವತಾರಂಗೆ,
ಜಯಮಕ್ಕೆ ನಿತ್ಯಾವತಾರಂಗೆ!

೪.

ಸ್ವಾಗತಂ ದಶರಥ ಕುಮಾರಂಗೆ,
ಜಯಮಕ್ಕೆ ಜಗದೋದ್ಧಾರಂಗೆ!
ಮಂಗಳಂ ರಘುರಾಮಚಂದ್ರಂಗೆ,
ಮಂಗಳಂ ಶ್ರೀರಾಮಚಂದ್ರಂಗೆ!

೫.

ಗೆಲಮಕ್ಕೆ ತಿರೆಗಿಂದು ಬಂದಂಗೆ,
ಗೆಲಮಕ್ಕೆ ಕೌಸಲೆಯ ಕಂದಂಗೆ!
ಗೆಲಮಕ್ಕೆ ನಮ್ಮೆದೆಗೆ ಬಂದಂಗೆ,
ಗೆಲಮಕ್ಕೆ ನಮ್ಮಿದಿರೆ ನಿಂದಂಗೆ!

೬.

ಮಂಗಳಂ ಕತ್ತಲೆಯ ಕೊಂದಂಗೆ,
ಮಂಗಳಂ ಮುಂಬೆಳಕ ತಂದಂಗೆ!
ಮಂಗಳಂ ಮನೆಮನೆ ಅಯೋಧ್ಯಂಗೆ,
ಮಂಗಳಂ ಸಹೃದಯ ಸುವೇದ್ಯಂಗೆ!

ಶ್ರೀರಾಮನವಮಿಯ ಸಂದರ್ಭಗಳಲ್ಲಿ, ಹಬ್ಬದ ದಿನಗಳಲ್ಲಿ 'ಉದಯರವಿ' ಮನೆಯಲ್ಲಿ ಮಕ್ಕಳು, ಅದರಲ್ಲೂ ಇಂದುಕಲಾ ತಾರಿಣಿಯರು, ಈ ಹಾಡನ್ನು ದೇವರಮನೆಯಲ್ಲಿ ಹಾಡುತ್ತಿದ್ದರೆಂದು ತಾರಿಣಿ ತಮ್ಮ ನೆನಪೊತ್ತಗೆಯಲ್ಲಿ ದಾಖಲಿಸಿದ್ದಾರೆ.

*

**ಪರಿಸಮಾಪ್ತಿ:**

'ಶ್ರೀ ರಾಮಾಯಣ ದರ್ಶನಂ'ನಂಥ ದಾರ್ಶನಿಕ ನೋಟವುಳ್ಳ ಮಹಾಕಾವ್ಯದ ಕರ್ತೃ, ವೈಚಾರಿಕವಾಗಿ ಅನೇಕಾನೇಕ ಕವನಗಳನ್ನು ರಚಿಸಿದ ರಾಷ್ಟ್ರಕವಿ, 'ವಿಶ್ವಮಾನವ ಸಂದೇಶ'ದಂಥ ಅತ್ಯುತ್ತಮ ವಿಚಾರವನ್ನು ಜಗತ್ತಿಗೆ ಸಾರುವ, ಹರಡುವ, ಲೋಕವೆಲ್ಲ 'ಮನುಜಮತ' ಒಂದೇ ಆಗಿರಬೇಕೆಂದು ('ಮನುಜ ಮತ ವಿಶ್ವ ಪಥ') ಆಶಿಸುತ್ತಿದ್ದ ಮಹಾನ್ ಚೇತನ ಕುವೆಂಪು. ಇವರ ಒಂದು ಸಾವಿರದ ನೂರಕ್ಕೂ ಮೇಲ್ಪಟ್ಟ ಬಿಡಿ ಕವನಗಳಲ್ಲಿ ನೂರಾರು ಕವನಗಳು ಭಕ್ತಿಮಾರ್ಗದಲ್ಲಿವೆ. ಅವುಗಳಲ್ಲಿಯೂ ಕೆಲವೇ ಕೆಲವನ್ನು ಈ ಲೇಖನದಲ್ಲಿ ಉಲ್ಲೇಖಿಸಲಾಗಿದೆಯಷ್ಟೇ.

ರಸಋಷಿ ಕುವೆಂಪು ಅವರ ಸಾಹಿತ್ಯವು ಮಹಾಸಾಗರದಂತೆ. ಕಡಲ ತಡಿಯಲ್ಲಿ ಕುಳಿತು ಅಲೆಗಳನ್ನು ಲೆಕ್ಕಮಾಡುವುದೆಷ್ಟು ಪ್ರಯಾಸಕರವೋ ಅಷ್ಟೇ ಪ್ರಯಾಸಕರ ಕುವೆಂಪು ಕಾವ್ಯ ಶರಧಿಯಲ್ಲಿ ಈಜುವ ಯತ್ನ. ಅಂಥಾದ್ದರಲ್ಲಿಯೂ ಈ ಭಾವವಾರಿಧಿಯಲ್ಲಿ ಮುಳುಗಿ ಅಪರೂಪದ ಶಂಖ-ಮುತ್ತು-ಹವಳಗಳನ್ನು ಆರಿಸಿ ತರುವುದು ಜಲಾಂತರ್ಗಾಮಿ ಪಯಣದಂತಾಯ್ತು. ಅಷ್ಟಾದರೂ, ಕವಿ ಡುಂಡಿರಾಜರ ಹನಿಯೊಂದರ ತುಣುಕಿನಂತೆ: "ಹೆಕ್ಕಿದ್ದು ಮುತ್ತು, ಉಳಿದದ್ದು ಸಾಗರ". ಕುವೆಂಪು ಕಾವ್ಯಸಾಗರದಲ್ಲಿ ನನ್ನ ಮಿತಿಯ ಸೋಸುಜರಡಿಯಲ್ಲಿ ಸಿಲುಕಿ ಉಳಿದವು ಕೆಲವೇ ಕೆಲವು ಅಪರೂಪದ ಮುತ್ತುಗಳು. ಅಗಾಧ ಸಾಗರದ ಈಜು ಸಮರ್ಥ ಸಶಕ್ತ ಓದುಗ ಸಹೃದಯರಿಗೆ ಒದಗಿ ಬರಲಿ.

*

**ಆಕರ-ಆಧಾರ:**


೧. ಕುವೆಂಪು ಸಮಗ್ರಕಾವ್ಯ - ಸಂಪುಟ ೧ ಮತ್ತು ೨ (ಮೊ.ಮು.: ೨೦೦೦); ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೨. ನೆನಪಿನ ದೋಣಿಯಲ್ಲಿ (೧೯೮೦); ಕುವೆಂಪು; ಉದಯರವಿ ಪ್ರಕಾಶನ, ಮೈಸೂರು.

೩. ಮಗಳು ಕಂಡ ಕುವೆಂಪು (ಮೊ.ಮು.:೨೦೦೬); ತಾರಿಣಿ ಚಿದಾನಂದ; ಪುಸ್ತಕ ಪ್ರಕಾಶನ, ಮೈಸೂರು.

೪. ಕುವೆಂಪು ಕಾವ್ಯ - ಸಂಸ್ಕೃತಿ ಚರಿತ್ರೆಯ ರೂಪಕ (೨೦೦೪); ನರಹಳ್ಳಿ ಬಾಲಸುಬ್ರಹ್ಮಣ್ಯ; ಅಂಕಿತ ಪುಸ್ತಕ, ಬೆಂಗಳೂರು.




# ಬೇಂದ್ರೆಯವರು ಕಂಡ ಅಭಂಗ ವಿಟ್ಠಲ

-ಪ್ರಕಾಶ್ ನಾಯಕ್

**ಭ**ಕ್ತಿ ಸಾಹಿತ್ಯದಲ್ಲಿ ದಾಸರ ಪದಗಳ ಮತ್ತು ಶರಣರ ವಚನಗಳ ಸ್ಥಾನ ಅನನ್ಯ. ಪುರಂದರದಾಸರು, ಕನಕದಾಸರು, ವಿಜಯದಾಸರೇ ಮೊದಲಾಗಿ ಇಪ್ಪತ್ತನೆಯ ಶತಮಾನದಲ್ಲಿ ಆರು ಸಂಪುಟಗಳ "ಹರಿಕಥಾಮೃತ ಸಿಂಧು" ಎಂಬ ಬೃಹತ್ ಗ್ರಂಥ ರಚನೆಮಾಡಿದ ಭದ್ರಗಿರಿ ಅಚ್ಯುತದಾಸರವರೆಗಿನ ಭಕ್ತಿಸಾಹಿತ್ಯದ ಪರಂಪರೆಯನ್ನೇ ಕಾಣುತ್ತೇವೆ. ಕರ್ನಾಟಕ ಸಂಗೀತಕ್ಕೂ ಆಸರೆಯಾಗುವಷ್ಟು ಗೇಯುತೆ, ಜನಸಾಮಾನ್ಯರಿಗೆಟಕುವ ಭಾಷೆ-ಉಪಮೆಗಳು ದಾಸ ಸಾಹಿತ್ಯದ ಹೊರಪರಿಚಯವಾದರೆ, ವೇದ-ಉಪನಿಷತ್ತುಗಳ ಅದರಲ್ಲೂ ದ್ವೈತ ಮತದ ಆಶಯ ಅದರ ಆಂತರ್ಯವಾಗಿದೆ. ವಚನ ಸಾಹಿತ್ಯ ಇದಕ್ಕೆ ಭಿನ್ನವಾಗಿ ವೇದೋಪನಿಷತ್ತುಗಳ ಶುಷ್ಕತೆಯನ್ನು ತನ್ನದೇ ಛಂದಸ್ಸಿನಲ್ಲಿ ಜನರಿಗೆ ಇನ್ನೂ ಹತ್ತಿರವೆನಿಸುವ ಆಡುಮಾತಿನಲ್ಲಿ ಒಂದು ಆಂದೋಲನವೆನ್ನುವಂತೆ ಪ್ರಸರಿಸಿತು, ವ್ಯಕ್ತಿಯ ಅಂತರಂಗ ಶುದ್ಧಿಯ ಬಗ್ಗೆ ಹೆಚ್ಚು ಗಮನಹರಿಸಿತು, ಅನುಭಾವದ ಹೊಳೆ ಹರಿಸಿತು. ಮುಖ್ಯವಾಹಿನಿಯ ಕವಿಗಳೂ ಭಕ್ತಿಯಿಂದ ದೂರ ಉಳಿಯಲಿಲ್ಲ. ಕುಮಾರವ್ಯಾಸನಂತಹ ಮಹಾಕವಿ "ಕೃಷ್ಣ ಮೆಚ್ಚಲಿಕೆ" ಎಂದು "ಕರ್ಣಾಟ ಭಾರತ ಕಥಾಮಂಜರಿ"ಯ ರಚನೆ ಮಾಡಿದ, ರಾಘವಾಂಕ ಹರಿಶ್ಚಂದ್ರರಾಜನ ಕುರಿತು ಕಾವ್ಯ ರಚಿಸಿ, ನರಸ್ತುತಿ ಮಾಡಿದ ತಪ್ಪಿಗೆ ಪಶ್ಚಾತ್ತಾಪಪಟ್ಟು, ಪ್ರಾಯಶ್ಚಿತ್ತವೆನ್ನುವಂತೆ ಶೈವಕೃತಿಪಂಚಕಗಳನ್ನು ರಚಿಸಿದ ಹಿನ್ನೆಲೆ ಕನ್ನಡ ಸಾಹಿತ್ಯಕ್ಕಿದೆ. ನವೋದಯದ ಕಾಲದಲ್ಲಿ ವೈಚಾರಿಕತೆ, ಪಾಶ್ಚಾತ್ಯ ಸಾಹಿತ್ಯದ ಪ್ರಭಾವ, ಮತ್ತು ಬದಲಾದ ಸಾಮಾಜಿಕ ಪರಿಸರ ಸಾಹಿತ್ಯವನ್ನು ಸೆಕ್ಯೂಲರ್ ಆಗಿಸಿ, ಜೀವನ ಪ್ರೀತಿ, ಸಮಾನತೆ, ದೇಶ ಭಕ್ತಿ, ವ್ಯಕ್ತಿ ಸ್ವಾತಂತ್ರ್ಯ, ಸಾಮಾಜಿಕ ಕಳಕಳಿಯ ಕಡೆಗೆ ಕರೆದೊಯ್ದವು. ನವೋದಯದ ಈ ಪ್ರವಾಹದ ನಡುವೆ ಬೇಂದ್ರೆಯವರ ಅನುಭಾವ ಮತ್ತು ಭಕ್ತಿಯ ಸಮರಸ ಸಾಧಿಸುವ ಕವನಗಳು ಭಕ್ತಿ ಚಳುವಳಿಯ ಎಲ್ಲ ಗುಣಗಳನ್ನು ಹೊತ್ತು ನಿಂತ ನೋವಾನ ದೋಣಿಯಂತೆ ಕಾಣುತ್ತವೆ, ನವೋದಯದ ಸಾಮಾಜಿಕ ಕಳಕಳಿಯ ಜೊತೆಜೊತೆಯಲ್ಲೇ

ವೇದೋಪನಿಷತ್ತುಗಳ ಆಶಯವನ್ನು ಆಡುಮಾತಿನಲ್ಲಿ, ಅನುಭಾವಕ್ಕೆ ನಾದದ ಸೊಬಗು ಬೆರೆಸಿ ಭಕ್ತಿಯನ್ನು ಉಣಬಡಿಸುತ್ತವೆ.

ಭಕ್ತಿ ಅಂದರೆ ಶರಣಾಗತಿ, "ಅನ್ಯಥಾ ಶರಣಂ ನಾಸ್ತಿ" ಎನ್ನುವ ಸರ್ವ ಸಮರ್ಪಣಾಭಾವ. ಸಮಾನರಲ್ಲಿ ಪ್ರೀತಿ–ಸ್ನೇಹ, ಚಿಕ್ಕವರೊಡನೆ ವಾತ್ಸಲ್ಯದಂತೆ ದೊಡ್ಡವರಲ್ಲಿ ಭಕ್ತಿ. ಅಲ್ಲಿ ತರ್ಕವಿಮರ್ಶೆಗಳಿಗೆ ಜಾಗವಿಲ್ಲ. ಜ್ಞಾನದಿಂದ ಅಹಮಿಕೆ ಅಳಿಯಬೇಕು, ಅಥವಾ ಅಹಂ ಅಂದರೆ ಏನು ಎಂದು ತಿಳಿಯಬೇಕು. ತಿಳಿಯುವಿಕೆಯ ಗಡಿಯಾಚೆಯ ಆಕಾಶದಲ್ಲಿನ ಸಂಚಲನ ಭಕ್ತಿ. ಉಪಗ್ರಹವನ್ನು ಅಂತರಿಕ್ಷಕ್ಕೆ ವಿಮೋಚನಾವೇಗದಿಂದ ಹೊತ್ತೊಯ್ಯುವ ರಾಕೆಟ್‌ಗಳು, ಮುಂದಿನ ಸಂಚಲನಕ್ಕೆ ವ್ಯರ್ಥಭಾರವಾಗದೇ ತಾವೇ ಉರಿದುಬೀಳುವಂತೆ, ಸಾಧನೆಯ ಪಥದಲ್ಲಿ ಸಾಗಲು ಜ್ಞಾನ ಭಕ್ತಿಗೆ ಅನುವು ಮಾಡಿಕೊಡಬೇಕು. ಜ್ಞಾನವೇನಿದ್ದರೂ ವ್ಯರ್ಥಮೋಹದ ಸೆಳೆತವನ್ನು ಮೀರಿ, ಬದುಕಿನ ಗುರಿಯನ್ನು ಕಂಡುಕೊಳ್ಳುವುದಕ್ಕೆ ಮಾತ್ರ. ಮನಸ್ಸಿನಲ್ಲಿ ಹತ್ತಿದ ಬೆಳಕನ್ನು ಜತನದಿಂದ ಕಾಪಾಡಿಕೊಳ್ಳುವ ಕೆಲಸವನ್ನು ಭಕ್ತಿ ಮಾಡುತ್ತದೆ. ಬೇಂದ್ರೆಯವರ ಬಹಳಷ್ಟು ಕವನಗಳಲ್ಲಿ ಈ ಶರಣಾಗತಿ, ಎಚ್ಚರದ ಅರಸುವಿಕೆಯನ್ನು ಧಾರಾಳವಾಗಿ ಕಾಣಬಹುದು. ಬೇಂದ್ರೆಯವರ ಎಲ್ಲ ಕವನಗಳನ್ನು ಗ್ರಂಥರೂಪದಲ್ಲಿ ಒಳಗೊಂಡ ಆರು ಸಂಪುಟಗಳ ಔದುಂಬರಗಾಥೆ ಕಾವ್ಯವನ್ನು ವೈಚಾರಿಕ, ತಾತ್ವಿಕ ಮತ್ತು ಸೈದ್ಧಾಂತಿಕ ನೆಲಗಟ್ಟಿನ ಮೇಲೆ ಆರು ಸಂಪುಟಗಳಲ್ಲಿ ವಿಭಾಗಿಸಿದ್ದಾರೆ. ಅಲ್ಲಿನ ಮೊದಲ ಸಂಪುಟದ ಹೆಸರು "ನಮನ". ಆ ಸಂಪುಟವನ್ನು ಶ್ರುತಿ ನಮನ, ದೇವ ನಮನ, ಗುರು ನಮನ, ಮತ್ತು ಕವಿ ನಮನ ಎಂದು ವಿಭಾಗಿಸಿದ್ದಾರೆ. ಇಡೀ ಸಂಪುಟಕ್ಕೆ ಭಕ್ತಿಯೇ ಬೆನ್ನೆಲುಬಾಗಿದ್ದರೂ, ಸಾಂಪ್ರದಾಯಿಕ ದೈವೋಪಾಸನೆಯನ್ನು ದೇವ ನಮನದಲ್ಲಿ ಕಾಣಬಹುದು. ಭಕ್ತಿ ಸಾಹಿತ್ಯಕ್ಕೆ ಬೇಂದ್ರೆಯವರ ಕೊಡುಗೆಯನ್ನು ಅರಿಯಬೇಕಾದರೆ ದೇವನಮನಕ್ಕೊಂದು ಪ್ರದಕ್ಷಿಣೆ ಅತ್ಯಗತ್ಯ.

ಬೇಂದ್ರೆಯವರು ದತ್ತಾತ್ರೇಯ, ವಿಷ್ಣುವಿನ ಹಲವು ಅವತಾರಗಳು, ಶಕ್ತಿ, ಶಿವ, ಗಣಪತಿ, ಗಾಯಿತ್ರಿ, ಪುರಂದರ ವಿಟ್ಠಲ, ಆಂಜನೇಯ ಒಳಗೊಂಡಂತೆ ಹಲವು ದೇವರುಗಳನ್ನು ಕುರಿತು ಭಕ್ತಿಪೂರ್ಣ ಕವನಗಳನ್ನು, ಆರತಿ ಪದಗಳನ್ನು ರಚಿಸಿದ್ದಾರೆ. ಈ ಕವನಗಳಲ್ಲಿ ಭಕ್ತಿಯಲ್ಲಿನ ಹಲವು ಆಯಾಮಗಳನ್ನು ಕಾಣಬಹುದು. ದೇವತೆಗಳನ್ನು ಬೇಂದ್ರೆ ಕಾಣುವ ರೀತಿ ಸಮಕಾಲೀನವಾಗಿದೆ. ಒಗ್ಗಟ್ಟು, ಸಮಾನತೆಯಂತಹ ಸಾಮಾಜಿಕ ಒಳಿತುಗಳು ಕೇವಲ ಆಶಯವಾಗಿರದೇ ಮನದಾಳದ ಹಂಬಲವಾಗಿರುವುದನ್ನು, ವ್ಯಕ್ತಿಗತ ಕೋರಿಕೆಯಾಗಿರುವುದನ್ನು ಬೇಂದ್ರೆಯವರ ಭಕ್ತಿಗೀತೆಗಳಲ್ಲಿ ಕಾಣಬಹುದು. ನಿಸರ್ಗದಲ್ಲಿ ದೇವಲೀಲೆಯನ್ನು ಬೇಂದ್ರೆ ದಾಖಲಿಸಿದ ರೀತಿ ("ಗುಡ್ಡ ಗುಡ್ಡ ಸ್ಥಾವರಲಿಂಗ ಅವಕ ಅಭ್ಯಂಗ ಎರೆತಾವನ್ನೊ ಹಂಗ".. ಶ್ರಾವಣ ಬಂತು) ಅನನ್ಯವಾದದ್ದು. ಅದೇ

ರೀತಿ ಬೇಂದ್ರೆಯವರ ಭಕ್ತಿಗೀತೆಗಳೂ ವಿಸ್ಮಯ ಹುಟ್ಟಿಸುವಷ್ಟು ಆಯಾಮಗಳಲ್ಲಿ ಮನಸೆಳೆಯುತ್ತವೆ. ಧೇನಿಸಿದರೆ ಕಾಮಧೇನುವಾಗುವ ಈ ಕವನಗಳು ಸಾಹಿತ್ಯಕ್ಕೂ, ಭಕ್ತಿಗೂ ಒಟ್ಟಿಗೇ ಒದಗುತ್ತವೆ. ದೇವನಮನದಲ್ಲಿ ನನಗೆ ಇಷ್ಟವಾದದ್ದು ವಿಟ್ಠಲನನ್ನು ಆರಾಧಿಸಿದ ರೀತಿ. ಪಂಡರಾಪುರ ವಿಟ್ಠಲ ಮಹಾರಾಷ್ಟ್ರ ಮತ್ತು ಕರ್ನಾಟಕದಲ್ಲಿ ಪ್ರಸಿದ್ಧ ದೈವ. ಮನೆಯಲ್ಲಿ ಮರಾಠಿ ಮಾತನಾಡುವ ಬೇಂದ್ರೆ ವಿಟ್ಠಲನ ಕುರಿತು ಕನ್ನಡ ಮತ್ತು ಮರಾಠಿ ಭಾಷೆಗಳಲ್ಲಿ ಹಲವು ಭಕ್ತಿಗೀತೆಗಳನ್ನು ರಚಿಸಿದ್ದಾರೆ. ಬೇಂದ್ರೆ ಮತ್ತು ವಿಟ್ಠಲನ ಮಧ್ಯೆ ಇನ್ನೊಂದು ವ್ಯಕ್ತಿಗತ ನಂಟೂ ಇದೆ. ಬೇಂದ್ರೆಯವರ ರಾಮ ಎಂಬ ಮಗನ ಚಿತಾಭಸ್ಮವನ್ನು ವಿಸರ್ಜನೆ ಮಾಡಲು ಪಂಢರಪುರಕ್ಕೆ ಬಯಸಿಯೂ ಹೋಗಲಾಗದ ಘಟನೆ ನಡೆಯಿತಂತೆ. ಆ ಭಾವುಕ ನಂಟನ್ನು ಅವರ ಪಾಂಡುರಂಗನ ಭಕ್ತಿಕವನಗಳಲ್ಲಿ ಕಾಣಬಹುದು. ಅದರಲ್ಲಿಯೂ "ಅಭಂಗ ವಿಟ್ಠಲ" ('ಇದು ನಭೋವಾಣಿ', ೧೯೭೦)ದಲ್ಲಿ ವಿಟ್ಠಲನ "ಅಭಂಗತನ"ವನ್ನು ಬೇಂದ್ರೆ ಕಂಡರಿಸಿದ್ದು ತುಂಬ ವಿಶಿಷ್ಟವಾಗಿದೆ. ನನಗಂತೂ ಇದು ಬೇಂದ್ರೆಯವರ ಭಕ್ತಿಗೀತೆಗಳ ರಾಯಭಾರಿ.

"ಅಭಂಗ ವಿಟ್ಠಲ" ದಲ್ಲಿ ಪಾಂಡುರಂಗನನ್ನು ಬೇಂದ್ರೆ "ಅಭಂಗ ಪದದವನ" ಎಂದು ಆರಾಧಿಸುತ್ತಾರೆ. ಬೇರೆ ಬೇರೆ ಅರ್ಥವನ್ನು, ಆಶಯವನ್ನು ಈ ಎರಡು ಪದಗಳಲ್ಲಿ ಹೊರಹೊಮ್ಮಿಸುವುದನ್ನು ಇಲ್ಲಿ ಕಾಣಬಹುದು. ಅಭಂಗ ಎಂದರೆ "ಭಂಗವಿಲ್ಲದ" ಎನ್ನುವ ನೇರ ಮತ್ತು ಪ್ರಮುಖ ಅರ್ಥ. ವಿಟ್ಠಲನನ್ನು ಹರಿಹರ ಐಕ್ಯದ ಸಂಕೇತವಾಗಿ ಆರಾಧಿಸುವುದು ಸಾಮಾನ್ಯ. ಆದರೆ ಬೇಂದ್ರೆ ಅವನನ್ನು ಭಾಷಾಸಾಮರಸ್ಯದ ಸಂಕೇತವಾಗಿಯೂ ಆರಾಧಿಸುತ್ತಾರೆ. "ಹೇ ರಖುಮಾಕಾಂತಾ" ಕವನದಲ್ಲಿ "ಕರ್ನಾಟಕ ಮಹಾರಾಷ್ಟ್ರವ ಒಂದುಗೂಡಿಸುವೆ" ಮತ್ತು "ಬುದ್ಧಾವತಾರ – ವಿಟ್ಠಲ" ಎನ್ನುವ ಕವನದಲ್ಲಿ "ಕನ್ನಡಾ, ಮರಾಠಿ, ತೆಲುಗಾ ಎಲ್ಲೆಲ್ಲೂ ಅಲಗಾ" ಎಂದಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಒಡಕನ್ನು ಗೆದ್ದು "ವ್ಯಕ್ತಿ ಭಕ್ತಿಯ ದೃಷ್ಟಿಯಿಂದ ಜೋಡಿಸುವೆ" ಎಂದು ಹೊಗಳುತ್ತಾರೆ. ಇಲ್ಲಿ ಸಮಷ್ಟಿಯನ್ನು ಒಂದುಗೂಡಿಸುವ, ಭಾಷಾ ಸಾಮರಸ್ಯವನ್ನು ಸಾಧಿಸುವ ಸಾಮಾಜಿಕ ಜವಾಬ್ದಾರಿಯನ್ನು ವಿಟ್ಠಲನ ಮೇಲೆ ಹೊರಿಸುತ್ತಾರೆ!

"ಅಭಂಗ ವಿಟ್ಠಲ"ದಲ್ಲಿನ "ಅಭಂಗ ಪದ"ವನ್ನು ಕೊಟ್ಟ ಭರವಸೆಯನ್ನು ಉಳಿಸಿಕೊಳ್ಳುವವನು ಎಂದೇ ಅರ್ಥೈಸಬಹುದು. ಸೊಂಟದ ಮೇಲೆ ಕೈಯಿಟ್ಟು ನಿಂತಿರುವ ವಿಟ್ಠಲ, ಅಭಯ ಹಸ್ತ ತೋರಿಸುತ್ತಿಲ್ಲ. ತನ್ನನ್ನು ಪರೀಕ್ಷೆ ಮಾಡಲು, "ಭಕ್ತಿ ಸುಂಕ" ಕೇಳಲಿಕ್ಕಾಗಿ ನಿಂತಿದ್ದಾನೆ ಎನ್ನುವ ಸಂಶಯವನ್ನು ಕವಿ ಆರಂಭದಲ್ಲಿಯೇ ವ್ಯಕ್ತಪಡಿಸುತ್ತಾರೆ.

**ಟೊಂಕದ ಮೇಲೆ ಕೈ ಇಟ್ಟಾನ**
**ಭಕ್ತೀ ಸುಂಕ ಬೇಡತಾನ**
**ಡೊಂಕ ಇಲ್ಲಾ, ಬಿಂಕ ಇಲ್ಲಾ**

**ಅಭಂಗ ಪದದವನs**
**ಅಭಂಗ ಪದದವನs**

ದೇವರು ಭಕ್ತಿಯನ್ನು ನಿರೀಕ್ಷಿಸುತ್ತಾನೆ, ಅದರ ಮೂಲಕ ಪರೀಕ್ಷಿಸುತ್ತಾನೆ ಎನ್ನುವ ಅಂಶವನ್ನು ಬೇಂದ್ರೆಯವರ ಬಹಳಷ್ಟು ಕವನಗಳಲ್ಲಿ ಕಾಣಬಹುದು. "ಭಕ್ತಿ ನಾಣ್ಯಾ ಸಲ್ಲಿಸೋ, ಇಲ್ಲಾ ಉದ್ರಿ" ("ಜಪ ತಪ")ಯಲ್ಲಿ ಕಾಣುವುದೂ ಇದೇ ಭಾವ. 'ಅಭಯ ಹಸ್ತ ಇಲ್ಲ' ಎಂದ ಮಾತ್ರಕ್ಕೆ ವಿಟ್ಠಲನಲ್ಲಿ ಅಭಯದಾನ ಇಲ್ಲವೆಂತಲ್ಲ. ಸೊಂಟದ ಮೇಲೆ ಕೈಯಿಟ್ಟು ನಿಂತದ್ದು ಬಿಂಕ ತೋರಿಸಲಿಕ್ಕಾಗಿ ಅಲ್ಲ, ಹಾಗಾಗಿ "ಡೊಂಕ ಇಲ್ಲಾ, ಬಿಂಕ ಇಲ್ಲಾ, ಅಭಂಗ ಪದದವನ" ಎಂದು ಹೊಗಳುತ್ತಾರೆ.

"ಅಭಂಗ ಪದದವನು" ಎನ್ನುವುದನ್ನು "ಅಭಂಗ ಸಾಹಿತ್ಯಕ್ಕೆ ಒಲಿಯುವವನು" ಎಂಬರ್ಥದಲ್ಲಿಯೂ ನೋಡಬಹುದು. ಮರಾಠಿಯಲ್ಲಿ ಪಾಂಡುರಂಗನನ್ನು ಸ್ಫೂರ್ತಿಯಾಗಿಟ್ಟುಕೊಂಡು ಜಾತ್ಯಾತೀತ ಭಕ್ತಿ ಆಂದೋಲನ ನಡೆಯಿತು. ಸಂತ ಜ್ಞಾನೇಶ್ವರ, ತುಕಾರಾಂ, ಮೊದಲಾಗಿ ಹಲವರು ಭಕ್ತಿಸಾಹಿತ್ಯ ರಚನೆ ಮಾಡಿದರು. ದೇವರ ನಮನ, ಸ್ವರೂಪ ವರ್ಣನೆ ನಂತರ ಪಾರಮಾರ್ಥಿಕ ಅರ್ಥವಿಶೇಷವನ್ನು ಹೊಂದಿರುವ "ಅಭಂಗ ಸಾಹಿತ್ಯ" ಬಹಳ ಪ್ರಸಿದ್ಧಿಯಾಯಿತು. ಸಂತ ತುಕಾರಾಂ, ವಿಟ್ಠಲ ಎಂದರೆ ಪಾಮರರನ್ನು (ಅಜ್ಞಾನಿಗಳನ್ನು) ಸಹ ಆದರಿಸುವವನು ಎಂದು ಅರ್ಥೈಸಿದ್ದನ್ನು ನೆನಪಿಸಿಕೊಳ್ಳಬಹುದು. ಈ ಹಿನ್ನೆಲೆಯಲ್ಲಿ, ಈ ಸಾಲುಗಳನ್ನು "ಭಕ್ತಿ ಇದ್ದರೆ ಸಾಕು, 'ಬಿಂಕ' ಇಲ್ಲದ ವಿಟ್ಠಲ, ಪಾಮರರ 'ಅಭಂಗ ಪದ'ಕ್ಕೆ ಒಲಿಯುತ್ತಾನೆ." ಎಂದೂ ಗ್ರಹಿಸಬಹುದು.

ತಮ್ಮ ಕಷ್ಟಗಳು ದೇವರ ಪರೀಕ್ಷೆ ಮಾತ್ರ, ಅವನ ಅಭಯ ಹಸ್ತ ತಮ್ಮ ಮೇಲೆ ಸದಾ ಇದೆ ಎನ್ನುವ ನಂಬಿಕೆ ಮುಂದಿನ ಸಾಲುಗಳಲ್ಲಿ ಹೆಚ್ಚು ಕಳೆಗಟ್ಟುತ್ತದೆ.

**ಭೀಮ ಭಯಂಕರ ದಂಡೀಮ್ಯಾಲೆ**
**ಎದಿಮ್ಯಾಲಿರಿಸಿ ಅಭಯದ ಮಾಲೆ**
**ತಲೀಲೆ ಹೊತ್ತು ಸೀಮಾಲಿಂಗ**
**ಅಭಂಗನಸ್ತಾನs**
**ಅಭಂಗನಸ್ತಾನs**

ಇಲ್ಲಿ ಸಹಜವಾಗಿಯೇ 'ಭೀಮ ಭಯಂಕರ ದಂಡಿ'ಯನ್ನು ಭೀಮಾ (ಚಂದ್ರಭಾಗಾ) ನದಿಯ ದಡವೆನ್ನಬಹುದಾದರೂ, ಅದಕ್ಕೊಂದು ವಿಶೇಷ ಅರ್ಥವಿದೆಯೆನ್ನುವ ಸಂಶಯ ಬರುತ್ತದೆ. ಭಕ್ತಿ ಕವನಗಳಲ್ಲಿ "ದೇವರು ಸರ್ವಶಕ್ತ" ಎನ್ನುವ ಗುಣಾರೋಪ ಸಾಮಾನ್ಯ. ಅಸೀಮ ಬಲವುಳ್ಳ ವಿಟ್ಠಲನ ತೋಳು("ಭೀಮ ಭಯಂಕರ ದಂಡಿ")ಗಳು ನಮ್ಮನ್ನು ಕಾಯುತ್ತವೆ. ವಿಷ್ಣು ಸ್ವರೂಪಿ ವಿಟ್ಠಲನ ತಲೆಯ ಮೇಲಿರುವುದು ತನ್ನ ಮೊದಲ ಮತ್ತು

ಅಗ್ರಗಣ್ಯ ಭಕ್ತನಾದ ಶಿವನನ್ನು ಪ್ರತಿನಿಧಿಸುವ ಲಿಂಗ. ಸರ್ವಶಕ್ತನಾದ ದೇವರು ಭಕ್ತನನ್ನು ತಲೆಯ ಮೇಲೆ ಹೊತ್ತಿರುವಾಗ 'ಭಂಗ'ದ ಮಾತೆಲ್ಲಿ? "ಅಭಂಗ ಪದದವನು" ಎಂದರೆ ಮಾತಿಗೆ ತಪ್ಪದವನು, ಅಭಂಗ ಕವನಗಳಿಗೆ ಒಲಿಯುವವವನು ಎನ್ನುವುದರ ಜೊತೆಗೆ ಸರ್ವಶಕ್ತ ಎಂದೂ ಅರ್ಥಬರುವುದೂ ಇಲ್ಲಿ ಸ್ಪಷ್ಟವಾಗುತ್ತದೆ. ಕೈಗಳನ್ನು ಸೊಂಟದ ಮೇಲೂರಿ, ಮೊಣಕೈಗಳನ್ನು ಪಕ್ಕಕ್ಕೆ ಚಾಚಿ ನಿಂತ ಭಂಗಿಗೆ ನೃತ್ಯದಲ್ಲಿ ಅಭಂಗ ಭಂಗಿ ಅಂತಲೇ ಹೆಸರಿದೆ ಎನ್ನುವುದನ್ನು ಇಲ್ಲಿ ನೆನೆಯಬಹುದು. ಆ ನಿಲುವನ್ನು ನೋಡಿಯೇ ಅವನಿಗೆ, ವಿಟ್ಠಲ 'ಅಭಂಗ' ಅನ್ನಿಸುತ್ತಾನೆ.

ವಿಟ್ಠಲ ಎಲ್ಲರಿಗೂ ಒಲಿಯುತ್ತಾನೆ, ಸರ್ವಶಕ್ತನಾದ ವಿಟ್ಠಲನಿಗೆ ಎಲ್ಲರ ಯೋಗಕ್ಷೇಮ ಮಾಡಬಲ್ಲ ಕ್ಷಮತೆ ಮತ್ತು ಸರ್ವೋದಯವನ್ನು ಆಶಿಸಿದ ಸಂತರ ಸಹವಾಸ ಇರುವುದರಿಂದ ಭಕ್ತರ ಯೋಗಕ್ಷೇಮ ನೋಡಿಕೊಳ್ಳುತ್ತಾನೆ ಎನ್ನುವ ವಿಶ್ವಾಸ ಕವಿಗೆ. ಅದು ಮುಂದಿನ ಸಾಲುಗಳಲ್ಲಿ ಸ್ಪಷ್ಟವಾಗುತ್ತದೆ.

**ಅಂಗದಾಗ ಅನಂತ ಲೀಲಾ**
**ಸಂಗದಾಗ ಸಂತರ ಜಾಲಾ**
**ಯೋಗಕ್ಷೇಮಾ ನಡಸ್ತಾನ**
**ಭಂಗ ಆಗಧಾಂಗ**
**ಭಂಗ ಆಗಧಾಂಗ**

ತನ್ನಲ್ಲಿಟ್ಟ ಭಕ್ತಿಗೆ ಚ್ಯುತಿ ಇಲ್ಲದಂತೆ ವಿಟ್ಠಲ "ಯೋಗಕ್ಷೇಮಾ ನಡಸ್ತಾನ, ಭಂಗ ಆಗಧಾಂಗ" ಎಂದು ಭರವಸೆ ವ್ಯಕ್ತಪಡಿಸುತ್ತಾರೆ. ಆ ವಿಶ್ವಾಸ, ತನಗಿರುವ ಕಷ್ಟಗಳೆಲ್ಲ ವಿಟ್ಠಲ ಮಾಡುತ್ತಿರುವ ಪರೀಕ್ಷೆ ಎಂದು ಕವಿ ನಂಬುಗೆ ಇನ್ನಷ್ಟು ಸ್ಫುಟವಾಗುವುದು ಕೊನೆಯ ಸಾಲುಗಳಲ್ಲಿ.

**ಇಟ್ಟಿಗಿಮ್ಯಾಲೆ ಕಾಲಿಟ್ಟಾನ**
**ಕಾಲ ಸಂದಿಗೆ ಕೋಲಿಟ್ಟಾನ**
**ನೆನಿಸಿದಲ್ಲೇ ಕಣ್ಣಿಟ್ಟಾನ**
**ಪುಂಡರೀಕ ವರದಾ**
**ಅಂಬಿಕಾತನಯನನ್ನ ಕರದಾ**

ವಿಟ್ಠಲ ಎನ್ನುವ ಗುಣವಾಚಕ ವಿಟ್ + ಸ್ಥಲ – ಇಟ್ಟಿಗೆಯ ಮೇಲೇ ನಿಂತವನು ಎನ್ನುವುದರಿಂದ ಬಂದಿದೆ. ತಾನು ನಿಂತಲ್ಲಿಯೇ ನಿಂತು, ತನ್ನಲ್ಲಿಗೆ ಭಕ್ತರು ಬರುವಂತೆ ಪ್ರೇರೇಪಿಸಿ, ಅದಕ್ಕೆ ಹಲವು ಅಡಚಣೆಗಳನ್ನು ತರುವುದು ದೇವರು ಮಾಡುವ ಪರೀಕ್ಷೆ. ಹಾಗಂತ ಆತ ನಿರ್ದಯಿಯಲ್ಲ, ಅವನ ಕರುಣಾದೃಷ್ಟಿ ಭಕ್ತರ ಮೇಲಿದೆ. ಅವರು

ನೆನಸಿದಲ್ಲಿಯೇ ಅವನ ಕಣ್ಣಾಗವಲಿದೆ ಎನ್ನುವ ಸಂತೃಪ್ತಿಯಲ್ಲಿ, 'ಕಾಲ ಸಂದಿಯ ಕೋಲು' ಸಹ ಅನುಗ್ರಹವೇ ಆಗುತ್ತದೆ, ಕರೆಯುವವನೂ ಅವನೇ, ತೊಂದರೆ ಕೊಡುವವನೂ ಅವನೇ, ಅನುಗ್ರಹಿಸುವವನೂ ಅವನೇ ಎನ್ನುವ ನಂಬಿಕೆ ಭಕ್ತ ಕವಿಗೆ. ಈ ಸಾಲುಗಳಲ್ಲಿ ಅವರಿಗೆ ಫಂಡರಾಪುರಕ್ಕೆ ಹೋಗುವಾಗ ಬಂದ ಅಡಚಣೆಯನ್ನೂ ನೆನಪಿಸಿಕೊಳ್ಳಬಹುದು.

ಸ್ವಭಾವದಂತೆ ದೃಷ್ಟಿ, ಸೃಷ್ಟಿ. ಒಡೆಯನನ್ನು ಓಲೈಸಲಿಕ್ಕಾಗಿ, ಅವನನ್ನು ಅರ್ಜುನನಿಗೆ ಹೋಲಿಸಿ ವಿಕ್ರಮಾರ್ಜುನ ವಿಜಯ ರಚಿಸಿದರೂ, "ಒಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ" ಎಂದ ಪಂಪನ ಹಾಗೆ, ಕವಿಯ ಜೀವನ ದೃಷ್ಟಿ ಮತ್ತು ಕಾವ್ಯಸಿದ್ಧಿ ಎಲ್ಲ ಕೃತಿಗಳಿಂದ ಹೊರಹೊಮ್ಮುತ್ತದೆ. ಬೇಂದ್ರೆಯವರ ಭಕ್ತಿ ಗೀತೆ ಅಥವಾ ಪ್ರೇಮ ಗೀತೆಗಳಲ್ಲಿನ ದೃಷ್ಟಿ ಅಭಂಗವೇ ಆಗಿರುತ್ತದೆ, ಅಲ್ಲಿನ ಶಬ್ದಗಳು ಅರ್ಥದ ಖಣಿಯಾಗುತ್ತವೆ, ಮೊಗೆದಷ್ಟೂ ಆಳವಾಗುತ್ತ ಅನಂತವಾಗುತ್ತವೆ. ಸಂಸಾರದ ಸಾರವನ್ನು ಸೂತ್ರೀಕರಿಸುವ ಅವರ 'ನಾಕು ತಂತಿ' ಕವನದ 'ನಾನು', 'ನೀನು', 'ಆನು' ಮತ್ತು 'ತಾನು' ಎಂಬ ನಾಲ್ಕು ತಂತಿಗಳು ಲೋಕಪ್ರಸಿದ್ಧ. ಹಾಗೆಯೇ ಅವರ ಪಾಂಡುರಂಗ ಭಕ್ತಿಯ ಕವನವೊಂದರ ನಾಲ್ಕು ಸಾಲುಗಳು ಬೇಂದ್ರೆಯವರ ಭಕ್ತಿ ಯೋಗದ ಪರಿಚಯವನ್ನು ಮಾಡಿಕೊಡುತ್ತವೆ.

**ತಾನಿನ ತಂತಿಗೆ ಆನುವ ಸರಕು**
**ನಾನು ನೀನಿಗೇ ತಂದಿದೆ ಫರಕು**
**'ಬಿಡಿ ಬಿಂಕಾ ಕೊಡು ಸುಂಕಾ'**
**ಎನ್ನುತ್ತಿದೆ ಗಾಳಿ. ... ('ಪಾಂಡು-ರಂಗ-ಸ್ಥಲ')**

'ತಾನು' ಎಂದರೆ ಜಗತ್ತೆಲ್ಲವೂ ತಾನೇ ಆದ ದೇವಚೈತನ್ಯ. 'ಆನು' ಎಂದರೆ ದೇವರೇ ಸೃಷ್ಟಿಸಿದ ಮಾಯೆ. ನಾನು ಎಂದರೆ ಕವಿ; ನೀನು ಎಂದರೆ ಪ್ರಕೃತಿ. ಇದನ್ನು 'ದೇವರು ಸೃಷ್ಟಿಸಿದ ಮಾಯೆ, ಕವಿಯನ್ನು ಪ್ರಕೃತಿಯಿಂದ ಪ್ರತ್ಯೇಕಿಸಿದೆ, ಬಿಂಕವನ್ನು ಬಿಟ್ಟು ಭಕ್ತಿಯ ಸುಂಕವನ್ನು ಕೇಳುತ್ತಿದೆ' ಎಂದು ಅರ್ಥೈಸಬಹುದೆ? ಈ ಮಾಯೆಯೇ ವಿಟ್ಠಲನನ್ನು ತಲುಪಲು ತೊಂದರೆ ಕೊಡುವ 'ಕಾಲ ಸಂದಿಯ ಕೋಲು' ಆಗಿರಬಹುದೇ? ಅಥವಾ ಈ ನಾಲ್ಕು ಸಾಲುಗಳ ಅರ್ಥ ಅಥವಾ ಆ ಸಾಲುಗಳಲ್ಲಿನ ಪ್ರತಿಪದಗಳ ಅರ್ಥ ಬೇರೆಯೇ ಇರಬಹುದೇ? ಈ ಸಾಧ್ಯತೆಗಳು ಬೇಂದ್ರೆ ಸಾಹಿತ್ಯದ ವಿಶೇಷ. ಅದಕ್ಕೆ ಅವರ ಭಕ್ತಿ ಸಾಹಿತ್ಯ ಹೊರತಲ್ಲ. ಗುನುಗಿದಂತೆ ಹೊಸ ಅರ್ಥ ಧ್ವನಿಸುವ ಅವರ ಕವನಗಳು ಧ್ಯಾನಕ್ಕೆ ಯೋಗ್ಯ ಮಂತ್ರಗಳಾಗುತ್ತವೆ. ಸಂತ ಕವಿಗೆ ಇದಕ್ಕಿಂತಲೂ ಹೆಚ್ಚಿನ ಸಾರ್ಥಕತೆ ಬೇಕೆ?

■

# ಪುತಿನ ಅವರ ಕಾವ್ಯದಲ್ಲಿ ಭಕ್ತಿ

–ಅಲಮೇಲು ಅಯ್ಯಂಗಾರ್

"ನಾನು ಕವಿಯಾದುದು ಒಂದು ಆಕಸ್ಮಿಕ, ಜಗನ್ಮೋಲಾನಂದನ ಒಂದು ಪ್ರಸನ್ನಕಟಾಕ್ಷ ವಿಕ್ಷೇಪದಿಂದ ಆದ ಫಲ" ಎಂದು ನಂಬಿದ್ದ ಪೂಜ್ಯ ಕವಿ ಡಾ. ಪುತಿನ ಕನ್ನಡ ನವೋದಯ ಸಾಹಿತ್ಯದ ರತ್ನತ್ರಯರಲ್ಲಿ ಒಬ್ಬರೆಂದು ಪ್ರಸಿದ್ಧರಾಗಿದ್ದರು. ಅವರನ್ನು ಭಾಗವತ ಕವಿ ಎಂದೂ ಗುರುತಿಸಲಾಗಿತ್ತು. ದಕ್ಷಿಣ ಭಾರತದ ಪುಣ್ಯ ಕ್ಷೇತ್ರ ಮೇಲುಕೋಟೆಯ ಸಂಪ್ರದಾಯಸ್ಥ ಕುಟುಂಬದಲ್ಲಿ, ಆ ಕ್ಷೇತ್ರದ ಅತ್ಯಂತ ಪವಿತ್ರವಾದ ಉತ್ಸವ ವೈರಮುಡಿಯ ಶುಭದಿನದಂದು ಜನ್ಮ ತಳೆದ ಕವಿಗೆ ಹುಟ್ಟಿದ ಘಳಿಗೆಯಿಂದಲೇ ಭಕ್ತಿ ಬದುಕಿನ ಬುನಾದಿಯಾಯಿತು ಎಂದರೆ ಅತಿಶಯೋಕ್ತಿಯಾಗಲಾರದು. "ಮೇಲುಕೋಟೆ ಶ್ರೀವೈಷ್ಣವರು ನಿತ್ಯ ಸ್ಮರಿಸುವ ಪುಣ್ಯಕ್ಷೇತ್ರ. ದೈವವಶಾತ್ ಒಂದು ದೊಡ್ಡ ಉತ್ಸವದ ದಿನ ನಾನಲ್ಲಿ ಜನಿಸಿದೆ. ದೈವದ ಒಂದು ಗಾಢವೂ ಆನಂದ ಸಮೃದ್ಧವೂ ಆದ ಭಾವ ಮೊದಲ ಉಸಿರಿನಲ್ಲಿಯೇ ಆ ದಿನ ನನ್ನನ್ನು ಹೊಕ್ಕು ನನ್ನ ಇಡೀ ಬದುಕನ್ನು ವ್ಯಾಪಿಸಿತು" ಎಂದು ಹೇಳಿದ್ದಾರೆ ಕವಿ. ಪುತಿನ ಅವರ ಬದುಕಿನಲ್ಲಿ ಹೇಗೋ ಹಾಗೇ ಸಾಹಿತ್ಯದಲ್ಲೂ ಭಕ್ತಿ ಹಾಸುಹೊಕ್ಕಾಗಿ ಮೂಡಿಬಂದಿದೆ. ಅವರ ಸಾಹಿತ್ಯದ ಹರಹು ಬಹಳ ವಿಶಾಲವಾದದ್ದು. ಸ್ವಂತ ಕೃತಿಗಳಲ್ಲದೇ, ಸಂಸ್ಕೃತದಿಂದ ಭಗವದ್ಗೀತೆ ಮತ್ತು ಮಹಾಪ್ರಸ್ಥಾನ ಕಾವ್ಯಗಳನ್ನೂ ತಮಿಳಿನ ತಿರುವಾಯ್ಮೊಳಿ ಪಾಶುರಗಳನ್ನೂ "ಸಿರಿಬಾಯಿ ನುಡಿ" ಎಂಬ ಹೆಸರಿನಲ್ಲಿ ಭಾಷಾಂತರಿಸಿದ್ದಾರೆ. ಅವರ ಸಮಗ್ರ ಸಾಹಿತ್ಯದ ಸತ್ವವನ್ನು ಈ ಬರಹದ ಮಿತಿಯ ಚೌಕಟ್ಟಿನಲ್ಲಿ ಅಳವಡಿಸುವುದು ಅಸಾಧ್ಯವಾಗಿರುವುದರಿಂದ, ಇದು ಒಂದು ಪಕ್ಷಿನೋಟ ಎಂದು ಸಹೃದಯರು ಪರಿಗಣಿಸಬೇಕೆಂದು ಕೋರುತ್ತೇನೆ.

ಕನ್ನಡದ ಗೀತರೂಪಕಗಳ ಪಿತಾಮಹ ಎಂದು ಪ್ರಸಿದ್ಧರಾದ ಪುತಿನ ಸುಮಾರು ೨೩ ಗೇಯ ಕಾವ್ಯ ನಾಟಕಗಳನ್ನು ಬರೆದಿದ್ದಾರೆ. ಪ್ರಸ್ತುತ ಕವಿ, ತಮ್ಮ ಗೀತರೂಪಕಗಳಲ್ಲಿ, ಆರಾಧ್ಯ ದೈವ ಕೃಷ್ಣನಿಗಿಂತ ರಾಮನನ್ನು ಕುರಿತು ಹೆಚ್ಚಾಗಿ ಬರೆದಿರುವುದು ಕಾಣಸಿಗುತ್ತದೆ. ಈ ಗೇಯನಾಟಕಗಳಲ್ಲಿ, ಮೂಲಕಾವ್ಯಕ್ಕೆ ಸ್ವಲ್ಪವೂ ಕುಂದು ಬರದಂತೆ, ಅಲ್ಲಿ ಸೂಕ್ಷ್ಮವಾಗಿ ಮೂಡಿ, ಮಸುಕಾಗಿದ್ದ ಸಂಗತಿಗಳನ್ನು, ಪಾತ್ರಗಳನ್ನು ಪುತಿನ ಅವರು ತಮ್ಮ

ಕಾವ್ಯಕುಂಚದಿಂದ ಪುನರ್ನಿರ್ಮಿಸಿ ಸ್ಪಷ್ಟವಾಗಿ ಕಡೆದು ನಿಲ್ಲಿಸಿದ್ದಾರೆ. ಎಲ್ಲ ನಾಟಕಗಳನ್ನೂ ಈ ಲೇಖನದಲ್ಲಿ ಚರ್ಚಿಸಲು ಅವಕಾಶವಿಲ್ಲದಿರುವುದರಿಂದ ಒಂದೆರಡು ಉದಾಹರಣೆಗಳನ್ನು ಕೊಡಲೆತ್ನಿಸುತ್ತೇನೆ. ಪುತಿನ ಅವರ "ಶಬರಿ" ಗೀತರೂಪಕದಲ್ಲಿ ಮೂಡಿರುವ ಶಬರಿಯ ಪಾತ್ರವನ್ನು ನೋಡೋಣ. ವಾಲ್ಮೀಕಿ ರಾಮಾಯಣದಲ್ಲಿ ರಾಮಧ್ಯಾನದ ತಪಸ್ಸಿನಿಂದ ಸಿದ್ಧಳಂತೆ ತೋರುವ ಶಬರಿ ಇಲ್ಲಿ ತನ್ನ ಮುಗ್ಧತೆ, ಭಕ್ತಿಪರವಶತೆಗಳಿಂದ ನಮಗೆ ಬಹಳ ಹತ್ತಿರವಾಗುತ್ತಾಳೆ. ಯಾರ ಬರವಿಗಾಗಿ ಜೀವ ಹಿಡಿದು ಕಾಯುತ್ತಿದ್ದಳೋ ಆ ದೈವ ಎದುರಿಗೆ ಬಂದು ನಿಂತಾಗ ಅವನನ್ನು ಆದರಾತಿಥ್ಯದಿಂದ ಸತ್ಕರಿಸಿ ದರ್ಶನದಿಂದ ಸಂತೃಪ್ತಳಾಗಿ "ಪುಣ್ಯಲೋಕ ದೊರೆಯಲೆಂದು ಹರಕೆಯಿಡೆನಗೆ" ಎಂದು ಕೋರುತ್ತಾಳೆ, ವಾಲ್ಮೀಕಿ ರಾಮಾಯಣದಲ್ಲಿ ಶಬರಿ ಮುಕ್ತಿಯನ್ನು ಕೋರಿದಾಗ ಶ್ರೀರಾಮ ಯಾವ ಉದ್ವೇಗವೂ ಇಲ್ಲದೆ ಅವಳ ಕೋರಿಕೆಯನ್ನು ಈಡೇರಿಸುತ್ತಾನೆ. ಆದರೆ ಪುತಿನ ಅವರ ರಾಮ "ಇನಿತು ಪ್ರಿಯವ ಗೈದ ನಿಮಗೆ ಸಾವೆ ನಮ್ಮ ಕಾಣ್ಕೆ?" ಎಂದು ತಳಮಳಗೊಳ್ಳುತ್ತಾನೆ. ಅದಕ್ಕೆ ಶಬರಿ–

**"ಮರಣವಲ್ಲ ಮುಕ್ತಿ ಪ್ರಭೋ ಇದುವೆ ನನ್ನ ಪೂಣ್ಕೆ!**
**ಇಂಥ ನಲವನುಂಡ ಬಳಿಕ ನೆನ್ನೆ ಬಾಳ ಬಾಳೆ.**
**ಇನ್ನು ನನಗೆ ಅಗ್ನಿ ಸಮೆವ ಹಾದಿ–ಇಲ್ಲ ನಾಳೆ"**

ಎಂದು ನುಡಿದು ರಾಮನಿಗೆ ಬಲವಂದು ಅಗ್ನಿಪ್ರವೇಶ ಮಾಡುತ್ತಾಳೆ, "ಎಂಥ ನಿಷ್ಠೆ ಎಂಥ ಪ್ರೀತಿ, ಇವಳ ಮರೆವುದೇ ಈ ಜಗ?" ಎಂದು ರಾಮ ಉದ್ಗರಿಸುತ್ತಾನೆ. ಯಾರು, ಎತ್ತ ಎನ್ನದೆ ನಿಸ್ವಾರ್ಥ ಪ್ರೀತಿಯಿಂದ ಸತ್ಕರಿಸಿದ ಶಬರಿಯನ್ನು ಕಂಡು ಸೋಜಿಗಗೊಂಡ ಲಕ್ಷ್ಮಣನಿಗೆ ರಾಮ

**"ಬೆಳಕಿಗೊಲಿದವರ್ ಉರಿವ ಬತ್ತಿಯ**
**ಕರುಕ ಕಾಣರು ಲಕ್ಷ್ಮಣ.**
**ಬಾಳ ಸುತ್ತಿಹ ದೇವ ತೇಜವ**
**ಕಾಂಬರಿಗೆ ಇದೆ ಲಕ್ಷಣ"**

ಎಂದು ಹೇಳುತ್ತಾನೆ. ಇದುವರೆಗೆ ಮುಗ್ಧವೃದ್ಧಳಂತೆ ತೋರಿದ್ದ ಶಬರಿ ಭಕ್ತಿಯ ಪರಮಾವಧಿಯನ್ನು ಮೆರೆಸಿ ಸಿದ್ಧಳಾಗುತ್ತಾಳೆ.

**"ದೈವದಿಚ್ಛೆಯುಚ್ಛ್ವಾಸದ**
**ತೆರದೊಳಿರವು ನಡೆಯಲಿ**
**ಕಜ್ಜ ತೀರೆ ನಿಃಶ್ವಾಸದ**
**ತೆರದೊಳಂತ್ಯ ಪಡೆಯಲಿ."**

ಎಂಬ ಕವಿಯ ಹಾರೈಕೆಯೊಡನೆ ಗೇಯನಾಟಕ ಮುಕ್ತಾಯವಾಗುತ್ತದೆ. ಶಬರಿಯ ಮುಗ್ಧ ಭಕ್ತಿ ನಮ್ಮ ಮನಸ್ಸಿನಲ್ಲಿ ಶಾಶ್ವತವಾಗಿ ಉಳಿಯುತ್ತದೆ.

ಗೋಕುಲ ನಿರ್ಗಮನ ಪುತಿನ ಅವರ ಅತ್ಯಂತ ಜನಪ್ರಿಯ ಕೃತಿ. ಕೃಷ್ಣನ ಬಗೆಗಿನ ಅವರ ಪ್ರೇಮ, ಭಕ್ತಿ ಇಲ್ಲಿ ಹೆಪ್ಪುಗಟ್ಟಿ ನಿಂತಿದೆ. ಅದರ ಮುನ್ನುಡಿಯಲ್ಲಿ ಕವಿ "ಹಿಂದೆ ಎಲ್ಲೋ ನಾನು ಗೋಕುಲದಲ್ಲಿ ಗೊಲ್ಲತಿಯಾಗಿ ಹುಟ್ಟಿರಬೇಕು" ಎಂದು ಕೃಷ್ಣನ, ತನ್ನ ನಡುವಿನ ಸಂಬಂಧವನ್ನು ಬೆರಗುಗಣ್ಣಿಂದ ವಿಶ್ಲೇಷಿಸಿದ್ದಾರೆ. ಇಲ್ಲಿನ ಕಥೆ ಬರೀ ರಾಧೆ, ಗೋಪಿಕೆಯರು ಮತ್ತು ಕೃಷ್ಣನ ನಡುವಿನ ಒಲವಿನ ರಾಸಲೀಲೆಯ ಕಥೆಯಲ್ಲ, ಗೋಕುಲದ ಸಮಸ್ತ ಜನರೂ ಕೃಷ್ಣನ ದಿವ್ಯ ಚೇತನಕ್ಕೆ, ತಮ್ಮನ್ನು ಸಮರ್ಪಿಸಿಕೊಂಡ ಭಕ್ತಿಯ ಪರಮಾವಧಿಯ ಕಥೆ. ಕೃಷ್ಣನಿಗೆ ಅವನ ಕೊಳಲಿನ ಗಾನಕ್ಕೆ ಮನಸೋತು ಸಮಾಜದ ಕಟ್ಟುನಿಟ್ಟುಗಳ ಕಟ್ಟೆಯನ್ನೊಡೆದು ಒಲವಿನಲ್ಲಿ ಮುಳುಗಿಹೋಗಿರುವ ಗೋಪಿಯರು "ನೇಸರ ಕಿರಣ ಆಗಸದಿರುಳ ತೊರೆಯಿಸುವ ರೀತಿ, ಮುರಳೀಧರನ ಮುರಳೀ ಮಾಯೆಗೆ ಮನಬಿಟ್ಟಿತೆ ಭೀತಿ, ಇನ್ನಾಯಿತೆ ಪ್ರೀತಿ" ಎಂದು ಹಾಡುತ್ತಿದ್ದರೆ ಮತ್ತೊಂದೆಡೆ, ಜೀವನ ಸಂಧ್ಯೆಯಲ್ಲಿದ್ದೂ ಅವನನ್ನು ಬಿಟ್ಟು ಹೋಗಲಾರದೆ, "ಕೊಳಲನೂದು ಗೋವಿಂದ, ಮುಪ್ಪಿಗಾಗಲಾನಂದ" ಎಂದು ಬೇಡುವ ಊರ ಹಿರಿಯರನ್ನು ಕಾಣುತ್ತೇವೆ. ತಾವು ವೃದ್ಧರಾಗಿಬಿಟ್ಟೆವು, ಇನ್ನು ನಮ್ಮ ಕಾಲ ಮುಗಿಯಿತು ಎನ್ನುವ ವೈರಾಗ್ಯ ಅವರದಲ್ಲ.

**"ಕಣ್ಣಮಂಜು ಹರಿಯುವಂತೆ,**
**ಕಿವಿಯು ಹರಿತವಾಗುವಂತೆ**
**ಬಾಳು ಸನಿಹ, ಸಾವು ದೂರ**
**ಎಂಬತೆರದ ನಂಬಿಕೆ ಬರೆ**
**ಕೊಳನೂದು ಗೋವಿಂದ"**

ಎಂದು ಕೇಳಿಕೊಳ್ಳುತ್ತಾರೆ. ನಿನ್ನ ಕೊಳಲ ನಾದ ಕೇಳಿ "ಹರೆಯದ ಹುರುಪಿಂದ ನಾವು ಹಗುರು ಹೆಜ್ಜೆ ಇಡುವ ತೆರದಿ" ಮಾಡು, ಎಂದು ಕೇಳುವ ಈ ಸನ್ನಿವೇಶ ಎಂಥವರಲ್ಲೂ ಹುರುಪು ಮೂಡಿಸುತ್ತದೆ, ಗೋಕುಲದಲ್ಲಿನ ಆ ರಾತ್ರಿ ಕೃಷ್ಣ ಕೊಳಲೂದುವ ಕೊನೆಯ ರಾತ್ರಿ. ಮರುದಿನವೇ ಅವನು ಅಕ್ರೂರನೊಡನೆ ಮಧುರೆಗೆ ತೆರಳಬೇಕಾಗಿತ್ತು. ಅಂದು ಕೊಳಲನ್ನು ಬನದಲ್ಲಿ ಬಿಟ್ಟು ಹೋದ ಕೃಷ್ಣ ಮತ್ತೆ ಅದನ್ನು ಕೈಗೆತ್ತಿಕೊಳ್ಳುವುದೇ ಇಲ್ಲ. ಕೃಷ್ಣ ವಾಸುದೇವನಾಗುವತ್ತ ಇಟ್ಟ ಮೊದಲ ಹೆಜ್ಜೆಯ ಅಮೋಘ ಸನ್ನಿವೇಶ ಅದು.

**"ಇದ್ದುದು ದಿಟ, ಅವನೊಲಿದುದು ದಿಟ ನಾವು**
**ನಲಿದುದು ದಿಟ ಬಹ ನೆಚ್ಚುದಿಟ"**

ಎಂದು ಪುರುಷೋತ್ತಮನ ಪುನರಾಗಮನದ ಭರವಸೆಯಲ್ಲಿ ರೂಪಕ ಕೊನೆಗೊಳ್ಳುತ್ತದೆ. ರಾಧೆ ಮತ್ತು ಗೋಕುಲದ ಜನತೆಯಲ್ಲಿ ಎಂತೋ ಅಂತೇ ಓದುಗರೆಲ್ಲರ ಮನಸ್ಸಿನಲ್ಲಿ ಹುದುಗಿಬಿಡುತ್ತಾನೆ ಪುತಿನ ಅವರ ಗೋಕುಲ ನಿರ್ಗಮನದ ಕೃಷ್ಣ. ಭಾಗವತದಿಂದ ಸ್ಫೂರ್ತಿಗೊಂಡ ಭಕ್ತಿಪ್ರಧಾನವಾದ ಅವರ ಇನ್ನೊಂದು ಗೇಯನಾಟಕ "ಕುಚೇಲ ಕೃಷ್ಣ". ಕುಚೇಲನ ಕಥೆಯನ್ನು ಕೇಳಿದಾಗ "ಸಾಂದೀಪನಿಯಂಥ ಮಹಾ ಗುರುವಿನ ಆಶ್ರಯದಲ್ಲಿ ಶಿಕ್ಷಿತನಾಗಿ, ಮಹಾಪುರುಷ ಶ್ರೀಕೃಷ್ಣನ ಆಪ್ತಸಖನಾಗಿ ಈತ ಯಾಕೆ ಖ್ಯಾತಿ-ಲಾಭ-ಪೂಜೆಗಳಿಗೆ ನಿರಾಸಕ್ತನಾಗಿ ಕಡುಬಡತನದಲ್ಲೇ ಇದ್ದುಬಿಟ್ಟ?" ಎಂಬ ಪ್ರಶ್ನೆ ಕವಿಯನ್ನು ಕಾಡಿತಂತೆ. ಅದಕ್ಕೆ ಉತ್ತರವನ್ನೂ ಅವರೇ ಕೊಡುತ್ತಾರೆ, "ದೊಡ್ಡದಕ್ಕೆ ಯಾರು ತಮ್ಮನ್ನು ತೆತ್ತುಕೊಳ್ಳುತ್ತಾರೋ ಅವರಿಗೆ ಮಿಕ್ಕ ವಿಷಯಗಳಲ್ಲಿ ಅರುಚಿ ಸಹಜವಾಗೇ ಇರುತ್ತದೆ". ಕುಚೇಲನ ಕೃಷ್ಣ ಭಕ್ತಿ ಯಾವುದನ್ನೂ ನಿರೀಕ್ಷಿಸದ ನಿಷ್ಕಾಮ ಭಕ್ತಿ. ಅವನು ಹುಟ್ಟಾ ಮುಮುಕ್ಷು, ಸಕಲರ ಆಸೆಗಳನ್ನೂ ಪೂರೈಸುವ ಹರಿಯೇ ತನ್ನ ಗಂಡನ ಆಪ್ತಸಖನಾಗಿರುವಾಗ ತಾವೇಕೆ ಹೀಗೆ ಬಡತನದಲ್ಲಿ ಬಳಲುತ್ತಿದ್ದೇವೆ ಎಂದು ಕುಚೇಲನ ಪತ್ನಿ ಕಾಂತಿಮತಿಗೆ ಅರ್ಥವಾಗುತ್ತಿರಲಿಲ್ಲ. ಕೇಳದ ಗಂಡನಿಗಿಂತ ಕೊಡದ ಹರಿಯ ಮೇಲೆ ಅವಳ ಮುನಿಸು,

> **"ಬಡತನದೊಳೆ ನಿಮ್ಮನಿರಿಸಿ ಮರೆತಿರುವನ ನೆನೆವಿರೇಕೆ**
> **ಬಿಡಿರಿ ಹರಿಯ ಹಂಬಲವನು ಉಭಯರಿಗೂ ಲೇಸಿದೆಂಬ"**

ಎಂದು ಕೆಣಕುತ್ತಾಳೆ. ಗೆಳೆಯನ ಇದಿರು ಆರ್ತನಾಗಿ ಕೈಯೊಡ್ಡಿ ನಿಲ್ಲಲು ಒಪ್ಪದ ಕುಚೇಲನನ್ನು "ಬೇಡೆ ಹೋಗಬೇಡಿರೈ, ನೋಡೆ ಹೋಗಿ ಬನ್ನಿರೈ" ಎಂದು ಬಲವಂತವಾಗಿ ಕಳುಹಿಸುತ್ತಾಳೆ. ಸತಿಯನ್ನು ಬಹಳವಾಗಿ ಪ್ರೀತಿಸುತ್ತಿದ್ದ ಕುಚೇಲ ಅವಳ ಮನಸ್ಸನ್ನು ನೋಯಿಸಲಾಗದೆ,

> **"ಸ್ವಾರ್ಥದೊಳು ವಿಶ್ವಾಸವನು ಸತಿ**
> **ತೂಗಿ ನೋಡಲು ಬಾರದೌ**
> **ಆರ್ತರಾಗುತ ಸಮತೆಗೆಡಿಸುವ**
> **ಕೊರತೆಗೆಡೆಗೊಡಲಾಗದೌ."**

ಎಂದು ಮನಸ್ಸಿಲ್ಲದ ಮನಸ್ಸಿನಿಂದ ಗೆಳೆಯನನ್ನು ನೋಡ ಹೋಗಲು ಒಪ್ಪುತ್ತಾನೆ. ಆದರೆ ಹರಿಯ ಎದುರಿಗೆ ನಿಂತು ಅವನ ಪ್ರೀತಿಪೂರ್ವಕ ಆದರಾತಿಥ್ಯಗಳನ್ನು ಸ್ವೀಕರಿಸಿ, ಸಂದ ಪ್ರೀತಿಗೆ ಮೂಕ ವಿಸ್ಮಿತನಾಗಿ ತನ್ನನ್ನು ದೇವರೆಂದು ಬಗೆದು ಸತ್ಕರಿಸಿದ ಆ ಹರಿಯ ಬಳಿ ಕೈಯೊಡ್ಡಿ "ಸಣ್ಣವ ನಾನಾಗದಾದೆ" ಎಂದು ಅವನನ್ನು ಏನೂ ಕೇಳದೆಯೆ ಹಿಂದಿರುಗುತ್ತಾನೆ. ಆದರೆ ಅವನ ಹರಿ "ಕೊಡು ಎನಗೊಡದೆಯೆ ಕೊರೆಯರಿತೀವ ಕೊಡುಗೈ ಹರಿ". ಸುದಾಮನಿಗೆ ಅರಿವಿಲ್ಲದಂತೆಯೇ ಹರಿ ಅವರ ಬಡತನವನ್ನು

ಅಳಿಸಿಹಾಕುತ್ತಾನೆ. ಶಬರಿಯ ಭಕ್ತಿ ಒಂದು ಬಗೆಯದಾದರೆ, ಕುಚೇಲನದು ಇನ್ನೊಂದು ಬಗೆ. ಮೂಲ ಭಾಗವತದ ಕಥೆಯ ಆಧಾರದ ಮೇಲೆ ಅದರ ಪಾತ್ರಗಳಿಗೆ ಸ್ವಲ್ಪವೂ ಕುಂದಾಗದಂತೆ, ಅಲ್ಲಿರದ ಮಾನಸಿಕ ತುಮುಲಗಳನ್ನು ಆಯಾ ಪಾತ್ರಕ್ಕನುಗುಣವಾಗಿ ಚಿತ್ರಿಸಿದ್ದಾರೆ ಕವಿ.

ಪುತಿನ ಅವರ ಮೇರುಕೃತಿ "ಶ್ರೀಹರಿ ಚರಿತೆ" ಒಂದು ಮಹಾಕಾವ್ಯ. ಭಕ್ತಿಯೇ ಕಾವ್ಯವಾಗಿ ಹರಿದಿರುವ ಈ ಕೃತಿಯ ಬಗ್ಗೆ ಬೇರೊಂದು ಲೇಖನವನ್ನೇ ಮೀಸಲಾಗಿಡಬೇಕು. ಕೃಷ್ಣಸತ್ವದೊಂದಿಗೆ ತನ್ನನ್ನೇ ಕಳೆದುಕೊಂಡಿದ್ದ ಕವಿ "ನಿನ್ನನೆನ್ನಿಂ ಹಿರಿದು ನೋಡಲು ಬಯಸಿ ಕಂಗೆಡುತಿಹೆನು, ಎನ್ನ ನಿನ್ನೊಳು ಕೋದಿರುವ ಸೂತ್ರವರಿಯಲು ಬರುವುದೇ?" ಎಂದು ವಿಸ್ಮಯಗೊಂಡಿದ್ದಾರೆ. ತನ್ನ ಮತ್ತು ಶ್ರೀಹರಿಯ ನಡುವಣ ಸಂಬಂಧವನ್ನು ಒಂದು ಬಗೆಯ ವಿಲಕ್ಷಣ ಸಂಬಂಧ ಎಂದು ಪುತಿನ ಹೀಗೆ ವರ್ಣಿಸಿದ್ದಾರೆ–

**"ನಿನ್ನ ನಾ ತಂದೆಯೆನೆ ಅಕ್ಕರೆ ಬೆರೆತ ಗೌರವದೂರ**
**ಎನಗಿಲ್ಲ, ತಾಯೆಂಬೆನೇ ಕಾಡುತ ಬೇಡಿ ಗೋಳ್ಕರೆದು**
**ಸೇವೆಯಗೊಳ್ವ ಸ್ವಾರ್ಥೈಕ ಸಂಬಂಧವೆನಗುಂಟೆ ಹರಿ?**
**ಪ್ರಣಯಿನಿಯೆನೆ ನೀನೆನಗೆ ಕೇವಲನೆ, ಸಕಲಾನಂದಕರ**
**ಜಗತ್ಪತಿ? ಸುತನೆನ್ನಲೇ, ನನ್ನ ಋಣ ನಿನಗಿನಿತಿಲ್ಲ.**
**ಕೆಳೆಯನೆನೆ ನಾ ಗೊಲ್ಲನೇ, ಸುದಾಮನೇ, ಧನಂಜಯನೇ?**
**ದೈವಮೆನೆ ಸಲ್ಲದೈ, ಮನದೆಟಕಿನೊಳು ನೀನಿಹಕತದಿ.**
**ದಾಸನೆನೆ ಸದರದಿ ನಿನ್ನ ನಿರುಕಿಪ ದಾರ್ಷ್ಟ್ಯವೆನಗುಂಟು,**
**ಆಳುತನಕೊಗ್ಗದ ಸಲಿಗೆ. ನಿನ್ನೊಳಗೆ ಸಂಲಗ್ನ ನಾ ;**
**ಹಿಂದಾದೆಯಿಂದಿಲ್ಲವೆನೆ ಅಖಂಡಕಾಲಕಪಚಾರ.**
**ಇಂದಿರದ ಹಿಂದೊಂದುಂಟೆ? ಇಂದಿನೊಳೆ ಹುದುಗಿರದ**
**ಮುಂದೊಂದುಂಟೆ? ಎಂದು ಸರ್ವವ್ಯಾಪಿ ಆ ಶ್ರೀಹರಿಯನ್ನು**
**ವಿಶ್ವಂಭರಾನಂದಪೂರದ ತವರೇ, ಮನದಿರುಳತುಂಬುವ ಬೆಳಕೆ"**

ಎಂದು ಸಂಬೋಧಿಸಿ ಧ್ಯಾನಿಸಿದಾಗಲೆಲ್ಲ ತಮ್ಮ ಮತಿಗೆಟಕುತ್ತಿದ್ದ ತೇಜೋ ಬಿಂದುವನ್ನು ತನ್ನಾತ್ಮದಲ್ಲಿ ಅಳವಡಿಸಿಕೊಂಡಿರುವುದಾಗಿ ಹೇಳಿದ್ದಾರೆ.

ಪುತಿನ ಅವರ ಸಾಹಿತ್ಯದಲ್ಲಿ ಭಕ್ತಿ ಬರೀ ಸಂಪ್ರದಾಯಸ್ಥರ, ಆಚಾರವಂತರ ಸ್ವತ್ತಾಗಿ ಚಿತ್ರಿತವಾಗಿಲ್ಲ. "ಜನ್ಮದಿಂ ಕರ್ಮದಿಂ ತನುಜಾತಿ ವರ್ಣಾಶ್ರಮಗಳಿಂದಾವನೊಳು ಸಂಜನಿಸದೋ ಅಹಂಭಾವಮಾತನೆ ಸುಕೃತಿ. ಆತನೆ ಹರಿಪ್ರಿಯನೆಂಬುವಲ ಮುನಿಸೂಕಿ" ಎಂಬ ಉಕ್ತಿ ಆಧುನಿಕ ದೃಷ್ಟಿಯ ಹೊಳಹನ್ನು ಹೊಮ್ಮಿಸಿದೆ. ಈ ಮಹಾಕಾವ್ಯದಲ್ಲಿ

ಕೃಷ್ಣಭಕ್ತಿಯ ಪರಕಾಷ್ಠತೆಯನ್ನು ಚಿತ್ರಿಸಿದ ಕವಿ ಕೊನೆಯ ನಿವೇದನದಲ್ಲಿ "ಪಡೆದನಿತೆ ಪುಣ್ಯಮ್ ನಡೆದನಿತೆ ದೂರಂ, ನಿರಂತರಂ ಲೋಕೋತ್ತರನ ನೆನೆವುದೇ ಇಂದೆನ್ನ ಭಾಗದೇಯಂ" ಎಂದು ನೆಮ್ಮದಿಯನ್ನು ಪಡೆಯುತ್ತಾರೆ. ೩೩ ಉಲ್ಲಾಸಗಳಲ್ಲಿ ಚಿತ್ರಿತವಾಗಿರುವ ಶ್ರೀಹರಿಚರಿತ ಪುತಿನ ಸಾಹಿತ್ಯದಲ್ಲಿ ಭಕ್ತಿಯ ಮೇರುಪರ್ವತದಂತೆ ಕಂಗೊಳಿಸುತ್ತದೆ.

ಪುತಿನ ಅವರ ಕವನಗಳಲ್ಲಿಯೂ ನಾವು ಭಕ್ತಿಯ ಅನೇಕ ಮುಖಗಳನ್ನು ಕಾಣಬಹುದು. ಗಣೇಶ ದರ್ಶನ, ಮಲೆದೇಗುಲ ಮುಂತಾದ ಕವನ ಸಂಕಲನಗಳಲ್ಲಿ ಪುತಿನ ಅವರ ದೈವಭಕ್ತಿ ಮಡುಗಟ್ಟಿ ನಿಂತಿದೆ. ಮಲೆದೇಗುಲ ಒಟ್ಟು ೫೧ ಬಿಡಿಗವನಗಳಿರುವ ಸಂಕಲನ. ಕವನಗಳ ವಸ್ತು ಒಂದೇ ಆಗಿದ್ದರೂ, ಒಂದೊಂದು ಕವನವೂ ಸ್ವಂತವಾಗಿ ನಿಲ್ಲಬಲ್ಲ ಮುಕ್ತಕಗಳಂತಿವೆ. ಇದೊಂದು ಭಕ್ತಿಕಾವ್ಯ. ಮೇಲುಕೋಟೆಯ ಬೆಟ್ಟದ ಮೇಲಿರುವ ಯೋಗಾನರಸಿಂಹಸ್ವಾಮಿ ದೇಗುಲವನ್ನು ಕುರಿತದ್ದು. ಇಲ್ಲಿ ದೇಗುಲ ಸಾಂಕೇತಿಕ ಮಾತ್ರ, ಇಲ್ಲಿ ಅಭಿವ್ಯಕ್ತಗೊಂಡಿರುವ ಭಕ್ತಿ ಭಾವಾವೇಷದಿಂದ ಉದ್ರಿಕ್ತವಾದ ಭಕ್ತಿಯಲ್ಲ, ತಾತ್ವಿಕ ಚಿಂತನೆಗಳಿಂದ ಪ್ರಚೋದಿತವಾದ ಭಕ್ತಿ,

**"ಹಣ್ಣಿನಿಂ ತರು ನಮ್ರ ಮೋಡ ಹನಿಯಿಂ ನಮ್ರ**
**ನೆರೆದ ಸಿರಿಯೊಳು ಪುಣ್ಯಪುರುಷ ನಮ್ರ**
**ಜ್ಞಾನಿಯರಿವಿಂ ನಮ್ರ ಆರ್ತನಳಲಿಂ ನಮ್ರ**
**ನೆಲೆಯರ್ತಿಗಿಂಬಾಗಿ ಭಕ್ತ ನಮ್ರ**
**ಭಾವಂಗಳಿಡಿದಿರಲು ಸತ್ಕವಿಯು ವಾಙ್ನಮ್ರ**
**ವಿಪುಲದರ್ಶನ ಶಕ್ತ ಧರ್ಮ ನಮ್ರ,**
**ಇಲ್ಲಿ ಮಣಿದವನೆಲ್ಲೆಡೆಯು ಸೆಟೆದು ನಿಲ್ವ**
**ಇಲ್ಲಿ ಮೈಕುಗ್ಗಿದವನೆಲ್ಲೆಲ್ಲು ನೇರ ನಡೆವ."**

ಎಂಬ ಕವಿವಾಣಿಯಲ್ಲಿ ಅವರ ಅಧ್ಯಾತ್ಮ ಚಿಂತನದ ಮಿಂಚನ್ನು ನೋಡಬಹುದು.

ಪುತಿನ ಅವರು ಸಂಪ್ರದಾಯಸ್ಥ ಕವಿಯಾದರೂ ಅವರ ವಿಚಾರಧಾರೆ ಆಧುನಿಕವಾಗಿತ್ತು. ಮಡಿವಂತಿಕೆ ಅವರಿಗೆ ಹಿಡಿಸುತ್ತಿರಲಿಲ್ಲ, ಮಾನವೀಯತೆ ಇಲ್ಲದ ಭಕ್ತಿ ಭಗವಂತನಿಗೆ ಸಮರ್ಪಿತವಾಗಲು ಅರ್ಹವಲ್ಲ ಎಂಬ ಧ್ವನಿ ಅವರ ಅನೇಕ ಕವನಗಳಲ್ಲಿ ಹೊಮ್ಮಿದೆ. ಪತಿತಪಾವನ ಎಂಬ ಕವನದಲ್ಲಿ ದೇವರ ಉತ್ಸವಕ್ಕೆಂದು ಬಂದಿದ್ದ ವಿಧವೆಯೊಬ್ಬಳನ್ನು ತಿರಸ್ಕಾರವಾಗಿ ಕಂಡ ವೈದಿಕರನ್ನು ಧಿಕ್ಕರಿಸಿದ್ದಾರೆ.

**"ಸರ್ವಾಭರಣ ಅಲಂಕೃತರಾಗಿ ಊರ ಹೆಂಗಸರು ಗುಡಿಗೆ ನಡೆದರು.**
**ಅವರ ಮೊಗದ ಮಂದಹಾಸದೊಡನೆ**

**ಒಂದು ಬಗೆಯ ಉಚ್ಚಭಾವ**
**ಬೆರೆದು ಇದ್ದಿತು."**
**"ಅದರಳೊಂದು ಮೊಗದ ಮೇಲೆ**
**ಐದೆತನದ ಸಿರಿಯು ಇಲ್ಲ**
**"ಹೊಮ್ಮುತುರುಬು ಭುಜದ ಮೇಲೆ**
**ಹರಿಯಲಿಲ್ಲವು."**

ದೇವರ ಎದುರಿಗೆ ನಿಲ್ಲಲು ದುಃಖಿತಪ್ತಳಾದ ತನಗೆ ಹೆಚ್ಚು ಹಕ್ಕಿದೆಯೋ ಎಂಬಂತೆ ಆ ತರುಣಿ ಎಲ್ಲರನ್ನೂ ಹಿಂದಿಟ್ಟು ಮುಂದೆ ನಿಲ್ಲುತ್ತಾಳೆ. ಆಗ "ನಾಮದಿಂದ ಮೈಯ ಮುಚ್ಚಿ, ಹುಲ್ಲ ಬೆರಳಿಗಿಟ್ಟ" ವಿಪ್ರನೊಬ್ಬ ಕೋಪದಿಂದ

**"ಪತಿತಳಿರುವ ಗುಡಿಯೊಳಿಂದು**
**ತೀರ್ಥವನ್ನು ತೆಗೆವರುಂಟೆ?**
**ಅವಳ ನೆಳಲ ಸೋಂಕಿನಿಂದ**
**ಅಶುಚಿ ದೇಗುಲ**
**ಅವಳ ಮೊದಲು ಹೊರಗೆ ದೂಡಿ**
**ಮಂತ್ರ ಜಪಿಸಿ ನೀರ ಚೆಲ್ಲಿ**
**ಇಲ್ಲದಿರಲು ನಿಲ್ಲೆ ನಿಲ್ಲಿ"**

ಎಂದು ಗರ್ಜಿಸುತ್ತಾನೆ. ಅವಳ ಪರ ವಹಿಸಿ "ನಾವು ಶುದ್ಧರೆಂದು ಇಲ್ಲಿ ಎದೆಯ ಮುಟ್ಟಿ ನುಡಿವರಾರು?" ಎಂದು ಪ್ರಶ್ನಿಸಿದ ಕೆಲವರ ನುಡಿ ಗಾಳಿಪಾಲಾಗಿ ಅವಳನ್ನು ಹೊರದೂಡುತ್ತಾರೆ. ಸುದ್ದಿ ಕೇಳಿದ ಕವಿ ಬಹಳ ವಿಷಾದಗೊಂಡು,

**"ನಾವು ಯಾರು ದೇವನಿದಿರಿ–**
**ನೊಳಗೆ ನಿಲ್ಲೆ ಪಾಪಿಗಿರುವ**
**ಹಕ್ಕ ಕಸಿಯಲು?**
**ಶುದ್ಧರೆಂಬ ಹೆಮ್ಮೆ ನಮಗೆ ?**
**ನಿತ್ಯ ಶುದ್ಧನಾದ ದೇವ–**
**ಗಿನಿತು ಹೆಮ್ಮೆಯಿದ್ದರೆಲ್ಲಿ**
**ನಾವು ನಿಲ್ವೆವು?"**

ಎಂದು ಪ್ರಶ್ನಿಸುತ್ತಾರೆ.

**"ಇರುಳು ಬೆಳೆಯೆ, ಮತಿಯ ಕಣ್ಣು**
**ಎನ್ನ ಬಾಳ ಕುಂದ ತೋರೆ,**
**ಬಡವೆ ವಿಧವೆಯನ್ನು ನೆನೆವೆ ; ಮನವು ತುಡಿವುದು."**

ಆ ಘಳಿಗೆಯಲ್ಲಿ ಗುಡಿಯಲ್ಲಿರುವ ದೈವಕ್ಕಿಂತ ಅವಳ ಮುರುಕು ಗುಡಿಸಲಿನಲ್ಲಿ ಹಣತೆಯ ಬೆಳಕಿನಲ್ಲಿ ಮಿನುಗುವ "ರಾಮ, ಪತಿತ ಪಾವನ" ಎನ್ನಿಸುತ್ತದೆ ಕವಿಮನಕ್ಕೆ.

ಇದೇ ನಿಟ್ಟಿನಲ್ಲಿರುವ ಮತ್ತೊಂದು ಕವನ "ರಂಗವಲ್ಲಿ". ಕವಿ ಒಂದು ದಿನ ಒಬ್ಬ ಪುಟ್ಟ ಹಸುಳೆಯೊಡನೆ ಬೆಟ್ಟದ ಮೇಲಿನ ಗುಡಿಗೆ ಹೋಗುತ್ತಾರೆ. ತುದಿ ತಲಪಿದಾಗ ಅವರ ಕಣ್ಣಿಗೆ ಹಣ್ಣು ಹಣ್ಣು ಮುದುಕಿಯೊಬ್ಬಳು ಕಾಣುತ್ತಾಳೆ.

**"ಮುದುಕಿಯುಟ್ಟ ಬಟ್ಟೆ ಚಿಂದಿ,**
**ನೆರೆತ ಹೆರಳು, ಸುಕ್ಕು ಮೋರೆ**
**ಮುಪ್ಪು ತನ್ನ ಮುದ್ರೆಯೊತ್ತಿ–**
**ದಂಗವವಳದು;**
**ಆದರವಳ ಕಂಗಳೆರಡು**
**ಜರೆಯನಣಕಿಸುತ್ತ ಹೊಳೆದು**
**ಮುಖಕೆ ಕೊಡುತಲಿದ್ದುವೊಂದು**
**ಬಗೆಯ ಶೀವಿಯ,"**

ಇಂತಹ ಮುದುಕಿ ಬೆಟ್ಟವನ್ನು ಹತ್ತಿ ಬಂದದ್ದಾದರೂ ಹೇಗೆ ? ಎಂದು ಕವಿ ವಿಸ್ಮಯಗೊಳ್ಳುತ್ತಾರೆ. ಬಡತನವೇ ಮೂರ್ತಿವೆತ್ತಂತಿರುವ ಅವಳು ಬೆಟ್ಟದ ನರಸಿಂಹನಿಗೆ ಏನು ಕಾಣಿಕೆ ಕೊಟ್ಟಾಳು? ಎಂದುಕೊಂಡರೂ "ಎಲ್ಲರೆದೆಯ ಹೊಗುವ ದೇವ ಹೊನ್ನುಹಣ್ಣೊಳಳೆಯನೊಲವ" ಎಂಬ ಜ್ಞಾನ ಆಕೆಗೆ ಇರಬಹುದು ಎಂದುಕೊಳ್ಳುತ್ತಾರೆ. ಮುದುಕಿ ಸೆರಗನ್ನು ಬಿಚ್ಚಿ ಅದರಲ್ಲಿ ಕಟ್ಟಿಕೊಂಡು ಬಂದಿದ್ದ ರಂಗೋಲಿಯನ್ನು ತೆರೆದು ಚಿತ್ರ ಬಿಡಿಸಲು ತೊಡಗುತ್ತಾಳೆ. ಇತ್ತ ಗರ್ಭಗುಡಿಯ ಬಾಗಿಲು ತೆಗೆದು ಸರ್ವಾಲಂಕೃತನಾದ ಸ್ವಾಮಿಯ ದರುಶನವಾಗುತ್ತಿದ್ದರೂ ಕವಿಯೊಡನೆ ಬಂದಿದ್ದ ಬಾಲಕನ ದೃಷ್ಟಿ ಮುದುಕಿಯ ರಂಗೋಲಿಯನ್ನು ಬಿಟ್ಟು ಅಗಲಲಿಲ್ಲ. "ಅದಕೆ ದೇವನಲ್ಲ, ಮುದುಕಿ ಬರೆವ ಹಸೆಯೆ ಸೋಜಿಗ!" ಆ ನೋಟ ಕವಿಗೆ ಹೊಸತೊಂದು ಅನುಭವವನ್ನು ಒದಗಿಸಿತು–

**"ಅದರ ನಡತೆ ಹೊಳೆಸಿತಂದು**
**ಮನಕದಂದು ಹೊಸದು ನಿಜವ:**
**ದೇವನಲ್ಲ– ಬರಿಯ ಬೊಂಬೆ!**
**ಹಸೆಯೆ ಸೋಜಿಗ!**
**ಭಕ್ತಿಮೂರ್ತಿಮುದುಕಿಯೊಮ್ಮೆ**
**ದೇವನೊಮ್ಮೆ ನೋಡಿತೆಂದೆ:**
**ದೇವ ಬೊಂಬೆ, ಪೂಜೆ ಆಟ**
**ಭಕ್ತಿ ಸೋಜಿಗ"**

ದೇವರು ಇರುವುದು ದಿಟವೋ ಸುಳ್ಳೋ. ಆದರೆ ನಮ್ಮ ಅಳಲುಗಳನ್ನು ಅರಿತು, ಸಂತೈಸುವ ಒಬ್ಬನಂತೂ ಉಂಟು ಎನ್ನುವ ಸತ್ಯ ಕವಿಗೆ ಗೋಚರವಾಗುತ್ತದೆ.

ನನ್ನ ಮನಸ್ಸನ್ನು ಮಿಡಿದ ಮತ್ತೊಂದು ಕವನ "ವಿಶ್ವ ಕುಟುಂಬಿಯ ಕಷ್ಟ". ಈ ಕವಿತೆಯಲ್ಲಿ ನಾಗಿ ಎಂಬ ಒಕ್ಕಲ ಹೆಣ್ಣು ಮನೆಗೆಲಸ ಮಾಡಿಕೊಂಡು ಬದುಕುತ್ತಿದ್ದಳು. ಒಂದು ಬೇಸಿಗೆಯ ಉರಿಬಿಸಿಲಿನ ದಿನ ಯಾರದೋ ಮನೆಯಲ್ಲಿ ರಾಗಿ ಬೀಸುತ್ತಿರುವಾಗ ಸಂಸಾರದ ನೂರೆಂಟು ತಾಪತ್ರಯ ಅವಳನ್ನು ಕಾಡುತ್ತದೆ. ಯೋಚನೆ ಹೆಚ್ಚಾದಂತೆ ಕಣ್ಣಲ್ಲಿ ಮೂಡಿದ ನೀರು ಬಿಕ್ಕಾಗಿ ಹೊರಬರುತ್ತದೆ. ಬಿಸಿಲಿನ ಬೇಗೆಗೆ ಬಳಲಿ ಅಲ್ಲೇ ಮಲಗಿದ್ದ ಮನೆಯ ಅಜ್ಜಿ ಅಳುವಿನ ಸದ್ದಿಗೆ ಎಚ್ಚೆತ್ತು ಸೊರಗುತ್ತಿರುವ ನಾಗಿಯನ್ನು ನೋಡಿ "ಬಿಕ್ಕಿ ನೀನಳುವಷ್ಟು ಕಷ್ಟ ಅದೇನವ್ವ? ಮಕ್ಕಳ ಹಂಬಲೇ, ನಾಗಿ?" ಎಂದು ಕೇಳಲು ಉಕ್ಕಿ ಬರುತ್ತಿದ್ದ ದುಃಖವನ್ನು ನುಂಗುತ್ತ ನಾಗಿ ಹೇಳುತ್ತಾಳೆ–

**"ಏನೇಳ್ಳಿ ನಮ್ಮವ್ವ, ಇರುವೋದು ಮೂವೋರು:**
**ನಾನು ನಮ್ಮೆಣ್ಣು ಮೊಲೆಗೂಸು.**
**ಕಾಣಿರಾ: ಒಪ್ಪತ್ತು ದುಡಿಯದೇ ಕೂತರೂ**
**ಪ್ರಾಣಾನ ನೀಸೋದು ಕಷ್ಟ.**
**'ಹುಲುಮನಸಿ'ಯ ಪಾಡು ಹಿಂಗೈತೆ, ನಮ್ಮವ್ವ**
**ಮಲೆದೇವ್ರ ಪಾಡ ಏನೇಳ್ಲಿ!**
**ಸುಲಭಾನೆ ಲೋಕಾದ ಸಂಸಾರ ನಡೆಸೋದು?**
**ಅಳುಬಂತು ನಮ್ಮಪ್ಪಗಾಗಿ"**

ತನ್ನ ಅಳಲನ್ನು ಮರೆತು, ಆ ಭಗವಂತನ ಕಷ್ಟಕ್ಕಾಗಿ ಕಣ್ಣೀರಿಡುತ್ತಿದ್ದ ನಾಗಿಯ ಹೃದಯವೈಶಾಲ್ಯ, "ಹೆಚ್ಚುಂಟೆ ಒಕ್ಕಲ ಹೆಣ್ಣಿನ ಮರುಕಕೂ?" ಎಂದು ಕವಿಯನ್ನು ಅಚ್ಚರಿಗೊಳ್ಳಿಸುತ್ತದೆ. ನಾಗಿಯಂತೆಯೆ ಪುತಿನ ಅವರೂ ಸಹ ಆ ಭಗವಂತನಿಗಾಗಿ ಒಮ್ಮೊಮ್ಮೆ ಮರುಗುತ್ತಿದ್ದರು. ಅವರ "ದೀನಗಿಂತ ದೇವ ಬಡವ" ಎಂಬ ಕವನದಲ್ಲಿ

**"ಹರಿಗೆ ಎಂದು ಗುಡಿಯನೊಂದ**
**ಕಟ್ಟುತಿರುವೆನು**
**ದೀನಗಿಂತ ದೇವ ಬಡವ–**
**ನೆಂದು ಬಗೆವೆನು,**
**ನಿಜವು ವಿಷ್ಣು ವಿಶ್ವದರಸು, ವಿಶ್ವಧಾಮನು**
**ಒಂದು ಹೆಜ್ಜೆಯಿಟ್ಟು ಬುವಿಯ ನಾಕವಳೆದನು.**
**ಎಷ್ಟು ಚಿಕ್ಕದೆನ್ನ ಹೃದಯ : ಏನು ಹೊಲಸದು!**
**ಇಲ್ಲು ನೆಲೆಯ ಬೇಡುವವನ ದೈನ್ಯವೆಂಥದು!"**

ಬೆಳ್ಳಿಬೆಟ್ಟದ ಒಡೆಯನಾದ ಶಿವನು ಚಂದ್ರಮೌಳಿ ಹೌದು. ಪ್ರೇಮಮೂರ್ತಿಯಾದ ಗಿರಿಜೆ ಅವನ ಪ್ರಾಣಕಾಂತೆ. ಏನಿದ್ದರೇನು? ಅವನ "ಬೀಡು ಮಸಣ, ಲೇಪ ಬೂದಿಯು, ಚರ್ಮ ಉಡುಗೆ, ಹಾವು ತೊಡುಗೆ, ಬದುಕು ಬಿಕ್ಕೆಯು" ಅದಕ್ಕೇ ಅವನು ದೀನಗಿಂತ ಬಡವ ಎನ್ನುತ್ತಾರೆ ಕವಿ. "ದೀನಗೊಂದು ವಿಶ್ವ ಸಾಲದಾಸೆ ತಣಿಸಲು, ದೇವಗೆದೆಯ ಗುಡಿಲೆ ಸಾಕು ನಲಿದು ನೆಲೆಸಲು" ಎಂಬ ಮಾತಿನಲ್ಲಿ ಹೃದಯವಿಹಾರಿಯಾದ ಹರಿ ಕವಿಗೆ ಎಷ್ಟು ಹತ್ತಿರದವನು ಎಂಬ ಮನವರಿಕೆಯಾಗುತ್ತದೆ.

ಮಂಗಲಾಯತನ ಎಂಬ ಕವಿತೆಯಲ್ಲಿ ಕವಿಯ ಜೀವನಧ್ಯೇಯ, ಜೀವವನ್ನು ದೇವನಲಂಕಾರಯೋಗ್ಯವಾದ ಹದಕ್ಕೆ ತರುವುದೇ ಆಗಿದೆ ಎನ್ನುವುದು ಸ್ಪಷ್ಟವಾಗಿದೆ.

**"ಹಸುಳೆಯ ಮುಗ್ಧ ಭಾವದೊಡನೆ**
**ರಿಸಿಯ ಪಕ್ವ ಭಾವ ನೆರೆದು**
**ಪಸದನವೀ ಜೀವ ದೇವ–**
**ಗೆನಿಸುವಂಥ ಹದವ ಪಡೆಯೆ.**
**ಸದಾ ಮಂಗಲಾಯತನಕೆ**
**ಧಾವಿಸುತಿರು ಎಲೆ ಮನವೇ"**

ಎನ್ನುತ್ತಾರೆ, ಅವರ ಮತ್ತೊಂದು ಕವನ "ಲಘುವಾಗೆಲೆ ಮನ" ಎಂಬುದರಲ್ಲಿ ಕವಿ ತನ್ನ ಮನಸ್ಸನ್ನು "ಹಾರು ನನ್ನ ಬಿಟ್ಟು, ಹಾರಿ ಹರಿಯ ಮುಟ್ಟು" ಎಂದು ಕೇಳಿಕೊಳ್ಳುತ್ತಾರೆ.

**"ನನಗಂಟಲು ನೀನಾಗುವೆ ಕಶ್ಮಲ**
**ನನ್ನತೊರೆಯೆ ನೀ ನಿರ್ಮಲ ನಿಷ್ಕಳ**
**ಹರಿಯೊ ನನ್ನ ಬಿಟ್ಟು**
**ಮುಂಬರಿದು ಹರಿಯ ಮುಟ್ಟು"**

ಎಂದು ಹುರಿದುಂಬಿಸಿ ನೀಲದಾಗಸದ ಹರಹಿನಲ್ಲಿ ಹಕ್ಕಿಯಂತೆ ಹಾರುತ್ತ ಮುಗಿಲಂಚನ್ನು ಮುಟ್ಟಿ "ಕ್ಷೀರಾಬ್ಧಿಶಾಯಿ ಶ್ಯಾಮಸುಂದರನ ಉಸಿರೊಳಾಡು ನೀ ಅವನುಸಿರಾಗುತ" ಎನ್ನುವ ಕವಿವಾಣಿಯಲ್ಲಿ ಪರಮಾತ್ಮನೊಡನೆ ಲೀನವಾಗಬೇಕೆನ್ನುವ ಅದಮ್ಯ ಬಯಕೆಯನ್ನು ಕಾಣುತ್ತೇವೆ. ತನ್ನದೆಲ್ಲವನ್ನೂ ಭಗವಂತನಿಗೆ ಸಮರ್ಪಿಸಿ ಶರಣಾಗತಿಯ ತತ್ವವನ್ನು ಮೆರೆಸುವ ಮತ್ತೊಂದು ಕವನ "ಸರ್ವಾರ್ಪಣ". ಪುರಂದರದಾಸರ ದೇವರನಾಮಗಳನ್ನು ನೆನಪಿಗೆ ತರುವ ಈ ಕವನದಲ್ಲಿ ಕವಿ "ವರವ ಬೇಡೆನಯ್ಯ ಶ್ರೀಹರಿ, ಕರುಣೆಯೊಂದೇ ಸಾಕು" ಎನ್ನುತ್ತಾರೆ. "ನನ್ನ ಒಳಿತು ಕೆಡಕುಗಳನ್ನು ಅರಿಯಲು ನಾನೇನು ಸರ್ವಜ್ಞನೇ?" ಎಂದು ಪ್ರಶ್ನಿಸಿಕೊಳ್ಳುತ್ತಾರೆ. ಒದಗಿಬಂದುದನ್ನು ಪ್ರಸಾದವೆಂದು ಸ್ವೀಕರಿಸದೆ "ಮುದಕು ಅಳಲಿಗು ಕಾಲ್ಚೆಂಡಾದೆನು" ಎಂದು ಕೊರಗುತ್ತಾರೆ.

**"ನಿನ್ನೊಳುನಾನಿಳಿದಳಿಯಲು ಬಯಸುವೆ**
**ಮನ್ನಿಸೆನ್ನ ನಾನಿನ್ನವನೆನ್ನುತ**
**ಖಿನ್ನತೆಯಿದ ಕಾರುಣ್ಯದಿ ಕೊಚ್ಚುತ**
**ನಿನ್ನವನಾಗಿಸಿ, ಮೊರೆವುದನೇ ಕಳೆ"**

ಎಂಬ ಅಂತಿಮ ಕೋರಿಕೆಯೊಡನೆ ಆ ಭಗವಂತನಲ್ಲಿ ಸರ್ವಾರ್ಪಣ ಮಾಡಿಕೊಳ್ಳುತ್ತಾರೆ. "ಕೊನೆವರೆಗೂ ದೀಪಿಸುತಿರಲಿ ಎಡೆಬಿಡದೆನ್ನ ಮಾನಸವ ಕೃಷ್ಣಸ್ಮರಣೆ" ಎಂಬುದೇ ಕವಿಯ ಹಾರೈಕೆ. ಬದುಕಿನಲ್ಲಿ ಯಾವುದಕ್ಕೂ ಹೆಚ್ಚು ಆಸೆಪಡದೆ ಪ್ರಕೃತಿವೈಭವವನ್ನು ಬೆರಗುಗಣ್ಣಿಂದ ನೋಡುತ್ತ, ಈ ಜೀವ ಆ ದೇವನಿರುವ ದೇಗುಲ ಎಂದು ನಿರ್ಮಲಚಿತ್ತದಿಂದ ನಿಷ್ಕಪಟವಾಗಿ ಸದಾ ಸಂತೋಷಚಿತ್ತರಾಗಿರುತ್ತಿದ್ದ ಪೂಜ್ಯ ಕವಿ ಪುತಿನ ಭವದ ಅಳಲವನ್ನು ಭಕ್ತಿಯಿಂದ ಗೆಲ್ಲುವ ಸೂತ್ರವನ್ನು ಕಂಡುಕೊಂಡಿದ್ದರು.

**"ಹಗುರಾಗಿಹ ಮೈ ಕೆಸರಿಲ್ಲದ ಮನ**
**ಹಂಗಿಲ್ಲದ ಬದುಕು**
**ಕೇಡಿಲ್ಲದ ನುಡಿ ಕೇಡೆನಿಸದ ನಡೆ**
**ಸಾಕಿವು ಇಹಕೂ ಪರಕೂ**
**ಮೇಲೇನಿದೆ ಇದಕೂ"**

ನುಡಿದಂತೆ ನಡೆದ ಬದುಕು ಅವರದು. "ಶ್ರೀಹರಿಚರಿತೆ" ಮಹಾಕಾವ್ಯದ ಮುನ್ನುಡಿಯಲ್ಲಿ "ಜಗತ್ತಿನಲ್ಲಿ ಸಂತೋಷವನ್ನು ಪಡೆಯುವುದು ಸುಲಭವಲ್ಲ ಅಲ್ಲವೇ?" ಎಂಬ ಅರ್ಥ ಬರುವ ಸಂಸ್ಕೃತದ ಸೂಕ್ತಿಯೊಂದನ್ನು ಉದಾಹರಿಸಿ "ನನ್ನ ಹೃದಯದಲ್ಲಿ ಈ ಸಂತೋಷವನ್ನು ಕಾಪಾಡಿಕೊಳ್ಳಲು ಶ್ರೀಹರಿಸ್ಮೃತಿ ಬಹು ಸಮೀಚೀನವಾದ ಉಪಾಯ ಎಂಬುದನ್ನು ನಾನು ಕಂಡುಕೊಂಡಿದ್ದೇನೆ. ಈ ಸಂತೋಷವನ್ನು ಮೂರ್ತೀಕರಿಸುವುದರ ಮೂಲಕ ಸಹೃದಯರಿಗೆ ಹಂಚುವುದು ಈ ಕಾವ್ಯೋದ್ಯೋಗದಲ್ಲಿನ ನನ್ನ ಅಭೀಪ್ಸೆ" ಎಂದು ಹೇಳಿದ್ದಾರೆ.

ಹುಟ್ಟಿನಿಂದ ರೂಢಿಸಿಕೊಂಡಿದ್ದ ಆರ್ಷೇಯ ಸಂಸ್ಕೃತಿ, ಸಂಪ್ರದಾಯಶರಣವಲ್ಲದ ವಿಶಾಲ ಮನೋಭಾವ, ಚಿಂತನಶೀಲ ವೈಚಾರಿಕತೆ ಪುತಿನ ಅವರನ್ನು ಆಧುನಿಕ ಯುಗದ ದಾರ್ಶನಿಕರನ್ನಾಗಿಸಿದೆ.

**ಆಧಾರಗ್ರಂಥಗಳು:**

ಪು ತಿ ನ– ಸಮಗ್ರ ಗೇಯಕಾವ್ಯ ನಾಟಕಗಳು.
ಪು ತಿ ನ– ಸಮಗ್ರ ಕಾವ್ಯ.

■

# ಸುಗಮ ಸಂಗೀತದಲ್ಲಿ ಭಕ್ತಿ

–ಸಂಧ್ಯಾ ರವೀಂದ್ರನಾಥ್

ಭಕ್ತಿ ಎನ್ನುವುದಕ್ಕೆ ಸೇವೆ, ಆರಾಧನೆ, ದೇವರ ಅಥವಾ ಪೂಜ್ಯ ವ್ಯಕ್ತಿಗಳ ಬಗ್ಗೆ ಅತ್ಯಂತ ಅನುರಾಗ, ಶ್ರದ್ಧೆ ಎನ್ನುವ ಅರ್ಥವಿದೆ. ಭಾಗವತ ಮತ್ತು ವಿಷ್ಣು ಪುರಾಣದ ಪ್ರಕಾರ ಭಕ್ತಿಯಲ್ಲಿ ನವ ವಿಧ. ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಹಾಗೂ ಆತ್ಮನಿವೇದನ. ಭಕ್ತಿಮಾರ್ಗದ ಉದ್ದೇಶ ಆತ್ಮ ಸಾಕ್ಷಾತ್ಕಾರ, ಅನನ್ಯ ಭಕ್ತಿಯಿಂದ ಪ್ರೇಮದಿಂದ ದೇವರನ್ನು ಸೇರುವುದು.

ದಾಸ ಸಾಹಿತ್ಯದಲ್ಲಿ ದೇವರ ವರ್ಣನೆ, ಅವನ ವಿವಿಧ ಮಹಿಮೆ, ನಾಮ ಸಂಕೀರ್ತನ, ಸ್ಮರಣ, ವಂದನ, ಆತ್ಮ ನಿವೇದನ ಇತ್ಯಾದಿ ಭಕ್ತಿಪ್ರಧಾನವಾದ ಹಲವಾರು ಕೃತಿಗಳಿವೆ. ಇವಲ್ಲದೆ, ಭಕ್ತಿಭಾವವನ್ನು ವ್ಯಕ್ತಪಡಿಸುವ ಮತ್ತು ಸಂಗೀತಕ್ಕೆ ಹೊಂದುವ ಗೇಯಗುಣವುಳ್ಳ ಹಲವಾರು ಕವನಗಳನ್ನು ಈಚಿನ ಕವಿಗಳು ರಚಿಸಿದ್ದಾರೆ. ಪ್ರಸಿದ್ಧ ಸಂಗೀತಗಾರರು ಈ ಕವನಗಳ ಭಾವಕ್ಕೆ ಅನುಗುಣವಾಗಿ ರಾಗ ಸಂಯೋಜಿಸಿದ್ದಾರೆ ಹಾಗೂ ಪ್ರತಿಭಾವಂತ ಗಾಯಕ ಗಾಯಕಿಯರು ಈ ಗೀತೆಗಳನ್ನು ಹಾಡಿ, ಅವು ಅತ್ಯಂತ ಜನಪ್ರಿಯವಾಗಿವೆ. ಹೀಗೆ ಕವಿಗಳ ಕವನಗಳಲ್ಲಿ ರೂಪ ತಾಳಿದ ಈ ಭಕ್ತಿಭಾವ, ರಾಗದ ಚೌಕಟ್ಟಿನಲ್ಲಿ, ತಾಳದಿಂದ ಅಲಂಕೃತಗೊಂಡು, ಹಾಡುಗಾರರು ಸುಶ್ರಾವ್ಯವಾಗಿ ಹಾಡಿದಾಗ ಈ ಹಾಡುಗಳು ಹೇಗೆ ತಾನೆ ಜನಮನವನ್ನು ಮುಟ್ಟದೇ ಇದ್ದೀತು? ಇಂತಹ ಭಕ್ತಿ ಪ್ರಧಾನವಾದ ಕೆಲವು ಕವಿತೆಗಳ ಬಗ್ಗೆ ಈ ಲೇಖನ.

೫೦–೬೦ ವರ್ಷಗಳ ಹಿಂದೆ ಕನ್ನಡ ಗೀತೆ ಅಥವಾ ಭಾವಗೀತೆಗಳೆಂದು ಜನಪ್ರಿಯವಾಗಿದ್ದ, ರಾಗಕ್ಕೆ ಅಳವಡಿಸಿದ ಇಂತಹ ಕವಿತೆಗಳೇ ಮುಂದೆ ಸುಗಮಸಂಗೀತ–ವೆಂದು ಪ್ರಸಿದ್ಧಿಯಾಯಿತು. ಹೆಸರಾಂತ ಕವಿಗಳಾದ ಜಿ. ಎಸ್. ಶಿವರುದ್ರಪ್ಪ, ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ, ಕೆ. ಎಸ್. ನಿಸಾರ್ ಅಹಮದ್, ಎಸ್. ಕೆ. ಕರೀಂಖಾನ್, ಎಚ್. ಎಸ್. ವೆಂಕಟೇಶಮೂರ್ತಿ ಇವರ ಕೆಲವು ಕವಿತೆಗಳನ್ನು ಕುರಿತು ಬರೆದಿದ್ದೇನೆ. ಹಾಗೂ ಸೋಸಲೆ ಅಯ್ಯಾಶಾಸ್ತ್ರಿಯವರ ಒಂದು ಹಳೆಯ ಆದರೆ ಎಲ್ಲರ ಮನದಲ್ಲಿ ಇಂದಿಗೂ ಉಳಿದಿರುವ ಗೀತೆಯೊಂದನ್ನೂ ಸೇರಿಸಿದ್ದೇನೆ.

## ೧. ಮಾನವೇನಪಮಾನವೇನು? ಎಸ್. ಕೆ. ಕರೀಂ ಖಾನ್

**ಮಾನವೇನಪಮಾನವೇನು ಶ್ರೀನಿವಾಸ ನಿನ್ನ ಚರಣ**
**ನಂಬಿ ಮೊರೆಯುವ ದುಂಬಿ ನಾನು**

ನನ್ನದೆಲ್ಲವು ಸರ್ವಾಂತರ್ಯಾಮಿಯಾದ ನಿನ್ನದು, ನಾನೇ ನಿನ್ನವನು ಎಂಬ ಆತ್ಮಸಮರ್ಪಣ ಭಾವವನ್ನು ಸರಳವಾಗಿ ಸುಂದರವಾಗಿ ಚಿತ್ರಿಸುವ ಗೀತೆ. ತನು, ಮನ, ಧನ ಎಲ್ಲವೂ ಶ್ರೀನಿವಾಸನಿಗೆ ಅರ್ಪಣ. ನಾನು ಎನ್ನುವುದೇ ಇಲ್ಲವಾದ ಮೇಲೆ ನನ್ನದಾಗಿ ಏನಿರಲು ಸಾಧ್ಯ? ಸುಖ ದುಃಖ, ನೋವು ನಲಿವು, ಮಾನ ಅಪಮಾನ ಏನೂ ಇಲ್ಲ, ಯಾವುದೂ ನನ್ನದಲ್ಲ. ನೀನೇ ಗತಿ ಎಂದು ನಿನ್ನ ಪದಕಮಲದಲ್ಲಿ ದುಂಬಿಯಾಗಿದ್ದೇನೆ ನಾನು. ನಾನು ನುಡಿಯುವುದು ನೀನು ನುಡಿಸಿದಂತೆ, ನಾನು ಆಡುವುದು ನೀನು ಆಡಿಸಿದಂತೆ. ಕೇವಲ ಪಾತ್ರಧಾರಿ ನಾನು. ನನ್ನ ಸೂತ್ರವನ್ನು ಹಿಡಿದು ನನ್ನನ್ನು ಆಡಿಸುತ್ತಿರುವ ಸೂತ್ರಧಾರಿ ನೀನು.

**ನಗಿಸಿ ನಲಿಸಿ ಒಲಿವರಾರೋ**
**ದುಡಿಸಿ ಕಾಡಿಸಿ ಕೊಲುವರಾರೋ**
**ಕಾಡುವನು ಕಾಪಾಡುವವನೂ**
**ಮಾರಣಾಂತಕ ತಂದೆ ನೀನು**

ಹೀಗೆ ಹುಟ್ಟಿಸಿ, ನಮ್ಮನ್ನು ಕಾಡಿ, ಕಾಪಾಡಿ, ಕೊನೆಯಲ್ಲಿ ಹುಟ್ಟುಸಾವುಗಳ ಈ ಚಕ್ರವನ್ನು ನಿಲ್ಲಿಸಿ ಮುಕ್ತಿಯನ್ನೀಯುವ ತಂದೆಯೂ ನೀನೇ. ಇಂತಹ ಪರಮಾತ್ಮನಿಗೆ ತನ್ನದೆನ್ನುವ ಮಮಕಾರವಿಲ್ಲದೆ ಎಲ್ಲವನ್ನೂ ಕೃಷ್ಣಾರ್ಪಣಮಸ್ತು ಎಂದು ಅವನು ಕೊಟ್ಟಿರುವುದನ್ನು ಅವನಿಗೇ ಕೊಡುವ ಆತ್ಮ ನಿವೇದನೆಯ ಭಾವನೆ ಸುಂದರವಾಗಿ ಮೂಡಿ ಬಂದಿದೆ ಈ ಗೀತೆಯಲ್ಲಿ.

ಈ ಕವಿತೆಯು ಭಗವದ್ಗೀತೆ, ಭಾಗವತ ಪುರಾಣಗಳಲ್ಲಿರುವ ಸೂಕ್ತಿಗಳಂತಿದೆ ಎಂದರೆ ತಪ್ಪಾಗಲಾರದು. ಭಗವದ್ಗೀತೆಯಲ್ಲಿ ಭಕ್ತಿಯೋಗದ ಶ್ಲೋಕವೊಂದನ್ನು ನೆನಪು ಮಾಡಿತು ಈ ಕವಿತೆ – "ಸಮಃ ಶತ್ರೌ ಚ ಮಿತ್ರೇ ಚ, ತಥಾ ಮಾನಾಪಮಾನಯೋಃ, ಶೀತೋಷ್ಣ ಸುಖದುಃಖೇಷು ಸಮಃ ಸಂಗವಿವರ್ಜಿತಃ". ಮಿತ್ರರೊಡನೆ, ವೈರಿಗಳೊಡನೆ, ಸುಖ, ದುಃಖ, ಮಾನ, ಅಪಮಾನ, ಒಳ್ಳೆಯದು, ಕೆಟ್ಟದ್ದು, ಎಲ್ಲ ಸನ್ನಿವೇಶದಲ್ಲಿ ಯಾರು ಮಮಕಾರವಿಲ್ಲದೇ ಒಂದೇ ಸಮನಾಗಿರುತ್ತಾರೋ, ಅಂಥವರು ದೇವರಿಗೆ ಪ್ರಿಯ. ಭಗವದ್ಗೀತೆಯ ಸಾರವನ್ನು ಹಿಡಿದಿಟ್ಟಂತಿರುವ ಈ ಕವನವನ್ನು ಬರೆದವರು ಯಾರೋ ಸಂಪ್ರದಾಯಸ್ಥ ಹಿಂದೂ ಮನೆತನದಲ್ಲಿ ಬೆಳೆದವರು ಎಂದೆನಿಸಿದರೆ ತಪ್ಪೇನಿಲ್ಲ. ಆದರೆ ಈ ಕವನವನ್ನು ಬರೆದವರು ಬೇರೆ ಮತದವರಾದರೂ ಹಿಂದೂ ಸಂಸ್ಕೃತಿಯನ್ನು

ಹೃದಯದಿಂದ ಅನುಭವಿಸಿದವರಾದ ಕರೀಮ್ ಖಾನ್ ಅವರು. ಅವರಿಗೆ ಅನಂತ ನಮನ.

ಮೈಸೂರು ಅನಂತಸ್ವಾಮಿಯವರ ಮನಸೆಳೆಯುವ ಸಂಗೀತ ನಿರ್ದೇಶನದ ಈ ಗೀತೆಯನ್ನು ತುಂಬ ದಿನದಿಂದ ಕೇಳಿದ್ದರೂ, ಬರೆದವರು ಕರೀಂ ಖಾನ್ ಎನ್ನುವ ವಿಷಯ ನನಗೆ ತಿಳಿದಿರಲಿಲ್ಲ. ಈ ವಿಷಯವನ್ನು ನನಗೆ ತಿಳಿಸಿದ ಸುನೀತ ಅನಂತಸ್ವಾಮಿಗೆ ಧನ್ಯವಾದಗಳು.

**೨. ನಮೋ ಗೌರಿ ನಾರಾಯಣಿ –ಡಾ. ಜಿ. ಎಸ್. ಶಿವರುದ್ರಪ್ಪ**

**ನಮೋ ಗೌರಿ ನಾರಾಯಣಿ ಶ್ರೀ ದುರ್ಗಾಮಾಯಿ**
**ನಿನ್ನಯ ಕೃಪೆ ಇಲ್ಲದಿರಲು ನಾನು ಕಾಣೆ ತಾಯಿ**

ಸರ್ವಮಂಗಳೆಯಾದ ಅನ್ನಪೂರ್ಣೆಯ ಕೃಪೆಯು ಸದಾ ಇರಲಿ ಎಂದು ಬೇಡುವ ಗೀತೆ. ಹಗಲು, ಇರುಳು, ಸಂಜೆ ರಾತ್ರಿ ಎಲ್ಲವೂ ಅವಳೇ. ಅವಳು ಬೇರಾರೂ ಅಲ್ಲ. ಕೋದಂಡಪಾಣಿಯಾಗಿ ರಾವಣನನ್ನು ಸಂಹರಿಸಿದ ರಾಮನೂ ಅವಳೇ, ಕೊಳಲಗಾನಗೈದು ಗೋಪಿಯರೊಡನೆ ರಾಸಲೀಲೆ ಆಡಿದ ಗೋಪಾಲನೂ ಅವಳೇ.

**ಕೊಳಲು ಹಿಡಿದು ಗಾನಗೈವ ಗೋಪಾಲ ರೂಪಿಣಿ**
**ಶಿವನ ಮೆಟ್ಟಿ ಮೇಲೆ ನಿಂತ ರುದ್ರ ಭದ್ರಕಾಳಿ ನೀ**

ಭದ್ರಕಾಳಿಯು ಮೂರು ಕಣ್ಣು ಎಂಟು ಕೈಗಳುಳ್ಳ ದೇವಿಯ ಒಂದು ಸ್ವರೂಪ. ಕಾಳಿ, ತಾರ, ಭೈರವಿ, ಭುವನೇಶ್ವರಿ, ಮಾತಂಗಿ, ಧೂಮವತಿ ಮೊದಲಾದ ಹತ್ತು ಮಹಾಶಕ್ತಿಗಳೂ ಅವಳ ಸ್ವರೂಪವೇ. ಸೌಮ್ಯ ರೂಪದ ರಾಮ, ಕೃಷ್ಣರೂ ಅವಳೇ. ಭೈರವಾಕಾರದ ಕಾಳಿಯೂ ಅವಳೇ. ಅವರವರ ಭಕುತಿಗೆ, ಅವರವರ ಭಾವಕ್ಕೆ ತಕ್ಕ ದೇವರು.

**ದಶಾವತಾರಿ ನೀನೆ, ದಶಮಹಾವಿದ್ಯೆ ನೀನೆ**
**ಪರಮಶಕ್ತಿ ರೂಪಿಣೀ, ಭವಸಾಗರ ತಾರಿಣಿ**

ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ರಕ್ಷಿಸಲೆಂದು ಹತ್ತು ಅವತಾರವನ್ನು ತಳೆದವಳೂ ಅವಳೇ. ಲಲಿತಾ ಸಹಸ್ರನಾಮದಲ್ಲಿ "ಕರಾಂಗುಲಿನಖೋತ್ಪನ್ನ ನಾರಾಯಣ ದಶಾಕೃತಿಃ" ಎನ್ನುವ ಉಲ್ಲೇಖವಿದೆ. ಪರಮಾತ್ಮನು ದೈತ್ಯರನ್ನು ಕೊಲ್ಲಲೆಂದು ಅವತಾರವೆತ್ತಿದ ಆ ಹತ್ತು ಅವತಾರಗಳನ್ನು ತನ್ನ ಕೈಬೆರಳುಗಳ ಉಗುರಿನಿಂದ ಮಾಡಿದವಳು ಆ ಪರಾಶಕ್ತಿ. ಪರಮ ಶಕ್ತಿ ರೂಪಿಯಾದ ದುರ್ಗಾಮಾಯಿಯೇ ಈ ಭವಸಾಗರವನ್ನು ದಾಟಿಸುವಳು.

**ಕಾಡಿನಲೋ ಬೀಡಿನಲೋ, ಎಲ್ಲಾದರೂ ಇರಲಿ ನಾ**
**ಎಂಥ ಸಾವು ಬಂದರೂ**
**ನಿನ್ನ ನೆನಪು ಉಳಿಯಲೆನಗೆ**
**ನನ್ನ ಅಂತ್ಯಕಾಲದಿ.**

"ಅಂತಕಾಲೇ ಚ ಮಾಮೇವ ಸ್ಮರಣ್ಮುಕ್ತಾ ಕಲೇವರಂ ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ" ಎನ್ನುವ ಭಗವದ್ಗೀತೆಯ ನುಡಿಯಂತೆ ಕಾಡಿನಲ್ಲೋ, ಬೀಡಿನಲ್ಲೋ ಎಲ್ಲಿದ್ದರೂ ಅಂತ್ಯದಲ್ಲಿ ಅವಳ ನೆನಪು ಬರಲಿ ಎಂದು ಭಕ್ತಿಯಿಂದ ಬೇಡುವ ಗೀತೆ. ಇದೇ ಭಾವನೆಯು ಹಿಂದಿಯ ಮತ್ತೊಂದು ಜನಪ್ರಿಯ ಭಜನ್ ಒಂದರಲ್ಲಿ ಮನಮುಟ್ಟುವಂತೆ ಚಿತ್ರಿತವಾಗಿದೆ. "ಇತನಾ ತೊ ಕರನಾ ಸ್ವಾಮಿ ಜಬ್ ಪ್ರಾಣ್ ತನ್ ಸೆ ನಿಕಲೆ, ಗೋವಿಂದ್ ನಾಮ್ ಲೇಕೆ ತಬ್ ಪ್ರಾಣ್ ತನ್ ಸೆ ನಿಕಲೆ". ಪುರಂದರ ದಾಸರ "ನಾರಾಯಣ ನಿನ್ನ ನಾಮದ ಸ್ಮರಣೆಯ" ಕೃತಿಯಲ್ಲೂ ಇದನ್ನೇ ಹೇಳಿದ್ದಾರೆ: "ಅಂತ್ಯಕಾಲದಲ್ಲಿ ಚಿಂತಿಸೋ ಹಾಗೆ". ಆದರೆ ಅಂತ್ಯಕಾಲ ಯಾವಾಗ ಬರುವುದೆಂಬುದನ್ನು ಅರಿತವರಾರು? ಆದ್ದರಿಂದ ಸದಾ ಪರಾಶಕ್ತಿಯ ಸ್ಮರಣೆಯಾಗಲಿ, ನಾಮ ಸಂಕೀರ್ತನವಾಗಲಿ, ಅವಳ ನೆನಪು ಮನದಲ್ಲಿರಲಿ, ಅವಳ ಹೆಸರು ನಾಲಿಗೆಯ ಮೇಲಿರಲಿ!

ಭಗವದ್ಗೀತೆಯ ಇನ್ನೊಂದು ಶ್ಲೋಕವು "ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಮ್ ನಮಸ್ಕುರು ಮಾಮೇವೈಷಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ" ಎಂದಿದೆ. ಅನನ್ಯ ಭಕ್ತಿಯಿಂದ ದೇವರನ್ನು ಮನಸ್ಪೂರ್ವಕವಾಗಿ ನಮಸ್ಕರಿಸುವ, ಪೂಜಿಸುವ ಭಕ್ತನು ದೇವರನ್ನು ಸೇರುತ್ತಾನೆ.

ಈ ಗೀತೆಯ ಸಂಗೀತ ನಿರ್ದೇಶನ ಯಾರದ್ದು ಎಂದು ತಿಳಿದಿಲ್ಲ. ೭೦ರ ದಶಕದಲ್ಲಿ ಜನಪ್ರಿಯವಾಗಿದ್ದ ಗೀತೆ.

### ೩. ಉಡುಗಣ ವೇಷ್ಟಿತ –ಡಾ. ಜಿ. ಎಸ್. ಶಿವರುದ್ರಪ್ಪ

**ಉಡುಗಣ ವೇಷ್ಟಿತ ಚಂದ್ರ ಸುಶೋಭಿತ ದಿವ್ಯಾಂಬರ ಸಂಚಾರಿ**
**ಕಣ್ಣ ನೀರಿನಲಿ ಮಣ್ಣ ಧೂಳಿನಲಿ ಹೊರಳುತ್ತಿರುವರ ಸಹಚಾರಿ**

ಎಲ್ಲೆಡೆ ಇರುವ ದೇವರು ನಾವು ಕಂಡಂತೆ, ನಮ್ಮ ಭಾವನೆಗೆ ಅನುಸಾರವಾಗಿ ನಮಗೆ ತೋರಿ ಬರುತ್ತಾನೆ. ಈ ಕವಿತೆಯಲ್ಲಿ ಕವಿಗೆ ಎರಡು ವಿಭಿನ್ನ ರೂಪದಲ್ಲಿ ಕಂಡುಬರುತ್ತಾನೆ. ಅನಂತ ನಕ್ಷತ್ರಗಳನ್ನು ಹೊದ್ದು, ಚಂದ್ರನಿಂದ ಅಲಂಕರಿಸಲ್ಪಟ್ಟ ಗಗನದಲ್ಲಿ ಸಂಚರಿಸುವ ದೇವರೇ ಭೂಮಿಯಲ್ಲಿ, ಮಣ್ಣಿನ ಧೂಳಿನಲ್ಲಿ ಹೊರಳಿ,

ಕಣ್ಣೀರಿಡುತ್ತಿರುವವರಲ್ಲಿಯೂ ತೋರಿ ಬರುತ್ತಾನೆ. ಅನೇಕ ಸೂರ್ಯರ ಪ್ರಕಾಶದಿಂದ ಹೊಳೆಯುತ್ತಿರುವ ರಥದಲ್ಲಿ ಗಗನದಲ್ಲಿ ಸಾಗುವ ದೇವರೇ ಬಡ ರೈತನು ಉಳುವಾಗ ಭೂಮಿಯಲ್ಲಿ ಮೂಡಿದ ನೇಗಿಲ ಸಾಲಿನಲ್ಲಿಯೂ ಕಾಣುತ್ತಾನೆ.

**ಕೋಟಿ ಸೂರ್ಯಕರ ತೇಜಃಪುಂಜಕರ ವಿದ್ಯುದ್ರಾಜಿತ ರಥಗಾಮಿ**
**ಉಳುತಿಹ ರೈತನ ನೇಗಿಲ ಸಾಲಿನ ಮಣ್ಣಿನ ರೇಖಾ ಪಥಗಾಮಿ**

ಮುಗಿಲನ್ನು ಮುಟ್ಟುವ ಹಿಮಾಚಲದ ತುತ್ತತುದಿಯಲ್ಲಿ ದೇವರಿದ್ದಾನೆ ಎಂಬ ಕಲ್ಪನೆ ಇದೆ. ಅದೇ ದೇವರನ್ನೇ ದೀನ ಅನಾಥರ ಮುರುಕು ಗುಡಿಸಿಲಿನಲ್ಲಿಯೂ ಕಾಣಬಹುದು, ಅದೂ ಹೊಟ್ಟೆಗೆ ಹಿಟ್ಟಿಲ್ಲದೆ ಉಪವಾಸಿಯಾಗಿ. ಸುಖಸೌಲಭ್ಯಗಳೇನೂ ಇಲ್ಲದಿದ್ದರೂ, ತನ್ನ ಕರ್ತವ್ಯವನ್ನು ದಿನನಿತ್ಯ ಪರಿಪಾಲಿಸುತ್ತಿರುವ ನೇಗಿಲಯೋಗಿಯಲ್ಲಿ.

**ಬಾಂದಳ ಚುಂಬಿತ ಶುಭ್ರ ಹಿಮಾವೃತ ತುಂಗ ಶೃಂಗದಲಿ ಗೃಹವಾಸಿ**
**ದೀನ ಅನಾಥರ ದುಃಖಿದರಿದ್ರರ ಮುರುಕು ಗುಡಿಸಿಲಲಿ ಉಪವಾಸಿ**

ಉಪವಾಸಿ ಎಂದರೆ ಅರ್ಥ ಊಟ ಮಾಡಿಲ್ಲದವನು ಎಂದು ತಿಳಿಯಬಹುದು ಅಥವಾ ಉಪ (ಹತ್ತಿರ) + ವಾಸಿ (ಇರುವವನು) ಎಂದೂ ಅರ್ಥೈಸಿಕೊಳ್ಳಬಹುದು. ದೇವರ ಚಿಂತನೆಯಿಂದ ಮಾನಸಿಕವಾಗಿ ಅವನ ಸಮೀಪ ಇರುವವನು, ದ್ವೇಷ, ಅಸೂಯೆ ಮುಂತಾದ ಕಟುಭಾವನೆಗಳಿಂದ ದೂರಾಗಿ, ಹೃದಯವನ್ನು ಹಗುರಾಗಿಸುವ ಮಧುರವಾದ ಭಾವನೆಗಳಿಂದೊಡಗೂಡಿ ದೇವರನ್ನು ನೆನೆಯುವವನು, ಹಸಿವು ಮತ್ತು ಇತರ ದೈಹಿಕ ಸುಖದಲ್ಲಿ ಆಸೆ ಇಲ್ಲದಿರುವವನು ಮುರುಕು ಗುಡಿಸಿಲಲ್ಲಿರುವ ಉಪವಾಸಿ.

ಪದ್ಮಚರಣ್ ಅವರ ಸಂಗೀತ ನಿರ್ದೇಶನದ ಬಹಳ ಹಿಂದಿನ ಈ ಜನಪ್ರಿಯ ಕನ್ನಡಗೀತೆಯಲ್ಲಿ ಕವಿ ಎಲ್ಲೆಡೆ ಇರುವ, ಎಲ್ಲರಲ್ಲೂ ಇರುವ ಅಂತರ್ಯಾಮಿಯನ್ನು ಕಣ್ಣಿಗೆ ಕಾಣದ ದೇವರ ಕಲ್ಪನೆಯಲ್ಲಿ ಹಾಗೂ ಕಣ್ಣೆದುರಿನ ಕರ್ಮಯೋಗಿ ರೈತನಲ್ಲಿ ಕಂಡಿದ್ದಾರೆ.

## ೪. ನಿನ್ನ ಹೂಬನದಲ್ಲಿ –ಡಾ. ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

**ನಿನ್ನ ಹೂಬನದಲ್ಲಿ ಮಾಲಿ ಮಾಡಿಕೊ ನನ್ನ ಕನ್ನಯ್ಯಾ, ಓ ಕನ್ನಯ್ಯಾ,**
**ನಿನ್ನ ಶ್ರೀಚರಣಗಳ ಹಾಡಿ ಬೆಳೆಸುವೆ ವನವ ಕನ್ನಯ್ಯಾ, ನನ್ನ ಕನ್ನಯ್ಯಾ.**

ಇದು ಸಂತ ಕವಿ ಮೀರಾಬಾಯಿಯ ಹಿಂದಿಯ ಭಜನ್‌ನ ಕನ್ನಡದ ಭಾವಾನುವಾದ. ಇಂತಹ ಅನುವಾದಿತ ಭಾವಗೀತೆಗಳು ಮತ್ತು ಕೃಷ್ಣನನ್ನು ಕುರಿತು ಅವರು ಬರೆದಿರುವ ಇದೇ ಭಾವವುಳ್ಳ ಗೀತೆಗಳನ್ನು ಲಕ್ಷ್ಮೀನಾರಾಯಣ ಭಟ್ಟರು "ಗೋಪೀಗೀತ" ಎಂದು ಕರೆದಿದ್ದಾರೆ. ಅರಮನೆಯಲ್ಲಿ ರಾಜವೈಭವವನ್ನು ಅನುಭವಿಸುತ್ತಾ ಸುಖವಾಗಿ

ಬಾಳಬಹುದಾಗಿದ್ದ ಮೀರಾ, ಎಲ್ಲವನ್ನೂ ತ್ಯಜಿಸಿ, ಕೃಷ್ಣನಲ್ಲಿ ಮನವಿಟ್ಟು, ಅವನ ಸನ್ನಿಧಿಯನ್ನು ಕೋರುತ್ತ ಅವನ ಧ್ಯಾನದಲ್ಲೇ ತನ್ನ ಜೀವನವನ್ನು ಕಳೆಯುತ್ತಿದ್ದಾಳೆ. "ನನಗೆ ನಿನ್ನ ಹೂಬನದಲ್ಲಿ ತೋಟಗಾರಿಕೆಯ ಕೆಲಸ ಕೊಡು. ನಿನ್ನ ಪಾದಾರವಿಂದಗಳ ಸ್ಮರಣೆಯನ್ನು ಮಾಡುತ್ತಾ ಹೂಗಳನ್ನು ಬೆಳೆಸುವೆ."

ಈ ಗೀತೆಯ ಮುಖ್ಯ ಭಕ್ತಿಭಾವ ದಾಸ್ಯ. ಮೀರಾಳಿಗೆ ತೋಟಗಾರಿಕೆ ಚಾಕರಿ ಎಂದೆನಿಸುವುದಿಲ್ಲ. ಇದು ಕೃಷ್ಣನ ಸೇವೆ. ಎಲ್ಲವೂ ಕೃಷ್ಣಾರ್ಪಣವಾದ್ದರಿಂದ ಆ ತೋಟಗಾರಿಕೆಗೆ ಕೂಲಿ ಏನೂ ಬೇಕಾಗಿಲ್ಲ. ಸೇವೆಗೈಯುವುದೇ ಅವಳಿಗೆ ಮಹದಾನಂದ ನೀಡುವುದು. ತೋಟದಲ್ಲಿ ಅರಳುವ ಸುಂದರವಾದ ಹೂಗಳೇ ಅವಳಿಗೆ ಸಿಗುವ ಬಹುಮಾನ.

**ಸಾಧುಜನ ದಿನದಿನವು ಬೃಂದಾವನಕೆ**
**ಸಾಗುವರು ಕೃಷ್ಣನನು ಕಾಣಲಿಕೆ**
**ಮೀರಳಾ ಹೃದಯವೇ ಬೃಂದಾವನ**
**ಸಿಗುವನೋ ಗಿರಿಧರ ಬಯಸಿದ ಕ್ಷಣ.**

"ಪೀತಾಂಬರವನ್ನುಟ್ಟು, ನವಿಲುಗರಿಯ ಕಿರೀಟ ಧರಿಸಿರುವ ಮುಗಿಲ ನೀಲಿಯ ಶಾಮ, ನಿನ್ನ ಪ್ರೇಮದ ಜಾಲವನ್ನು ಬಲ್ಲವರಿಲ್ಲ. ಕನ್ನಯ್ಯಾ, ನಿನ್ನನ್ನು ನೋಡುವುದಕ್ಕೆ ಸಾಧು ಸಂತರು ಪ್ರತಿದಿನ ಬೃಂದಾವನಕ್ಕೆ ಹೋಗುವರು. ನೀನು ನನ್ನ ಹೃದಯದ ಬೃಂದಾವನದಲ್ಲೇ ಇರುವುದರಿಂದ ನಾನಾದರೋ ಬೇರೆಡೆ ಹೋಗುವ ಗೋಜಿಲ್ಲ." ಎಲ್ಲರೂ ಪರಮಾತ್ಮನ ಒಂದು ಅಂಶ. ಅದು ಜೀವಿಗಳ ಸಹಜ ಸ್ಥಿತಿಯಾದರೂ ಅದರ ಅರಿವು ಇರುವುದಿಲ್ಲ. ಎಲ್ಲರ ಹೃದಯದಲ್ಲಿರುವ ಪರಮಾತ್ಮನಲ್ಲಿ ಲೀನವಾಗುವುದೇ ಗುರಿ. ಅದಕ್ಕಾಗಿಯೇ ಈ ಅವಿರತ ಹಂಬಲ. ಈ ಗೋಪೀಗೀತೆಗೆ ಸುಂದರವಾಗಿ ರಾಗ ಸಂಯೋಜನೆ ಮಾಡಿರುವವರು ಎಚ್. ಕೆ. ನಾರಾಯಣ ಅವರು.

### ೫. ನೀ ಸಿಗದೆ ಬಾಳೊಂದು ಬಾಳೆ ಕೃಷ್ಣಾ
### – ಡಾ. ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ

**ನೀ ಸಿಗದೇ ಬಾಳೊಂದು ಬಾಳೇ ಕೃಷ್ಣಾ**
**ನಾ ತಾಳಲಾರೆ ಈ ವಿರಹ ತೃಷ್ಣಾ**

ತನ್ನ ಆರಾಧ್ಯ ದೈವ ಕೃಷ್ಣನಿಲ್ಲದ ಜೀವನವನ್ನು, ವಿರಹವನ್ನು ವಿವರಿಸುವ ಮೀರಾ ಭಜನ್ ಅನ್ನು ಕನ್ನಡಕ್ಕೆ ಡಾ. ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟರು ಭಾವಾನುವಾದ ಮಾಡಿದ್ದಾರೆ. ತಾವರೆಯಿಲ್ಲದ ಕೆರೆಯಂತೆ, ಚಂದ್ರನಿಲ್ಲದ ಕಗ್ಗತ್ತಲ ರಾತ್ರಿಯಂತೆ ಅವನಿಲ್ಲದ ಜೀವನ.

ಕೃಷ್ಣನಿಲ್ಲದೆ ಬಾಳುವುದು, ಅವನನ್ನು ಕಾಣದೆ ಇರುವುದು ಅಸಾಧ್ಯ. ಹೇಳಲಾರದ ದುಃಖ, ಅನ್ನ ಸೇರದು, ನಿದ್ದೆ ಬಾರದು, ಮೈಯೆಲ್ಲ ಉರಿ. ಅವನಿಲ್ಲದ ವಿರಹ, ತೀರದ ದಾಹ. ಅವನ ಚರಣದಾಸಿಯಾದ ಮೀರಾ ಎಷ್ಟು ಕೂಗಿ ಹೇಳಿದರೂ, ಈ ನೋವನ್ನು ಯಾರೂ ಅರಿಯಲಾರರು, ಅವಳು ಪಡುವ ಬವಣೆ ಯಾರಿಗೂ ಅರ್ಥವಾಗದು.

**ಒಳಗಿರುವ ಗಿರಿಧರನೇ ಹೊರಗೆ ಬಾರೋ**
**ಕಣ್ಣೆದುರು ನಿಂತು ಆ ರೂಪ ತೋರೋ**
**ಜನುಮ ಜನುಮದಾ ರಾಗ ನನ್ನ ಪ್ರೀತಿ**
**ನಿನ್ನೊಳಗೆ ಹರಿವುದೇ ಅದರಾ ರೀತಿ**

ಎಷ್ಟೋ ಜನ್ಮಗಳಿಂದ ಕೃಷ್ಣನಿಗಾಗಿ ಹಂಬಲಿಸಿದ್ದಾಳೆ. ಆದರೆ ಅವಳನ್ನು ಆಕರ್ಷಿಸಿರುವ ಕೃಷ್ಣನಾದರೋ ಹೊರಗೆ ಬೇರೆಲ್ಲೋ ಇಲ್ಲ. ಅವಳ ಹೃದಯದಲ್ಲೇ ಹುದುಗಿ ಮನೆ ಮಾಡಿ ನಿಂತಿದ್ದಾನೆ. ಪ್ರತ್ಯಕ್ಷವಾಗು, ಕಣ್ಣೆದುರಿಗೆ ಬಾ ಎಂದು ಕರೆಯುವ ಈ ಹಾಡಿಗೆ ಮನಮುಟ್ಟುವಂತೆ ರಾಗ ಸಂಯೋಜಿಸಿದವರು ಮೈಸೂರು ಅನಂತಸ್ವಾಮಿಯವರು.

ಮೇಲಿನ ಎರಡು ಗೀತೆಗಳು ಹಿಂದಿ/ಬ್ರಜ್ ಭಾಷೆಯಿಂದ ಕನ್ನಡಕ್ಕೆ ಬಂದಿರುವ ಕವನಗಳು. ಭಾಷೆ ಬೇರೆಯಾದರೂ ಭಾವದಲ್ಲಿ ಎಳ್ಳಷ್ಟೂ ಬದಲಾವಣೆ ಇಲ್ಲ. ನನಗೆ ತಿಳಿದ ಮಟ್ಟಿಗೆ ಇವೆರಡು ಗೀತೆಗಳು "ಶಾಮ್ ಮನೆ ಚಾಕರ್ ರಾಖೊ ಜಿ" ಮತ್ತು "ಪ್ಯಾರೆ ದರುಶನ ದೀಜೊ ಆಯ್" ಭಜನ್‌ಗಳ ಭಾವಾನುವಾದ. ಕೆಲವು ಮೂಲ ಸಮಾನ ಪದಪುಂಜಗಳು ಈ ಕವನಗಳಲ್ಲಿವೆ. ಉದಾಹರಣೆಗೆ "ಚಾಕರ್ ರಹೆಸು, ಬಾಗ್ ಲಗಾಸು, ನಿತ್ ಉಠ್ ದರಸನ್ ಪಾಸು" ಎನ್ನುವ ಸಾಲಿನಲ್ಲಿ ಮತ್ತು "ಜಲ ಬಿನ ಕಮಲ, ಚಂದ್ರ ಬಿನಾ ರಜನಿ", ಎನ್ನುವ ಸಾಲಿನಲ್ಲಿ ಈ ಗೀತೆಗಳ ಮೂಲವನ್ನು ಗುರುತಿಸಬಹುದಾದರೂ, ಈ ಗೀತೆಗಳು ಸುಂದರ, ಸರಳ ಕನ್ನಡದಲ್ಲಿ ಮರುಸೃಷ್ಟಿಯಾಗಿ ತಮ್ಮದೇ ಆದ ಮಧುರ, ಮೋಹಕ ರೂಪವನ್ನು ತಾಳಿವೆ ಎನ್ನಬಹುದು. ಇಂತಹ ಸುಮಧುರ ಗೀತೆಗಳನ್ನು ಬರೆದು ಕನ್ನಡ ಸುಗಮಸಂಗೀತ ಕ್ಷೇತ್ರವನ್ನು ಶ್ರೀಮಂತಗೊಳಿಸಿರುವ ಲಕ್ಷ್ಮೀನಾರಾಯಣ ಭಟ್ಟರಿಗೆ ನಮನ.

### ೬. ಅಮ್ಮ ಬೇಕೆ ಬೇಕು ನಂಗೆ ಚಂದ್ರ ಆಡೋಕೆ –ಎಚ್. ಎಸ್. ವೆಂಕಟೇಶ ಮೂರ್ತಿ

ಅಮ್ಮ ಬೇಕೆ ಬೇಕು ನಂಗೆ ಚಂದ್ರ ಆಡೋಕೆ
ಇಲ್ಲ ಅಂದ್ರೆ ಬೀಳ್ತೀನಿ ನೋಡು ಈಗಲೆ ಅಂಗಳಕ್ಕೆ

ಇದು ಹಿಂದಿಯ ಸೂರದಾಸ್ ಅವರ ಭಜನ್ ಆರಾಧಿತ ಗೀತೆ. ಸಂತ ಕವಿಯಾದ ಸೂರದಾಸರಿಗೆ ಕಣ್ಣು ಕಾಣುತ್ತಿರಲಿಲ್ಲ. ಅವರು ಒಳಗಣ್ಣಿನಿಂದ ಕೃಷ್ಣನನ್ನು ಕಂಡವರು. ಸಾವಿರಾರು ಗೀತೆಗಳನ್ನು ರಚಿಸಿದ್ದಾರೆ ಎಂದು ಪ್ರತೀತಿ. ಅವರ ಬೃಹತ್ ಗ್ರಂಥ "ಸುರ್ ಸಾಗರ್" ದಲ್ಲಿ ೮೦೦೦೦ಕ್ಕೂ ಮೀರಿ ಗೀತೆಗಳಿವೆಯಂತೆ. ಈ ಗೀತೆಯಲ್ಲಿರುವ ಪುಟ್ಟ ಕೃಷ್ಣನ ಚಿತ್ರಣಕ್ಕೆ ಒಪ್ಪುವಂತೆ ಸರಳವಾದ ಕನ್ನಡದ ಆಡುಭಾಷೆಯಲ್ಲಿ ಈ ಕವಿತೆ ರಚಿಸಲ್ಪಟ್ಟಿದೆ.

ಬಾಲಕೃಷ್ಣ ಚಂದ್ರ ಬೇಕು ಎಂದು ಅಳಲು ಶುರುಮಾಡುತ್ತಾನೆ. ಚಂದ್ರ ಸಿಗದೆ ಇದ್ದರೆ ಹಾಲು ಕುಡಿಯದೆ ಮಲಗಿಬಿಡ್ತೀನಿ. ಆಗ ನನ್ನ ಜುಟ್ಟು ಬೆಳೆಯುವುದಿಲ್ಲ. ಅಮ್ಮ ಅವನಿಗೆ ಹಾಲು ಕುಡಿದರೆ ಕೂದಲು ಉದ್ದಕ್ಕೆ ಬೆಳೆಯುತ್ತೆ ಎಂದು ಉಪಾಯಮಾಡಿ ಹಾಲು ಕುಡಿಸಿರುತ್ತಾಳೆ. ಈಗ ಅವಳಿಗೇ ತಿರುಮಂತ್ರ!

**ಚಂದ್ರ ನಂಗೆ ಸಿಗದೆ ಹೋದರೆ ಅಪ್ಪನ ಮಗ ಆಗ್ತೀನಿ**
**ಅಮ್ಮ ನಿನ್ನ ಚಾಳಿ ಬಿಟ್ಟು ಅಪ್ಪನ ಜೋಡಿ ಕಟ್ತೀನಿ.**

ಈಗ ಇನ್ನೂ ಜಾಣತನದ ಬೆದರಿಕೆ! ಅಮ್ಮನ ಚಾಳಿ ಬಿಟ್ಟು ಅಪ್ಪನ ಮಗ ಆಗ್ತೀನಿ!

**ಚಂದ್ರ ನಂಗೆ ಸಿಗದೆ ಹೋದರೆ ಲಗ್ಗೆ ಚಂಡು ಆಡೋಕೆ**
**ಅಣ್ಣಂಗೂನು ಹೇಳ್ತೀನಮ್ಮ ಬೇರೆ ಅಮ್ಮನ್ ನೋಡೋಕೆ**

ಚಂದ್ರನಾದರೂ ಯಾಕೆ ಬೇಕು? ಅಣ್ಣನೊಡನೆ ಲಗ್ಗೆ ಚಂಡು ಆಡೋಕೆ! ಈಗ ಅದು ಸಿಗದೇ ಇದ್ದರೆ, ಈ ಅಮ್ಮನ್ನ ಇಟ್ಕೊಂಡು ಏನು ಪ್ರಯೋಜನ? ಅಣ್ಣ ತಮ್ಮ ಇಬ್ಬರೂ ಈ ಅಮ್ಮನನ್ನು ಕಳಿಸಿ ಬೇರೆ ಅಮ್ಮನ್ನ ಹುಡುಕಿಕೋತಾರೆ!

**ಸೂರ ಶಾಮನಿಗೆ ಚಂದ್ರಮುಖಿಯನ್ನೆ ತಂದು ಮದುವೆ ಮಾಡೋಣ**
**ಅನ್ನಲು ಗೋಪಿ ನುಡಿದನು ಶಾಮ ಮದುವೆಗೆ ಬೇಗ ಹೋಗೋಣ.**

ಅಮ್ಮನಿಗಾದರೋ ಗಗನದ ಚಂದ್ರಮನನ್ನು ತಂದುಕೊಡಲು ಸಾಧ್ಯವೇ? ಅವಳೂ ಜಾಣೆ. ಕೃಷ್ಣನ ಅಮ್ಮನಲ್ಲವೇ?! ಹೋಗಲಿ, ಚಂದ್ರನಂತಹ ಮುಖವುಳ್ಳ ಹುಡುಗಿಯನ್ನು ತಂದು ಮದುವೆ ಮಾಡೋಣ ಎನ್ನುತ್ತಾಳೆ. ಮದುವೆಗೆ ಈಗಲೇ ಹೋಗೋಣ ಎಂದು ಕುಣಿದಾಡುತ್ತಾನೆ ಅಮ್ಮನ ಮುದ್ದುಮಗ ಶಾಮ!

ಎಲ್ಲರಿಗೂ ಮುದತರುವ ಪುಟ್ಟ ಕೃಷ್ಣನ ಹುಡುಗಾಟಕ್ಕೆ ತಕ್ಕ ಸಾಹಿತ್ಯ ಮತ್ತು ಅದಕ್ಕೆ ಒಪ್ಪುವಂತಹ ಅನಂತಸ್ವಾಮಿಯವರ ಸಂಗೀತದಿಂದ ಕಂಗೊಳಿಸುವ ಗೀತೆ. ಮಕ್ಕಳಾದಿಯಾಗಿ ಎಲ್ಲರಿಗೂ ಇಷ್ಟವಾಗುವ ಗೀತೆ. ಎಷ್ಟೋ ಶಾಲೆಗಳಲ್ಲಿ, ಅಮೇರಿಕಾದ

ಕನ್ನಡ ಕೂಟಗಳಲ್ಲಿ ಮಕ್ಕಳು ಈ ಗೀತೆಗೆ ನರ್ತಿಸಿದ್ದಾರೆ. ಈ ಮುದ್ದಾದ ಗೀತೆಯನ್ನು ನಮಗೆ ನೀಡಿದ ಕವಿಗೆ ನಮನ.

**೭. ಬೆಣ್ಣೆ ಕದ್ದ ನಮ್ಮ ಕೃಷ್ಣ –ಪ್ರೊ. ನಿಸಾರ್ ಅಹಮದ್**

ದಾಸ ಸಾಹಿತ್ಯದಲ್ಲಿ ಕೃಷ್ಣನ ತುಂಟತನದ ವರ್ಣನೆ ಅಪಾರ. ಅದೇ ಧಾಟಿಯಲ್ಲಿರುವ, ತುಂಟ ಕೃಷ್ಣನ ಬಗ್ಗೆ ಬರೆದಿರುವ ಈ ಹಾಡನ್ನು ನಾನು ಕೇಳಿದ್ದು ಸುಗಮ ಸಂಗೀತದ ಮೊಟ್ಟ ಮೊದಲ ಧ್ವನಿಸುರುಳಿಯಾದ "ನಿತ್ಯೋತ್ಸವ"ದಲ್ಲಿ, ಮೈಸೂರು ಅನಂತಸ್ವಾಮಿ ಯವರ ಸಂಗೀತ ನಿರ್ದೇಶನದಲ್ಲಿ. ಈ ಭಾವಗೀತೆಯಲ್ಲಿ ಯಶೋದ ಕೃಷ್ಣರ ಪ್ರೀತಿಯನ್ನು ಕಣ್ಣಿಗೆ ಕಟ್ಟುವಂತೆ ಕಲಾತ್ಮಕವಾಗಿ ವರ್ಣಿಸಲಾಗಿದೆ. ಬೆಣ್ಣೆಗಳ್ಳ ಕೃಷ್ಣ ಅಮ್ಮನ ಕಣ್ಮಣಿ. ಅವನ ತುಂಟಾಟ ಅಮ್ಮನಿಗೆ ತಕ್ಷಣ ಕೋಪ ತರಿಸಿದರೂ, ಅವನ ಆಟಗಳೆಲ್ಲವೂ ಅವಳಿಗೆ ಪ್ರಿಯವೇ! ಅಮ್ಮ ಇರದ ಸಮಯ ನೋಡಿ, ಬಿಂದಿಗೆಯ ಮೇಲೆ ನಿಂತು, ಬೆಣ್ಣೆ ಗಡಿಗೆಗೆ ಕೈಹಾಕಿ ಬೆಣ್ಣೆಯನ್ನು ಮೆದ್ದಿದ್ದಾನೆ ಕೃಷ್ಣ. ಬಿಂದಿಗೆ ಕೆಳಗೆ ಬಿದ್ದು ಭಾರಿ ಶಬ್ದವಾಗಿ ತಾಯಿ ಓಡಿ ಬಂದಿದ್ದಾಳೆ, ಭೀಕರ ಕಾಳಿಯ ರೂಪತಾಳಿ.

ಹೆದರಿದ ಕೃಷ್ಣ ಅಳಲು ಪ್ರಾರಂಭಿಸಿದ. ಬೆಣ್ಣೆ ಮೆತ್ತಿದ ಅವನ ಮುದ್ದಾದ ಮುಖ, ಕೈ, ಬಾಯಿಗಳನ್ನು ನೋಡಿದ ಅರೆಕ್ಷಣದಲ್ಲೇ ತಾಯಿಯ ಕೋಪ ಜರ್ರೆಂದು ಇಳಿದು ಪ್ರೀತಿ ತುಂಬಿದ ನಗೆ ಮೂಡುತ್ತದೆ. ತಾನು ಮಾಡಿದ್ದು ತಪ್ಪು ಕೆಲಸವಾದರೂ, ಅಮ್ಮ ಶಿಕ್ಷೆ ವಿಧಿಸದೆ ನಕ್ಕು ಸುಮ್ಮನಾಗಿದ್ದಕ್ಕೆ ದೊಡ್ಡ ನಿಟ್ಟುಸಿರು ಎಳೆದು ತಾನೂ ನಗುತ್ತಾನೆ ಮುದ್ದು ಬೆಣ್ಣೆಗಳ್ಳ!

**ಅವನ ಅಕುಟಿಲ ಬೆಣ್ಣೆಯಂಥ ನಗು**
**ಕಾಯಲಿ ಜಗದವರ;**
**ಸಂತತ ನಗಿಸಲಿ ನಗದವರ**

ಜಗನ್ಮೋಹನನಾದ ಕೃಷ್ಣನ ಕಪಟವಿಲ್ಲದ ಮುಗ್ಧ ನಗೆ ಎಲ್ಲರನ್ನೂ ಕಾಪಾಡಲಿ. ನಗದೆ ಇದ್ದವರನ್ನೂ ಕೂಡ ನಗಿಸಲಿ ಎನ್ನುತ್ತಾರೆ ಕವಿ. ಜಗದೊಡೆಯನನ್ನೇ ಮಗನನ್ನಾಗಿ ಪಡೆದು ಧನ್ಯಳಾದ ಯಶೋದ ಮತ್ತು ಅವಳ ಮುದ್ದಿನ ಮಗ ಕೃಷ್ಣನ ನಡುವಿನ ಅನುರಾಗವನ್ನು, ವಾತ್ಸಲ್ಯವನ್ನು ವಿವರಿಸುವ ಗೀತೆ ಇದು. ಶ್ರೀಕೃಷ್ಣನ ಬಾಲ್ಯವು ಪ್ರಪಂಚದ ಎಲ್ಲ ಮಕ್ಕಳ ಬಾಲ್ಯದಂತೆ–ನಾವು ಕಂಡಿರುವುದು, ಕೇಳಿರುವುದು, ಅನುಭವಿಸಿರುವಂತಹದ್ದು. ಸುಲಭವಾಗಿ ಎಲ್ಲರ ಮನವನ್ನೂ ತಟ್ಟುವಂತಹದ್ದು. ಈ ಗೀತೆಯ ವಿಶೇಷವೇನೆಂದರೆ, ಹಿಂದೂ ಅಲ್ಲದಿದ್ದರೂ ಆ ಸಂಸ್ಕೃತಿಯನ್ನು ತಮ್ಮದೇ ಅನ್ನುವಷ್ಟು ಸಹಜವಾಗಿಸಿ–ಕೊಂಡಿರುವ ನಿಸಾರ್ ಅವರ ರಚನೆ. ಮತ್ತೂ ಒಂದು ವಿಶೇಷವೆಂದರೆ, ಬೆಣ್ಣೆಗಳ್ಳ

ಕೃಷ್ಣನ ತುಂಟತನ ಹಾಗೂ ತಾಯಿಯ ವಾತ್ಸಲ್ಯವನ್ನು ವರ್ಣಿಸುವ ಗೀತೆಯಾದರೂ ಬರೆದ ಕವಿ ತಾಯಿಯಲ್ಲ, ತಾಯಿಯ ಅಂತರಂಗದ ಭಾವನೆಗಳನ್ನು ಸಲೀಸಾಗಿ ಹೊರತಂದ ನಿಸಾರರ ಕವಿಹೃದಯ!

ಮೇಲಿನ ಎರಡೂ ಗೀತೆಗಳು ಮಕ್ಕಳಿಗೆ ಪ್ರಿಯವಾಗುವಂತಹ ಗೀತಗಳಷ್ಟೇ ಅಲ್ಲದೆ, ಇಲ್ಲಿನ ಕೃಷ್ಣನ ತುಂಟತನದ ಚಿತ್ರಣ ಮಕ್ಕಳ ಕಲ್ಪನೆಯನ್ನು ಉತ್ತೇಜಿಸಿ, ಅವರನ್ನು ಬೆರಗುಗೊಳಿಸುವಂತಿದೆ. ಗೀತೆಗೆ ತಕ್ಕ ಅನಂತಸ್ವಾಮಿಯವರ ಸಂಗೀತ ಮಕ್ಕಳನ್ನು ಕುಣಿಸುವಂತಿದೆ. ಎರಡೂ ಗೀತೆಗಳು ಮಕ್ಕಳ ಸಾಹಿತ್ಯ/ಸಂಗೀತ ಕ್ಷೇತ್ರಕ್ಕೆ ಉತ್ತಮ ಕೊಡುಗೆ.

**೮. ಸ್ವಾಮಿದೇವನೆ ಲೋಕಪಾಲನೆ –ಸೋಸಲೆ ಅಯ್ಯಾಶಾಸ್ತ್ರಿಗಳು**

**ಸ್ವಾಮಿದೇವನೆ ಲೋಕಪಾಲನೆ ತೇ ನಮೋಸ್ತು ನಮೋಸ್ತುತೇ**
**ಪ್ರೇಮದಿಂದಲಿ ನೋಡು ನಮ್ಮನು ತೇ ನಮೋಸ್ತು ನಮೋಸ್ತುತೇ**
**ನೇಮಿಸೊಮ್ಮಳು ಧರ್ಮಕಾರ್ಯವ ತೇ ನಮೋಸ್ತು ನಮೋಸ್ತುತೇ**
**ಕ್ಷೇಮದಿಂದಲಿ ಪಾಲಿಸೆಮ್ಮನು ತೇ ನಮೋಸ್ತು ನಮೋಸ್ತುತೇ**

ಈ ಗೀತೆ ಸುಗಮಸಂಗೀತದ ಸಮಯಕ್ಕಿಂತ ಹಿಂದಿನ ಗೀತೆಯಾದರೂ ಭಕ್ತಿಭಾವವನ್ನು ಮೂಡಿಸುವ ಗೀತೆಯಾದ್ದರಿಂದ ಈ ಲೇಖನದಲ್ಲಿ ಸೇರಿಸಿದ್ದೇನೆ. ಈ ಗೀತೆಯನ್ನು ಬರೆದು ಸುಮಾರು ೧೫೦ ವರ್ಷಗಳಾಗಿರಬಹುದು. ಇಲ್ಲಿ ಬಳಕೆಯಾಗಿರುವ ಕನ್ನಡದಲ್ಲೂ ಅದರ ಕುರುಹು ಇದೆ! ಹಿಂದೆ ಸಿಗುತ್ತಿದ್ದ ಮಗ್ಗಿಪುಸ್ತಕದ ಮೊದಲ ಪುಟಗಳಲ್ಲಿ ಮುದ್ರಿತವಾಗಿರುತ್ತಿತ್ತು ಈ ಗೀತೆ. ಇದು ಎಷ್ಟೋ ಶಾಲೆಗಳಲ್ಲಿ ಪ್ರಾರ್ಥನಾಗೀತೆಯಾಗಿತ್ತು. ಇದನ್ನು ಬರೆದವರು ಮೈಸೂರು ರಾಜರ ಆಸ್ಥಾನದಲ್ಲಿ ರಾಜರಿಗೆ ಪಾಠ ಕಲಿಸುವ ಗುರುಗಳಾಗಿದ್ದ ಸೋಸಲೆ ಅಯ್ಯಾಶಾಸ್ತ್ರಿಗಳು. ಮುಂದೆ ೧೯೫೮ನೇ ಇಸವಿಯಲ್ಲಿ ಸ್ಕೂಲ್ ಮಾಸ್ಟರ್ ಚಿತ್ರಕ್ಕಾಗಿ ಈ ಗೀತೆಯನ್ನು ಆಧಾರವಾಗಿರಿಸಿಕೊಂಡು ಕಣಗಾಲ್ ಪ್ರಭಾಕರಶಾಸ್ತ್ರಿಯವರು ಹಾಡೊಂದನ್ನು ರಚಿಸಿದರು. ಟಿ. ಜಿ. ಲಿಂಗಪ್ಪ ಅವರ ಸಂಗೀತ ನಿರ್ದೇಶನದ ಈ ಗೀತೆ ಅತ್ಯಂತ ಜನಪ್ರಿಯವಾಯಿತು. ಈ ಚಿತ್ರಗೀತೆಯ ಧಾಟಿಯಲ್ಲಿಯೇ ಮೂಲ ಕೃತಿಯನ್ನೂ ಹಾಡಬಹುದು. ಇಲ್ಲಿ ನಾನು ಮೂಲಕೃತಿಯ ಕೆಲವು ಚರಣಗಳನ್ನು ಕುರಿತು ಬರೆದಿದ್ದೇನೆ.

ಲೋಕದ ಕಣ್ಣಾದ ಸೂರ್ಯದೇವರಿಗೆ ನಮಸ್ಕರಿಸಿ ನಮ್ಮನ್ನು ಸರಿಯಾದ ದಾರಿಯಲ್ಲಿ ನಡೆಸು, ಕ್ಷೇಮವಾಗಿರಿಸು, ಪ್ರೇಮದಿಂದ ಕಾಪಾಡು ಎಂದು ಬೇಡುವ ಗೀತೆ ಇದು.

ದೇವದೇವನೆ ಹಸ್ತಪಾದಗಳಿಂದಲೂ ಮನದಿಂದಲೂ
ನಾವು ಮಾಡಿದ ಪಾಪವೆಲ್ಲವ ಹೋಗಲಾಡಿಸು ಬೇಗನೆ
ಕಾವರಿಲ್ಲವು ನಿನ್ನ ಬಿಟ್ಟರೆ ಸೂರ್ಯನೇ ಜಗದೀಶನೇ
ಜೀವಕೋಟಿಯು ನಿನ್ನ ಈ ಬೆಳಕಿಂದ ಜೀವಿಪುದಲ್ಲವೆ

ರಾತ್ರಿನಿದ್ದೆಯ ಗೈವಕಾಲದಿ ನೀನೆ ನಮ್ಮನು ಕಾದೆಯೈ
ಮಿತ್ರನೆಂಬುವ ನಾಮಧೇಯವು ಸತ್ಯವಾಯಿತು ನಿನ್ನೊಳು
ಸ್ತೋತ್ರ ಮಾಡುವ ಹಾಗೆ ನಿನ್ನನು ಹಕ್ಕಿಗಳ್ ದನಿಗೈವವೈ
ಚಿತ್ರಭಾನುವೆ ನೋಡಿ ನಿನ್ನನದೆಲ್ಲಿ ಪೋದುದೊ ಕತ್ತಲೆ

ನೀನೆ ತಾಯಿಯು ನೀನೆ ತಂದೆಯು ನೀನೆ ನಮ್ಮೊಡನಾಡಿಯೂ
ನೀನೆ ಬಂಧುವು ನೀನೆ ಭಾಗ್ಯವು ನೀನೆ ವಿದ್ಯೆಯು ಬುದ್ಧಿಯೂ
ನೀನು ಪಾಲಿಸದಿದ್ದರೆಮ್ಮನು ಬೇರೆ ಪಾಲಿಪರಿಲ್ಲವೈ
ದೀನಪಾಲನೆ ನಿನ್ನಧೀನದೊಳಿರ್ಪನಮ್ಮನು ಪಾಲಿಸೈ

ಶ್ರೀಮುಕುಂದನೆ ಗಾಳಿಯಲ್ಲಿಯು ನೀರಿನಲ್ಲಿಯು ನೀನಿಹೇ
ಭೂಮಿಯಲ್ಲಿ ಯಮಗ್ನಿಯಲ್ಲಿಯು ಬಾನಿನಲ್ಲಿಯು ನೀನಿಹೆ
ರಾಮನೂ ನರಸಿಂಹನೂ ಪರಮಾತ್ಮ ಕೃಷ್ಣನು ನೀನೆಯೇ
ನೀ ಮಹಾತ್ಮನು ನಮ್ಮ ತಪ್ಪುಗಳೆಲ್ಲ ಮನ್ನಿಸಿ ಪಾಲಿಸೈ

ಸೂರ್ಯ ಭಗವಾನ್ ನಾವು ಪ್ರತಿದಿನ ಕಾಣುವ ನಮ್ಮ ಕಣ್ಣೆದುರಿಗಿರುವ ದೇವರು. ಸೂರ್ಯನಿಂದಲೇ ಬೆಳಕು, ನಮ್ಮ ಬದುಕು. ಅವನ ಮಹತ್ವವನ್ನು ಬಣ್ಣಿಸಿ ಅಂತಹ ಸೂರ್ಯನಲ್ಲಿ ಭಕ್ತಿ ಮೂಡಿಸುವ ಹಾಗೂ ನಾವು ಧರ್ಮ ಮಾರ್ಗದಲ್ಲಿ ನಡೆಯುವಂತೆ ಮಾಡು ಎಂದು ಬೇಡುವ ಈ ಸುಂದರ ಗೀತೆಯು ಶಾಲೆಗಳಲ್ಲಿ ಪ್ರಾರ್ಥನೆಯಾಗಿದ್ದು ಸಮಂಜಸವಾಗಿದೆ.

ಭೂಮಿಗೆ ಬೆಳಕು ಶಾಖ ಕೊಡುವುದಲ್ಲದೇ, ಭೂಮಿಯ ನೀರನ್ನು ಆವಿ ಮಾಡಿ ಮೋಡಗಳಾಗಿಸಿ, ಮೋಡದಿಂದ ಮಳೆ, ಮಳೆಯಿಂದ ಬೆಳೆ ಬೆಳೆಸಲು ಮೂಲ ಕಾರಣ ಸೂರ್ಯ. ಚಳಿ ಪ್ರದೇಶದಲ್ಲಿ ಸೂರ್ಯ ಕಾಣದ ದಿನಗಳಲ್ಲಿ ಎಷ್ಟೋ ಜನ ಖಿನ್ನತೆ (ಡಿಪ್ರೆಶನ್) ಯಿಂದ ಬಳಲುವವರಿದ್ದಾರೆ. ಮನಸ್ಸಿಗೆ ಮುದ ನೀಡುವವನು ಸೂರ್ಯ.

ಸೂರ್ಯನಿಂದಲೇ ಈ ಜೀವಕೋಟಿಯು ಜೀವಿಸುತ್ತಿದೆ. ನಾವು ಕಾಯಾ, ವಾಚಾ, ಮನಸಾ ಮಾಡುವ ತಪ್ಪುಗಳನ್ನು, ಪಾಪಗಳನ್ನು ಪರಿಹರಿಸುವ ದೇವರು ಸೂರ್ಯ. ಅವನನ್ನು ಕಂಡರೆ ಕತ್ತಲೆ ದೂರಾಗುವುದು. ಅವನು ಬೆಳಕಲ್ಲಿ ಗಗನದಲ್ಲಿ

ವಿರಾಜಿಸುವ ಚಿತ್ರಭಾನುವಷ್ಟೇ ಅಲ್ಲ. ರಾತ್ರಿಯೂ ಕೂಡ ನಮ್ಮ ಹಿತೈಷಿಯಾಗಿ ಮಿತ್ರನಂತೆ ನಮ್ಮನ್ನು ಕಾಪಾಡುತ್ತಾನೆ. ಈ ನಂಬಿಕೆಯನ್ನು ಮಕ್ಕಳ ಮನಸ್ಸಿಗೆ ತುಂಬಿದರೆ ಅವರಿಗೆ ಅದು ಎಷ್ಟು ಧೈರ್ಯ ನೀಡಬಲ್ಲದು! ಇಲ್ಲಿ ಪ್ರಯೋಗಿಸಿರುವ ಮಿತ್ರ ಮತ್ತು ಚಿತ್ರಭಾನು ಎಂಬ ಸೂರ್ಯನ ಹೆಸರುಗಳು ಸುಂದರ ಮತ್ತು ಸಾರ್ಥಕವಾಗಿವೆ.

ನಮ್ಮ ತಂದೆ, ತಾಯಿ, ಬಂಧು, ಬಳಗ ಎಲ್ಲವೂ ಸೂರ್ಯನೇ. ಅವನೇ ನಮ್ಮ ಜೊತೆಗಾರ, ವಿದ್ಯೆ, ಬುದ್ಧಿ, ಸೌಭಾಗ್ಯ. ಅವನು ನಮ್ಮನ್ನು ಕಾಪಾಡದಿದ್ದರೆ, ನಮ್ಮನ್ನು ಯಾರು ಕಾಪಾಡುವವರು? ದೀನಪಾಲನೆಂಬ ಹೆಸರಿರುವ ಅವನು ಅವನ ಅಧೀನದಲ್ಲಿರುವ ನಮ್ಮನ್ನು ಸದಾ ಕಾಪಾಡಲಿ ಎಂಬ ಭಾವ ಈ ಗೀತೆಯಲ್ಲಿದೆ.

"ವಾಯುರ್ಯಮೋಗ್ನಿರ್ವರುಣಃ ಶಶಾಂಕಃ ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ" ಎನ್ನುವ ಗೀತೆಯ ವಾಕ್ಯದಂತೆ ಗಾಳಿಯಲ್ಲಿ, ನೀರಿನಲ್ಲಿ, ಭೂಮಿಯಲ್ಲಿ, ಬಾನಿನಲ್ಲಿ, ಅಗ್ನಿಯಲ್ಲಿ ಇರುವ ಮುಕುಂದ ಅವನು. ರಾಮ, ನರಸಿಂಹ, ಕೃಷ್ಣ, ಪರಮಾತ್ಮ ಎಲ್ಲವೂ ಆ ಮಹಾನುಭಾವನೇ. ನಮ್ಮ ತಪ್ಪುಗಳನ್ನೆಲ್ಲ ಕ್ಷಮಿಸಿ ನಮ್ಮನ್ನು ಕಾಪಾಡು ಎಂದು ಬೇಡುವ ಗೀತೆ ಇದು. ಈ ಗೀತೆ ಪವಿತ್ರವಾದ "ಆದಿತ್ಯಹೃದಯ" ಶ್ಲೋಕವನ್ನು ಕನ್ನಡದಲ್ಲಿ ಸರಳವಾಗಿ ಬರೆದಂತಿದೆ. ಕಷ್ಟಗಳನ್ನು ನಿವಾರಿಸಿ, ಮನಸ್ಸಿಗೆ ಧೈರ್ಯವನ್ನು ತುಂಬಿ, ಯಶಸ್ಸನ್ನು ಕೊಡುವುದೆಂದು ಪ್ರತೀತಿ ಇರುವ ಆದಿತ್ಯಹೃದಯದಂತೆ ಸೂರ್ಯನ ಮಹತ್ವದ ವಿವರಣೆ ಇರುವ ಈ ಗೀತೆಯೂ ಎಲ್ಲರ ಮನಸನ್ನು ಮುಟ್ಟುತ್ತದೆ ಮತ್ತು ಶ್ರದ್ಧೆಯನ್ನು ಬೆಳೆಸುತ್ತದೆ.

ಮೇಲಿನ ಎಲ್ಲ ಗೀತೆಗಳು ನಮ್ಮ ಸಂಸ್ಕೃತಿಯ ಸಾರವನ್ನು ಎತ್ತಿ ಹಿಡಿದಿವೆ. ನಾವೆಲ್ಲರೂ ಒಂದೇ. ಎಲ್ಲರೊಳಗಿರುವ ಎಲ್ಲೆಡೆ ಇರುವ ಪರಮಾತ್ಮನಲ್ಲಿ ಶ್ರದ್ಧೆ ಬೆಳೆಸುತ್ತಾ, ಸರಳವಾಗಿ, ಸುಂದರವಾಗಿ ಭಕ್ತಿಮಾರ್ಗದಿಂದ ಅವನನ್ನು ಒಲಿಸುವ ನೀತಿಯನ್ನು, ರೀತಿಯನ್ನು ಸಾರುತ್ತಿವೆ. ಭಕ್ತಿಯು ಹೃದಯವನ್ನು ಮೃದುಗೊಳಿಸುತ್ತದೆ. ಮನುಷ್ಯ ಸಹಜವಾದ ಕಾಮ, ಕ್ರೋಧ, ಲೋಭ, ಮದ, ಮೋಹ, ಮಾತ್ಸರ್ಯಗಳನ್ನು ದೂರಾಗಿಸಿ, ಪ್ರೀತಿ, ಸಮಾಧಾನ, ಶಾಂತಿಯಂತಹ ಮಧುರ ಭಾವನೆಗಳನ್ನು ಹೆಚ್ಚಾಗಿಸುತ್ತದೆ. ಭಗವಂತನಲ್ಲಿ ಆತ್ಮ ಸಮರ್ಪಣೆಯಾದಾಗ ಜನನ–ಮರಣಗಳ ಚಕ್ರದಿಂದ ಹೊರಬಂದು ಭಕ್ತನು ಸಚ್ಚಿದಾನಂದ ರೂಪಿಯಲ್ಲಿ ಒಂದಾಗುತ್ತಾನೆ. ಸೌಮ್ಯ–ಭೀಕರ ರೂಪದಲ್ಲಿ, ಪ್ರಿಯಕರನಂತೆ, ಮಗುವಿನಂತೆ ವಿವಿಧ ರೂಪದಲ್ಲಿ ದೇವರು ಕಂಡುಬರುತ್ತಾನೆ ಮತ್ತು ಕರುಣಾಮಯಿಯಾದ ಆ ದೇವರು ನಮ್ಮನ್ನು ಕೆಲವೊಮ್ಮೆ ಕಾಡಿದರೂ ಎಂದೆಂದಿಗೂ ಕಾಪಾಡುತ್ತಾನೆ ಎಂಬ ನಂಬಿಕೆಯನ್ನಿತ್ತು, ಶ್ರದ್ಧೆ ಹುಟ್ಟಿಸುವ, ಭಕ್ತಿ ಮೂಡಿಸುವ ಕವನಗಳನ್ನು ಬರೆದ ಕವಿಗಳಿಗೆ ನಮನ. ಆ ಕವನಗಳಿಗೆ ಸಂಗೀತ ನೀಡಿ ಮನದಲ್ಲಿ ಚಿರವಾಗಿ ನಿಲ್ಲುವಂತೆ ಮಾಡಿದ ಹೆಸರಾಂತ ಸಂಗೀತಗಾರರಿಗೆ, ಅದನ್ನು ಮಧುರವಾಗಿ ಹಾಡಿದ ಗಾಯಕ–ಗಾಯಕಿಯರಿಗೆ ನಮೋ ನಮನ! ■

# ‘ಮಲೆಗಳಲ್ಲಿ ಮದುಮಗಳು’ ಕಾದಂಬರಿಯಲ್ಲಿ ದೇವರು

–ಕಾವ್ಯಾ ನಾಗರಕಟ್ಟೆ

“ಇವರ ಕೈಗೆಲ್ಲಿಯಾದರೂ ಇವರ ದೇವರು ಸಿಕ್ಕರೆ, ಗುದ್ದಿಯೂ ಬಿಡುತ್ತಾರೆ!” ಎಂದುಕೊಳ್ಳುತ್ತಾರೆ ಪಾದ್ರಿ ಜೀವರತ್ನಯ್ಯ ಸುಬ್ಬಣ್ಣ ಹೆಗ್ಗಡೆಯವರ ಆಕ್ರೋಶ ಕಾಣುತ್ತ. ಈ ಸ್ವಾರಸ್ಯಕರವಾದ ಘಟನೆ ಕುವೆಂಪು ವಿರಚಿತ ‘ಮಲೆಗಳಲ್ಲಿ ಮದುಮಗಳು’ ಕಾದಂಬರಿಯಲ್ಲಿದೆ.

ಸುಬ್ಬಣ್ಣ ಹೆಗ್ಗಡೆಯವರ ಮಗ ದೊಡ್ಡಣ್ಣ ಹೆಗ್ಗಡೆ ತಿರುಪತಿಗೆ ಹೋದವನು ಮನೆಗೆ ಮರಳಿ ಬಂದಿರುವುದಿಲ್ಲ. ಐದಾರು ವರ್ಷಗಳ ಈ ಸಮಯದಲ್ಲಿ ಅವನಿಗಾಗಿ ಎಲ್ಲೆಡೆ ಹುಡುಕಾಟ ನಡೆದಿದೆ. ತಿರುಪತಿಗೆ ಹೋಗಿ ಬರುವ ಪ್ರತಿಯೊಂದು ಗುಂಪೂ ದೊಡ್ಡಣ್ಣ ಹೆಗ್ಗಡೆ ಕಾಣೆಯಾದ ಬಗೆಗೆ ತಮ್ಮದೇ ಆದ ಬೇರೆ ಬೇರೆ ವಿಶ್ಲೇಷಣೆಗಳನ್ನು ಕೊಟ್ಟಿವೆ. ದಾರಿಮಧ್ಯದಲ್ಲಿ ದೊಡ್ಡಣ್ಣ ತೀರಿಹೋದ ಅಂತ ಒಬ್ಬರೆಂದರೆ ಪೂರ್ವಾಶ್ರಮ ತೊರೆದು ಗೋಸಾಯಿಗಳ ತಂಡ ಸೇರಿಕೊಂಡು ದೇಶಾಂತರ ಹೋಗಿದ್ದಾನೆ ಅಂತ ಇನ್ನೊಬ್ಬರು ಹೇಳುತ್ತಾರೆ.

ಹೀಗಿರುವಾಗ ದೊಡ್ಡಣ್ಣ ಹೆಗ್ಗಡೆ ಸಿಕ್ಕಿದ್ದಾನೆ ಎಂಬ ಖಚಿತ ಮಾಹಿತಿ ಊರಿನ ಪಾದ್ರಿ ಜೀವರತ್ನಯ್ಯ ಅವರಿಂದ ತಿಳಿಯುತ್ತದೆ. ಅದನ್ನು ಕೇಳಿದೊಡನೆಯೇ ಮುದುಕರಾದ ಸುಬ್ಬಣ್ಣ ಹೆಗ್ಗಡೆ ಮಗನನ್ನು ಶೀಘ್ರವೇ ಕಾಣುವ ತವಕದಿಂದ ಅತ್ಯಂತ ಕಷ್ಟಕರವಾದ ಹುಲಿಕಲ್ಲು ನೆತ್ತಿಯನ್ನೂ ದಾಟಿ ಬಂದಿದ್ದಾರೆ. ಭಾವೋದ್ವೇಗದಿಂದ ತಿರುಪತಿ ತಿಮ್ಮಪ್ಪನನ್ನು ನೆನೆದು “ಸ್ವಾಮಿ! ಸ್ವಾಮಿ! ಕಾಪಾಡಪ್ಪಾ!” ಅಂತ ಉದ್ಗಾರ ಮಾಡಿದ್ದಾರೆ. ಆಗ ಪಾದ್ರಿ ಇವರ ಭಾವಾವೇಶಕ್ಕೆ ಆತಂಕಗೊಂಡು ದೊಡ್ಡಣ್ಣನನ್ನು ಕಾಣುವ ತನಕ ಯಾವುದೂ ಖಚಿತವಲ್ಲ ಎಂದೂ, ಕೊಂಚ ಸಮಾಧಾನದಿಂದಿರಬೇಕೆಂದೂ ಸುಬ್ಬಣ್ಣನವರಲ್ಲಿ ಬಿನ್ನಹಿಸಿಕೊಳ್ಳುತ್ತಾರೆ. ಆಗ ಕೋಪದಿಂದ ಸುಬ್ಬಣ್ಣನವರು “ನಮ್ಮ ಕಷ್ಟಾನೆಲ್ಲ ಕಾಣದೆ ಇರಾಕೆ ಆ ದೇವರ ಕಣ್ಣು ಇಂಗಿಹೋಗ್ಯಾದೇನು?” ಎಂದುಬಿಡುತ್ತಾರೆ ದುಃಖ ಮಿಶ್ರಿತ ರೋಷದಿಂದ.

ಪಾದ್ರಿಗೆ ಇದು ತುಂಬಾ ಹೊಸದು. ಸುಬ್ಬಣ್ಣನವರ ಹಾಗೆ ಅವರು ಎಂದೂ ತಮ್ಮ ದೇವರನ್ನು ಬೈದವರಲ್ಲ. ಕುವೆಂಪು ಅವರ ಮಾತಿನಲ್ಲೇ ಹೇಳಬೇಕೆಂದರೆ, ಕ್ರೈಸ್ತ ಪಾದ್ರಿಗೆ ಈ ಮುದುಕನ ಹಿಂದೂ ಭಕ್ತಿ ಕಂಡು ತುಸು ಇರುಸು ಮುರುಸಾಗುತ್ತದೆ. ಆಗಲೇ ಅವರು ಹೇಳುವುದು "ಇವರ ಕೈಗೆಲ್ಲಿಯಾದರೂ ಇವರ ದೇವರು ಸಿಕ್ಕರೆ, ಗುದ್ದಿಯೂ ಬಿಡುತ್ತಾರೆ!" ಎಂದು.

*

ನಮ್ಮ ಗ್ರಾಮೀಣರಲ್ಲಿ ಕಂಡುಬರುವ ದೈವಭಕ್ತಿ ವಿಶಿಷ್ಟವಾದುದು. ಅವರು ಒಂದು ಕೋಳಿಯ ರೂಪದಲ್ಲಿ ಲಂಚವನ್ನು ಕೊಟ್ಟು ದೇವರನ್ನೇ ಒಳಗೆ ಮಾಡಿಕೊಳ್ಳಬಲ್ಲರು, ಮುಗ್ಧ ಪ್ರೀತಿಯಿಂದ ಅವನನ್ನು ಬಾಯಿಗೆ ಬಂದಂತೆ ಬಯ್ಯಬಲ್ಲರು. ತಮ್ಮ ಆಸೆ ಈಡೇರಿಸದ ದೇವರಿಗೆ ಮೆಣಸಿನ ಹೊಗೆಯನ್ನೂ ಹಾಕಬಲ್ಲರು. ದೇವರನ್ನು ಅಲ್ಲೆಲ್ಲೋ ದೂರದಲ್ಲಿ ಇರಿಸಿ ಪೂಜಿಸುವ ಬದಲು ಹುಣ್ಣಿಮೆಗೊಮ್ಮೆ ಅಮಾವಾಸ್ಯೆಗೊಮ್ಮೆ ತಮ್ಮ ಮೈಮೇಲೇ ಧರಿಸಿ ಸಕಲ ಪರಿಹಾರಗಳನ್ನೂ 'ದೈಯ್ಯ'ದ ರೂಪದಲ್ಲಿ ತಮ್ಮ ವ್ಯಾಪ್ತಿಯಲ್ಲೇ ಕಂಡುಕೊಳ್ಳುವರು.

ಮಲೆಗಳಲ್ಲಿ ಮದುಮಗಳು ಕಾದಂಬರಿ ಇಂಥ ಗ್ರಾಮೀಣ ಪರಿಸರದ್ದೇ ಕತೆ. ಕನ್ನಡ ಜಿಲ್ಲೆಯ ಕೋಣೂರು, ಹೂವಳ್ಳಿ, ಸಿಂಬಾವಿ, ಬೆಟ್ಟಳ್ಳಿ ಮುಂತಾದ ಪುಟ್ಟ ಊರುಗಳಲ್ಲಿ ನಡೆವ ಮಲೆನಾಡಿಗರ ಬದುಕಿನ, ಬವಣೆಯ ಕತೆ. ಇಲ್ಲಿ ಎಂದೂ ಹಣವನ್ನೇ ಕಾಣದ, ಐವತ್ತಕ್ಕಿಂತ ಹೆಚ್ಚು ವರ್ಷ ಆಯುಷ್ಯವಿಲ್ಲದ ಜೀತದಾಳುಗಳ ದೈನಿಕವನ್ನು ಯಾವುದೇ ಪರದೆಯಿಲ್ಲದೇ ಕಾಣುವ ದರ್ಶನವಿದೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯನ್ನು ಪ್ರತಿ ಬಾರಿ ಓದಿದಾಗಲೂ ಹೊಸದೇನನ್ನೋ ಗಳಿಸಿಕೊಂಡು ಮರಳಿದ್ದೇನೆ. ಹೀಗಿರುವಾಗ ಈ ಬೃಹತ್ ಗ್ರಂಥದ ಕುರಿತು ಚಿಕ್ಕವಳಾದ ನಾನು ಎಲ್ಲವನ್ನೂ ಬರೆದುಬಿಡಬಲ್ಲೆ ಎಂಬ ಅತಿ ಮೋಹ ನನಗಿಲ್ಲ. ಏಕೆಂದರೆ ಹರಿಯುವ ನದಿಯಂತೆ ಎಲ್ಲಿಂದಲೋ ಹುಟ್ಟಿ ಎಲ್ಲಿಯೋ ಸಾಗಿ ಇನ್ನೆಲ್ಲೋ ಹೋಗಿ ಸೇರುವ ಬೆರಗಿನಿಂದಲೇ ನಮ್ಮೊಳಗೆ ಅನುಕ್ಷಣವೂ ಜೀವಂತವಾಗುಳಿವ ಈ ಕಾದಂಬರಿಯನ್ನು ಪೂರ್ತಿ ಕುಡಿದು ಜೀರ್ಣಿಸಿಕೊಳ್ಳಬಲ್ಲ ಅಕ್ಷರ ಶ್ರೀಮಂತೆ ನಾನಲ್ಲ. ನನ್ನದೇನಿದ್ದರೂ ಬೊಗಸೆಯಲ್ಲಿ ಹಿಡಿವಷ್ಟೇ ತಿಳಿ ಸಿಹಿ ನೀರನ್ನು ಸವೆವ, ಆ ಆನಂದದಲ್ಲಿ ತನ್ಮಯಳಾಗಿ ಬೆರೆವ ಅದೃಷ್ಟ. ೭೧೨ ಪುಟಗಳ ಈ ಬೃಹತ್ ಕಾದಂಬರಿಯಲ್ಲಿ ಎಲ್ಲೆಲ್ಲಿ ಭಕ್ತಿಯ ಭಾವ ಅನಾವರಣಗೊಂಡಿದೆಯೋ, ಎಲ್ಲೆಲ್ಲಿ ಅದು ಜಿಜ್ಞಾಸೆಗೊಳಪಟ್ಟಿದೆಯೋ ಆ ಭಾಗಗಳನ್ನು ಮಾತ್ರ ನಾನು ಈ ಲೇಖನದಲ್ಲಿ ಚರ್ಚಿಸಲು ಇಚ್ಛಿಸುತ್ತೇನೆ.

ನಮ್ಮ ನಾಡಿನ ಜನರ ಭಕ್ತಿಯನ್ನು ಹಾಗೆಲ್ಲ ಶಬ್ದಗಳಲ್ಲಿ ಹಿಡಿದಿಡಲು ಸಾಧ್ಯವಿಲ್ಲ. ನಮ್ಮ ನಾಡೇ ಏಕೆ, ಯಾವುದೇ ಜನಪದ ಸಂಸ್ಕೃತಿಯನ್ನೂ, ಸಂಸ್ಕಾರವನ್ನೂ ಹಾಗೆ 'ರೂಲ್ ಬುಕ್'ನ ನಿಯಮಗಳ ಹಾಗೆ ಗೆರೆ ಕೊರೆದಂತೆ ಬರೆದಿಡಲು ಸಾಧ್ಯವಿಲ್ಲ. ಅದೇ ಕಾರಣಕ್ಕಾಗಿ ಈ ಕಾದಂಬರಿ ತನ್ನ ಸ್ವಂತಿಕೆಯಿಂದಲೇ ಭಾರತದಾದ್ಯಂತ ಹಂಚಿ ಹೋಗಿರುವ ನೆಲಸಂಸ್ಕೃತಿಯನ್ನು ಮುಖ್ಯ ಭೂಮಿಕೆಗೆ ತರುತ್ತದೆ.

ಬಡತನವೇ ಬದುಕಿನಲ್ಲಿ ಹಾಸುಹೊಕ್ಕಾಗಿರುವಾಗ ನಂಬಿಕೆಯೊಂದೇ ಆಸರೆಯಾಗಿ ಮನುಷ್ಯನನ್ನು ಕೈ ಹಿಡಿದು ನಡೆಸುತ್ತದೆ. ಬದುಕಿನ ಕುರಿತು ಆ ವಿಶ್ವಾಸ (ಹೋಪ್) ಇಲ್ಲದಿದ್ದರೆ ಒಂದು ದಿನವಾದರೂ ಬದುಕಲು ಸಾಧ್ಯವಾದೀತೇ? ಅಂಥ ವಿಶ್ವಾಸವನ್ನು ನಮಗೆ ಅರ್ಥವಾಗದ ಅಗೋಚರ ಸತ್ಯಗಳಲ್ಲಿ ಕಂಡುಕೊಳ್ಳುವುದು, ಅದಕ್ಕೆ ದೇವರು ಅಂತ ಹೆಸರಿಡುವುದು ಮನುಷ್ಯ ಅನಾದಿಕಾಲದಿಂದಲೂ ನಡೆಸಿಕೊಂಡು ಬಂದ ಪದ್ಧತಿ.

ಸಾಮಾಜಿಕ ಭೌಗೋಳಿಕ ನೀತಿಗಳಿಗೆ ಅನುಗುಣವಾಗಿ ಆ ಶಕ್ತಿಗೆ ನಾವು ಕೊಡುವ ರೂಪ, ನಾಮಗಳು ಬದಲಾಗಿದ್ದರೂ ದೇವರು ಎಂಬ ಕಲ್ಪನೆಯ ಮೂಲತತ್ವ ಒಂದೇ. ಮನುಷ್ಯನನ್ನು ಬದುಕಿನಿಂದ ವಿಮುಖನನ್ನಾಗಿಸದೇ ಇರುವುದು, ಜಗತ್ತಿನಲ್ಲಿ ಉಳಿಯುವ ಕಟ್ಟಕಡೆಯ ಮನುಷ್ಯನನ್ನೂ ಉಳಿಸುವುದು, ಬದುಕಲು ಪ್ರೇರೇಪಿಸುವುದು ಈ 'ಹೋಪ್' ಎಂಬ ಜೀವಸತ್ವವೇ. ಈ ನಂಬಿಕೆಯೇ ಮನುಷ್ಯತ್ವವನ್ನು, ಅದರ ಎಲ್ಲ ಮಿತಿಗಳ ಜೊತೆಗೇ ಒಪ್ಪಿಕೊಂಡು ಮುನ್ನಡೆಯಲು ಕಲಿಸುತ್ತದೆ.

ಈ ಭಾವವನ್ನು ತಮ್ಮ ಎಲ್ಲ ಬರೆಹಗಳಲ್ಲೂ ಕುವೆಂಪು ಅವರು ಪರಿಪರಿಯಾಗಿ ಪ್ರತಿಪಾದಿಸಿದ್ದಾರೆ. ಹೀಗಾಗಿಯೇ ಅವರು 'ನೂರು ದೇವರನೆಲ್ಲ ನೂಕಾಚೆ ದೂರ' ಎಂಬ ಪ್ರಬುದ್ಧ ಕವಿತೆಯ ಜೊತೆಗೇ 'ಶ್ರೀ ರಾಮಾಯಣ ದರ್ಶನಂ'ನಂಥ ಮೇರುಕೃತಿಯನ್ನೂ ಕನ್ನಡಕ್ಕೆ ಕೊಟ್ಟವರು, ಅಂಥ ವಿಶಾಲವಾದ 'ಸ್ಪೇಸ್'ನಲ್ಲಿ ನಿಂತು ಬರೆದವರು. ಭಕ್ತಿ ಎಂದರೆ ಕಾಣದ ದೇವರ ಕುರಿತಾದುದೇ ಅಂತ ಏಕೆ ಬಗೆಯಬೇಕು? ಕಾಣುವ, ಅನುಭವಕ್ಕೆ ಬರುವ ಎಲ್ಲ ಜೀವಗಳಲ್ಲೂ ದೈವತ್ವ ಹಂಚಿಹೋಗಿರುವುದು ಕೂಡ ಸತ್ಯವೇ ತಾನೇ?

ಉದಾಹರಣೆಗೆ ಗುತ್ತಿ ಎಂಬ ಪಾತ್ರದ ಕುರಿತು ಹೇಳುತ್ತ "ಅವನ ಭಗವಂತನೂ ಅಷ್ಟೇ ಜಟಿಲ ಸ್ವರೂಪದವನಾಗಿದ್ದನು: ಸಾಕಾರ, ನಿರಾಕಾರ, ಆ ಆಕಾರ, ಈ ಆಕಾರ ಎಲ್ಲವೂ ಆಗಿಯೂ ಯಾವುದೂ ಆಗಿರದೇ..." ಎಂದು ವರ್ಣಿಸುವುದನ್ನು ಕಾಣಬಹುದು. ಜೊತೆಗೆ "ಯಾರೇ ಆಗಲಿ, ಯಾವುದೇ ಆಗಲಿ ಸೃಷ್ಟಿವ್ಯೂಹದಲ್ಲಿ ದಿಕ್ಕಿಲ್ಲದೆ ಇರುವುದಿಲ್ಲ" ಎಂಬ ಸಾಲು ಓದಿದಾಗ ಸೃಷ್ಟಿರಹಸ್ಯದ ಕುರಿತು ಕುವೆಂಪು ಅವರಿಗಿದ್ದ ಆಳವಾದ ಚಿಂತನೆ ಗಮನಕ್ಕೆ ಬರುವುದು.

ದೊಡ್ಡಣ್ಣ ಹೆಗ್ಗಡೆ ತಿರುಪತಿಯಲ್ಲಿ ಮರೆಯಾದ ಪ್ರಸಂಗವನ್ನೇ ತೆಗೆದುಕೊಂಡರೆ, ಅವನಿಗೆ ಗೋಸಾಯಿಗಳು ಮದ್ದು ಕೊಟ್ಟು ಹಿಂದಿನದ್ದೆಲ್ಲ ಮರೆಸಿರಬಹುದು ಎಂಬ ಮಾತು ಪಾದ್ರಿಯ ಗುಂಪಿನಲ್ಲಿ ಕೇಳಿಬರುತ್ತದೆ. ಆಗ ಐಗಳು ಅನಂತಯ್ಯನವರು ಹೇಳುವ ಈ ಮಾತು ನೋಡಿ—"ಮದ್ದು ಹೆಚ್ಚೋ, ದೇವರು ಹೆಚ್ಚೋ? ಮದ್ದು ಮರೆಯಿಸಿದ್ದನ್ನ ದೇವರು ನೆನೆಯಿಸಲಾರನೇ?" ಇಲ್ಲಿ ಅನಂತಯ್ಯನವರು ಹೇಳುವ 'ದೇವರು' ಒಂದು ವಿಶ್ವಾಸದ ಪ್ರತಿರೂಪವೇ ಹೊರತು ಯಾವ ಬಾಹ್ಯರೂಪಿಯೂ ಅವನಲ್ಲ. ಒಬ್ಬ ಸಾಮಾನ್ಯ ಮನುಷ್ಯ ತನ್ನ ಕೈಮೀರಿದ್ದನ್ನು ತನ್ನ ಸ್ಥಿಮಿತದಲ್ಲಿಲ್ಲದ ಅಗೋಚರ ಶಕ್ತಿಯ ಮೇಲೆ ಹಾಕಿ ನಿತ್ಯಜೀವನದಲ್ಲಿ ಸಮಾಧಾನ ತಂದುಕೊಳ್ಳುವ ಮಾರ್ಗವಿದು. ಹೀಗೆ ಮಾಡುವ ಮೂಲಕ ಕುವೆಂಪು ಅವರು 'ದೇವರು' ಎಂಬ ಕಲ್ಪನೆಯ ಕುರಿತೇ ಮತ್ತೆ ಮತ್ತೆ ಸಾಣೆ ಹಿಡಿಯುತ್ತಾರೆ.

*

ಈ ಕಾದಂಬರಿಯಲ್ಲಿ ಪದೇ ಪದೇ ಮುನ್ನೆಲೆಗೆ ಬರುವ ಇನ್ನೊಂದು ವಿಚಾರವೆಂದರೆ ಕಳೆದ ಶತಮಾನದ ಆರಂಭದಲ್ಲಿ ಭಾರತದಲ್ಲಿ ಬಹುವಾಗಿ ನಡೆದ ಕ್ರೈಸ್ತ ಮತಾಂತರ. ಬೆಟ್ಟಳ್ಳಿ, ಸಿಂಬಾವಿ, ಕಾಗಿನಹಳ್ಳಿ, ಕೋಣೂರುಗಳಲ್ಲಿ ನಡೆವ ಕ್ರೈಸ್ತಧರ್ಮದ ಪ್ರಚಾರ ಮತ್ತು ಮತಾಂತರದ ಕತೆಯಲ್ಲಿ ಪಾದ್ರಿ ಜೀವರತ್ನಯ್ಯರ ಪಾತ್ರವು ಬಹು ಮುಖ್ಯವಾದುದು.

ಪಾದ್ರಿ ಜೀವರತ್ನಯ್ಯರಿಗೆ ಮುಗ್ಧ ಜನರ ನಂಬಿಕೆಗಳನ್ನು ತಮಗೆ, ತಮ್ಮ ವೃತ್ತಿಗೆ ಅನುಕೂಲವಾಗುವ ಹಾಗೆ ಬಳಸಿಕೊಳ್ಳುವುದು ಗೊತ್ತಿದೆ. ಅವರು ವೃತ್ತಿಯಲ್ಲಿ ಮೇಲಿನ ಸ್ಥಾನಕ್ಕೇರಲು ಇಂತಿಷ್ಟು ಜನರನ್ನು ಕ್ರೈಸ್ತಧರ್ಮಕ್ಕೆ ಮತಾಂತರ ಮಾಡಬೇಕಾದ ಒತ್ತಡವಿದ್ದುದರಿಂದ ಸಾಕಷ್ಟು ವೃತ್ತಿಪರವಾಗಿಯೇ ಕಾರ್ಯ ನಿರ್ವಹಿಸಿದ್ದಾರೆ. ಜಟಕಾಬಂಡಿ ಕೂಡ ಅಪರೂಪವಾಗಿದ್ದ ಕಾಲದಲ್ಲಿ ಊರ ಜನರಿಗೆ ಬೈಸಿಕಲ್‌ನ ಮೋಹ ಹುಟ್ಟಿಸುವುದು, ಶಾಲೆಗಾಗಿ ಕಟ್ಟಡ ಕಟ್ಟಿಸುವುದು, ಆಸ್ಪತ್ರೆಯ ಅನುಕೂಲಗಳನ್ನು ಒದಗಿಸುವುದು, ಕಾಫಿಯ ರುಚಿ ಪರಿಚಯಿಸುವುದು ಮುಂತಾದ ಮೇಲುನೋಟಕ್ಕೆ ಸರಳವೆನ್ನಿಸುವ ಸೇವೆಗಳನ್ನು ಅವರು ಊರ ಜನರಿಗೆ ಒದಗಿಸುವ ಕಾರ್ಯ ಕ್ರಮೇಣ ಸಾಂಗವಾಗಿ ನೆರವೇರುತ್ತಿದೆ. "ಮತಪ್ರಚಾರಕ್ಕೆ ಬೈಬಲ್ಲು ಏಸುಕ್ರಿಸ್ತನಿಗಿಂತಲೂ ಬೈಸಿಕಲ್ಲೇ ಹೆಚ್ಚು ಪ್ರಭಾವಶಾಲಿ!" ಎಂಬ ಪಾದ್ರಿಯ ಮಾತು ಇಲ್ಲಿ ಗಮನಾರ್ಹ.

## ಬೈಸಿಕಲ್ಲು ಮತ್ತು ಭಕ್ತಿ

ಈ ಕಾದಂಬರಿಯಲ್ಲಿ ಬರುವ 'ಬೈಸಿಕಲ್ಲು' ಅಧ್ಯಾಯವು ಹಲವಾರು ಕಾರಣಗಳಿಂದ ನನ್ನನ್ನು ತುಂಬಾ ಕಾಡಿದ ಭಾಗ. ಕ್ರೈಸ್ತ ಮತದತ್ತ ಇದೀಗ ತಾನೇ ಆಕರ್ಷಿತನಾಗುತ್ತಿರುವ

ಬೆಟ್ಟಳ್ಳಿ ದೇವಯ್ಯನಿಗೆ ಪಾದ್ರಿ ಜೀವರತ್ನಯ್ಯ ಬೆಟ್ಟಳ್ಳಿ ಹಕ್ಕಲಿನಲ್ಲಿ ಬೈಸಿಕಲ್ಲು ಚಲಾಯಿಸಲು ಕಲಿಸುವರಂತೆ ಎಂಬ ಸುದ್ದಿಯಿಂದ ಶುರುವಾಗುವ ಹಳ್ಳಿಯ ಜನರ ಮಾತುಕತೆ ಗುಂಪಿನಿಂದ ಗುಂಪಿಗೆ ಚಲಿಸಿ ನಾನಾರೂಪ ಪಡೆಯುತ್ತದೆ. ಜನರ ಮಾತಿನಲ್ಲಿ ಅಪರಿಚಿತ ಬೈಸಿಕಲ್ಲು ಪರಿಚಿತ 'ಬೀಸೆಕಲ್ಲು' ಆಗುತ್ತದೆ. "ಬೀಸೆಕಲ್ಲ ಮ್ಯಾಲೆ ಹತ್ತಿ ಕೂತ್ಗೊತಾನಂತೆ, ಗೂಟ ಹಿಡಿದು ನಾವೆಲ್ಲ ಬೀಸೋ ಹಾಂಗೆ ಗಿರ್ರನೆ ತಿರುಗಿಸ್ತಾನಂತೆ. ಬೀಸೆಕಲ್ಲು ಅನಾಮತ್ತು ಮೇಲೆದ್ದು ಎಲ್ಲಿಗಂದ್ರೆ ಅಲ್ಲಿಗೆ ಕಣ್ಣುಮುಚ್ಚಿ ಬಿಡೋದರ ಒಳಗೆ ಹೋಗ್ತದಂತೆ" ಎಂಬ ಮಾತು ಬಂದಂತೆ ಆ ಮಾಯಾಲೋಕವನ್ನು ನೋಡಲೆಂದೇ ಹತ್ತಾರು ಆಳುಮಕ್ಕಳ ಜನಸಂದಣಿ ನೆರೆದಿದೆ.

ಇಲ್ಲಿ ಸೇರಿರುವ ಆಳುಗಳಿಗೆ ಬೈಸಿಕಲ್ಲು ಎಂದೂ ಕೇಳಿ ತಿಳಿಯದ, ಕೈಗೆಟುಕದ ಆಧುನಿಕ ಉಪಕರಣವಾಗಿದೆ. ಮತ್ತು ಅದು ಹಳ್ಳಿಯ ಜನರ ಅರಿವಿನಿಂದ ದೂರವಿರುವುದರಿಂದಲೇ ಸುಳ್ಳು ಆಮಿಷಕ್ಕೆ, ಪೊಳ್ಳು ಆಧುನಿಕತೆಗೆ ಹಿಡಿದ ಕನ್ನಡಿಯಾಗಿದೆ. ಬೈಸಿಕಲ್ಲನ್ನು ಹಕ್ಕಲಿನತನಕ ಎತ್ತಿಕೊಂಡು ಬಾ ಅಂತ ಕೆಲಸದ ಬಚ್ಚನಿಗೆ ಪಾದ್ರಿ ಹೇಳಿದಾಗ ಬಚ್ಚ ಹೆಮ್ಮೆಯಿಂದಲೇ ಆ ಕೆಲಸವನ್ನು ಒಪ್ಪಿಕೊಂಡಿದ್ದಾನೆ. ಆದರೆ ಬೈಸಿಕಲ್ಲನ್ನು ಎತ್ತಿಕೊಳ್ಳಲು ಕೈ ಹಾಕುವ ಮುನ್ನವೇ ಅವನಲ್ಲಿ ಭಯ ಸಂಚಾರವಾಗಿದೆ. ಅದನ್ನು ಯಾವ ಭಾಗದಲ್ಲಿ ಹೇಗೆ ಎತ್ತಬೇಕು ಎನ್ನುವುದು ಅವನಿಗೆ ಸಮಸ್ಯೆಯೇ ಆಗಿಬಿಟ್ಟಿದೆ. ಒಮ್ಮೆ ಹಿಡಿದೆತ್ತಲು ಪ್ರಯತ್ನಿಸಿದಾಗ ಹಠಾತ್ತನೆ ಟ್ರಿಣ್ ಟ್ರಿಣ್ ಸದ್ದಾಗಿ, ಹೆದರಿ, ಅದನ್ನು ಬಿಟ್ಟು ದೂರ ಸರಿದು ನಿಂತಿದ್ದಾನೆ. ಇನ್ನೊಮ್ಮೆ ಚಕ್ರ ತಿರುಗಿ ಕೈಬೆರಳು ಸಿಕ್ಕಿದೆ, ಮತ್ತೊಮ್ಮೆ ಅದರ ಕಾಲುಸರಪಣಿಯ ಮುಳ್ಳಿಗೆ ಬಟ್ಟೆ ಸಿಕ್ಕಿ ಹರಿದೇಹೋಗಿದೆ.

ಎಷ್ಟು ಹೊತ್ತಾದರೂ ಬೈಸಿಕಲ್ ಹೊತ್ತ ಆಳು ಬರದೇ ಇರಲು ದೇವಯ್ಯನೇ ಮನೆಗೆ ಬಂದು ನೋಡಿದರೆ ಆತನಿಗೆ ಅಚ್ಚರಿಯೇ ಕಾದಿದೆ. ಕುವೆಂಪು ಅವರ ಭಾಷೆಯಲ್ಲೇ ಹೇಳುವುದಾದರೆ—"ಬಚ್ಚ ಇನ್ನೂ, ದೇವತೆಯ ಬಳಿ ಆರಾಧಕನಂತೆ, ದೂರನಿಂತು ಯಂತ್ರಾವಲೋಕನದಲ್ಲಿಯೆ ಮಗ್ನನಾಗಿದ್ದಾನೆ!"

ಹಾಗೂ ಹೀಗೂ ಬೈಸಿಕಲ್ಲು ಹಕ್ಕಲಿಗೆ ಬಂದ ಮೇಲೆ ಪಾದ್ರಿ ಒಂದು ಸುತ್ತು ತುಳಿದು ತೋರಿಸಿದರೂ ದೇವಯ್ಯನಿಗೆ ಸೈಕಲ್ಲು ತುಳಿಯುವ 'ಬ್ಯಾಲೆನ್ಸು' ಸಿಗದೇ ಒಮ್ಮೆ ಮುಗ್ಗರಿಸಿ ಬೀಳುತ್ತಾನೆ. ಆಗ ದೇವಯ್ಯ ಒಂದು ಉಪಾಯ ಮಾಡುತ್ತಾನೆ. ಬಚ್ಚನಿಗೆ ಒಂದು ಬಿದಿರಿನ ಗಳುವನ್ನು ತೆಗೆದುಕೊಂಡು ಬರಲು ಹೇಳಿ ಅದನ್ನು ಸೈಕಲ್ಲಿನ ಹ್ಯಾಂಡಲ್ಲಿಗೆ ಜೋಡಿಸಿ ಬಳ್ಳಿಗಳಿಂದ ಬಿಗಿದು, ಗಾಡಿಯ ನೊಗಕ್ಕೆ ಎತ್ತು ಕಟ್ಟುವಂತೆ, ಎರಡೂ ಕಡೆಗಳಲ್ಲಿ ಮೂರು ಮೂರು ಆಳುಗಳನ್ನು ಗಳುವಿಗೆ ಕೈಗೊಡುವಂತೆ ಮಾಡಿ ತಾನು ಗಾಡಿಯ ಮೇಲೆ ಹತ್ತಿ ಕೂತಂತೆ ಬೈಸಿಕಲ್ಲಿನ ಸೀಟಿನ ಮೇಲೆ ಹತ್ತಿ ಕೂಡುತ್ತಾನೆ!

ಈ ಎಲ್ಲ ಘಟನೆಗಳು ಹೊರನೋಟದಲ್ಲಿ ಬಿಡಿಬಿಡಿಯಾಗಿ ಕಂಡರೂ ಅಂತರಂಗದಲ್ಲಿ ಕೊಂಡಿ ಕೂಡಿಕೊಂಡಂತೆಯೇ ಇದೆ. ಮತ್ತು ಆ ಕೊಂಡಿ ಬೈಸಿಕಲ್ಲಿನ ರೂಪದಲ್ಲಿ ಶತಮಾನಗಳ ನಂಬಿಕೆಯನ್ನು, ನೆಲಸಂಸ್ಕೃತಿಯನ್ನು ಅಲ್ಲಗಳೆಯುವ, ಪ್ರಶ್ನೆಗಳನ್ನೇ ಹೊಸೆದುಹಾಕುವ ತಳುಕಿನ ಸಲಕರಣೆಯೇ ಆಗಿದೆ.

*

ವೈಯಕ್ತಿಕವಾಗಿ ವಿಜ್ಞಾನವನ್ನು ಬಹುವಾಗಿ ಆರಾಧಿಸುತಿದ್ದ ಕುವೆಂಪು ಅವರು ಪೊಳ್ಳು ಆಧುನಿಕತೆಯನ್ನು, ಅದೆಷ್ಟೇ ಆಕರ್ಷಕವಾಗಿದ್ದರೂ ತಿರಸ್ಕರಿಸುವುದು ಈ ಕಾದಂಬರಿಯಲ್ಲಿ ಬಹು ಮುಖ್ಯ ಅಂಶ. ವಿವೇಕಾನಂದರ ಆದರ್ಶಗಳನ್ನು, ಹಿಂದೂ ಧರ್ಮದ ಮೂಲತತ್ವವನ್ನೂ ಎತ್ತಿಹಿಡಿದು ಮತಾಂತರವೊಂದೇ ಮೂಲಗುರಿಯಾಗಿರುವ ಪಾದ್ರಿ ಜೀವರತ್ನಯ್ಯರ ಕಪಟವನ್ನು ವಿಚಾರಕ್ಕೊಡ್ಡುತ್ತಾರೆ. ಜೊತೆಗೇ ಹಿಂದೂ ಧರ್ಮದಲ್ಲಿ ಹಾಸುಹೊಕ್ಕಾಗಿರುವ ಅಂಧಶ್ರದ್ಧೆಯನ್ನೂ ಬಯಲಿಗೆಳೆಯಲು ಹಿಂತೆಗೆಯುವುದಿಲ್ಲ.

ಉದಾಹರಣೆಗೆ ವಿವೇಕಾನಂದರ ಶಿಕಾಗೋ ಭಾಷಣದ ಮಹತ್ವದ ಕುರಿತು ಹೇಳುತ್ತಲೇ ವಿವರಿಸುವ ಈ ಮಾತುಗಳನ್ನು ಗಮನಿಸಬೇಕು—"ಅಮೆರಿಕಾದ ಚಿಕಾಗೊ ಬಹುದೂರದಲ್ಲಿದ್ದಿರಬಹುದು. ವಿವೇಕಾನಂದರ ಉತ್ತಾಲ ಧ್ವನಿ ಮಲೆನಾಡಿನ ಕೊಂಪೆಗೆ ಮುಟ್ಟದಿದ್ದಿರಬಹುದು. ಆದರೆ ಸಮೀಪದಲ್ಲಿಯೇ ಇದ್ದುವಲ್ಲ... ಗುರುಪೀಠಗಳು? ಅವೇನು ಮಾಡುತ್ತಿದ್ದುವು?... ಅಜ್ಞರೂ ಮೌಢ್ಯಾಂಧರೂ ಆಗಿದ್ದ ಸಾಮಾನ್ಯ ಜನರಿಂದ ಪಾದ ಪೂಜೆ ಮಾಡಿಸಿಕೊಳ್ಳುತ್ತಿದ್ದರು; ಅಡ್ಡಪಲ್ಲಕ್ಕಿಸೇವೆ ಸಲ್ಲಿಸಿಕೊಳ್ಳುತ್ತಿದ್ದರು; ದಾನ, ದಕ್ಷಿಣೆ, ಸಾಷ್ಟಾಂಗ ನಮಸ್ಕಾರಗಳನ್ನೂ ಸ್ವೀಕರಿಸುತ್ತಿದ್ದರು. ಆಶೀರ್ವಾದ ಮಾಡುತ್ತಿದ್ದರು!"

ಹಾಗೆಯೇ ಮುಂದುವರೆದು—"ಕಾವಲಿಲ್ಲದ ಕೋಟೆಗೆ ನುಗ್ಗಲು ಶತ್ರುವಿಗೆ ಸೈನ್ಯ ಬೇಕೆ? ರಕ್ಷಕರಿಲ್ಲದ ದುರ್ಗವನ್ನು ಗೆಲ್ಲಲು ನಿಪುಣ ಸೈನಿಕನೊಬ್ಬನಾದರೂ ಸಾಕು! ತಮ್ಮ ಧರ್ಮದ ವಿಚಾರವಾದ ಯಾವ ಬುದ್ಧಿಪೂರ್ವಕ ಜ್ಞಾನವೂ ಇಲ್ಲದೆ, ಪರಂಪರಾಗತವಾದ ಅಂಧ ಆಚಾರ ಸಮೂಹವನ್ನೆ ತತ್ವಗಳೆಂದು ನಂಬಿ, ಆಲೋಚನಾಶಕ್ತಿ ಲವಲೇಶವೂ ಇಲ್ಲದಿದ್ದವರನ್ನು, ಜಡಬುದ್ಧಿಗಳಾಗದೆ ತುಸು ಮಟ್ಟಿಗೆ ಜಾಗೃತಮತಿ ಗಳಾಗಿಯೂ ತಮ್ಮ ಮತಧರ್ಮದ ಸನಾತನ ಮೂಲ ತತ್ವಗಳನ್ನರಿಯದವರ ನಂಬಿಕೆಗಳನ್ನು ಅಲ್ಲಾಡಿಸುವುದು ಅಷ್ಟೇನು ಕಷ್ಟವಲ್ಲ. ಪಾದ್ರಿ ಜೀವರತ್ನಯ್ಯ ಮಲೆನಾಡಿನ ಗೌಡರುಗಳಲ್ಲಿ ಅಂಥವರನ್ನೇ ಪತ್ತೆಹಚ್ಚಿ ತನ್ನ ಕೆಲಸಕ್ಕೆ ಕೈ ಹಾಕಿದ್ದನು..." ಎಂದು ಹೇಳುತ್ತಾರೆ.

ಅವಕಾಶ ಸಿಕ್ಕಾಗಲೆಲ್ಲ ಹಿಂದೂ ಆಚರಣೆಗಳನ್ನು ಅವಹೇಳನ ಮಾಡುವ ಪಾದ್ರಿಯೂ ಬೆರಗಾಗುವ ಪ್ರಸಂಗ ಒಮ್ಮೆ ಎದುರಾಗುತ್ತದೆ. ಮಿಶನ್ ಸ್ಕೂಲಿನ ಹತ್ತಿರ ಬಾವಿ ತೋಡಿಸಲು ಸ್ಥಳ ಗೊತ್ತುಮಾಡುವ ಕಾರ್ಯದಲ್ಲಿ ನೀರಿನ ಪರಿಮಾಣ, ನೀರಿರುವ

ಸ್ಥಾನ, ನೀರು ದೊರೆಯುವ ಆಳ ಇವುಗಳನ್ನು ನಿರ್ಧರಿಸುವುದಕ್ಕೆ ಐಗಳ ವಿಶೇಷ ಸಾಮರ್ಥ್ಯದ ಹಸಿರುಕಡ್ಡಿಯ ವಿಧಾನವನ್ನು ಉಪಯೋಗಿಸಬೇಕೇ ಬೇಡವೇ ಅಂತ ಪಾದ್ರಿ ಯೋಚನೆಯಲ್ಲಿ ಬೀಳುತ್ತಾರೆ. ಕೊನೆಗೆ ಊರವರ ಒತ್ತಾಯಕ್ಕೆ ಮಣಿದು ತಾವು ಅವೈಜ್ಞಾನಿಕ, ಅಪ್ರಾಕೃತ ಎಂದು ಜರಿದ ವಿಧಾನವನ್ನೇ ಬಳಸಲು ಒಪ್ಪುತ್ತಾರೆ. ಜೊತೆಗೆ ಈ ಕಾರ್ಯವನ್ನು ಸೂಕ್ಷ್ಮವಾಗಿ ಗಮನಿಸಿ ಐಗಳ ದುರ್ಮಂತ್ರವನ್ನು ಭೇದಿಸುವ ಆಸೆಯೂ ಅವರಲ್ಲಿ ಚಿಗುರುತ್ತದೆ.

ಆದರೆ ಪಾದ್ರಿ ಎಷ್ಟೇ ಪ್ರಯತ್ನಪಟ್ಟರೂ ಆ ಹಸಿರುಕಡ್ಡಿಯ ರಹಸ್ಯವನ್ನು ಅವರಿಗೆ ಭೇದಿಸಲಾಗುವುದಿಲ್ಲ. ಐಗಳ ಕೈಯಲ್ಲಿದ್ದಾಗ ಮಾತ್ರ ಹಸಿರುಕಡ್ಡಿ ನೀರಿದ್ದಲ್ಲಿ ಬಾಗುತ್ತದೆ. ಏನೇನೋ ಪರೀಕ್ಷೆ ಮಾಡಿದರೂ ಪಾದ್ರಿಗೆ ಈ ಸಂದರ್ಭಕ್ಕೆ ಹಾಕಬಹುದಾದ ವೈಜ್ಞಾನಿಕ ಚೌಕಟ್ಟು ಸಿಗುವುದಿಲ್ಲ. ಕೊನೆಗೆ ಅವರೇ ಊರ ಜನರ ಮುಂದೆ ಸೋಲೊಪ್ಪಿಕೊಳ್ಳ-ಬೇಕಾಗುತ್ತದೆ.

ಈ ಎಲ್ಲದ್ದಕ್ಕೂ ಕುವೆಂಪು ಅವರು ಕೊಡುವ ವಿಶ್ಲೇಷಣೆ ಕುತೂಹಲಕಾರಿಯಾಗಿದೆ. "ವಿದ್ಯುಚ್ಛಕ್ತಿಯಂತೆಯೇ ಒಂದು ತರಹದ ನೈಸರ್ಗಿಕ ಶಕ್ತಿ; ಬುದ್ಧಿಶಕ್ತಿಯಂತೆ, ಮೇಧಾ ಪ್ರತಿಭಾ ಶಕ್ತಿಗಳಂತೆ, ದೈವದತ್ತವಾಗಿ ಒಬ್ಬರಲ್ಲಿದ್ದು ಇನ್ನೊಬ್ಬರಲ್ಲಿ ಇರದೆ ಇರಬಹು-ದಲ್ಲವೇ?" ಎಂಬ ವಿಷಯವಾಗಿ ಕುವೆಂಪು ಅವರು ಸಮರ್ಥವಾದ ತರ್ಕ ಹೂಡುತ್ತಾರೆ. ಆ ಮೂಲಕ ನಿಸರ್ಗದ ನಿಯಮಗಳನ್ನು ಒಪ್ಪಿಕೊಂಡೂ ಅವೈಚಾರಿಕ ಮತಶ್ರದ್ಧೆಯನ್ನು ಅಲ್ಲಗಳೆಯಲು ತೀವ್ರತರವಾದ ಪ್ರಗತಿಶೀಲ ಮನಸ್ಸು ಬೇಕು ಎಂಬುದನ್ನು ಆಳವಾಗಿ ಪ್ರತಿಪಾದಿಸುತ್ತಾರೆ.

*

## ಸಾಮಾನ್ಯ ನಂಬಿಕೆಗಳು ಮತ್ತು ದೈವ ಭಕ್ತಿ

ನಮ್ಮ ನಾಡಿನ ಜನನಾಡಿಯ ಗುಂಟ ಹೊರಟರೆ ಸಾಕಷ್ಟು ನಂಬಿಕೆಗಳು, ಸಂಪ್ರದಾಯಗಳು ದೈವಭಕ್ತಿಯ ಹೆಸರಲ್ಲಿ ನಮಗೆ ಕಾಣಸಿಗುತ್ತವೆ. ಅಂಥ ಹಲವಾರು ಉದಾಹರಣೆಗಳು, ಪ್ರಸಂಗಗಳು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲೂ ಇವೆ. ತಮ್ಮದೇ ಆದ ಯಾವುದೋ ಕ್ರಮದಲ್ಲಿ, 'ನೀರಿನ ತಳದಿಂದ ಮೇಲು ಮೈಗೆ ಗುಳ್ಳೆಗಳೇಳುವಂತೆ' ಈ ನಂಬಿಕೆಗಳು ಸದ್ದಿಲ್ಲದೇ ಜನಮಾನಸದಿಂದಲೇ ಹುಟ್ಟಿದಂತೆ ತೋರುತ್ತದೆ.

ಸಿಂಬಾವಿಯ ಆಳು ಗುತ್ತಿ ಬೆಟ್ಟಳ್ಳಿ ಕೇರಿಯ ತನ್ನ ಅತ್ತೆಯ ಮಗಳು ತಿಮ್ಮಿಯನ್ನು ಇಷ್ಟಪಟ್ಟಿದ್ದಾನೆ. ಅವರ ಮದುವೆಗೆ ತಿಮ್ಮಿಯ ತಾಯಿ ಸೇಸಿಯನ್ನು ಹೊರತುಪಡಿಸಿದರೆ ಮನೆಯವರ್‍ಯಾರಿಗೂ ಈ ಸಂಬಂಧ ಇಷ್ಟವಿಲ್ಲ. ಬೆಟ್ಟಳ್ಳಿ ಗೌಡರಿಗಂತೂ ತಿಮ್ಮಿ ಗುತ್ತಿಯನ್ನು

ಮದುವೆಯಾಗಿ ಸಿಂಬಾವಿಯನ್ನು ಸೇರಿದರೆ ತಮಗೆ ಕೆಲಸಕ್ಕೆ ಒಂದು ಆಳು ಕಡಿಮೆಯಾಗುತ್ತದೆ ಎಂಬ ಚಿಂತೆ. ಹೀಗಾಗಿಯೇ ಅವರು ತಿಮ್ಮಿಯ ಲಗ್ನವನ್ನು ತಮ್ಮ ಕೆಲಸದವನೇ ಆದ ಬಚ್ಚನ ಜೊತೆಗೆ ನಿಶ್ಚಯಿಸಿದ್ದಾರೆ.

ಆಗ ಕಣ್ಣಾಪಂಡಿತರು ಮಂತ್ರಿಸಿಕೊಟ್ಟ ತಾಯತ ಮುಖ್ಯ ಭೂಮಿಕೆಗೆ ಬರುತ್ತದೆ. ಗುತ್ತಿಯ ಅದೃಷ್ಟಕ್ಕೆ ತಾಯಿಯ ಅನುಮತಿ ಪಡೆದು ತಿಮ್ಮಿ ಗುತ್ತಿಯ ಸಂಗಡ ಸಿಂಬಾವಿಗೆ ಬರಲು ಒಪ್ಪಿ ನಡೆದಿದ್ದಾಳೆ. ಅವಳು ಹಾಗೆ ಒಮ್ಮೆಲೇ ಒಪ್ಪಿದ್ದಕ್ಕೆ ಗುತ್ತಿ ಕೊಡುವ ಕಾರಣ–ಕಣ್ಣಾಪಂಡಿತರ ತಾಯತ. ಆ ತಾಯತ ಅವನ ಆತ್ಮವಿಶ್ವಾಸವನ್ನು ಹೆಚ್ಚಿಸಿದೆ. ಹೀಗಾಗಿಯೇ ಅವನು ಹುಲಿಕಲ್ಲು ನೆತ್ತಿಯಂತ ದುರ್ಗಮ ಹಾದಿಯಲ್ಲೂ ತಿಮ್ಮಿಯನ್ನು ಧೈರ್ಯದಿಂದ ನಡೆಸಿಕೊಂಡು ಹೋಗಲು ಸಾಧ್ಯವಾಗಿದೆ. “ಕಣ್ಣಾಪಂಡಿತರು ಕೊಟ್ಟಿದ್ದು ಕಣೇ, ಅಂತ್ರ! ಎಂಥಾ ಒಲ್ಲೆ ಅನ್ನೋ ಹೆಣ್ಣನ್ನಾದ್ರೂ ಒಲಿಯೋ ಹಾಂಗೆ ಮಾಡ್ತದಂತೆ. ಅಲ್ಲದಿದ್ರೆ ನನ್ನ ಸಂಗಡ ನೀ ಇಷ್ಟು ಸುಲಭಕ್ಕೆ ಓಡಿ ಬರ್ತಿದ್ಯಾ? ಚುಟಿಗಿ ಹಾಕಿ ಕರದ್ರೆ ನಾಯಿ ಬರಾಹಂಗೆ?” ಎಂದಿದ್ದಾನೆ.

ಇತ್ತ ಬೆಟ್ಟಳ್ಳಿ ಕೇರಿಯಲ್ಲೂ ತಿಮ್ಮಿ ಕಾಣೆಯಾದದ್ದು ಗೊತ್ತಾಗಿ ತಂದೆ, ಅಣ್ಣಂದಿರ ಕೂಗಾಟವೆದ್ದಿದೆ. ಆಗ ತಿಮ್ಮಿಯ ತಾಯಿ ಸೇಸಿಯ ಸಹಾಯಕ್ಕೆ ಬರುವುದೂ ಅಂಥದೇ ಇನ್ನೊಂದು ತಂತ್ರ. ಕೇರಿಯ ಜನರೆಲ್ಲ ತಿಮ್ಮಿಗಾಗಿ ಹುಡುಕಾಟ ನಡೆಸಿರುವಾಗ ಸೇಸಿಗೆ ಅರಿವಿದ್ದೋ ಇಲ್ಲದೆಯೋ ಅವಳ ಮೈಮೇಲೆ ‘ಜಕಣಿ’ ಬಂದಿದೆ. “ಹ್ಞೂಂ ಹ್ರೀಂ ಹೂಂ... ಜಾತಿಕೆಟ್ಟು ನೀತಿಕೆಟ್ಟು ಕೇರಿಗೆಲ್ಲ ಮುಟ್ಟುಚಿಟ್ಟು! ಹಲಸಿನ ಮರದ ಮೇಲೆ ನನ್ನ ಜುಟ್ಟು! ನಾನೆ ಅಡಗಿಸಿದ್ದೇನೆ! ಹೆದರಬೇಡಿ, ನನಗೆ ಆಯಾರ ಕೊಟ್ಟು ಪೂಜೆಮಾಡಿ! ಹೋದ ಹೆಣ್ಣು ಕೂದಲು ಕೊಂಕದೆ ಬರುತ್ತದೆ ಹ್ಞೂ ಹ್ಞೂ ಹ್ಞೂ...!” ಎನ್ನುತ್ತದೆ ಸೇಸಿಯ ಮೈಮೇಲೆ ಬಂದ ಜಕಣಿ.

ಆಶ್ಚರ್ಯವೆಂಬಂತೆ ಕೇರಿಯ ಜನರೆಲ್ಲ ಜಕಣಿ ತಿಮ್ಮಿಯನ್ನು ಅಡಗಿಸಿಟ್ಟಿದ್ದೇ ನಿಜ ಅಂತ ನಂಬಿ ಮುಗ್ಧವಾಗಿಯೇ ತಮ್ಮ ದಿನನಿತ್ಯದ ಕೆಲಸಗಳಲ್ಲಿ ಮಗ್ನರಾಗುತ್ತಾರೆ. ದೇವಿ ಶಾಂತಳಾದ ಮೇಲೆ ತಿಮ್ಮಿ ಮತ್ತೆ ಕೇರಿಗೆ ಬಂದೇ ಬರುತ್ತಾಳೆ ಎಂದು ಯಾವುದೇ ಸಂಶಯವಿಲ್ಲದೇ ಅವರು ನಂಬಿದ್ದಾರೆ. ಕುವೆಂಪು ಅವರ ಮಾತಿನಲ್ಲೇ ಹೇಳಬೇಕೆಂದರೆ— “ಅವಿಚಾರ ಭಕ್ತಿಯ ಅಂಧಶ್ರದ್ಧೆಯಿಂದ ಅವರಿಗೆ ಭಗವಂತನಲ್ಲಿ ಶರಣಾಗತಿ ಸುಲಭವಾಗಿಯೇ ಸಿದ್ಧಿಸಿತ್ತು.”

ಇನ್ನೊಂದು ಭಾಗದಲ್ಲಿ ನಾಗತ್ತೆ– ನಾಗಕ್ಕರ ಕತೆ ಬರುತ್ತದೆ. ಇಲ್ಲಿ ನಾಗತ್ತೆ ತನ್ನ ವಿಧವೆ ಸೊಸೆ ನಾಗಕ್ಕಳನ್ನು ಹೂವಳ್ಳಿಯ ವೆಂಕಟಣ್ಣನೊಡನೆ ಕೂಡಿಕೆ ಮಾಡಿಕೊಳ್ಳಲು ಒತ್ತಾಯ ಮಾಡುತ್ತಿರುತ್ತಾಳೆ. ಆದರೆ ತನ್ನ ಗಂಡ ನಾಗಣ್ಣನ ಶೋಕದಲ್ಲೇ ತಪ್ತಳಾಗಿರುವ ನಾಗಕ್ಕ ಈ ಸಂಬಂಧಕ್ಕೆ ಒಪ್ಪುವುದಿಲ್ಲ. ಆಗ ಅವಳ ಅತ್ತೆ ನಾಗತ್ತೆ ಊಟದಲ್ಲಿ ಮದ್ದು

ಬೆರೆಸಿ ರಾತ್ರಿ ನಾಗಕ್ಕನಿಗೆ ಮತ್ತು ಬರುವಂತೆ ಮಾಡಿ ಕೋಣೆಯಲ್ಲಿ ವೆಂಕಟಣ್ಣನೊಡನೆ ಸೇರಿಸುವ ಕಪಟ ನಾಟಕ ಹೂಡುತ್ತಾಳೆ.

ಮರುದಿನ ಬೆಳಿಗ್ಗೆ ಎದ್ದಾಗ ನಾಗಕ್ಕಳಿಗೆ ಕನಸಿನಲ್ಲಿ ತನ್ನ ಮೃತ ಗಂಡನೊಡನೆ ಮಾನಸಿಕವಾಗಿ ಸೇರಿದ ಅನುಭವವಾದರೂ ತನ್ನ ದೇಹದ ಮೇಲಿನ ಮಿಲನಾನಂತರದ ಕುರುಹುಗಳಿಂದ ಚಕಿತಪಡುವಂತಾಗುತ್ತದೆ. ಆದರೆ ಯಾವುದೇ ಸ್ಪಷ್ಟ ಉತ್ತರ ದೊರೆಯದೇ ಕಂಗಾಲಾಗಿದ್ದಾಳೆ. ವೆಂಕಟಣ್ಣನ ಮಗಳೂ, ತನ್ನ ಗೆಳತಿಯೂ ಆದ ಚಿನ್ನಮ್ಮಳನ್ನು "ಸತ್ತುಹೋದವರು ಮತ್ತೆ ಬರ್ತಾರೇನೆ?" ಎಂದು ಕೇಳಿ ನಗೆಗೀಡಾಗಿದ್ದಾಳೆ. ಮರುದಿನ ರಾತ್ರಿ ಈ ಕಪಟವನ್ನು ಹೊರಗೆಳೆವತನಕ ನಾಗಕ್ಕ ತನ್ನ ಗಂಡನೇ ತನ್ನನ್ನು ಕನಸಿನಲ್ಲಿ ಬಂದು ಸೇರಿದ್ದು ಅಂತ ನಂಬಿಕೊಂಡಿದ್ದಾಳೆ.

ಇಂಥ ಹಲವಾರು ಘಟನೆಗಳು ಸಂಪ್ರದಾಯ, ಮೂಢನಂಬಿಕೆಗಳ ಸೋಗು ತೊಟ್ಟು ಮಲ್ಲಿಗೆಯ ಬಳ್ಳಿಯಲ್ಲಿ ಎಲ್ಲೆಲ್ಲೋ ಸಿಲುಕಿಕೊಂಡಿರುವ ಹೂಗಳಂತೆ ಓದುಗರನ್ನು ಸೆಳೆದುಕೊಳ್ಳುವವು.

*

## ಲೋಕದಲ್ಲಿ ಕಂಡೂ ಕಾಣದಂತ 'ಅಸ್ಮೃತಿ'

ನಾನು ಇಲ್ಲಿ ಕೊನೆಯದಾಗಿ ಚರ್ಚಿಸಬೇಕೆಂದಿರುವ ಸಂಗತಿ 'ಅಸ್ಮೃತಿ'ಯ ಕುರಿತಾದ್ದು. ಈ ಜಗತ್ತಿನ ಎಲ್ಲ ಸಂಗತಿಗಳೂ ಒಂದಕ್ಕೊಂದು ಪೂರಕವಾಗಿವೆ, ಒಂದು 'ಲೂಪ್'ನ ರೀತಿಯಲ್ಲಿ ಘಟನೆಗಳು ಪುನರಾವರ್ತನೆಗೊಳ್ಳುತ್ತವೆ, ಆಳದಲ್ಲಿ ಒಂದಕ್ಕೊಂದು ಬೆಸೆದುಕೊಂಡೇ ಇವೆ ಅಂತ ಈ ಕಾದಂಬರಿಯಲ್ಲಿ ಕುವೆಂಪು ಅವರು ಹಲವಾರು ಸರ್ತಿ ಮನಗಾಣಿಸುತ್ತಾರೆ. ಆ ಮೂಲಕ ಶರೀರ–ಜೀವ–ಆತ್ಮಗಳು ಲೋಕದಲ್ಲಿ ಸ್ಥಳ ಬದಲಿಸುತ್ತಲೇ ಇರುತ್ತವೆ ಅಂತ ಪುರಾವೆಗಳೊಂದಿಗೆ ಸಮರ್ಥಿಸುತ್ತಾರೆ.

ಉದಾಹರಣೆಗೆ ಹೂವಳ್ಳಿಯ ಚಿನ್ನಮ್ಮ ಆರು ವರ್ಷದ ಪುಟ್ಟ ಹುಡುಗಿಯಾಗಿದ್ದಾಗ ಅವರ ಮನೆಗೆ ಅವಳಿಗಿಂತ ತುಸುವೇ ದೊಡ್ಡವನಾದ ಕೋಣೂರಿನ ಮುಕುಂದಯ್ಯ ತನ್ನ ತಾಯಿಯ ಜೊತೆಗೆ ಬಂದಿರುತ್ತಾನೆ. ಮುಕುಂದನ ತಾಯಿ ಚಿನ್ನಮ್ಮನನ್ನು ಹತ್ತಿರಕ್ಕೆ ಕರೆದು ಕೂರಿಸಿಕೊಂಡು, ತಾನು ತಂದಿದ್ದ ಕೊಬ್ಬರಿ ಬೆಲ್ಲಗಳನ್ನು ಕೊಡುತ್ತ "ಇಂವ ಯಾರು? ಹೇಳು ನೋಡಾನ?" ಎಂದು ಕೇಳಿದಾಗ ಆ ಪುಟ್ಟ ಹುಡುಗಿ ತನ್ನ ಮುಗ್ಧ ನಯನಗಳಿಂದ ಮುಕುಂದನನ್ನು ಕಾಣುತ್ತ ಕ್ರಮೇಣ ಗುರುತು ಹಿಡಿದಂತೆ ನಾಚಿ, ತಲೆಬಾಗಿ "ಅವರು!" ಎನ್ನುತ್ತಾಳೆ.

ಅಲ್ಲಿ ಆ ಕ್ಷಣದಲ್ಲಿ ಯಾರಿಗೂ ತಿಳಿಯದ ಅತೀಂದ್ರಿಯ ವ್ಯಾಪಾರ ನಡೆದಿತ್ತು ಅಂತ ಕುವೆಂಪು ಅವರು ಹೇಳುತ್ತಾರೆ. "ಚಿಕ್ಕ ಮಗು ಚಿನ್ನಮ್ಮ ಹುಡುಗ ಮುಕುಂದಯ್ಯನಲ್ಲಿ

ತನ್ನ ಹಿಂದಿನ ಜನ್ಮದ ಗಂಡನನ್ನು ಕಂಡಿದ್ದಳು! ಆ ಅನುಭವ ನೆನಪಿನ ರೂಪದ್ದಾಗಿಯೂ ಇರಲಿಲ್ಲ, ಅದೊಂದು ಕಾಣುವಿಕೆಯಾಗಿತ್ತು. ಆ ಒಂದು ಕ್ಷಣದರ್ಶನದಲ್ಲಿ ಚಿನ್ನಮ್ಮ ತಾನೂ ಮುಕುಂದಯ್ಯನೂ ತಮ್ಮ ಹಿಂದಣ ಜನ್ಮದಲ್ಲಿ ದಂಪತಿಗಳಾಗಿದ್ದುದನ್ನು 'ಆಗಿ' 'ಅನುಭವಿಸಿ' 'ಕಂಡಿದ್ದಳು!' ಅವಳು ಆಲೋಚಿಸಿ ಹೇಳಿರಲಿಲ್ಲ; ನೆನೆದೂ ಹೇಳಿರಲಿಲ್ಲ; ಅಪರೋಕ್ಷನಾಗಿ ಆಗಿ ಕಾಣುತ್ತಿದ್ದುದನ್ನೆ "ಅವರು!" ಎಂದು ಉತ್ತರ ಹೇಳಿದ್ದಳು" ಎನ್ನುತ್ತಾರೆ.

ಇಂಥ ಪ್ರಸಂಗಗಳು ಈ ಕಾದಂಬರಿಯಲ್ಲಿ ಬಹುವಾಗಿಯೇ ಕಂಡುಬರುತ್ತವೆ. ಒಬ್ಬ ಸನ್ಯಾಸಿ ಮುಕುಂದಯ್ಯನಿಗೆ ಹೇಳುವ ಈ ಮಾತು ಗಮನಿಸಿ: "ಬದುಕಿರುವವರೂ ಸಾಯುತ್ತಾರೆ; ಸತ್ತವರು ಮತ್ತೆ ಹುಟ್ಟುತ್ತಾರೆ. ಹೀಗೆ ಸಾಗುತ್ತಿದೆ ಭಗವಂತನ ಲೀಲೆ!... ಇದೆಲ್ಲ ನಿತ್ಯವೂ ಸೂಕ್ಷ್ಮಲೋಕಗಳಲ್ಲಿ ನಡೆಯುತ್ತಿರುವ ಸಾಮಾನ್ಯ ವ್ಯಾಪಾರ."

ಹಾಗೆಯೇ ಮುಂದುವರೆದು "ಮನುಷ್ಯನು ತಿಳಿದುಕೊಂಡಿರುವುದಕ್ಕಿಂತಲೂ ಹೆಚ್ಚಾಗಿಯೇ ಅವನ ಅಂತಃಪ್ರಕೃತಿ ಸೃಷ್ಟಿಯ ಬಹಿಃಪ್ರಕೃತಿಗೆ ಅನುಯಾಯಿಯಾಗಿರುತ್ತದೆ" ಎನ್ನುತ್ತಲೇ "ಆತನ ಆತ್ಮಕೋಶವು ಬಹು ಜನ್ಮಗಳ ಸಂಸ್ಕಾರಗಳಿಂದ ತುಂಬಿರುವಂತೆ ಆತನ ಅನ್ನಮಯಕೋಶವೂ ಪೃಥ್ವಿಯಲ್ಲಿ ಪ್ರಾಣೋತ್ಪತ್ತಿಯಾದಂದಿನಿಂದ ಮೊದಲುಗೊಂಡು ಇಂದಿನವರೆಗೆ ಜೀವವು ಕೈಕೊಂಡ ನಾನಾರೂಪದ ನಾನಾ ಪ್ರಯೋಗದ ನಾನಾ ಕಷ್ಟ ಸಂಕಟಗಳ ನಾನಾ ಸುಖ ಸಂತೋಷಗಳ ಮಹಾ ಸಾಹಸಯಾತ್ರೆಯ ಸಮಗ್ರ ಪರಿಣಾಮ ಮುದ್ರೆಯನ್ನೂ 'ಅಸ್ಮೃತಿ' ರೂಪದಲ್ಲಿ ಪಡೆದಿರುತ್ತದೆ" ಎನ್ನುತ್ತಾರೆ.

ಹೀಗೆ ಅವರ ದರ್ಶನದಲ್ಲಿ ಕಂಡ 'ಅಸ್ಮೃತಿ'ಯ ಸತ್ವಯುತ ಸತ್ಯವನ್ನು ಓದುಗರೆದೆಗೂ ದಾಟಿಸುತ್ತಾರೆ.

*

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಮನುಷ್ಯ-ಪ್ರಾಣಿ-ಪ್ರಕೃತಿ ಸಂಬಂಧವು ಗಾಢವಾಗಿದೆ. ಮೊದಲ ಪುಟದಲ್ಲೇ ಕುವೆಂಪು ಅವರು ಹೇಳಿರುವ "ಇಲ್ಲಿ ಯಾರೂ ಮುಖ್ಯರಿಲ್ಲ, ಯಾರೂ ಅಮುಖ್ಯರಿಲ್ಲ, ಯಾವುದೂ ಯಃಕಶ್ಚಿತವಲ್ಲ!" ಎಂಬ ಮಾತಿನ ಕಂಪನ ಓದಿನುದ್ದಕ್ಕೂ ವಿಸ್ತರಿಸಿದೆ. "ಮಾನವತ್ವವನ್ನು ತಲುಪಿದ ಚೇತನ ಕಲ್ಲುಮಣ್ಣುಗಳಂತೆ ತಟಸ್ಥವಾಗಿ ಬಿದ್ದಿರಲು ಸಾಧ್ಯವಿಲ್ಲ" ಎಂಬ ವಿಶ್ವಪ್ರಜಾ ನೀತಿಯನ್ನು ಸಾರುತ್ತದೆ.

ತಮ್ಮೊಳಗೆ ಅಡಗಿಸಿಟ್ಟುಕೊಂಡಿರುವ ಅತಿಸಹಜ ಮನುಷ್ಯತ್ವದಿಂದಲೇ ಭಿನ್ನವಾಗಿ ನಿಲ್ಲುವ ಇಲ್ಲಿನ ಪಾತ್ರಗಳು ದೈವತ್ವದ ಕನಸು ಕಾಣುವುದಿಲ್ಲ. ಕನ್ನಡ ಸಾರಸ್ವತ ಲೋಕದ

ಓದುಗರಿಗೆ ಬಹುಕಾಣ್ಕೆ ಕೊಟ್ಟ ಈ ಕಾದಂಬರಿಯಲ್ಲಿ ಜೀವನಪ್ರೀತಿಯೇ ನಾಯಕ. ಬದುಕಿನಲ್ಲಿ ಏನೇ ಆಗಲಿ, ಏನೇ ಹೋಗಲಿ ಸಾಗುವ ದಾರಿ ಮುಂದುವರಿದೇ ಇರುತ್ತದೆ ಎಂಬುದು ಇಲ್ಲಿನ ಮೂಲಮಂತ್ರ. ಇಲ್ಲಿ–"ಎಂತಹ ಹೂಳಿನ ಮೇಲೆಯೂ ಕಾಲಕ್ರಮೇಣ ಹುಲ್ಲು ಬೆಳೆಯುತ್ತದೆ; ಎಂತಹ ಸೂಡಿನ ಸುಟ್ಟುನೆಲವನ್ನಾದರೂ ಕಾಲಕ್ರಮೇಣ ಹಸುರು ತಬ್ಬುತ್ತದೆ. ಅಲ್ಲಿ ಹೆಣ ಸುಟ್ಟಿದ್ದರು ಎಂಬ ಗುರುತೂ ಕಾಣದಂತೆ ಗರುಕೆ ತಬ್ಬಿ ನಳನಳಿಸಿ ಹಸುರು ನಗೆ ಬೀರುತ್ತದೆ."

ಕುವೆಂಪು ಅವರ ಮಾತಿನಲ್ಲಿಯೇ ಹೇಳಬೇಕೆಂದರೆ–"ಯಾರು ಬದುಕಲಿ, ಯಾರು ಸಾಯಲಿ, ಯಾರು ಹುಟ್ಟಲಿ, ಹುಟ್ಟದೇ ಹೋಗಲಿ, ಮಳೆಗಾಲ ನಿಲ್ಲುತ್ತದೆಯೇ?"

ಲೋಕದಲ್ಲಿ ಮೆಲುವಾಗಿ ಅರಳುವ ಬದುಕು ನಿಲ್ಲುತ್ತದೆಯೇ? ಬದುಕಿನ ಕುರಿತು, ದೈನಿಕದ ಕುರಿತು ಇಲ್ಲಿನ ಜನರಿಗಿರುವ ದೃಢ ಭಕ್ತಿಯ ರೂಪ ಧರಿಸಿದ ವಿಶ್ವಾಸ ನಿಲ್ಲುತ್ತದೆಯೇ? ಎಂದು ಹುಟ್ಟುವ ಪ್ರಶ್ನೆಯೇ ಈ ಮೇರುಕೃತಿಯ ಜೀವದ್ರವ್ಯವಾಗಿದೆ.

*

**ಆಕರ:**

ಕುವೆಂಪು ವಿರಚಿತ 'ಮಲೆಗಳಲ್ಲಿ ಮದುಮಗಳು' ಕಾದಂಬರಿ. ಉದಯರವಿ ಪ್ರಕಾಶನ, ಮೈಸೂರು.

■

# ಶಿಶುನಾಳ ಶರೀಫರ ಗೀತೆಗಳ ವೈಶಿಷ್ಟ್ಯ

–ಆಹಿತಾನಲ (ನಾಗ ಐತಾಳ)

**ಪೀಠಿಕೆ:**

"ಭಕ್ತಿ ಸಾಹಿತ್ಯ"ದ ಅಧ್ಯಯನದಲ್ಲಿ, ಶಿಶುನಾಳ ಶರೀಫರ ಗೀತೆಗಳು ಅಪೂರ್ವ ಸ್ಥಾನ ಪಡೆದು, ಹೊಸ ಆಯಾಮವನ್ನು ದೊರಕಿಸುತ್ತವೆ. ಅವರ ಹಲವು ಗೀತೆಗಳು ಭಕ್ತಿ ಸಾರುವುದರ ಜೊತೆಗೇ ಅನುಭಾವ, ನೀತಿ, ಸಮಾಜ ಸುಧಾರಣೆ, ಇತ್ಯಾದಿಗಳೂ ರಸವತ್ತಾದ ಅಂಶಗಳಾಗಿ ಎದ್ದು ತೋರುವಂತೆ ಮೂಡಿಸುತ್ತವೆ. "ಶರೀಫ" ಎನ್ನುವ ಫಾರ್ಸಿ ಶಬ್ದಕ್ಕೆ, ಶ್ರೇಷ್ಠ ಉದ್ದೇಶಗಳನ್ನು ಹೊತ್ತು, ಜನರ ಗೌರವಕ್ಕೆ ಪಾತ್ರನಾಗಿರುವವ ಎಂಬ ಅರ್ಥವಿದೆ. ಶರೀಫರನ್ನು "ಕರ್ನಾಟಕದ ಕಬೀರ" ಎಂದು ಕರೆಯುವ ವಾಡಿಕೆ ಅವರಿಗೆ ಸಲ್ಲುವ ಗೌರವವನ್ನು ವ್ಯಕ್ತಪಡಿಸುತ್ತದೆ. ಶರೀಫರು ಮೂಲತಃ ದೇವಭಕ್ತರು. ಅವರ ಗೀತೆಗಳ ಮೂಲ ತಿರುಳು ಭಕ್ತಿ; ಹಾಗೂ ಅವು ಸಾರುವ ಸಂದೇಶವೂ ಭಕ್ತಿ!

ಶರೀಫರ (೧೮೮೯ – ೧೮೮೯), ತಂದೆ–ತಾಯಿಯರು, ಉತ್ತರ ಕರ್ನಾಟಕದ ಧಾರವಾಡ ಜಿಲ್ಲೆಯ, ಶಿಗ್ಗಾವಿ ತಾಲೂಕಿನ ಶಿಶುನಾಳ ಗ್ರಾಮದ, ಇಮಾಮ ಹಜರತ್ ಸಾಹೇಬ ಮತ್ತು ಹಜ್ಜೂಮಾರು. ಅವರ ಪೂರ್ತಿ ಹೆಸರು, ಮಹಮದ ಶರೀಫ ಎಂದು. ಅವರು ಬಾಲ್ಯದಿಂದಲೇ ಅಧ್ಯಾತ್ಮದ ಮೇಲೆ ಒಲವು ತೋರಿಸಿದವರು. ಅಧ್ಯಾತ್ಮದ ಮೇಲೆ ಹೆಚ್ಚಿನ ಜ್ಞಾನ ಪಡೆಯಬೇಕೆಂಬ ಉದ್ದೇಶದಿಂದ, ಅದನ್ನು ಬೋಧಿಸುವ ಸೂಕ್ತ ಗುರುವಿನ ಹುಡುಕಾಟದಲ್ಲಿ ಅವರಿಗೆ ದೊರೆತವರೇ ಕಳಸದ ಗೋವಿಂದ ಭಟ್ಟರು. ಶರೀಫರ ಪ್ರಾಮಾಣಿಕ ಭಕ್ತಿಭಾವಕ್ಕೆ ಒಲಿದು, ಗೋವಿಂದ ಭಟ್ಟರು ಅವರಿಗೆ ಉಪದೇಶ ಮಾಡಿದರು. ಹೀಗೆ, ಶರೀಫರ ಪಾಲಿಗೆ ಗೋವಿಂದ ಭಟ್ಟರು "ಗುರು ಗೋವಿಂದ"ರಾದರು.

ಆದರೆ, ಸ್ಮಾರ್ತ ಬ್ರಾಹ್ಮಣರಾದ ಗೋವಿಂದ ಭಟ್ಟರು ಮಹಮದೀಯ ಮತದ ಶರೀಫರನ್ನು ಶಿಷ್ಯರಾಗಿ ಪಡೆದ ಈ ಸಂಗತಿ, ಹಿಂದೂ ಮತ್ತು ಮಹಮದೀಯ ಮತಗಳ ಅಚ್ಚ ಮಡಿವಂತ ಅನುಯಾಯಿಗಳನ್ನು ತೀರ ಗೊಂದಲಕ್ಕಿಟ್ಟುಕೊಂಡಿತು.

ಇದರಿಂದ ಗೋವಿಂದ ಭಟ್ಟರೂ, ಶರೀಫರೂ ಹಲವು ಟೀಕೆಗಳಿಗೆ ತುತ್ತಾಗಬೇಕಾಯ್ತು. ಶರೀಫರು ಅಂತಹ ಟೀಕೆಗಳಿಗೆ ಬಲಿಯಾಗದೆ, ಧೈರ್ಯದಿಂದ ತನ್ನ ಗುರುವನ್ನು ಹೀಗೆ ಸ್ಮರಿಸಿದ್ದಾರೆ:

**"ನನ್ನೊಳಗ ನಾ ತಿಳಕೊಂಡೆ**
**ಎನಗೆ ಬೇಕಾದ ಗಂಡನ್ನ ಮಾಡಿಕೊಂಡೆ**
**ಆಜ್ಞಾ ಪ್ರಕಾರ ನಡಕೊಂಡೆ**
**ಗುರೂಪದೇಶ ಪಡಕೊಂಡೆ**
**ಗುರು ಗೋವಿಂದನ ಪಾದ ಹಿಡಕೊಂಡೆ"**

ತಮ್ಮ ಗೀತೆಗಳಲ್ಲಿ ಶರೀಫರು ದೈವಭಕ್ತಿಯ ಜೊತೆಗೆ ತಮ್ಮ ಗುರು, ಗೋವಿಂದರರನ್ನು ಜೀವನದುದ್ದಕ್ಕೂ ನೆನೆಯುತ್ತ ಬಂದರು. ಭಕ್ತಿಮಾರ್ಗದಲ್ಲಿ ಯಾವ ಒಂದು ಮತಕ್ಕೂ ಉತ್ಕೃಷ್ಟ ಸ್ಥಾನವಿಲ್ಲ; ಎಲ್ಲ ಮತಗಳೂ ಒಂದೇ ಎಂದು ಅವರು ೧೯ನೆಯ ಶತಮಾನದಲ್ಲೇ ನಂಬಿ, ನಂಬಿದಂತೆ ನಡೆದವರು ಅವರು. "ಈಶ್ವರ ಅಲ್ಲಾ ತೇರೇ ನಾಮ್; ಸಬಕೋ ಸನ್ಮತಿ ದೇ ಭಗವಾನ್" ಎಂದು ಸಾರುವ ನಿಲುವೂ ಅವರದಾಗಿತ್ತು. "ಭಗವಂತ" ಯಾವ ಮತಕ್ಕೂ ಸೇರಿದವನಲ್ಲ ಎಂಬುದನ್ನು ಅವರು ತಮ್ಮ ಜೀವನದಲ್ಲಿ ತೋರಿಸಿಕೊಟ್ಟರು. ಅವರ ಮರಣದ ನಂತರವೂ, ಅವರ ಅಂತ್ಯಕ್ರಿಯೆಯನ್ನು ಹಿಂದೂ-ಮುಸ್ಲಿಮ್ ಸೌಹಾರ್ದತೆಯ ಮೂಲಕ ಆಚರಿಸಲಾಯ್ತೆಂದು ವರದಿ ಇದೆ. ಹಾಗಾಗಿ ಈ ಶರೀಫ ಸಾಹೇಬರು, "ಶರೀಫ ಶಿವಯೋಗಿ" ಎನಿಸಿಕೊಂಡಲ್ಲಿ ಆಶ್ಚರ್ಯವಿಲ್ಲ!

### "ಕೋಡಗನ ಕೋಳಿ ನುಂಗಿತ್ತs..." ಗೀತೆಯ ವಿಶಿಷ್ಟ ಶೈಲಿ:

ಈ ಲೇಖನದಲ್ಲಿ ನಾನು ಶಿಶುನಾಳ ಶರೀಫರ ಒಂದು ಜನಪ್ರಿಯ ಗೀತೆ, "ಕೋಡಗನ ಕೋಳಿ ನುಂಗಿತ್ತs..." ಗೀತೆಯ ಮೇಲೆ ನನ್ನ ಮನಸ್ಸಿನಲ್ಲಿ ಮೂಡಿದ ಕೆಲವು ಅನಿಸಿಕೆಗಳನ್ನು ವ್ಯಕ್ತಪಡಿಸುತ್ತಿದ್ದೇನೆ. ಇದೇ ರೀತಿಯ ಅಥವಾ ಬೇರೆ ತರದ ವ್ಯಾಖ್ಯಾನಗಳನ್ನು ಬೇರೆಯವರೂ ವ್ಯಕ್ತಪಡಿಸಿರಬಹುದು. ಹಾಗೆ ಪ್ರಕಟಿತವಾದ ವ್ಯಾಖ್ಯಾನಗಳ ಅರಿವಿಲ್ಲದಿದ್ದುದನ್ನು ನಾನು ಒಪ್ಪಿಕೊಂಡೇ ನನ್ನೀ ಅನಿಸಿಕೆಗಳನ್ನು ವ್ಯಕ್ತಪಡಿಸುತ್ತಿದ್ದೇನೆ. ಮೇಲ್ನೋಟಕ್ಕೆ ಈ ಗೀತೆ ಹಾಸ್ಯ ಲಕ್ಷಣದಿಂದ ಕೂಡಿದೆ ಎಂದು ಕಂಡುಬಂದರೂ, ಆಳವಾಗಿ ಯೋಚಿಸಿದರೆ, ಅದರಲ್ಲಿ ಅಡಗಿದ ಅಧ್ಯಾತ್ಮ ವ್ಯಕ್ತವಾಗುತ್ತದೆ. ಹೇಳುವ ಮಾತನ್ನು ನೇರವಾಗಿ ಹೇಳದೆ, ಒಂದು ಒಗಟಿನ ರೂಪದಲ್ಲಿ ಹೇಳುವ ಶೈಲಿ, ಈ ಗೀತೆಯಲ್ಲಿ ವ್ಯಕ್ತವಾಗಿರುವುದನ್ನು ಗಮನಿಸಬಹುದು. ಜೊತೆಗೆ ತಿಳಿ ಹಾಸ್ಯವನ್ನೂ ಶರೀಫರು ಇಲ್ಲಿ ಬೆರೆಸಿದ್ದಾರೆ. ಈ ರೀತಿ ಹಾಸ್ಯವೆಂದೆನಿಸಿದರೂ, ಜೊತೆ-ಜೊತೆಗೆ ಅಧ್ಯಾತ್ಮ ಅಥವಾ ನೀತಿ ಬೋಧೆಯನ್ನು ಸಾರುವ ಈ ಶೈಲಿ ಅನನ್ಯವಾದುದೆಂದೇ

ಹೇಳಬಹುದು. ಪರಿಣಾಮವಾಗಿ ಓದುಗರ ಮೆಚ್ಚುಗೆ ಪಡೆಯುತ್ತದೆ. ಈ ಗೀತೆಯುದ್ದಕ್ಕೂ ಹಲವು ಹಾಸ್ಯಾಸ್ಪದ ಅಸಂಗತ ಸಂದರ್ಭಗಳ ವಿವರಗಳಿವೆ. ಆದರೆ, ಈ ಅಸಂಗತ ಸಂಗತಿಗಳಲ್ಲಿ ಅಡಗಿರುವ ನಿಜ ಅರ್ಥವನ್ನು, ಅವು ಸಾರುವ ಜೀವನದ ಗುರಿಯನ್ನು ತಿಳಿಯಲು ಆಳ ಚಿಂತನೆಯ ಅಗತ್ಯವಿದೆ. ಹಾಗಾಗಿಯೇ ಶಿಶುನಾಳರ ಹಲವು ಗೀತೆಗಳು ಆಧ್ಯಾತ್ಮಿಕ ವಲಯದಲ್ಲಿ ವಿಶಿಷ್ಟತೆಯನ್ನು ಪಡೆದಿವೆ. ಇದೇ ರೀತಿಯ ಶೈಲಿ ಕೆಲ ಜನಪದ ಹಾಡುಗಳಲ್ಲೂ ವ್ಯಕ್ತವಾಗಿರುತ್ತವೆ. ಉದಾಹರಣೆಗೆ ಈ ಕೆಳಗಿನ ಒಂದು ಹಾಸ್ಯ ಜನಪದ ತ್ರಿಪದಿಯನ್ನು ಗಮನಿಸಿ:

**ಕುಂಬಾರ ನಿನಗ್ಯಾಕೋ ಗೊಂಬೆ ಮಾಟದ ಹೆಣ್ಣು**
**ತುಂಬೆಂದ ಮಣ್ಣು ತುಳಿಯೆಂದ – ಮಡಕೆಯಾ**
**ಹೊತ್ತು ಮಾರೆಂದ ಮನೆ ಮನೆಗೆ**

ಇಲ್ಲಿ ತಿಳಿ ಹಾಸ್ಯವಿದೆ; ಜೊತೆಗೆ ನೀತಿಯ ಬೋಧನೆಯೂ ಇದೆ. "ಹಾಸಿಗೆ ಇದ್ದಷ್ಟೇ ಕಾಲು ಚಾಚು" ಎಂಬ ಗಾದೆಯೊಳಗಿನ ಸಂದೇಶವೂ ಅಡಗಿದೆ. ತನ್ನ ಕೆಲಸವನ್ನು ನಿಷ್ಠೆಯಿಂದ ಮಾಡು ಎಂಬ ಬೇರೊಂದು ಸಂದೇಶವೂ ಮಾರ್ಮಿಕವಾಗಿ ವ್ಯಕ್ತವಾಗಿದೆ. ಮಣ್ಣು ತುಳಿದು ಮಡಕೆ ಮಾಡಿ, ಮಾರುವುದು ಕುಂಬಾರನ ಉದ್ಯೋಗವಾಗಿರುವಾಗ, ಅದನ್ನು ಬಿಟ್ಟು, ಮನೆಯಲ್ಲಿ ಮಡದಿ ಇದ್ದರೂ, ಬೇರೆ ಹೆಣ್ಣಿನ ಮೇಲಿನ ವ್ಯಾಮೋಹ ಬೇಡ ಎಂದು ಹೇಳುವ ಬುದ್ಧಿ ಮಾತು ಇಲ್ಲಿದೆ.

ಹಾಗೆಯೇ ನಮ್ಮೂರು ಕರಾವಳಿಯ ಪ್ರದೇಶದಲ್ಲಿ ಜನಪ್ರಿಯವಾಗಿರುವ ಇನ್ನೊಂದು ಜನಪದ ತ್ರಿಪದಿ:

**ಹೆಂಡ್ತಿಯ ಹೊಡಿಲಿಕ್ಕೆ ಇಲ್ಲೆಲ್ಲೂ ಕೋಲಿಲ್ದೆ**
**ಮಂದರ್ತಿ ಕಾನ ಎಳಿಬೆತ್ತೊ ಬಪ್ಪಲ್ಗಂಟೆ**
**ಅಂತಯ್ಯನ ಸಿಟ್ಟು ಹಿರಿದಾವು**

ಏನೋ ಕಾರಣಕ್ಕಾಗಿ ಹೆಂಡತಿಯೊಡನೆ ಜಗಳವಾಡಿದ ಅಂತಯ್ಯ, ಅವಳನ್ನು ಶಿಕ್ಷಿಸಲು ಮಂದರ್ತಿ ಎಂಬ ಊರಿನ ಕಾನನದಿಂದ ಎಳೆಬೆತ್ತ (ನಮ್ಮೂರ ಭಾಷೆಯಲ್ಲಿ ಎಳಿಬೆತ್ತೊ ಆಗಿದೆ) ತರಲು ಹೋಗಿ, ಮನೆಗೆ ಬರುವಷ್ಟರಲ್ಲಿ (ಬಪ್ಪಲ್ಗಂಟೆ) ಅವನ ಸಿಟ್ಟೆಲ್ಲ ಮಾಯವಾಯ್ತು; ಹಾಗೂ ಅವರಿಬ್ಬರ ಜಗಳ ಶಾಂತವಾಗಿ, ಸಂಸಾರದಲ್ಲಿ ಪುನಃ ಶಾಂತಿ ದೊರಕಿತು ಎಂಬುದು ಒಂದು ತಿಳಿ ಹಾಸ್ಯ ಕೂಡಿದ ಇಲ್ಲಿನ ಸಂದರ್ಭ. ಆದರೆ, ಅದರಿಂದ ಮೂಡಿ ಬರುವ ಸಂದೇಶ ಬಹಳ ಮಾರ್ಮಿಕವಾದುದು: ಕೋಪದಲ್ಲಿ ದುಡುಕುತನಕ್ಕೆ ಬಲಿಯಾಗದೆ, ಕಾದು ವರ್ತಿಸಬೇಕು ಎಂದು. "ತಣ್ಣೀರನ್ನಾದರೂ ತಣಿಸಿ ಕುಡಿಯಬೇಕು" ಎಂಬ ಗಾದೆಯನ್ನು ಈ ಹಾಡು ಸಮರ್ಥಿಸುತ್ತಿದೆ.

ಹೀಗೆ ತಿಳಿ ಹಾಸ್ಯದೊಡನೆ ನೀತಿ, ಅಧ್ಯಾತ್ಮ, ರಸಿಕತೆ, ಸಮಾಜ ಸುಧಾರಣೆ, ಇತ್ಯಾದಿ ಅಂಶಗಳನ್ನು ಬೆರೆಸುವ ಶೈಲಿ ವಿಶಿಷ್ಟವಾದುದು. ಶರೀಫಜ್ಜ ಈ ಶೈಲಿಯನ್ನು ತಮ್ಮ "ಕೋಡಗನ ಕೋಳಿ ನುಂಗಿತ್ತs..." ಮತ್ತು ಇತರ ಹಲವು ಕವನಗಳಲ್ಲಿ ಬೆಳೆಸಿದುದು ಗಮನಿಸಬೇಕಾದ ಅಂಶ.

**"ಕೋಡಗನ ಕೋಳಿ ನುಂಗಿತ್ತs...." ಮೇಲಿನ ಅನಿಸಿಕೆಗಳು:**

ಮೊದಲ ಬಾರಿಗೆ ಓದಿದಾಗ, "ಕೋಡಗನ ಕೋಳಿ ನುಂಗಿತ್ತs..." ಕವನದ ಸಾಲುಗಳು, ನನಗೆ ಬರಿಯ ಅಸಂಗತ ಸಂಗತಿಗಳ ವಿವರಣೆಯಾಗಿಯೇ ಕಂಡಿತ್ತು. ಕೋಳಿಯೊಂದು ಕೋಡಗನನ್ನು (ಕೋತಿ) ನುಂಗುವುದು ಎಂದರೆ ಅದು ತೀರ ಅಸಂಭವ, ಹಾಗೂ ಅರ್ಥವಿಲ್ಲದ್ದು! ಇಂಥ ಹಲವು ಅಸಂಭವ ವಿವರಣೆಗಳ ಅಂತ್ಯದಲ್ಲಿ, ಭಕ್ತಿ ಮತ್ತು ಭಾವಪೂರ್ವಕವಾಗಿ ಹೇಳಿದ, "ಗುರು ಗೋವಿಂದನ ಪಾದ ನನ್ನನೆ ನುಂಗಿತ್ತs" ಎಂಬ ನುಡಿಯೊಂದೇ ಸಂಗತವಾದುದು. ನನಗೆ ಈ ಹಾಸ್ಯಾಸ್ಪದ ಒಗಟಿನಲ್ಲಿ ಅಡಗಿದ್ದ ಅಧ್ಯಾತ್ಮದ ಅರ್ಥವನ್ನು ಅರಿವು ಮಾಡಿಕೊಟ್ಟವರು, ಕರ್ನಾಟಕದ ಹೆಸರಾಂತ ಕವಿ, ಶ್ರೀ ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟರು. ಒಮ್ಮೆ, ಅವರು ಶಿಕಾಗೋದಲ್ಲಿನ ನಮ್ಮ ಮನೆಗೆ ಬಂದಾಗ, ಈ ಕವನದ ಪ್ರಸ್ತಾಪ ಬಂತು. ಅವರು ನೀಡಿದ ಮೊದಲ ಚರಣದಲ್ಲಿನ ಅಧ್ಯಾತ್ಮದ ವಿವರ ನನ್ನನ್ನು ಆ ಬಗ್ಗೆ ಮುಂದೆ ಇನ್ನಷ್ಟು ಆಳವಾಗಿ ಯೋಚಿಸಲು ಎಡೆಮಾಡಿಕೊಟ್ಟಿತು. ಅದಕ್ಕಾಗಿ ಶ್ರೀ ಭಟ್ಟರಿಗೆ ನಾನು ಸದಾ ಕೃತಜ್ಞ! "ಕೋಡಗನ ಕೋಳಿ ನುಂಗಿತ್ತs..." ಎಂಬ ಅಸಂಭವ ಸಾಲಿಗೆ ಅವರು ನೀಡಿದ ವಿವರಣೆ ಹೀಗಿದೆ: ಬೆಳಗಿನ ಜಾವದಲ್ಲಿ 'ಕೊಕ್ಕೊಕ್ಕೋ....ಕೋ...' ಎಂದು ಕೂಗಿ, 'ಬೆಳಗಾಯ್ತು...' ಎಂದು ಸೂರ್ಯೋದಯವನ್ನು ಸಾರುವ ಕೋಳಿ, ಕೋತಿಯನ್ನು ನುಂಗಿದ ಸಂಭವ ಹೀಗೆ: ಇಲ್ಲಿ ಕೋಳಿ ಸೂರ್ಯೋದಯವೆಂಬ ಪ್ರಕ್ರಿಯೆಯಲ್ಲಿ ಬೆಳಕಿನ/ಸೂರ್ಯನ ಸಂಕೇತವಾಗುತ್ತದೆ. ಬೆಳಕು ಜ್ಞಾನದ ಪ್ರತೀಕ. ಹಾಗಾಗಿ ಸೂರ್ಯೋದಯವು ಜ್ಞಾನೋದಯದ ಪ್ರತೀಕವಾಗುತ್ತದೆ. ಇನ್ನು, ಕೋತಿಯ ಬುದ್ಧಿ ಚಂಚಲ. ಜ್ಞಾನೋದಯವಾದಾಗ ಚಂಚಲ ಬುದ್ಧಿ ಮಾಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಕೋಳಿ ಕೋಡಗನನ್ನು ನುಂಗುವುದು ಎಂದರೆ, ಅದು ಅಸಂಗತವಾಗಿ ಕಾಣದೆ, ಅಪ್ಪಟ ಸತ್ಯದ ಅರಿವನ್ನು ಮೂಡಿಸುತ್ತದೆ! ಪರಿಣಾಮವಾಗಿ, ಜ್ಞಾನೋದಯದಿಂದ ಮನುಷ್ಯನಲ್ಲಿ ವಿವೇಕ ಮೂಡುತ್ತದೆ ಎಂಬ ಮಾತು ದಿಟವಾಗುತ್ತದೆ; ಜೊತೆಗೆ, "ಕೋಡಗನ ಕೋಳಿ ನುಂಗಿತ್ತs.." ಎಂಬ ಒಗಟಿನ ಸಾಲಿನಲ್ಲಿ ಅಡಗಿದ ಅಧ್ಯಾತ್ಮ, ನಮ್ಮನ್ನು ಮೆಚ್ಚುಗೆಯೊಡನೆ ಬೆರಗುಗೊಳಿಸುತ್ತದೆ.

ಮುಂದಿನ ಮೂರು ಸಾಲುಗಳಂತೂ ತೀರ ಅಸಂಗತವಾಗಿ ತೋರುತ್ತವೆ.

ಸಭಿಕರ ಮನರಂಜನೆಗಾಗಿ ಹಾಡಿದ ಕೆಲವು ಹಾಡುಗಾರರು ಶರೀಫರು ಹಾಸ್ಯಕ್ಕೆಂದೇ ಈ ಸಾಲುಗಳನ್ನು ಜೋಡಿಸಿದ್ದಾರೆ ಎಂಬ ವಿವರಣೆ ನೀಡಿದ್ದನ್ನು ನಾನು ಕೇಳಿದ್ದೇನೆ. ಆದರೆ, ಆ ಸಾಲುಗಳು ಸಮಾಜದಲ್ಲಿ ನಮ್ಮ ನಡತೆಯ ಮೇಲೆ ಬೆಳಕು ಚೆಲ್ಲುವುದನ್ನು ಗಮನಕ್ಕೆ ತಂದುಕೊಳ್ಳಬೇಕು.

**ಆಡು ಆನೆಯ ನುಂಗಿ**
**ಗೋಡೆ ಸುಣ್ಣವ ನುಂಗಿ**
**ಆಡಲು ಬಂದ ಪಾತರದವಳ ಮದ್ದಲೆ ನುಂಗಿತ್ತಃ**

ಓದಿ, ಕಿರು ನಗೆಯ ಜೊತೆಗೇ, ಇಲ್ಲಿ ಏನೋ ಗೂಢ ಸಂದೇಶವಿದೆ ಎಂಬ ಅರಿವು ಓದುಗರಲ್ಲಿ ಮೂಡಿ ಬಂದಲ್ಲಿ ಆಶ್ಚರ್ಯವಿಲ್ಲ! ಈ ಅರಿವನ್ನು ಮೂಡಿಸುವ ಶೈಲಿ ಒಂದು ಚಮತ್ಕಾರವೆಂದೇ ಹೇಳಬೇಕು. "ಆಡು ಆನೆಯ ನುಂಗಿ" ಎಂದು ಹೇಳುತ್ತ, ಶರೀಫರು ಒಂದು ಒಗಟಿನ ಸರಮಾಲೆಯ ಕೊಂಡಿಯನ್ನೇ ಜೋಡಿಸಿದ್ದಾರೆ. ಆ ಚರಣಗಳಲ್ಲಿ ಅಡಗಿರುವ ಅಧ್ಯಾತ್ಮ ನಮ್ಮನ್ನು ಬೆರಗುಗೊಳಿಸುವುದಂತೂ ನಿಜ! ಆನೆಯ ಮದ ಸ್ವಭಾವವನ್ನು ಮೃದು/ಸಾಧು ಸ್ವಭಾವದ ಆಡು ನುಂಗಿತು ಎಂಬಲ್ಲಿ, ಆಡು ಮತ್ತು ಆನೆಗಳು ಕ್ರಮವಾಗಿ ಮೃದು ಮತ್ತು ಮದ-ಗಳಿಗೆ ರೂಪಕವಾಗಿ ಬಳಸಿ, ಕವಿಯು ಸಾಹಿತ್ಯ ಸೊಗಡನ್ನು ಬೆಳಗಿಸಿದ್ದಾರೆ. ಮಾನವನ 'ಗರ್ವ' ಸ್ವಭಾವವನ್ನು, ಸರಳ ಮೃದು ಸ್ವಭಾವ ಸೋಲಿಸಬೇಕು ಎಂಬ ಸಂದೇಶ ಇಲ್ಲಿ ಅಡಗಿದೆ. ತನ್ನಲ್ಲಿರುವ ಅಹಂಕಾರವನ್ನು ಹಿಮ್ಮೆಟ್ಟಿ, ಸಾಧುತ್ವವನ್ನು ಸಾಧಿಸಬೇಕು ಎಂಬುದೇ ಈ ಸಾಲು ತಿಳಿಸುವ ತಿರುಳು. ಈ ಸಂದರ್ಭದಲ್ಲಿ, 'ಗೋವಿನ ಹಾಡು' ಎಂಬ ಜನಪ್ರಿಯ ಜನಪದ ಹಾಡಿನ ನೆನಪು ತರುತ್ತಿದೆ. ಆ ಹಾಡಿನಲ್ಲಿ ಪುಣ್ಯಕೋಟಿ ಸಾಧು ಸ್ವಭಾವದ ಸಂಕೇತವಾಗಿದ್ದರೆ, ಅರ್ಬುದ ಎಂಬ ವ್ಯಾಘ್ರನು ಕ್ರೂರ ಸ್ವಭಾವದ ಸಂಕೇತವಾಗುತ್ತಾನೆ. ಅಂತ್ಯದಲ್ಲಿ ಅರ್ಬುದ ತನ್ನ ಪ್ರಾಣವನ್ನು ಕಳೆದುಕೊಳ್ಳುತ್ತಾನೆ ಎಂಬಲ್ಲಿ, ಮೃದು ಸ್ವಭಾವ ಕ್ರೂರತನವನ್ನು ಅಥವಾ ಮದವನ್ನು ಸೋಲಿಸಿತು ಎಂಬ ಸಂದೇಶವೇ ಮರುಧ್ವನಿಸಿದೆ. ಮುಂದಿನ ಸಾಲು, ಬಲವಾದ/ದೃಢವಾದ ಗೋಡೆಯ ಮೇಲೆ ಥಳುಕು ಪ್ರದರ್ಶಿಸುವ ಸುಣ್ಣ ಲೇಪಿಸಿದರೆ, ಆ ಥಳುಕನ್ನು ನುಂಗಿ, ಗೋಡೆ ತನ್ನ ದೃಢತೆಯನ್ನು ಸ್ವಲ್ಪವೂ ಕಳೆದುಕೊಳ್ಳುವುದಿಲ್ಲ ಎಂದು ತಿಳಿಸುತ್ತದೆ. ಅಂದರೆ, ದೃಢ ವ್ಯಕ್ತಿತ್ವದ ಬಲವು ಬಾಹ್ಯ ಆಡಂಬರದ ಬಿರುದು, ಹೊಗಳಿಕೆಗಳ ಲೇಪನದಿಂದ ಸ್ವಲ್ಪವೂ ಕುಗ್ಗಲಾರದು ಎಂದು ಸಾರುವಂತಿದೆ, ಈ "ಗೋಡೆ ಸುಣ್ಣವ ನುಂಗಿ" ಎಂಬ ಸಾಲು.

ನಿಜ ಪರಿಶುದ್ಧ ಬದುಕು ಶಕ್ತಿಯಿಂದ ಕೂಡಿದೆ. ಪರಿಶುದ್ಧತೆಯೇ ಬಲವಾದ ಶಕ್ತಿ! ಆ ಶಕ್ತಿಯನ್ನು ದುರ್ಬಲಗೊಳಿಸುವುದು ಕಷ್ಟ ಎಂಬ ಸಂದೇಶ ಇಲ್ಲಿ ಅಡಗಿದೆ. ಅಲ್ಲದೆ "ಸತ್ಯ" ಎಂಬ ಶಕ್ತಿಯನ್ನು ಸುಳ್ಳು, ಮೋಸಗಳೆಂಬ ಮಾಯೆ ಎಂದಿಗೂ

ದುರ್ಬಲಪಡಿಸಲಾರದು ಎಂಬ ಸಂದೇಶವನ್ನೂ ಇಲ್ಲಿ ಕಾಣಬಹುದು. ಇನ್ನು, "ಆಡಲು ಬಂದ ಪಾತರದವಳ ಮದ್ದಲೆ ನುಂಗಿತ್ತ" ಎಂಬುದು ತೀರ ಅಸಂಗತ ಹಾಗೂ ತಮಾಷೆಯಾಗಿ ತೋರುತ್ತದೆ. ಆದರೆ, ನಮ್ಮ ಚಿಂತನೆಗೆ ಒರೆ ಹಾಕಿದಾಗ, ಇದು ಅಸಂಗತವಾಗಿ ಕಾಣುವುದಿಲ್ಲ. ಬದುಕಿಗೆ ಒಂದು ಲಯವಿರಬೇಕು. ಆಗಲೇ ಅದಕ್ಕೊಂದು ಸಾರ್ಥಕ್ಯ ದೊರೆಯುತ್ತದೆ. ಇಲ್ಲದಿದ್ದಲ್ಲಿ ಅದು 'ಪಾತರದವಳು' ಅಡ್ಡಾ-ದಿಡ್ಡ ಕ್ರಮ ತಪ್ಪಿದ ನರ್ತನ ಮಾಡಿದಂತೆ ನಿರರ್ಥಕವಾಗುತ್ತದೆ. ಲಯಬದ್ಧ ನರ್ತನಕ್ಕೆ ಮದ್ದಲೆ (ಮೃದಂಗ) ಸಮನಾದ ಕಾಲಪ್ರಮಾಣವನ್ನು ಕೊಟ್ಟಂತೆ, ಬದುಕಿಗೂ ಶಿಸ್ತುಬದ್ಧತೆಯ ಅಗತ್ಯವಿದೆ ಎಂದು ಹೇಳುವ ಸಂದೇಶ ಇಲ್ಲಿ ಅಡಗಿದೆ.

ಮುಂದಿನ ಮೂರು ಸಾಲುಗಳು ಬದುಕಿಗೆ ಅನುಭವಗಳೇ ಜೇನು ಸವಿ ದೊರಕಿಸುತ್ತದೆ ಎಂಬ ಸಂದೇಶ ಸಾರುತ್ತದೆ :

**ಒಳ್ಳು ಒನಕೆಯ ನುಂಗಿ**
**ಬೀಸುಕಲ್ಲು ಗೂಟವ ನುಂಗಿ**
**ಕುಟ್ಟಲು ಬಂದ ಮುದುಕಿಯನ್ನೆ ನೊಣವು ನುಂಗಿತ್ತs**

ಇಲ್ಲಿ, ಮುದುಕಿಯ ಪ್ರಸ್ತಾಪ ಬಹಳ ಕುತೂಹಲಕಾರಿಯಾದುದು. ಅನುಭವ, ಬದುಕನ್ನು ಹದಗೊಳಿಸುತ್ತದೆ. ಒರಳಲ್ಲಿರುವ ಭತ್ತ ನಮ್ಮ ಬದುಕಿನ ಧ್ಯೇಯದ ಸಂಕೇತ; ಒನಕೆ ಕಷ್ಟ-ಕಾರ್ಪಣ್ಯಗಳಿಗೆ ಸಂಕೇತ. ಕಷ್ಟವನ್ನು ಅನುಭವಿಸಿಯೇ ಬದುಕು ಪಕ್ವವಾಗುತ್ತದೆ ಎಂಬ ಮಾತು ಇಲ್ಲಿ ವ್ಯಕ್ತವಾಗಿದೆ. ಒನಕೆಯ ಪೆಟ್ಟು ತಾಗಿಯೇ ಒರಳಿನಲ್ಲಿನ ಭತ್ತ ಅಕ್ಕಿಯಾಗುತ್ತದೆ. ಬೀಸುಕಲ್ಲಿನ ಗೂಟ ಧಾನ್ಯ ಪುಡಿಯಾಗಲು ಕಾರಣವಾಗುತ್ತದೆ. "ಕುಟ್ಟಲು ಬಂದ ಮುದುಕಿಯನ್ನೆ ನೊಣವು ನುಂಗಿತ್ತs" ಎಂಬ ಸಾಲು ಮೇಲ್ನೋಟಕ್ಕೆ ಹಾಸ್ಯವೆಂದೆನಿಸಿದರೂ, ಅದು ಹಾಸ್ಯಕ್ಕೂ ಮೀರಿದ ಸತ್ಯಾಂಶವನ್ನು ವ್ಯಕ್ತಪಡಿಸುತ್ತದೆ. ಇಲ್ಲಿ ನೊಣವನ್ನು ಜೇನು ನೊಣವೆಂದು ಅರ್ಥೈಸಬಹುದು. ಅದು ಜೇನುತ್ಪತ್ತಿಗೆ ಕಾರಣವಾಗುತ್ತದೆ. ಮುದುಕಿ ಅನುಭದ ಸಂಕೇತವಾದಲ್ಲಿ, ಅನುಭವಗಳೇ ಬಾಳಿಗೆ ಜೇನುಸವಿ ಉಣಿಸುತ್ತದೆ ಎಂಬ ವ್ಯಾಖ್ಯಾನ ಈ ಸಾಲಿನಿಂದ ಮೂಡಿ ಬರುತ್ತದೆ. ಅಲ್ಲದೆ, ಕಷ್ಟಗಳನ್ನು ಎದುರಿಸಿ, ಬದುಕನ್ನು ಸಾಗಿಸಿಕೊಂಡು ಬಂದರೇ ಅಂತ್ಯದಲ್ಲಿ ಸುಖ ಸಿಗುತ್ತದೆ; ಅನುಭವಗಳೇ ಬದುಕಿಗೆ ಮಾರ್ಗದರ್ಶನ ಎಂಬ ಅರಿವನ್ನು ಈ ಸಾಲುಗಳು ಸಾರುತ್ತವೆ.

ಮುಂದಿನ ಮೂರು ಸಾಲುಗಳು, ಮಗ್ಗವನ್ನು ಉದಾಹರಣೆಯಾಗಿ ತೆಗೆದುಕೊಂಡು, ಬದುಕಿಗೆ ಸಮರ್ಥ ಮಾರ್ಗದರ್ಶನವಿರಬೇಕು ಎಂಬುದನ್ನು ಸಾರುತ್ತಿವೆ ಎಂದು ನನ್ನ ಅನಿಸಿಕೆ:

**ಹಗ್ಗ ಮಗ್ಗವ ನುಂಗಿ**
**ಮಗ್ಗ ಲಾಳಿಯ ನುಂಗಿ**
**ಮಗ್ಗದಾಗಿರುವ ಅಣ್ಣನನ್ನ ಕುಣಿಯು ನುಂಗಿತ್ತs**

ಮಗ್ಗವನ್ನು ಚಾಲಿಸುತ್ತ, ನೇಕಾರ ಹಗ್ಗವನ್ನು ಕ್ರಮಬದ್ಧವಾಗಿ ಎಳೆದು, ಒಂದೊಂದೇ ನೂಲನ್ನು ಕ್ರಮಬದ್ಧವಾಗಿ ಜೋಡಿಸಿ ಬಟ್ಟೆ ತಯಾರಿಸುತ್ತಾನೆ. ಬಟ್ಟೆ ನಮ್ಮ ಬದುಕಿನ ಸಂಕೇತ. ಮಗ್ಗದ ಕೆಲಸವನ್ನು, 'ಲಾಳಿ' (ನೇಯಲು ಉಪಯೋಗಿಸುವ ಸಾಧನ) ನಿಯಂತ್ರಿಸುತ್ತದೆ. ಇನ್ನು, 'ಕುಣಿ'ಯಲ್ಲಿ ಕುಳಿತು, ಇಡೀ ಮಗ್ಗದ ಕಾರ್ಯವನ್ನೇ ನೇಕಾರನೊಬ್ಬ ನಿಯಂತ್ರಿಸುತ್ತಾನೆ. ಇದು ಜೀವನ ಕ್ರಮದ ಮೇಲೆ ಬೆಳಕು ಚೆಲ್ಲುತ್ತದೆ! ತೋರಿಕೆಗೆ ಬಟ್ಟೆ ತಯಾರಿಯಲ್ಲಿ ಮಗ್ಗವೇ ಪ್ರಾಮುಖ್ಯವೆಂದೆನಿಸಿದರೂ, ಅದನ್ನು ನಿಯಂತ್ರಿಸುವ ನೇಕಾರನ ಪಾತ್ರ ಬಹಳ ಮುಖ್ಯವಾದುದು. ಉತ್ತಮ ನಿರ್ದೇಶನದಿಂದ ಬದುಕಿನ ಗುರಿ ಸಾಧಿಸಬಹುದು ಎಂದು ಈ ಸಾಲುಗಳು ಸಾರುತ್ತಿವೆ. ನಮ್ಮ ನಿಚ್ಚಳ ಆತ್ಮಸಾಕ್ಷಿ ಎಂಬ ಪ್ರಜ್ಞೆಯೇ ಈ ನಿಟ್ಟಿನಲ್ಲಿ ಮಾರ್ಗದರ್ಶಿಯಾಗಿರಬಹುದಲ್ಲವೇ?

ಆಮೇಲೆ ಬರುವ ಸಾಲುಗಳೂ ಬದುಕಿಗೆ ಉತ್ತಮ ಮಾರ್ಗದರ್ಶನ ವಿರಬೇಕೆಂಬುದನ್ನು ಇನ್ನಷ್ಟು ಪುಷ್ಟೀಕರಿಸುತ್ತವೆ:

**ಎತ್ತು ಜತ್ತಗಿ ನುಂಗಿ**
**ಬತ್ತ ಬಾನವ ನುಂಗಿ**
**ಕುಂಟಿ ಹೊಡೆಯೊ ಅಣ್ಣನನ್ನೆ ಮೇಳಿ ನುಂಗಿತ್ತs**

ಮಾನವನಿಗೆ, ಜೀವನಪರ್ಯಂತ ಆಹಾರದ ಅಗತ್ಯವಿದೆ. ಆಹಾರ ಬೆಳೆಯಲು ಭೂಮಿಯನ್ನು ಉಳಬೇಕು. ನೇಗಿಲು ಇದಕ್ಕೆ ಸಾಧನ. ನೇಗಿಲನ್ನು ಹೊತ್ತ ಎತ್ತು, ನೆಲ ಉತ್ತು, ಭತ್ತ ಬೆಳೆಯಲು ಕಾರಣವಾಗುತ್ತದೆ. ನೇಗಿಲಿಗೆ ಎತ್ತನ್ನು ಕಟ್ಟಲು ಜೊತ್ತಿಗೆ ಬೇಕು. ಎತ್ತನ್ನು ಕಟ್ಟಿ, ನೆಲ ಉಳುವವನಿಗೆ ನೇಗಿಲೇ ಮಾರ್ಗದರ್ಶಕ. ಹೀಗೆ, ಎತ್ತು, ಜೊತ್ತಿಗೆ, ಭತ್ತ, ಮೇಳಿ ಇವೆಲ್ಲವೂ ಒಂದಕ್ಕೊಂದು ಪೂರಕವಾಗಿ ಹೊಂದಿಕೊಂಡು, ಮಾನವನ ಬದುಕಿನ ಚಿತ್ರಣವನ್ನು ಇಲ್ಲಿ ಒಂದು ವಿಶೇಷ ರೀತಿಯಲ್ಲಿ ಕಾಣಬಹುದು. ಮುಂದಿನ ಸಾಲಿನ "ಬತ್ತ ಬಾನವ ನುಂಗಿ" ಎಂಬ ನುಡಿಯಂತೂ ತುಂಬಾ ಅರ್ಥಗರ್ಭಿತವಾಗಿದೆ. ಗ್ರಾಮ್ಯ ಪದಕೋಶದಲ್ಲಿ, 'ಬಾನ' ಎಂಬುದಕ್ಕೆ 'ಅನ್ನ'ವೆಂಬ ಅರ್ಥವಿದೆ. ಭತ್ತದಲ್ಲಿ ಅನ್ನವಿದೆ ಎಂಬ ಅರ್ಥ ಬರುವ ಈ ಸಾಲು, "ಬೀಜದಲ್ಲಿ ವೃಕ್ಷ" ಎಂಬ ಮಾತಿನ ಜ್ಞಾಪಕ ತರುತ್ತಿದೆ. ಇದರಲ್ಲಿ ಅದ್ಭುತ ವೇದಾಂತವೇ ಅಡಗಿದೆ. ಬೀಜದಿಂದ ವೃಕ್ಷವೋ, ವೃಕ್ಷದಿಂದ ಬೀಜವೋ? (ಅಥವಾ ಮೊಟ್ಟೆಯಿಂದ ಕೋಳಿಯೇ, ಕೋಳಿಯಿಂದ ಮೊಟ್ಟೆಯೇ?) ಎಂಬ ತತ್ವಚಿಂತನೆ ನಮ್ಮನ್ನು ಇಂದಿಗೂ ಆ ಬಗ್ಗೆ

ಪುನಃ-ಪುನಃ ಯೋಚಿಸುವಂತೆ ಮಾಡುತ್ತಿದೆ! ಬಿಡಿಸಲಾಗದ ಈ ಒಗಟು, ಇನ್ನೂ ಒಗಟಾಗಿಯೇ ಉಳಿದಿದೆ! ಇದಕ್ಕೆ ಉತ್ತರವನ್ನು ಹುಡುಕುವ ವೇದಾಂತಿಗಳ ಸತತ ಪ್ರಯತ್ನ ಮುಂದುವರಿಯುತ್ತಲೇ ಇದೆ.

ಗೀತೆಯ ಅಂತ್ಯದಲ್ಲಿ ಬರುವ ಮೂರು ಸಾಲುಗಳು ಇಡೀ ಗೀತೆಯ ತಿರುಳು ಎಂದು ಹೇಳಬಹುದು:

**ಗುಡ್ಡ ಗಂವ್ಹರ ನುಂಗಿ**
**ಗಂವ್ಹರ ಇರಿವೆಯ ನುಂಗಿ**
**ಗುರು ಗೋವಿಂದ ಪಾದ ನನ್ನನೆ ನುಂಗಿತ್ತs**

ಇಲ್ಲಿ, ಗುರು ಗೋವಿಂದ ಪಾದ ಸೇರುವುದು ಅಂತಿಮ ಉದ್ದೇಶ. ಅದ್ಯಾವುದೋ ಶಕ್ತಿ ನಮ್ಮನ್ನು ಆ ಉದ್ದೇಶ ಸಾಧಿಸುವಲ್ಲಿ ಎಚ್ಚರಿಸಬೇಕು. ಈ ಶಕ್ತಿ ಅಂತರ್‌ಶಕ್ತಿಯೇ ಇರಬೇಕು! ಕಟ್ಟಿರುವೆ ಕಚ್ಚಿ ನೋವುಂಟುಮಾಡಿ, ನಮ್ಮನ್ನು ನಮ್ಮ ಉದ್ದೇಶ ಸಾಧಿಸಲು ಹೊಡೆದೆಬ್ಬಿಸುತ್ತದೆ. ಅಜ್ಞಾನ, ಸಮಾಜದಲ್ಲಿ ಸಾಮಾನ್ಯವಾಗಿ ಅಡಕವಾಗಿದೆ, ಗುಡ್ಡದಲ್ಲಿ ಗುಹೆಗಳಿದ್ದಂತೆ. ಗುಹೆ ಕತ್ತಲ ಸಂಕೇತವಾಗಿ, ಅಜ್ಞಾನದ ಪ್ರತೀಕವಾಗುತ್ತದೆ. ಈ ಅಜ್ಞಾನ ಮಾಯವಾದಾಗ, ನಮ್ಮ ಅಹಂ ಕೂಡ ಮಾಯವಾಗಿ, ಗುರು ಗೋವಿಂದನ ಪಾದ ಸೇರಿ, ಅಂತಿಮದಲ್ಲಿ ಮುಕ್ತಿ ಪಡೆಯಬಹುದು ಎಂದು ಶಿಶುನಾಳರು ಇಲ್ಲಿ ಹೇಳುತ್ತಿದ್ದಾರೆ. ಈ ಅಂತಿಮ ಉದ್ದೇಶವನ್ನು ಸಾಧಿಸಲು, ಶರೀಫರು ಹಲವಾರು ಒಗಟು ತುಂಬಿದ ಹಾಸ್ಯ ಸಂಗತಿಗಳನ್ನು ಉಪಯೋಗಿಸಿ, ನಮ್ಮ ಚಿಂತನೆಯನ್ನೂ ಒರೆಗೆ ಹಚ್ಚಿದ್ದಾರೆ. ಇಲ್ಲಿ ಮನರಂಜನೆಯೂ ಇದೆ; ಬದುಕಿನ ಮೇಲಿನ ಅಧ್ಯಾತ್ಮವೂ ಇದೆ. ಹಾಗಾಗಿ ಈ ಕವನ ಭಕ್ತಿ ಸಾಹಿತ್ಯದಲ್ಲಿ ಒಂದು ವಿಶೇಷ ಪ್ರಯೋಗವೆಂದು ಹೇಳಬಹುದು.

"ರವಿ ಕಾಣದುದನ್ನು ಕವಿ ಕಂಡ" ಎಂಬ ಮಾತೊಂದಿದೆ. ಅದನ್ನೇ ವಿಸ್ತರಿಸಿ, "ಕವಿ ಕಾಣದುದನ್ನು ವ್ಯಾಖ್ಯಾನಕಾರ ಕಾಣುತ್ತಾನೆ" ಎಂದು ಹೇಳಬಹುದು. ಯಾಕೆಂದರೆ, ಕವಿ ಹೇಳದ ನಿಲುವನ್ನು ವ್ಯಾಖ್ಯಾನಕಾರರು ನೀಡುತ್ತಾರೆ. ಒಬ್ಬರ ವ್ಯಾಖ್ಯಾನವೂ, ಬೇರೊಬ್ಬನ ವ್ಯಾಖ್ಯಾನವೂ ಭಿನ್ನವಾಗಿರುವುದೂ ಸ್ವಾಭಾವಿಕ. ಹಾಗಾಗಿ ನಾನಿಲ್ಲಿ ನೀಡಿದ ನನ್ನ ಅನಿಸಿಕೆಗೆ ಬದಲಾಗಿ ಬೇರೆ ವ್ಯಾಖ್ಯಾನಗಳಿಗೂ ಸಾಧ್ಯತೆಗಳಿವೆ. ನನ್ನ ಮಿತ್ರರಾದ ಮೈಸೂರು ನಟರಾಜ ಅವರು "ಗೋಡೆ ಸುಣ್ಣವ ನುಂಗಿ" ಎಂಬುದನ್ನು ಈ ರೀತಿ ವ್ಯಾಖ್ಯಾನಿಸಿದ್ದಾರೆ: ತಾತ್ಕಾಲಿಕವಾದ ಸುಣ್ಣ ಅಳಿಸಿಹೋದರೂ, ಗೋಡೆ ಭದ್ರವಾಗಿ ನಿಲ್ಲುತ್ತದೆ; ಅಂದರೆ, ಹೊರಗಿನ ಮಾಯಾ ಪದರಗಳು ಅಳಿಸಿಹೋದರೂ, ಒಳಗಿನ "ಗಟ್ಟಿ"ಗೇನೂ ತೊಂದರೆ ಇಲ್ಲ. ಹಾಗೇ, "ಭತ್ತ ಬಾನವ ನುಂಗಿ" ಎಂಬುದನ್ನು ಭತ್ತ ಬೆಂದು ಬಾನವಾದಾಗಲೇ ಬದುಕಿನ ಉದ್ದೇಶಕ್ಕೊಂದು ಸಾರ್ಥಕ್ಯ ಸಿಗುತ್ತದೆ—ಎಂದು

ವ್ಯಾಖ್ಯಾನಿಸುತ್ತಾರೆ. ಅಂತೆಯೇ, ಅವರು ಈ ಗೀತದ ಕೊನೆಯ ಮೂರು ಸಾಲುಗಳ ಬಗ್ಗೆ ಈ ರೀತಿ ವಿವರ ಕೊಡುತ್ತಾರೆ: ಗುಡ್ಡದಲ್ಲಿರುವ ಗಂವ್ಹರ ನಮಗೆ ಗೋಚರವಾಗದು; ಅದರೊಳಗಿನ ಇರುವಿಯೂ ನನಗೆ ಕಾಣುವುದಿಲ್ಲ. ಗೋವಿಂದನಂತೂ ಅಗೋಚರ. ಆದರೂ, ಗುರುವಿನ ರೂಪದಲ್ಲಿ ಬಂದು ನಮಗೆ ಮಾರ್ಗದರ್ಶನ ನೀಡುತ್ತಾನೆ-ಎಂದು. ಹಾಗಾಗಿ, ಇಲ್ಲಿ ಕಾಣಿಸಿದ ನನ್ನ ಅನಿಸಿಕೆಗಳಿಗೆ ಭಿನ್ನವಾಗಿ, ಶರೀಫರ ಈ ಗೀತದಲ್ಲಿ ಬೇರೆ-ಬೇರೆ ಅನಿಸಿಕೆಗಳೂ ಸಾಧ್ಯ. ಅಲ್ಲದೆ ಈ ನನ್ನ ಅನಿಸಿಕೆಗಳನ್ನು ಹೋಲುವಂಥ ವ್ಯಾಖ್ಯಾನಗಳು ಈ ಹಿಂದೆ ಬೇರೆಯವರಿಂದಲೂ ಸಾಹಿತ್ಯ ಗ್ರಂಥಗಳಲ್ಲಿ ದಾಖಲಾಗಿರಬಹುದು. ಹಾಗಿದ್ದಲ್ಲಿ ಅದು ನನ್ನ ಗ್ರಂಥ ಶೋಧನೆಯ ಕೊರತೆಯನ್ನು ವ್ಯಕ್ತಪಡಿಸುತ್ತದೆ, ಹಾಗೂ ಆ ಕೊರತೆಯನ್ನು ನಾನು ಒಪ್ಪಿಕೊಳ್ಳುತ್ತೇನೆ.

ಇಷ್ಟೆಲ್ಲ ಹೇಳಿಯೂ, ಶರೀಫರು ಈ ಗೀತ ಬರೆಯುವುದರಲ್ಲಿ ಅದನ್ನು ಬೆಡಗಿನ ಸಾಲಿಗೆ ಸೇರಿಸಿ, ಓದುಗರನ್ನು ಅಚ್ಚರಿಗೆ ಗುರಿ ಮಾಡುವ ಉದ್ದೇಶವಿಟ್ಟುಕೊಂಡಿರಬಹುದು. ಕೇಳುಗರಲ್ಲಿ ಜಿಜ್ಞಾಸೆ ಹುಟ್ಟಿಸುವ ಉದ್ದೇಶ ಅವರದಾಗಿಲ್ಲದಿರಲೂ ಬಹುದು. ಆದರೆ, ವ್ಯಾಖ್ಯಾನಕಾರರು ಅದಕ್ಕೆ "ಅರ್ಥ" ಕಲ್ಪಿಸಲು ಹೊರಟು, ಅದಕ್ಕೊಂದು ಆಧ್ಯಾತ್ಮಿಕ ವಿವರಣೆ ಕೊಟ್ಟಿದ್ದಾರೆ. ವಿಮರ್ಶಕ ತಿರುಮಲೇಶರು ಹೇಳಿದಂತೆ ಅಸಂಗತವಾದ, ತರ್ಕಬದ್ಧವಲ್ಲದ ಸಂಗತಿಯನ್ನು ಒಪ್ಪಿಕೊಳ್ಳದೆ, ಕವಿ ಬರೆದ ಮೇಲೆ ಅದಕ್ಕೊಂದು ಗೂಢಾರ್ಥವಿರಲೇಬೇಕೆಂದು, ಆ "ಅರ್ಥ"ವನ್ನು ಹುಡುಕುತ್ತ ವ್ಯಾಖ್ಯಾನಕಾರರು ತಮ್ಮ-ತಮ್ಮ ಅನಿಸಿಕೆಗಳನ್ನು ನೀಡಿರಬಹುದು. (ತಮ್ಮ ವಿಮರ್ಶಾಗ್ರಂಥ, "ವಾಗಾರ್ಥ ವಿಲಾಸ" [ಅಂಕಣ ಬರಹಗಳು] ದಲ್ಲಿ ತಿರುಮಲೇಶ್ವರರು ರೂಪಕಗಳು ಹೇಗೆ ಕವಿತೆಗೆ ವಿಶೇಷ ಅರ್ಥ ಕೊಡುತ್ತವೆ ಎಂಬುದನ್ನು ಸೊಗಸಾಗಿ ವಿವರಿಸಿದ್ದಾರೆ.) ಹೌದು, ಕವಿ ಕಾಣದುದನ್ನು ವ್ಯಾಖ್ಯಾನಕಾರ ಕಂಡಲ್ಲಿ ಆಶ್ಚರ್ಯವಿಲ್ಲ!

**ಶರೀಫರ ಗೀತೆಗಳಲ್ಲಿ ರೂಪಕಗಳ ಅಲಂಕಾರ:**

ಶರೀಫರ ಹಲವು ಗೀತೆಗಳಲ್ಲಿ, ರೂಪಕ/ಉಪಮೆಗಳ ಬಳಕೆ ಧಾರಾಳವಾಗಿ ಕಂಡುಬರುತ್ತವೆ. ರೂಪಕಗಳು ಕವಿತೆಗೆ ವಿಶೇಷಾರ್ಥ ಕೊಡಲು ಸಹಾಯವಾಗುತ್ತವೆ. ಇದು, "ಕೋಡಗನ ಕೋಳಿ ನುಂಗಿತ್ತs..." ಹಾಡಿನಲ್ಲಲ್ಲದೆ ಬೇರೆ ಗೀತಗಳಲ್ಲೂ ವ್ಯಕ್ತವಾಗಿದೆ. ಇಲ್ಲಿ ಒಂದೆರಡು ನಿದರ್ಶನಗಳನ್ನು ಮಾತ್ರ ಕೊಡುತ್ತಿದ್ದೇನೆ. ಉದಾಹರಣೆಗೆ, "ಸೋರುತಿಹುದು ಮನೆಯ ಮಾಳಿಗೆ....."ಯಲ್ಲಿ ಬಳಸಿದ ಉಪಮೆಯನ್ನು ನೋಡಿ:

**ಸೋರುತಿಹುದು ಮನೆಯ ಮಾಳಿಗಿ ಅಜ್ಞಾನದಿಂದ**
**ಸೋರುತಿಹುದು ಮನೆಯ ಮಾಳಿಗಿ**

**ಸೋರುತಿಹುದು ಮನೆಯ ಮಾಳಿಗಿ**
**ದಾರುಗಟ್ಟಿ ಮಾಳ್ವರಿಲ್ಲದೆ**

..............................................

**ಮುರುಕು ಜಂತಿ ಹುಳುಕು ತೊಲೆಯು**
**ಮುರಿದು ಕೊರಿದು ಕೀಲು ಸರಿದು**

.....................................................

**ಕರಕಿ ಹುಲ್ಲು ಕಸವು ಹತ್ತಿ**
**ದುರಿತ ಭವದಿ ಇರಬಿ ಮುತ್ತಿ**

...............................................

ಇಲ್ಲಿ "ಮನೆಯ ಮಾಳಿಗಿ"ಯನ್ನು ಜ್ಞಾನ ಭಂಡಾರಕ್ಕೆ ಹೋಲಿಸಿದ್ದಾರೆ. ಆ ಭಂಡಾರವೇ ಸೋರಿದಾಗ, ಇಡೀ ದೇಹವೇ ಮುರಿದು ಬೀಳುತ್ತದೆ ಎಂಬ ಸಂದೇಶ ಇಲ್ಲಿ ಅಡಗಿದೆ. ಹಾಗೆಯೇ, "ತರವಲ್ಲ ತಂಗಿ ನಿನ್ನ ತಂಬೂರಿ" ಎಂಬ ಗೀತೆಯಲ್ಲಿ ತಂಬೂರಿಯ ಶೃತಿಯನ್ನು ಬದುಕಿನ ಸಾಮರಸ್ಯಕ್ಕೆ ಹೋಲಿಸಿದ ಉಪಮೆ ತುಂಬಾ ಸ್ವಾರಸ್ಯವಾಗಿದೆ:

**ತರವಲ್ಲ ತಂಗಿ ನಿನ್ನ ತಂಬೂರಿ**
**ಸ್ವರ ಬರದೆ ಬಾರಸದಿರು ತಂಬೂರಿ**

**ಸರಸ ಸಂಗೀತದ ಕುರುಹುಗಳರಿಯದೆ**
**ಕರದೊಳ್ಪಿಡಿಬ್ಯಾಡ ತಂಬೂರಿ**

.....................................................

**ಬಾಳ ಬಲ್ಲವರಿಗೆ ತಂಬೂರಿ ದೇವ–**
**ಬಾಳಾಕ್ಷ ರಚಿಸಿದ ತಂಬೂರಿ**

**ಹೇಳಲಿ ಏನಿದರ ಹಂಚಿಕೆಯರಿಯದ**
**ತಾಳ್ಗೇಡಿಗೆ ಸಲ್ಲ ತಂಬೂರಿ**

ಕೋಳಿಯನ್ನು "ಜ್ಞಾನೋದಯ"ದ ಸಂಕೇತವಾಗಿ ಬಳಸಿದುದನ್ನು, ಹಾಗೂ "ಕೋಡಗನ ಕೋಳಿ ನುಂಗಿತ್ತs..." ಕವನದಲ್ಲಿ ಬರುವ ಇತರ ಉಪಮೆಗಳನ್ನು ಈಗಾಗಲೇ ಮೇಲೆ ಹೇಳಿಯಾಗಿದೆ.

ಹಾಗೆಂದು, ಅವರ ಎಲ್ಲ ಗೀತಗಳೂ ಒಗಟಿನ ರೂಪದಲ್ಲಿದೆ ಎಂದು ಹೇಳಲಾಗದು. ಹಲವು ಕವನಗಳು, ಹೇಳಬೇಕಾದ ಮಾತುಗಳನ್ನು ನೇರವಾಗಿ ಸಾರುತ್ತವೆ. ಉದಾಹರಣೆಗೆ:

**ನಡೆನುಡಿಯಿಂದ ನಾವು ನಡೆಯಬೇಕಣ್ಣಾ ದೇಹವಿದು ತಮ**
**ನಡುವೆ ಬಿದ್ದು ಹೋಗೈತಣ್ಣಾ**
**ಭಜನೆ ಮಾಡ್ವಾಗ ಭೇದಭಾವ ಬಿಟ್ಟು ಭಜಿಸಬೇಕಣ್ಣಾ**
**ಅಣ್ಣ ತಮ್ಮಂದಿರೆಂದು ತಿಳಿಯಬೇಕಣ್ಣಾ**
**ಪರ ಹೆಣ್ಣುಮಕ್ಕಳು ಎದುರಿಗೆ ಬಂದರೆ ನಜರಿಡಬೇಡಣ್ಣಾ**
**ನಿನ್ನ ಭಗಿನಿಯರೆಂದು ಅರಿಯಬೇಕಣ್ಣಾ**
**..........................................................................**

ಇಲ್ಲಿ ಎಲ್ಲವೂ ನೇರವಾದ ನೀತಿ ಮಾತುಗಳೇ! "ನಜರಿಡಬೇಡಣ್ಣಾ" ಎಂಬಲ್ಲಿ ಉರ್ದು ಶಬ್ದ, "ನಜರ್" (ನೋಟ, ಕಣ್ಣಿಡು) ಉಪಯೋಗಿಸಿದುದನ್ನು ಗಮನಿಸಬೇಕು. ಭಕ್ತಿ ವ್ಯಕ್ತಪಡಿಸಲು ಎಲ್ಲ ಭಾಷೆಗಳೂ ಒಂದೇ ಎನ್ನುವುದಕ್ಕೆ ಇದೊಂದು ನಿದರ್ಶನ.

**ಶರೀಫರ ಗೀತೆಗಳಲ್ಲಿ ಸಾಮಾಜಿಕ ಪ್ರಜ್ಞೆ:**

ತಾವು ಗಮನಿಸಿದ ಸಮಾಜದಲ್ಲಿನ ಕುಂದು-ಕೊರತೆಗಳನ್ನು ತಮ್ಮ ಗೀತೆಗಳಲ್ಲಿ ಧೈರ್ಯವಾಗಿ, ಕೆಲವೆಡೆ ಕಟುವಾಗಿಯೇ ಮನಸ್ಸಿಗೆ ನಾಟುವಂತೆ ಹೇಳಿದ್ದಾರೆ. ಉದಾಹರಣೆಗೆ, "ತೊಗಲ ಮಲಿಯ ಹಾಲು ಕುಡಿದು" ಕವನದಲ್ಲಿ ಇದು ವ್ಯಕ್ತವಾಗಿದೆ:

**ನಾ ಆದರೇನು ನೀ ಆದರೇನು**
**ಅರಸ ಪ್ರಧಾನಿ ಆದರೋ ತೊಗಲಾ**

**ತೊಗಲು ತೊಳೆದುಕರ ನೀರ ಮಡಿಯ ಮಾಡಿ**
**ಗುಂಡಿಯಂತಾದ್ಯೋ ಪಿಕನಾಶಿ**
**ಗಂಧ ವಿಭೂತಿ ತೊಗಲಿಗೆ ಧರಿಸಿ**
**ಜಾತಿ ಜಾತಿ ಬ್ಯಾರೆ ಎನಿಸಿ**
**ಜಪ-ತಪವೆಂದು ಸನ್ಯಾಸಿಯಾಗುತಿ**
**ಬೂದಿಯೆಲ್ಲ ಮೈಗೆ ಪೂಸಿ**
**ಶಿವ ಶಿವ ಎಂದು ಶಿವಪೂಜೆ ಮಾಡುತಿ**

ಎಲ್ಲವನ್ನೂ ಮನಸ್ಸಿನಲ್ಲಿ ಜಾತಿ ಎಂಬ ಭೇದಭಾವ ಹೊತ್ತು - ಎಂಬಂತೆ ಹೇಳುತ್ತಿದ್ದಾರೆ. ಅವರ ಈ ಬಿಚ್ಚು ಮನಸ್ಸಿನ ಮಾತನ್ನು ಮುಸಲ್ಮಾನರ ಕೆಲವು ಗೊಡ್ಡು ಸಂಪ್ರದಾಯದ ಮೇಲೂ ಹಾಯಿಸಿದ್ದಾರೆ. ಉದಾಹರಣೆಗೆ, ಈ ಕೆಳಗಿನ ಗೀತೆಯನ್ನು ನೋಡಿ:

**ಬೋಕಿ ಒಳಗ ಮೂರು ಲೋಕ ಹುಟ್ಟಿತು**
**ಆ ಕುಲ ಈ ಕುಲ ಎಲ್ಲಿತ್ತೋ?**
**ಜೋಕಿಲೆ ಹದಿನೆಂಟು ಜಾತಿಗೆ ಹೇಳತೇನಿ**
**ಏಕಮುಂಡಗಿ ಮಾತಿದು ಗೊತ್ತೋ**

**ಬಲ್ಲವರಾದರೆ ತಿಳಿದು ಹೇಳರಿ**
**ಮುಲ್ಲಾನ ಮಸೀದಿ ಎಲ್ಲಿತ್ತೋ?**

**ಗುಲ್ಲ ಮಾಡಿ ಗುದ್ದ್ಯಾಹದಲಾವಿಗೆ**
**ಬೆಲ್ಲ ಓದಿಸುವುದು ಎಲ್ಲಿತ್ತೋ?**

**...............................................**

ಇಲ್ಲಿ, ಮೊಹರಮ್ ಹಬ್ಬದ ಸಮಯ ಪಂಜಾ-ಭೂತಗಳಿಗೆ ಬೆಲ್ಲ, ಕಂದೂರಿ ಸಲ್ಲಿಸುವಂತೆ ಭಕ್ತರನ್ನು ಪ್ರೋತ್ಸಾಹಿಸುವ "ಗೊಡ್ಡು" ಮೌಲ್ಯವನ್ನು ಟೀಕಿಸಿದುದನ್ನು ಗಮನಿಸಬೇಕು. ಎಲ್ಲ ಧರ್ಮಗಳ ಮೇಲೂ ನಂಬಿಕೆಯುಳ್ಳ ಶರೀಫರು, "ಅಲ್ಲಮಪ್ರಭುವಿನ ಅರಿಯದ ತುರುಕರು..." ಇಂಥ ಪಂಜಾ ಪೂಜೆ ಮಾಡುವುದು ಅವರ ಅಜ್ಞಾನವೆಂದೇ ಹೇಳಿದಂತಿದೆ. ಭಕ್ತಿ ಮಾರ್ಗದಲ್ಲಿ ಧರ್ಮ, ಮತ, ಜಾತಿಗಳಿಗೆ ಸ್ಥಾನವಿಲ್ಲವೆಂಬ ನಿಷ್ಪಕ್ಷಪಾತ ನಿಲುವು ಶರೀಫರದು. ತಮ್ಮ ಮತವೇ ಶ್ರೇಷ್ಠವೆಂದು ಹೇಳುತ್ತಿರುವ ಮತಾಂಧರಿಗೆ ಶರೀಫರ ಈ ನಿಲುವು ಒಂದು ಮಾದರಿ ಎಂದು ಹೇಳಬಹುದು. ಈ ನಿಟ್ಟಿನಲ್ಲಿ, ಸಂತ ಕಬೀರರ ನಿಲುವೂ ಅಂಥದೇ ಆಗಿತ್ತು ಎಂಬುದನ್ನು ಗಮನಿಸಬೇಕು!

ಒಟ್ಟಿನಲ್ಲಿ ಶರೀಫರು ಭಕ್ತಿ ಮಾರ್ಗಕ್ಕೆ, ಕನ್ನಡ ಸಾಹಿತ್ಯಕ್ಕೆ ಒಂದು ಅನನ್ಯ ಆಯಾಮವನ್ನೇ ನೀಡಿದ್ದಾರೆಂದು ಹೇಳಬಹುದು. ಅವರ ಭಕ್ತಿ ಗೀತಗಳನ್ನು ಜನಪ್ರಿಯ ಮಾಡುವಲ್ಲಿ ಕನ್ನಡದ ಹೆಸರಾಂತ ಕವಿ, ಶ್ರೀ ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟರ ಕೊಡುಗೆಯನ್ನು ಇಲ್ಲಿ ನೆನೆಸಲೇ ಬೇಕು. ಅಲ್ಲದೆ ಅವರ ಹಲವು ಗೀತೆಗಳನ್ನು ಜನಪ್ರಿಯ ಮಾಡುವಲ್ಲಿ ಶ್ರೀ ಸಿ. ಅಶ್ವಥ್ ಮತ್ತು ಶಿವಮೊಗ್ಗ ಸುಬ್ಬಣ್ಣ, ಮತ್ತಿತರರ ಕೊಡುಗೆಯನ್ನೂ ನಾನಿಲ್ಲಿ ನೆನೆಯುತ್ತಿದ್ದೇನೆ.

(ವಿ.ಸೂ.: ಈ ಲೇಖನ ಬರೆಯುವಲ್ಲಿ ನಾನು ೧೯೮೫ರಲ್ಲಿ ಮೈಸೂರಿನಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಪ್ರಕಟವಾದ "ಶಿಶುನಾಳ ಶರೀಫರ ಗೀತೆಗಳು", ಸಂ: ಡಾ. ಶಿವಾನಂದ ಗುಬ್ಬಣ್ಣ, ಪ್ರ: ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಗ್ರಂಥದಿಂದ ಬಹಳಷ್ಟು ಮಾಹಿತಿ ಪಡೆದಿದ್ದೇನೆ.)

■

# ವಚನಗಳಲ್ಲಿ ಮಾಯೆಯ ಕಲ್ಪನೆ

–ಪ್ರಸನ್ನ ಸಂತೇಕಡೂರು

**ಕ**ನ್ನಡ ಸಾಹಿತ್ಯದ ಚರಿತ್ರೆಯನ್ನು ಹಳೆಗನ್ನಡ, ನಡುಗನ್ನಡ ಮತ್ತು ಆಧುನಿಕ ಕನ್ನಡ ಸಾಹಿತ್ಯ ಹೀಗೆ ಮುಖ್ಯವಾಗಿ ಮೂರು ಕಾಲಘಟ್ಟಗಳಾಗಿ ವಿಂಗಡಿಸಬಹುದು. ಅದರಲ್ಲಿ ನಡುಗನ್ನಡ ಸಾಹಿತ್ಯ ಹೆಚ್ಚಾಗಿ ಭಕ್ತಿ ಸಾಹಿತ್ಯವಾಗಿತ್ತು. ನಡುಗನ್ನಡ ಸಾಹಿತ್ಯದಲ್ಲಿ ವಚನಕಾರರು, ಮಹಾಕವಿಗಳಾದ ಹರಿಹರ, ರಾಘವಾಂಕ, ಕುಮಾರವ್ಯಾಸ, ಚಾಮರಸ ಮತ್ತು ದಾಸ ಸಾಹಿತ್ಯದ ಪುರಂದರದಾಸರು, ಕನಕದಾಸರು ಬರುತ್ತಾರೆ. ನಡುಗನ್ನಡ ಸಾಹಿತ್ಯದಲ್ಲಿ ಕುಮಾರವ್ಯಾಸನೊಬ್ಬನನ್ನು ಬಿಟ್ಟು ಉಳಿದವರೆಲ್ಲರೂ ಭಕ್ತಿ ಸಾಹಿತ್ಯಕ್ಕೆ ಹೆಚ್ಚು ಒತ್ತು ಕೊಟ್ಟವರು. ವ್ಯಕ್ತಿಗತವಾಗಿ ವೈಷ್ಣವನಾಗಿದ್ದ ಕುಮಾರವ್ಯಾಸನು ಕೂಡ ಗದುಗಿನ ವೀರನಾರಾಯಣನ ಪರಮಭಕ್ತನಾಗಿದ್ದನೆಂದು ತಿಳಿದುಬರುತ್ತದೆ. ವಚನಕಾರರು ಮತ್ತು ಅವರ ಜೀವನದ ಬಗ್ಗೆ ಬರೆದ ಹರಿಹರ, ರಾಘವಾಂಕ ಮತ್ತು ಚಾಮರಸ ಕವಿಗಳು ಶಿವನ ಆರಾಧಕರಾಗಿದ್ದರು. ಇನ್ನು ಪುರಂದರದಾಸರು ಮತ್ತು ಕನಕದಾಸರು ಕುಮಾರವ್ಯಾಸನ ರೀತಿ ವಿಷ್ಣುವಿನ ಭಕ್ತರಾಗಿದ್ದರು ಮತ್ತು ತಮ್ಮ ಭಕ್ತಿಗೀತೆಗಳಿಂದ ಪ್ರಖ್ಯಾತರಾದವರು. ಈ ಕಾರಣಗಳಿಂದ ನಡುಗನ್ನಡ ಸಾಹಿತ್ಯವನ್ನು ಭಕ್ತಿಸಾಹಿತ್ಯವೆಂದೇ ಗುರುತಿಸಬಹುದು.

ವಚನಕಾರರ ವಿಷಯಕ್ಕೆ ಬರುವುದಾದರೆ ಅಲ್ಲಮಪ್ರಭು, ಚೆನ್ನಬಸವಣ್ಣ ಮತ್ತು ಇನ್ನು ಕೆಲವರನ್ನು ಬಿಟ್ಟರೆ ಉಳಿದೆಲ್ಲಾ ವಚನಕಾರರು ಸಂಸಾರಿಗಳಾಗಿದ್ದವರು. ಸಂಸಾರದಲ್ಲಿದ್ದೂ ಸನ್ಯಾಸಿಗಳ ರೀತಿ ಬದುಕಿದ್ದವರು. ತಮ್ಮ ಭಕ್ತಿಪೂರ್ಣ ವಚನಗಳಿಂದ ನಾಡಿನುದ್ದಕ್ಕೂ ಜ್ಞಾನದ ಬೆಳಕನ್ನು ಚೆಲ್ಲಿದವರು. ಇಲ್ಲಿ ಆಯ್ದ ಕೆಲವು ವಚನಕಾರರ ವಚನಗಳಲ್ಲಿ ಮಾಯೆಯ ಕಲ್ಪನೆ ಹೇಗೆ ಮೂಡಿ ಬಂದಿದೆ ಎಂದು ತಿಳಿಯಲು ಪ್ರಯತ್ನಿಸಲಾಗಿದೆ.

ವಚನ ಸಾಹಿತ್ಯದಲ್ಲಿ ಮಾಯೆಯ ಕಲ್ಪನೆ ಬಹಳಷ್ಟು ಸಲ ಕೇಳಿಬರುತ್ತದೆ. ಬಹಳಷ್ಟು ವಚನಕಾರರು ಮಾಯೆಯ ಬಗ್ಗೆ ಬೇರೆ ಬೇರೆ ವಿಷಯಗಳನ್ನೊಳಗೊಂಡ ವಚನಗಳು ಸಿಕ್ಕಿವೆ. ಹಾಗಾದರೆ ಮಾಯೆಯೆಂದರೇನು? ಈ ಪ್ರಶ್ನೆಗೆ ಯಾವುದೇ

ಅಡತಡೆಯಿಲ್ಲದೆ ನಿರ್ವಿವಾದವಾಗಿ ಉತ್ತರವನ್ನು ಹೇಳುವುದು ಕೊಂಚ ಕಷ್ಟದ ಕೆಲಸ. ಮಾಯೆಗೆ ಆಂಗ್ಲ ಭಾಷೆಯಲ್ಲಿ ಇಲ್ಯೂ್ಯಷನ್ (Illusion) ಎಂದು ಕರೆಯುತ್ತಾರೆ. ಈ ಇಲ್ಯೂ್ಯಷನ್ ಅಂದರೆ ನಮ್ಮ ಇಂದ್ರಿಯಗಳಿಗೆ ತಪ್ಪಾಗಿ ಗ್ರಹಿಸಲ್ಪಡುವ ವಸ್ತು. ಇದನ್ನ ಬೇರೆ ಬೇರೆ ಹೆಸರುಗಳಿಂದ ಕರೆಯುವುದಾದರೆ ಮಾಯೆ, ಕಲ್ಪನೆ, ಭ್ರಮೆ, ಆಭಾಸ, ಭ್ರಾಂತಿ, ಅವಿದ್ಯೆ, ಮೃಗಜಲ, ಹುಸಿ-ನಂಬಿಕೆ ಎಂದು ಹಲವು ಹೆಸರುಗಳಿಂದ ಕರೆಯಬಹುದು.

ಹಾಗಾದರೆ ವಚನಕಾರರು ಹೇಳಿದ ಮಾಯೆಯೆಂದರೆ ಏನು? ಹೆಣ್ಣು ಮಾಯೆಯೇ? ಗಂಡು ಮಾಯೆಯೇ? ಹೊನ್ನು ಮಾಯೆಯೇ? ಮಣ್ಣು ಮಾಯೆಯೇ? ಅಥವಾ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರು ಮಾಯೆಯೇ? ಸಂಸಾರವೇ ಮಾಯೆಯೇ? ಅಥವಾ ನಮ್ಮ ಮನಸ್ಸಿನ ಆಸೆಯೇ ಮಾಯೆಯೇ? ಈ ವಿಷಯಗಳ ಬಗ್ಗೆ ಬೇರೆ ಬೇರೆ ವಚನಕಾರರು ತಮ್ಮ ಬೇರೆ ಬೇರೆ ವಚನಗಳಲ್ಲಿ ಏನು ಹೇಳಿದ್ದಾರೆ ನೋಡೋಣ ಬನ್ನಿ.

ಮೊದಲಿಗೆ ಜಗಜ್ಯೋತಿ, ಕ್ರಾಂತಿಯೋಗಿ ಬಸವಣ್ಣನವರು ಮಾಯೆಯ ಬಗ್ಗೆ ತಮ್ಮ ವಚನದಲ್ಲಿ ಏನು ಹೇಳಿದ್ದಾರೆ ಎಂದು ತಿಳಿಯೋಣ.

**ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ,**
**ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ,**
**ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ,**
**ಇದಾವಾವ ಪರಿಯಲ್ಲಿ ಕಾಡಿತು ಮಾಯೆ.**
**ಈ ಮಾಯೆಯ ಕಳೆವಡೆ ಎನ್ನಳವಲ್ಲ,**
**ನೀವೆ ಬಲ್ಲಿರಿ ಕೂಡಲಸಂಗಮದೇವಾ!**

ಈ ವಚನದಲ್ಲಿ ಬಸವಣ್ಣನವರು ಪ್ರತಿಯೊಬ್ಬರ ಹುಟ್ಟಿಗೆ ಮಾಯೆಯೇ ತಾಯಿಯಾಗಿ ಬರುತ್ತಾಳೆ ಎಂದು ಹೇಳುತ್ತಾರೆ. ಕೆಲವರು ಆದಿಶಕ್ತಿಗೆ ಮಾಯೆ ಎಂದು ಕರೆಯುವ ಅರ್ಥವೂ ಇದೆ. ಪ್ರತಿಯೊಬ್ಬರ ಮೋಹಕ್ಕೆ ಮಗಳಾಗಿ ಹುಟ್ಟಿದಳು ಮಾಯೆ ಮತ್ತು ಇಲ್ಲಿ ಗಂಡು ಹೆಣ್ಣಿನ ಮಿಲನಕ್ಕೆ ಸ್ತ್ರೀಯಾಗಿ ಕೂಡಿದಳು ಮಾಯೆ ಎಂದು ಹೇಳುತ್ತಾರೆ. ಮುಂದೆ ಹೋಗಿ ಇದೇ ತೆರನಾಗಿ ಬೇರೆ ಬೇರೆ ರೀತಿಯಲ್ಲಿ ಮಾಯೆ ನನ್ನನ್ನು ಕಾಡಿತ್ತು ಎಂದು ಹೇಳುತ್ತಾರೆ. ಈ ರೀತಿ ಬೇರೆ ಬೇರೆ ಪರಿಯಲ್ಲಿ ಕಾಡುವ ಮಾಯೆಯಿಂದ ತಪ್ಪಿಸಿಕೊಳ್ಳಲು ನನ್ನಿಂದ ಸಾಧ್ಯವಾಗಲಿಲ್ಲ ಎಂದು ಹೇಳುತ್ತಾರೆ. ಅದು ನಿಮಗೂ ಗೊತ್ತು ಎಂದು ಕೂಡಲ ಸಂಗಮೇಶ್ವರನಿಗೆ ಹೇಳಿ ಈ ಮಾಯೆಯಿಂದ ತಪ್ಪಿಸಿಕೊಳ್ಳಲು ನಿಮ್ಮಿಂದ ಮಾತ್ರ ಸಾಧ್ಯ ಎಂದು ಹೇಳುತ್ತಾರೆ. ಅಂದರೆ ಸರ್ವಶಕ್ತ ಕೂಡಲ ಸಂಗಮೇಶ್ವರ

(ಶಿವ)ನಿಗೆ ಮಾತ್ರ ಸಾಧ್ಯ ಎಂದು ಹೇಳುತ್ತಾರೆ. ಇಲ್ಲಿ ಮಾಯೆಯನ್ನು ಹೆಣ್ಣಿನ ರೂಪಕ್ಕೆ ಹೋಲಿಸಿರುವುದರಿಂದ ಅಥವಾ ಹೆಣ್ಣಿಗೆ ಹೋಲಿಸಿರುವುದರಿಂದ ಆಧುನಿಕ ಮಹಿಳೆಯರು ಈ ವಚನವನ್ನು ಇಷ್ಟಪಡದಿರುವ ಸಾಧ್ಯತೆ ಹೆಚ್ಚಿರುತ್ತದೆ.

ಬಸವಣ್ಣನವರು ತಮ್ಮ ಇನ್ನೊಂದು ವಚನದಲ್ಲಿ ಮಾಯೆಯ ಪ್ರಭಾವವನ್ನು ಈ ರೀತಿ ಹೇಳಿದ್ದಾರೆ.

**ಅಂಕ ಕಳನೇರಿ ಕೈಮರೆದಿರ್ದಡೆ**
**ಮಾರಂಕ ಬಂದಿರಿವುದ ಮಾಬನೆ**
**ನಿಮ್ಮ ನೆನಹ ಮನ ಮರೆದಿರ್ದಡೆ**
**ಮಾಯೆ ತನುವನಂಡಲೆವುದ ಮಾಬುದೆ**
**ಕೂಡಲಸಂಗಯ್ಯನ ನೆನೆದಡೆ,**
**ಪಾಪ ಉರಿಗೊಡ್ಡಿದರಗಿನಂತೆ ಕರಗುವುದಯ್ಯಾ.**

ಈ ವಚನದ ಭಾವಾರ್ಥ ಈ ರೀತಿ ಇದೆ. ಅಂಕ ಎಂದರೇ ಯುದ್ಧ ಅಥವಾ ಯೋಧನಾಗಿರಬಹುದು. ಅಂದರೆ ಯುದ್ಧ ನಡೆಯುವಾಗ ರಣರಂಗದಲ್ಲಿ ಯೋಧ ಕೈಮುರಿದುಕೊಂಡರೆ ವಿರೋಧಿ ಸೈನ್ಯದ ಸೈನಿಕ (ಮಾರಂಕ = ಪ್ರತಿಯೋಧ) ಅದನ್ನ ನೋಡಿ ಸುಮ್ಮನೆ ಕೂರುತ್ತಾನೆಯೇ? ಅವನು ಬಂದು ತನ್ನ ಖಡ್ಗದಿಂದ ಇರಿಯುವುದನ್ನು ಬಿಡುತ್ತಾನೆಯೇ? ಎಂದು ಕೇಳುತ್ತಾರೆ. ಇದೇ ರೀತಿ ನಿಮ್ಮನ್ನು ನೆನೆಯದೆ ಮನಸ್ಸು ಮರೆತರೆ ಮಾಯೆಯು ತನ್ನ ಪ್ರಭಾವ ಬೀರಿ ವಿಷಯಾಸಕ್ತಿಗಳಲ್ಲಿ ತನುವು (ದೇಹವು) ಅಂಡಲೆಯುವುದನ್ನು ಬಿಡುತ್ತದೆಯೇ ಎಂದು ಕೇಳುತ್ತಾರೆ. ಇನ್ನೂ ಮುಂದೆ ಹೋಗಿ ಕೂಡಲಸಂಗಮೇಶ್ವರನನ್ನು ನೆನೆದರೆ ಮಾಡಿದ ಪಾಪ ಬೆಂಕಿಗೆ ಹಾಕಿದ ಮೇಣದ (ಅರಗು) ರೀತಿ ಕರಗುತ್ತದೆ ಎಂದು ಹೇಳುತ್ತಾರೆ. ಇಲ್ಲಿ ಕೂಡಲಸಂಗಮೇಶ್ವರನ ಶರಣರು ಮಾಯೆಯ ಪ್ರಭಾವಕ್ಕೆ ಸಿಲುಕುವುದಿಲ್ಲ ಎಂದು ಬಸವಣ್ಣನವರು ಹೇಳುತ್ತಾರೆ.

ಇಂದಿನ ಮಹಾರಾಷ್ಟ್ರದ ಸೊಲ್ಲಾಪುರದ ಅಂದಿನ ಸೊನ್ನಲಿಗೆಯ ಸಿದ್ದರಾಮೇಶ್ವರರು ಹನ್ನೆರಡನೇ ಶತಮಾನದ ಕಲ್ಯಾಣ ಕ್ರಾಂತಿಯಲ್ಲಿ ಮತ್ತು ಅನುಭವ ಮಂಟಪದ ಮುಖ್ಯ ಶರಣರಲ್ಲಿ ಒಬ್ಬರಾಗಿದ್ದರು. ಶ್ರೀಶೈಲ ಮಲ್ಲಿಕಾರ್ಜುನನ ಪರಮ ಭಕ್ತರಾಗಿದ್ದ ಇವರು ಅಲ್ಲಮ ಪ್ರಭುವಿನ ಪ್ರಭಾವದಿಂದ ಕಲ್ಯಾಣಕ್ಕೆ ಬಂದವರು. ಇವರ ಅಂಕಿತನಾಮ ಕಪಿಲಸಿದ್ಧಮಲ್ಲಿಕಾರ್ಜುನಾ ಅಥವಾ ಕಪಿಲಸಿದ್ಧಮಲ್ಲೇಶ್ವರ, ಇವರ ಒಂದು ವಚನ ಹೀಗಿದೆ.

**ಹೆಣ್ಣನೊಲ್ಲೆನು ಎಂದಡೆನಗೆ ಹೆಣ್ಣಾಯಿತ್ತು,**
**ಮನ್ನಣೆಯ ದಾನಕ್ಕೆ ಗುರಿಯಾದೆನು.**

**ಎನ್ನನಿತ್ತೆನು ಎನ್ನನೊಲ್ಲೆನು ಎಂದೆಂಬವನ**
**ಇನ್ನು ಭವಕೆ ತಂದೆನೆಂದೆನುತಿದೆ ಮಾಯೆ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

ಇಲ್ಲಿ ಸಿದ್ದರಾಮೇಶ್ವರರು ಆಧ್ಯಾತ್ಮಿಕ ಆಸಕ್ತಿಯಿಂದ ಮತ್ತು ವೈರಾಗ್ಯದಿಂದ ಮದುವೆ ಬೇಡ ಅಥವಾ ಹೆಣ್ಣು ಬೇಡ ಎಂದು ಹೇಳುತ್ತಿದ್ದ ಅವರಿಗೆ ಹೆಣ್ಣನ್ನು ಕೊಟ್ಟು ಮತ್ತೊಂದೆಡೆ ಎಡಗೈಯಿಂದ ಮಾಡುವ ದಾನ ಬಲಗೈಗೆ ಗೊತ್ತಾಗುವುದು ಬೇಡವೆಂದು ಅನುಭಾವಿಗಳು ಹೇಳುತ್ತಾರೆ. ಆದರೆ, ಇಲ್ಲಿ ಕೀರ್ತಿಗೋಸ್ಕರ ದಾನ ಮಾಡುವುದಕ್ಕೆ ಸಿದ್ದರಾಮೇಶ್ವರರು ಗುರಿಯಾಗಿದ್ದರು. ಮತ್ತು ಅವರ ದ್ವಂದ್ವಗಳಿಂದ ಸಂಸಾರದಿಂದ ದೂರ ಹೋಗಲು ಪ್ರಯತ್ನಪಡುತ್ತಿದ್ದ ಅವರನ್ನು ಮತ್ತೆ ಭವಕ್ಕೆ ತರುತಿದೆ ಈ ಮಾಯೆ ಎಂದು ಕಪಿಲಸಿದ್ಧ ಮಲ್ಲಿಕಾರ್ಜುನನಿಗೆ ಹೇಳುತ್ತಿದ್ದಾರೆ. ಈ ವಚನದಲ್ಲಿ ಮಾಯೆಯ ಪ್ರಭಾವವನ್ನು ನೋಡಬಹುದು.

ಅವರು ಇನ್ನೊಂದು ವಚನದಲ್ಲಿ ಈ ರೀತಿ ಹೇಳಿದ್ದಾರೆ.

**ಎಂದಡಾ ಮಾಯೆಯನು ಕರದಿಂ ತಂದೆ**
**ಇಕ್ಕೆ ಜಾರಿ ಕೆಡುಹುವುದು.**
**ಮಾಯೆ ಆರೂಢವೆಂಬವರ ಏಡಿಸುವುದು.**
**ಕರುಣಾಕರನು ಕಪಿಲಸಿದ್ಧಮಲ್ಲೇಶ್ವರನ**
**ಶರಣರಿಗೆ ಅಂಜಿ ನಿಂದಿತು ಮಾಯೆ.**

ಈ ವಚನದಲ್ಲಿ ಮಾಯೆಯನ್ನು ಕೈಹಿಡಿದು ತಂದೆ ಅದು ಮನೆಯಲ್ಲಿ ಜಾರಿ ಕೆಡವಿತ್ತು ನನ್ನನ್ನು ಎಂದು ಹೇಳುತ್ತಾರೆ. ನಂತರ ತತ್ವಜ್ಞಾನಿಗಳನ್ನು ಕೂಡ ಬಿಡದೇ ಹಾಸ್ಯಮಾಡಿತ್ತು ಮಾಯೆ ಎಂದು ಹೇಳುತ್ತಾರೆ. ಇಲ್ಲಿ ತತ್ವಜ್ಞಾನಿಗಳನ್ನು ಕೂಡ ಮಾಯೆ ತನ್ನ ಮಾಯಾಬಲೆಯಲ್ಲಿ ಸಿಲುಕಿಸುತ್ತದೆ ಎನ್ನುವ ಭಾವಾರ್ಥವಿದೆ. ಮಹಾ ಕರುಣಾಸಿಂಧುವಾದ ಕಪಿಲಸಿದ್ಧಮಲ್ಲೇಶ್ವರನ ಶರಣರನ್ನು ಕಂಡರೆ ಮಾಯೆಗೆ ಹೆದರಿಕೆ ಆದ್ದರಿಂದ ಅದು ಅವರನ್ನು ಕಂಡರೆ ಹೆದರಿ ನಿಂತಿತು ಎಂದು ಹೇಳುತ್ತಾರೆ.

ಡಕ್ಕೆಯ ಬೊಮ್ಮಣ್ಣ ಕೂಡ ಹನ್ನೆರಡನೆಯ ಶತಮಾನದಲ್ಲಿ ಇದ್ದ ವಚನಕಾರನಿರ-ಬಹುದು. ಇವನ ಕಾಲ ಸ್ಥಳದ ಬಗ್ಗೆ ಹೆಚ್ಚು ತಿಳಿದುಬಂದಿಲ್ಲ. ಡಕ್ಕೆಯ ಬೊಮ್ಮಣ್ಣನವರ ಅಂಕಿತ ಕಾಲಾಂತಕ ಭೀಮೇಶ್ವರಲಿಂಗ. ಇವನು ಊರಿಂದ ಊರಿಗೆ ಡೊಳ್ಳು ಬಾರಿಸುತ್ತ, ಮೈಗೆಲ್ಲ ಬೇವಿನ ಸೊಪ್ಪನ್ನು ಕಟ್ಟಿಕೊಂಡು ಒಂದು ಕೈಯಲ್ಲಿ ಬೇವಿನಸೊಪ್ಪನ್ನು ಹಿಡಿದು, ಇನ್ನೊಂದು ಕೈಯಲ್ಲಿ ಬಾಳಿನ ಬಟ್ಟಲನ್ನು(ಮೊರವನ್ನು) ಹಿಡಿದುಕೊಂಡು, ಬಳೆಯನ್ನು ಕೈಗೆ ತೊಟ್ಟುಕೊಂಡು, ಮಾರಿಯನ್ನು ಮೊರದಲ್ಲಿ ಹಾಕಿಕೊಂಡು ಭಕ್ತರ ಮನೆಮನೆಯ

ಮುಂದೆ ನಿಂತು ಭಿಕ್ಷೆ ಬೇಡುವುದು ಇವನ ಕಾಯಕವಾಗಿದ್ದಿರಬಹುದು ಎಂದು ಹಲವಾರು ವಚನ ಸಾಹಿತ್ಯದ ವಿಮರ್ಶಕರು ಹೇಳುತ್ತಾರೆ.

ಈ ವಚನದಲ್ಲಿ ಹೇಗೆ ದೇವಾಧಿದೇವತೆಗಳನ್ನೇ ಮಾಯೆ ಬಿಡದೆ ಕಾಡಿತ್ತು ಎಂದು ನೋಡಬಹುದು.

**ಬ್ರಹ್ಮಂಗೆ ಸರಸ್ವತಿಯಾಗಿ ಬೆನ್ನಲ್ಲಿ ಬಂದಳು ಮಾಯೆ.**
**ವಿಷ್ಣುವಿಂಗೆ ಲಕ್ಷ್ಮೀಯಾಗಿ ಭವಕ್ಕೆ ತಿರುಗಿದಳು ಮಾಯೆ.**
**ರುದ್ರಂಗೆ ಉಮಾದೇವಿಯಾಗಿ ಶಿರ ತೊಡೆಯಲ್ಲಿ ಕಾಡಿದಳು ಮಾಯೆ.**
**ಎಳ್ಳಿಗೆ ಎಣ್ಣೆ, ಮುಳ್ಳಿಗೆ ಮೊನೆಯಾಗಿ, ಹೂವಿಗೆ ಗಂಧವಾಗಿ,**
**ಅವರವರಂಗದಲ್ಲಿ ಹಿಂಗದ ಪ್ರತಿರೂಪಾಗಿ**
**ಸಂದಿಲ್ಲದೆ ಕಾಡುತ್ತಿದ್ದಾಳೆ ಮಾಯೆ.**
**ಡಕ್ಕೆಯ ಉಲುಹಡಗುವುದಕ್ಕೆ ಮುನ್ನವೆ ನಿಶ್ಚಯಿಸಿಕೊಳ್ಳಿ,**
**ಕಾಲಾಂತಕ ಭೀಮೇಶ್ವರಲಿಂಗವನರಿಯಬಲ್ಲಡೆ.**

ಸೃಷ್ಟಿಕರ್ತ ಬ್ರಹ್ಮನಿಗೆ ಮಾಯೆ ಸರಸ್ವತಿಯಾಗಿ ಅವನ ಬೆನ್ನಹಿಂದೆ ಬಂದಳು, ವಿಷ್ಣುವಿಗೆ ಲಕ್ಷ್ಮೀಯಾಗಿ ಭವಕ್ಕೆ ತಿರುಗಿಸಿದಳು ಮತ್ತು ಶಿವನಿಗೆ ಉಮಾದೇವಿ ಮತ್ತು ಗಂಗೆಯಾಗಿ ಶಿರದಲ್ಲಿ ಮತ್ತು ತೊಡೆಯ ಮೇಲೆ ಕುಳಿತು ಕಾಡಿದಳು ಮಾಯೆ ಎಂದು ಹೇಳುತ್ತಾನೆ. ಎಳ್ಳಿನಲ್ಲಿ ಎಣ್ಣೆಯಾಗಿ, ಮುಳ್ಳಿನಲ್ಲಿ ಚೂಪಾದ ಮೊನೆಯಾಗಿ ಮತ್ತು ಹೂವಿನಲ್ಲಿ ಗಂಧವಾಗಿ ದುಂಬಿಗಳನ್ನ ಆಕರ್ಷಿಸುತ್ತಾ ಪ್ರತಿಯೊಬ್ಬರ ಅಂತರಂಗದಲ್ಲಿ ಕೊನೆಯಿಲ್ಲದ ಆಸೆಯ ಪ್ರತಿರೂಪವಾಗಿ ಸಾಯದೇ ಕಾಡುತ್ತಿದ್ದಾಳೆ ಮಾಯೆ ಎಂದು ಹೇಳುತ್ತಾನೆ. ನಂತರ ಡಕ್ಕೆಯ ಶಬ್ದ ನಿಲ್ಲುವುದಕ್ಕೆ ಮುನ್ನವೇ (ಇಲ್ಲಿ ದೇಹವನ್ನ ಡಕ್ಕೆಗೆ ಹೋಲಿಸಿರುವುದು) ನೀವೇ ನಿಶ್ಚಯಿಸಿಕೊಳ್ಳಿ ಆ ಕಾಲಾಂತಕ (ಯಮನನ್ನು ಕೊಂದ ಶಿವ) ಭೀಮೇಶ್ವರಲಿಂಗವನರಿಯಬಲ್ಲಡೆ ಎಂದು ಹೇಳುತ್ತಾನೆ. ಇಲ್ಲಿ ಕೂಡ ಮಾಯೆಯನ್ನು ಹೆಣ್ಣಿಗೆ ಹೋಲಿಸಿರುವುದರಿಂದ ಆಧುನಿಕ ಮಹಿಳೆಯರು ಈ ವಚನವನ್ನು ಇಷ್ಟಪಡದಿರುವ ಸಾಧ್ಯತೆ ಹೆಚ್ಚಿರುತ್ತದೆ.

ಮಾಯೆಯ ಪ್ರಭಾವದ ಬಗ್ಗೆ ಅತಿ ಹೆಚ್ಚು ವಚನಗಳನ್ನು ಬರೆದವರು ಅಲ್ಲಮ ಪ್ರಭುಗಳು. ಅನುಭಾವಿ ಅಲ್ಲಮಪ್ರಭುಗಳು ಭಾರತ ಕಂಡ ಮಹಾದಾರ್ಶನಿಕರಲ್ಲಿ ಮತ್ತು ತತ್ವಜ್ಞಾನಿಗಳಲ್ಲಿ ಒಬ್ಬರು. ಕನ್ನಡ ಸಾಹಿತ್ಯದಲ್ಲಿ ಅತಿ ಹೆಚ್ಚು ಸಾಹಿತ್ಯ ಬಂದಿರುವುದು ಅಲ್ಲಮ ಪ್ರಭುಗಳ ಬಗ್ಗೆ ಎಂದು ಅನ್ನಿಸುತ್ತದೆ. ಹನ್ನೆರಡು ಮತ್ತು ಹದಿಮೂರನೆಯ ಶತಮಾನದಲ್ಲಿದ್ದ ಹರಿಹರ ಕವಿಯಿಂದ ಹಿಡಿದು, ಹದಿನೈದನೆಯ ಶತಮಾನದ ಕನ್ನಡದ ಮಹಾಕವಿ ಚಾಮರಸನ ಜಗತ್ಪ್ರಸಿದ್ಧ ಪ್ರಭುಲಿಂಗಲೀಲೆಯನ್ನು ಒಳಗೊಂಡು ಕುವೆಂಪು,

ಬೇಂದ್ರೆ, ಅನಕೃ, ಜಿ. ಪಿ. ರಾಜರತ್ನಂ, ಜಿ. ಎಸ್. ಶಿವರುದ್ರಪ್ಪ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತರಾದ ಬಿ. ಪುಟ್ಟಸ್ವಾಮಯ್ಯ, ಎಚ್. ತಿಪ್ಪೇರುದ್ರಸ್ವಾಮಿ, ಎಸ್. ಎಸ್. ಭೂಸನೂರುಮಠ್, ಎಂ. ಚಿದಾನಂದ ಮೂರ್ತಿ, ಡಿ. ಆರ್. ನಾಗರಾಜ್ ಇನ್ನು ಹಲವಾರು ಸಾಹಿತಿಗಳು ಅಲ್ಲಮಪ್ರಭುವಿನ ಬಗ್ಗೆ ಬರೆದಿದ್ದಾರೆ. ಕನ್ನಡವಲ್ಲದೇ ಭಾರತೀಯ ಭಾಷೆಗಳಾದ ತಮಿಳು, ತೆಲುಗು, ಮರಾಠಿ, ಸಂಸ್ಕೃತಕ್ಕೆ ಬಹಳ ಹಿಂದೆಯೇ ಅಲ್ಲಮ ಪ್ರಭುವಿನ ಜೀವನದ ಬಗ್ಗೆ ತಿಳಿದದ್ದು ಚಾಮರಸ ಕವಿಯ ಪ್ರಭುಲಿಂಗಲೀಲೆಯಿಂದ. ಇದಲ್ಲದೆ ಆಂಗ್ಲ ಭಾಷೆಗೆ ಪ್ರಭುಲಿಂಗಲೀಲೆ ಹತ್ತೊಂಬತ್ತನೆಯ ಶತಮಾನದಲ್ಲಿ ಒಮ್ಮೆ ಇತ್ತೀಚೆಗೆ ಮತ್ತೊಮ್ಮೆ ಅನುವಾದವಾಗಿದೆ. ಇದು ಅಲ್ಲಮ ಪ್ರಭುವಿನ ಜೀವನ ದರ್ಶನ ಮತ್ತು ಚಾಮರಸ ಕವಿಯ ಪಾಂಡಿತ್ಯ ಎರಡನ್ನೂ ಎತ್ತಿ ತೋರಿಸುತ್ತದೆ.

ಇಂತಹ ದಾರ್ಶನಿಕ ಅಲ್ಲಮ ಪ್ರಭು ಮಾಯೆಯ ಪ್ರಭಾವವನ್ನು ಗೆದ್ದವನು ಎಂದು ಚಾಮರಸ ಕವಿ ಹೇಳುತ್ತಾನೆ. ಮೇರು ತತ್ವಜ್ಞಾನಿ ಅಲ್ಲಮ ಪ್ರಭು ತನ್ನ ವಚನಗಳಲ್ಲಿ ಈ ರೀತಿ ಹೇಳಿದ್ದಾರೆ.

**ಬ್ರಹ್ಮ ಘನವೆಂದಡೆ ಬ್ರಹ್ಮನ ನುಂಗಿತ್ತು ಮಾಯೆ**
**ವಿಷ್ಣು ಘನವೆಂದಡೆ ವಿಷ್ಣುವ ನುಂಗಿತ್ತು ಮಾಯೆ**
**ರುದ್ರ ಘನವೆಂದಡೆ ರುದ್ರನ ನುಂಗಿತ್ತು ಮಾಯೆ**
**ತಾ ಘನವೆಂದಡೆ ತನ್ನ ನುಂಗಿತ್ತು ಮಾಯೆ**
**ಸರ್ವವೂ ನಿನ್ನ ಮಾಯೆ!**
**ಒಬ್ಬರನ್ನೊಳಕೊಂಡಿತ್ತೆ ಹೇಳಾ ಗುಹೇಶ್ವರಾ?**

ಶ್ರೇಷ್ಠತೆ ಕೂಡ ಒಂದು ವ್ಯಸನವೆಂದು ಎಲ್ಲೋ ಓದಿದ ನೆನಪು. ಇಲ್ಲಿ ಅಲ್ಲಮ ಪ್ರಭುಗಳು ಶ್ರೇಷ್ಠತೆಯ ಬಗ್ಗೆ ಹೇಳುತ್ತಾರೆ. ಬ್ರಹ್ಮ ಶ್ರೇಷ್ಠವೆಂದರೆ ಬ್ರಹ್ಮನನ್ನೇ ನುಂಗಿತ್ತು ಮಾಯೆ. ವಿಷ್ಣು ಶ್ರೇಷ್ಠವೆಂದರೆ ವಿಷ್ಣುವನ್ನು ನುಂಗಿತ್ತು ಮಾಯೆ ಮತ್ತು ಶಿವ ಶ್ರೇಷ್ಠನೆಂದರೆ ಶಿವನನ್ನೇ ನುಂಗಿತ್ತು ಮಾಯೆ. ಈ ವಚನವು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರು ಕೂಡ ಮಾಯೆಯ ಲೀಲೆಯಲ್ಲಿ ಸಿಲುಕಿದವರು ಎಂಬುದನ್ನು ತೋರಿಸುತ್ತದೆ. ಇನ್ನೂ ಮುಂದೆ ಹೋಗಿ ತಾನು ಶ್ರೇಷ್ಠವೆಂದರೆ ತನ್ನನ್ನೇ ನುಂಗಿತ್ತು ಮಾಯೆ ಎಂದು ಹೇಳುತ್ತಾರೆ. ಎಲ್ಲವೂ ನಿನ್ನ ಮಾಯೆ! ಯಾರನ್ನಾದರೂ ಬಿಟ್ಟಿತ್ತೇ ಈ ಮಾಯೆ ಹೇಳು ಗುಹೇಶ್ವರ ಎಂದು ಗುಹೇಶ್ವರನಿಗೆ ಪ್ರಶ್ನೆ ಕೇಳುತ್ತಾರೆ. ಇಲ್ಲಿ ಯಾರೂ ಶ್ರೇಷ್ಠರಲ್ಲ ಎಲ್ಲರೂ ಮಾಯೆಯ ಸೂತ್ರದಲ್ಲಿನ ಪಾತ್ರಗಳು ಎಂಬುದು ಅಲ್ಲಮರ ಈ ವಚನದ ವಾದ ಮತ್ತು ಸಾರ. ಮೇಲೆ ಕಂಡ ವಚನಗಳಲ್ಲಿ ವಚನಕಾರರು ಹೆಣ್ಣನ್ನ ಮಾಯೆಗೆ ಹೋಲಿಸಿದ್ದರು, ಇಲ್ಲಿ ಅದು ಕಾಣುವುದಿಲ್ಲ.

**ಇನ್ನೊಂದು ವಚನದಲ್ಲಿ ಅಲ್ಲಮ ಪ್ರಭು ಈ ರೀತಿ ಹೇಳಿದ್ದಾರೆ.**
**ಆರಕ್ಕೆಯ ಸಿರಿಗೆ ಆರಕ್ಕೆ ಚಿಂತಿಸುವರು;**
**ಆರಕ್ಕೆಯ ಬಡತನಕ್ಕೆ ಆರಕ್ಕೆ ಮರುಗುವರು:**
**ಇದಾರಕ್ಕೆ ಆರಕ್ಕೆ ಇದೇನಕ್ಕೆ ಏನಕ್ಕೆ?**
**ಮಾಯದ ಬೇಳುವೆ, ಹುರುಳಿಲ್ಲ.**
**ಕೊಂದು ಕೂಗಿತ್ತು, ನೋಡಾ ಗುಹೇಶ್ವರಾ...**

ಯಾರದೋ ಸಂಪತ್ತಿಗೆ ಯಾರು ಯಾರೋ ಚಿಂತಿಸುತ್ತಾರೆ. ಯಾರದೋ ಬಡತನಕ್ಕಾಗಿ ಮತ್ತೆ ಯಾರೋ ಅಳುತ್ತಾರೆ ಮತ್ತು ಮರುಗುತ್ತಾರೆ. ಆಲೋಚಿಸಿ ನೋಡಿದರೆ, ಇದೆಲ್ಲ ಯಾರದು ಹೇಳು? ಇದೆಲ್ಲ ಏನು? ಇದರ ಸ್ವರೂಪವೇನು? ಎಲ್ಲವೂ ಮಾಯೆಯ ಭ್ರಾಂತಿ, ಹೀಗೆ ಮರುಗುವಲ್ಲಿ, ಚಿಂತಿಸುವಲ್ಲಿ ಹುರುಳೂ ಇಲ್ಲ, ಫಲವೂ ಇಲ್ಲ. ಇಲ್ಲಿ ಮನುಷ್ಯ (ಜೀವಾತ್ಮ) ದೇಹಭಾವಿಯಾಗಿ ವಿಷಯಗಳ ವ್ಯಾಮೋಹದಲ್ಲಿ ಸಿಲುಕಿ ದೈಹಿಕ ಮತ್ತು ಭೌತಿಕ ಸಿರಿಗಾಗಿ (ಸಂಪತ್ತಿಗಾಗಿ) ಚಿಂತಿಸುತ್ತಾನೆ. ತನ್ನ ದೇಹ ಶಾಶ್ವತವಾದ ವಸ್ತು, ತಾನು ಚಿರಂಜೀವಿ, ಸಾವೇ ಬರುವುದಿಲ್ಲವೆಂದು ತಿಳಿದು ಸಂಪತ್ತನ್ನು ಕೂಡಿಡಲು ಪ್ರಯತ್ನಪಡುತ್ತಾನೆ. ಅವುಗಳಲ್ಲಿ ಕಾಣಬರುವ ಕುಂದು ಕೊರತೆಗಳಿಗಾಗಿ, ಬಡತನಕ್ಕಾಗಿ, ಮರುಗುತ್ತಾನೆ. ಇದು ಅದ್ಭುತ, ಮಾಯೆ ಮಾಡಿದ ಪವಾಡವಿದು. ಇದೆ ಮಾಯಾವಿಲಾಸ. ಒಂದು ದೃಷ್ಟಿಯಲ್ಲಿ ಈ ಮಾಯೆ ನಿರ್ಮಲ ಆತ್ಮ ವಸ್ತುವನ್ನೇ ಕೊಂದುಹಾಕಿತು, ಅಂದರೆ ನಿರ್ಮಲ ಜ್ಞಾನ ಕ್ಷೇತ್ರದಿಂದ ಅಜ್ಞಾನದ ಅಂಧಕಾರದಲ್ಲಿ ನೂಕಿತು. ತನ್ನ ಅಳಿವಿನಲ್ಲಿ ಬಂಧಿಸಿತು. ಹಾಗೆ ಬಂಧಿಸಿ ಅಟ್ಟಹಾಸದಿಂದ ಕೂಗಿತು: ತನ್ನ ಜಯ ಸಾರಲು. ಮಾಯೆ ಹೀಗೆ ಮಾಡಿತು ಎಂಬ ತಿಳಿವು ಉಂಟಾದ ಕ್ಷಣವೇ ಅದು ಮಾಯ. ಜೀವಿಯು ವಿಮುಕ್ತನಾಗುತ್ತಾನೆ. ಚಿಂತೆಯೂ ಇಲ್ಲ, ಸಿರಿಯೂ ಇಲ್ಲ, ಬಡತನವೂ ಇಲ್ಲ. ಇದನ್ನೇ ಅಲ್ಲಮರು ತಮ್ಮ ಇತರ ವಚನಗಳಲ್ಲಿ ಬಯಲು ಎಂದು ಕರೆಯುವುದು. ಬಯಲು ಎನ್ನುವುದು ಆಧ್ಯಾತ್ಮಿಕತೆಯ ಅತ್ತ್ಯುನ್ನತ ಸ್ಥಿತಿ. ಈ ಸ್ಥಿತಿಯನ್ನು ಅನುಭವಿಸುವ ಅಲ್ಲಮ ಪ್ರಭುಗಳು ಮಾಯೆಯ ಈ ವಿಲಾಸವನ್ನು ಗೆದ್ದಿರುತ್ತಾರೆ. ಈ ವಚನದಲ್ಲಿ ಅವರು ತುಂಬಾ ಮಾರ್ಮಿಕವಾಗಿ ವಿಡಂಬಿಸಿದ್ದಾರೆ.

ಮಾಯೆಯ ಬಗ್ಗೆ ತುಂಬಾ ಜನಪ್ರಿಯವಾದ ಅಲ್ಲಮ ಪ್ರಭುವಿನ ಇನ್ನೊಂದು ವಚನ ಸಾಮಾಜಿಕವಾಗಿದೆ.

**ಹೊನ್ನು ಮಾಯೆಯೆಂಬರು, ಹೆಣ್ಣು ಮಾಯೆಯೆಂಬರು,**
**ಮಣ್ಣು ಮಾಯೆಯೆಂಬರು;**
**ಹೊನ್ನು ಮಾಯೆಯಲ್ಲ, ಹೆಣ್ಣು ಮಾಯೆಯಲ್ಲ, ಮಣ್ಣು ಮಾಯೆಯಲ್ಲ.**
**ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ.**

ಸಾಮಾನ್ಯವಾಗಿ ಪ್ರಾಪಂಚಿಕ ಮನುಷ್ಯರು ಹೊನ್ನು, ಹೆಣ್ಣು ಮತ್ತು ಮಣ್ಣುಗಳು ಮಾಯೆಯೆಂದು ತಿಳಿಯುತ್ತಾರೆ ಮತ್ತು ಹೇಳುತ್ತಾರೆ. ನಿಜವಾಗಿ ಯೋಚಿಸಿದರೆ ಇವುಗಳು ಯಾವುವೂ ಮಾಯೆಯಲ್ಲ. ಮನುಷ್ಯನನ್ನು ಸಂಸಾರದ ಬಂಧನಕ್ಕೆ ನೂಕುವುದು ಮತ್ತು ಒಳಪಡಿಸುವುದು, ತನ್ನ ನಿಜ ಸ್ವರೂಪವನ್ನು ಮರೆ ಮಾಚುವುದು, ಹೊನ್ನು ಅಲ್ಲ, ಹೆಣ್ಣು ಅಲ್ಲ ಮತ್ತು ಮಣ್ಣು ಕೂಡ ಅಲ್ಲ, ಅದು ಪ್ರತಿಯೊಬ್ಬರ ಮನಸ್ಸಿನೊಳಗಿರುವ ಆಯಾ ವಿಷಯಗಳ ಆಸೆ. ಆದ್ದರಿಂದ ಈ ಆಸೆಯೇ ಮಾಯೆಯೆಂದು ಅಲ್ಲಮರು ಈ ವಚನದಲ್ಲಿ ತುಂಬಾ ಮಾರ್ಮಿಕವಾಗಿ ಹೇಳುತ್ತಾರೆ. ಇನ್ನು ಈ ವಚನವನ್ನು ಚೆನ್ನಾಗಿ ಅರ್ಥಮಾಡಿಕೊಂಡರೆ ಬುದ್ಧನ "ಆಸೆಯೇ ದುಃಖಕ್ಕೆ ಮೂಲ" ಎಂಬ ಸಂದೇಶ ಜ್ಞಾಪಕಕ್ಕೆ ಬರುತ್ತದೆ. ಮೇಲಿನ ವಚನಗಳಿಗೆ ಹೋಲಿಸಿದರೆ ಅಲ್ಲಮ ಪ್ರಭುವಿನ ಈ ವಚನಗಳು ಮಹಿಳೆಯರಿಗೂ ಇಷ್ಟವಾಗುತ್ತವೆ ಮತ್ತು ಅರ್ಥಪೂರ್ಣವಾಗಿವೆ.

ಅಕ್ಕಮಹಾದೇವಿಯವರು ಕನ್ನಡದ ಮೊದಲ ಕವಿಯತ್ರಿ. ಅನುಭವಮಂಟಪದಲ್ಲಿ ಭಾಗವಹಿಸಿ ಅಲ್ಲಮಪ್ರಭು ಮತ್ತು ಬಸವಣ್ಣನವರ ಪ್ರಭಾವದಿಂದ ಅಪಾರ ಜ್ಞಾನವನ್ನು ಪಡೆದು ಮಹಿಳಾ ಲೋಕಕ್ಕೆ ಸ್ವಾಭಿಮಾನದ ಪ್ರತೀಕದಂತಿದ್ದ ಮಹಾಶಿವಶರಣೆ. ಪುರುಷ ವಚನಕಾರರು ಹೆಣ್ಣನ್ನು ಮಾಯೆಗೆ ಹೋಲಿಸುತ್ತಿದ್ದರು. ಇಲ್ಲಿ ಅಕ್ಕಮಹಾದೇವಿ ಮಾಯೆಯನ್ನು ಯಾವ ರೀತಿ ಅರ್ಥೈಸಬಹುದೆಂದು ನೋಡಬಹುದು.

**ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ ಅಭಿಮಾನವಾಗಿ ಕಾಡುವುದು.**
**ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡುವುದು.**
**ಲೋಕವೆಂಬ ಮಾಯೆಗೆ ಶರಣಚಾರಿತ್ರ್ಯ ಮರುಳಾಗಿ ತೋರುವುದು.**

ಚೆನ್ನಮಲ್ಲಿಕಾರ್ಜುನನೊಲಿದ ಶರಣಂಗೆ ಮಾಯೆಯಿಲ್ಲ, ಮರಹಿಲ್ಲ, ಅಭಿಮಾನವೂ ಇಲ್ಲ.

ಭವಸಾಗರದಲ್ಲಿ ಮುಳುಗಿ ಜೀವನದಲ್ಲಿ ನೊಂದಿರುವ ಒಬ್ಬ ಪುರುಷನಿಗೆ ಮಾಯೆ ಹೆಣ್ಣಾಗಿ ತೋರಬಹುದು. ಅದೇ ರೀತಿ ಸಂಸಾರದ ಜಂಜಾಟದಲ್ಲಿ ಸೋತಿರುವ ಸ್ತ್ರೀಗೆ ಮಾಯೆ ಪುರುಷನಾಗಿ ಕಾಣಬಹುದು. ಪ್ರಾಪಂಚಿಕ ಸುಖದಲ್ಲಿ ಮುಳುಗಿರುವ ಸಾಮಾನ್ಯ ಜನರಿಗೆ ತಮ್ಮಂತೆ ಪ್ರಪಂಚದ ಸುಖವನ್ನು ಅನುಭವಿಸದೇ ಸದಾ ಶಿವನ ಧ್ಯಾನದಲ್ಲಿ ಕಾಯಕ ಮಾಡುತ್ತಿರುವ ಶಿವಶರಣರ ಜೀವನ ಮತ್ತು ಚಾರಿತ್ರ್ಯ ಹುಚ್ಚಾಗಿ ತೋರುತ್ತದೆ. ಈ ಜನರಿಗೆ ಮಾಯೆಯ ಮುಸುಕು ಕವಿದಿರುತ್ತದೆ. ಆದರೆ, ಚನ್ನಮಲ್ಲಿಕಾರ್ಜುನನು ಒಲಿದ ಶರಣರಿಗೆ ಮಾಯೆಯಿಲ್ಲ, ಸಾವು ಇಲ್ಲ ಮತ್ತು ಅಭಿಮಾನವು ಇಲ್ಲ ಎಂದು ಅಕ್ಕಮಹಾದೇವಿ ಇಲ್ಲಿ ತಿಳಿಸುತ್ತಾರೆ.

ಇಲ್ಲಿ ಅವರ ಇನ್ನೊಂದು ವಚನವನ್ನು ನೋಡಬಹುದು.

**ಸತಿ ಎಂಬುದು ಮಾಟ, ಪತಿಯೆಂಬುದು ಮಾಟ,**
**ತನುವೆಂಬುದು ಮಾಯೆ, ಮನವೆಂಬುದು ಮಾಯೆ,**
**ಸುಖವೆಂಬುದು ಮಾಯೆ,**

ಚೆನ್ನಮಲ್ಲಿಕಾರ್ಜುನನೆನಗೆ ಕೈಹಿಡಿದ ಗಂಡನಲ್ಲದೆ ಮಿಕ್ಕಿನವರೆಲ್ಲರೂ ಮೂಗಿಲ್ಲದ ಬಣ್ಣದ ಬೊಂಬೆಗಳು ಕಾಣಯ್ಯಾ.

ಈ ವಚನದಲ್ಲಿ ಅಕ್ಕಮಹಾದೇವಿಯವರು ಸತಿ ಎಂಬುದು ಒಂದು ಮಾಯಾವಿದ್ಯೆಯ ಕಣ್ಕಟ್ಟು ಅಥವಾ ಮ್ಯಾಜಿಕ್ ಮತ್ತು ಪತಿಯೂ ಕೂಡ ಮಾಯಾವಿದ್ಯೆಯ ಕಣ್ಕಟ್ಟು, ದೇಹವು ಒಂದು ಮಾಯಾಮೃಗ ಅಥವಾ ಮರೀಚಿಕೆ ಮತ್ತು ಮನಸು ಕೂಡ ಮಾಯಾಮೃಗ, ದೇಹದ ನಶ್ವರತೆಯ ಬಗ್ಗೆ ತಿಳಿದ ಪ್ರತಿಯೊಬ್ಬ ವ್ಯಕ್ತಿಗೂ ದೇಹ ಮತ್ತು ಮನಸುಗಳೆರಡೂ ಮರೀಚಿಕೆಗಳು ಎಂದು ಗೊತ್ತಿರುತ್ತದೆ ಎಂದು ತಿಳಿಸುತ್ತಾರೆ. ಇನ್ನು ಸುಖವೆಂಬುದು ಕೂಡ ನಶ್ವರ ಆದ್ದರಿಂದ ಅದು ಕೂಡ ಮಾಯೆ. ನನ್ನ ಕೈಯಿಡಿದ ಗಂಡ ಸಾಕ್ಷಾತ್ ಶ್ರೀಶೈಲ ಮಲ್ಲಿಕಾರ್ಜುನ, ಆ ಶ್ರೀಶೈಲ ಮಲ್ಲಿಕಾರ್ಜುನನ ಬಿಟ್ಟು ಉಳಿದವರೆಲ್ಲರೂ ನನಗೆ ಮೂಗು ಇಲ್ಲದ, ಮಾತು ಬಾರದ ಗೊಂಬೆಗಳು ಎಂದು ಅಕ್ಕಮಹಾದೇವಿ ಇಲ್ಲಿ ಹೇಳುತ್ತಾರೆ. ಇಲ್ಲಿ ಅವರು ಎಲ್ಲವೂ ಮಾಯೆಯ ಬಂಧನದಲ್ಲಿರುವ ವಸ್ತುಗಳು, ದೇವರು ಮಾತ್ರ ಅವುಗಳ ಬಂಧನದಿಂದ ಮುಕ್ತನಾಗಿರುವವನು ಎಂದು ತಿಳಿಸುತ್ತಾರೆ.

ತೋಂಟದ ಸಿದ್ಧಲಿಂಗ ಶಿವಯೋಗಿಗಳು ಎಡೆಯೂರು ಸಿದ್ಧಲಿಂಗೇಶ್ವರ ಎಂದು ಕರೆಯಲ್ಪಡುವ ಮಹಾಮಹಿಮಾಪುರುಷರು. ಇವರು ಅಲ್ಲಮ ಪ್ರಭುದೇವರ ಅಪರಾವತಾರಿಗಳೆಂದು ಪರಿಗಣಿತರಾದವರು. ಆದ್ದರಿಂದಲೇ ಇವರನ್ನು ಎರಡನೇ ಅಲ್ಲಮ ಎಂದು ಕರೆಯುವುದು. ಇವರನ್ನು ಷಟ್‌ಸ್ಥಲಜ್ಞಾನಪ್ರಭಾಪುಂಜರಂಜಿತರೆಂದು ವರ್ಣಿಸಲಾಗಿದೆ. ಹದಿನೈದನೆಯ ಶತಮಾನದಲ್ಲಿ ಕ್ಷೀಣಿಸುತ್ತಿದ್ದ ವೀರಶೈವ ಧರ್ಮವನ್ನು ಉದ್ಧರಿಸಲು ಅವತರಿಸಿ ಬಂದ ಅವತಾರ ಪುರುಷ ಎಂದು ಜನ ಹೇಳುತ್ತಾರೆ. ಇವರು ಏಳುನೂರಾವೊಂದು ವಿರಕ್ತ (ಶಿವಯೋಗಿಗಳು) ರೊಡನೆ ದೇಶದಾದ್ಯಂತ ಸಂಚರಿಸಿ ಜನತೆಯಲ್ಲಿ ಧಾರ್ಮಿಕ ಪ್ರಜ್ಞೆಯನ್ನು ಮೂಡಿಸಿದವರು. ಶರಣರ ವಚನಗಳನ್ನು ಮನೆಮನೆಗೆ ತಲುಪಿಸಿದವರು. ಅವರ ಶಿಷ್ಯಪರಂಪರೆ ಅನುಚರವಾಗಿ ಇಂದಿನವರೆಗೂ ನಡೆದುಬಂದಿದೆ. ಅವರ ಮೊದಲ ಶಿಷ್ಯರಾದ ಬೋಳಬಸವರಿಂದ ಹಿಡಿದು ಇಂದಿನ ಸಿದ್ಧಗಂಗಾ ಮಠದ ಶಿವಕುಮಾರ ಸ್ವಾಮಿಗಳು ಮತ್ತು ಗದುಗಿನ ತೋಂಟದಾರ್ಯ ಮಠದ ಸ್ವಾಮಿಗಳು ಇವರ ಶಿಷ್ಯ ಪರಂಪರೆಗೆ ಸೇರುತ್ತಾರೆ. ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಅಲ್ಲಮಪ್ರಭು ಪರಂಪರೆಯ ಶೂನ್ಯಸಿಂಹಾಸನವನ್ನೇರಿ ಲೋಕೋದ್ಧಾರ ಕಾರ್ಯವೆಸಗಿದರು. ಇವರ ಕರಕಮಲಸಂಜಾತರಾಗಿ, ಪಟ್ಟದ ಶಿಷ್ಯರಾಗಿ ಮೆರೆದವರು

ಶ್ರೀ ಬೋಳಬಸವೇಶ್ವರರು. ಅವರು ತೋಂಟದ ಸಿದ್ಧಲಿಂಗ ಶಿವಯೋಗಿಗಳ ತರುವಾಯ ಶೂನ್ಯಪೀಠಕ್ಕೆ ಅಧಿಕಾರಿಗಳಾಗಿ ಮೆರೆದರು. ಅವರ ಶಿಷ್ಯಸಂಖ್ಯೆ ಅಗಣಿತ. ವಚನ ಸಾಹಿತ್ಯ ಇಂದಿನವರೆಗೂ ಹರಿದುಬಂದಿರುವುದು ತೋಂಟದ ಸಿದ್ಧಲಿಂಗ ಶಿವಯೋಗಿಗಳ ಶರಣ ಸಾಹಿತ್ಯ ಪ್ರಚಾರ ಶಕ್ತಿಯಿಂದ.

ಅವರು ಒಂದು ವಚನ ಈ ರೀತಿ ಇದೆ.

**ಅನಾದಿಯಾಗಿ ಶಿವನುಂಟು,**
**ಮಾಯೆಯುಂಟು,**
**ಆತ್ಮನುಂಟೆಂಬುದ ನಾವರಿಯೆವಯ್ಯ.**
**ಆದಿ ಅನಾದಿ ಸುರಾಳ ನಿರಾಳವಿಲ್ಲದಂದು,**
**ಮಾಯೆಯನು ಕಾಣೆ, ಆತ್ಮನನು ಕಾಣೆ.**
**ಮಹಾದೇವ ತಾನೊಬ್ಬನೇ ಇದ್ದೆನೆಂಬುದು**
**ಕಾಣಬಂದಿತ್ತು ನೋಡ ಶಿವಜ್ಞಾನದೃಷ್ಟಿಗೆ.**
**ಆ ಲಿಂಗನಿರ್ಮಿತದಿಂದ ಮಾಯೆ ಹುಟ್ಟಿತ್ತು ನೋಡಾ.**
**ಆ ಮಾಯೆಯಿಂದ ತತ್ವಬ್ರಹ್ಮಾಂಡಾದಿ**
**ಲೋಕಾದಿಲೋಕಂಗಳು ಹುಟ್ಟಿದವು ನೋಡಾ.**
**ಹೀಂಗೆ ನಿನ್ನ ನೆನಹು ಮಾತ್ರದಿಂದ ತ್ರೈಜಗ ಹುಟ್ಟಿತ್ತು ನೋಡಾ.**
**ಆ ತ್ರೈಜಗಂಗಳ ಉತ್ಪತ್ತಿ ಸ್ಥಿತಿ ಲಯಂಗಳಿಗೆ**
**ನೀನೆ ಕಾರಣನಯ್ಯಾ,**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.**

ಶಿವಜ್ಞಾನ ದೃಷ್ಟಿಯುಳ್ಳ ಶರಣರಿಗೆ ಆದಿಯಿಲ್ಲದ ಅಂತ್ಯವಿಲ್ಲದ ಶಿವನಿದ್ದಾನೆ. ಮಾಯೆಯಿದೆ ಆದರೆ ಆತ್ಮವಿದೆ ಎಂಬುದು ನಮಗೆ ತಿಳಿದಿಲ್ಲ. ಆದಿ ಮತ್ತು ಅಂತ್ಯಗಳು ವ್ಯಕ್ತವಾಗದಿದ್ದಾಗ ಮಾಯೆಯು ಕಾಣುವುದಿಲ್ಲ ಆತ್ಮವು ಕಾಣುವುದಿಲ್ಲ ಆ ಮಹಾದೇವನೊಬ್ಬ ಮಾತ್ರ ಕಾಣುತ್ತಾನೆ. ಆ ಲಿಂಗನೇ ನಿರ್ಮಿಸಿದ್ದರಿಂದ ಮಾಯೆಯು ಮತ್ತು ಅದರಿಂದ ತತ್ವ ಬ್ರಹ್ಮಾಂಡ ಲೋಕಗಳು ಹುಟ್ಟಿದವು ಎಂದು ಹೇಳುತ್ತಾರೆ. ಇಲ್ಲಿ ಸಕಲ ಸೃಷ್ಟಿಯೇ ಶಿವನ ಮಾಯಾವಿಲಾಸದಿಂದ ನಿರ್ಮಾಣವಾಗಿದೆ ಎಂದು ಹೇಳುತ್ತಾರೆ. ಮುಂದೆ ಹೋಗಿ ನಿಮ್ಮ ನೆನಪಿನಿಂದಲೇ ಮೂರು ಜಗತ್ತುಗಳು ಹುಟ್ಟಿರುವುದು ನೋಡಾ ಎಂದು ಹೇಳುತ್ತಾರೆ. ಇನ್ನೂ ಮುಂದೆ ಹೋಗಿ ಆ ಮೂರು ಜಗತ್ತುಗಳ ರಚನೆ ಮತ್ತು ನಾಶಗಳಿಗೂ ನೀನೇ ಕಾರಣ ಎಂದು ಆ ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವಿಗೆ ಹೇಳುತ್ತಾರೆ.

ಇಲ್ಲಿ ಸಿದ್ಧಲಿಂಗ ಶಿವಯೋಗಿಗಳು ಬ್ರಹ್ಮಾಂಡದ ಮತ್ತು ಅದರೊಳಗೆ ಬರುವ ಸೂರ್ಯ, ಚಂದ್ರ, ಭೂಮಿ ಮತ್ತು ಸಕಲ ಜೀವಿಗಳ ರಚನೆಕಾರ ಆ ಶಿವ ಎಂದು ಹೇಳುತ್ತಾರೆ. ಇವುಗಳ ನಾಶವಾಗುವುದಾದರೂ ಕೂಡ ಆ ಶಿವನಿಂದಲೇ ಎಂದು ಹೇಳುತ್ತಾರೆ. ಮಾಯೆಯೂ ಕೂಡ ಆ ಶಿವನ ಆಟ ಎಂದು ತಿಳಿಸುತ್ತಾರೆ.

ಹೀಗೆ ಬೇರೆ ಬೇರೆ ವಚನಕಾರರು ತಮ್ಮ ಶಿವಭಕ್ತಿಯ ಅರಿವಿಗೆ ತಿಳಿದ ಹಾಗೆ ಮಾಯೆಯ ಕಲ್ಪನೆಯನ್ನು ವರ್ಣಿಸಿದ್ದಾರೆ.



# ಶತಮಾನಗಳಾಚೆಯ ಶರಣರ ಸಂದೇಶ

–ಇಂಗ್ಲಿಷ್ ಮೂಲ: **ಗುಂಡು ಶಂಕರ್**
–ಅನುವಾದ: **ಶ್ರೀಕಾಂತ ಬಾಬು**

ಇತ್ತೀಚಿನ ಕೆಲ ವರ್ಷಗಳಲ್ಲಿ ಪ್ರಪಂಚದಲ್ಲಿ ಕೆಲವು ಪ್ರಬಲ ಬದಲಾವಣೆಗಳು ಕಾಣಿಸುತ್ತಿವೆ. ಅನೇಕ ದೇಶಗಳು ಧಾರ್ಮಿಕ ಮತ್ತು ಜನಾಂಗೀಯ ಗುರುತುಗಳನ್ನು ತಪ್ಪಾಗಿ ಹಿಡಿಯುತ್ತಾ ಸಂಪ್ರದಾಯವಾದಿ ದೇಶಗಳಾಗುತ್ತಿವೆ. ಹಲವಾರು ದಶಕಗಳಿಂದ ಅನೇಕ ದೇಶಗಳಲ್ಲಿ ಸ್ಥಾಪಿತವಾಗಿದ್ದ ಧಾರ್ಮಿಕ ಸಹಿಷ್ಣುತೆ, ವಲಸೆ ಹೋಗುವುದು, ಜಾಗತೀಕರಣ, ಆರ್ಥಿಕ ಮುಕ್ತ ಮಾರುಕಟ್ಟೆ, ಇತ್ಯಾದಿಗಳನ್ನು ಧರ್ಮ ಮತ್ತು ಜನಾಂಗೀಯ ಕಾರಣಗಳಿಂದಾಗಿ ವಿರೋಧಿಸಲಾಗುತ್ತಿದೆ. ಈಗ ಬಹುತೇಕ ದೇಶಗಳು ಬಲಪಂಥಕ್ಕೆ ವಾಲುತ್ತಾ, ಸಾಂಪ್ರದಾಯಿಕವಾಗುತ್ತಾ ಹಿಂದಿನ ಧಾರ್ಮಿಕ ಮಾತ್ತು ಜನಾಂಗೀಯ ಗುರುತಿಗೆ ಮರಳುತ್ತಿವೆ. ಈ ಹೊತ್ತು ಪ್ರಪಂಚವು ಧರ್ಮ ಮತ್ತು ಜನಾಂಗೀಯ ಮೂಲಗಳ ಹೊಡೆದಾಟದಲ್ಲಿ ಸಿಲುಕಿ ನಿರಂತರ ವಿಭಜನೆಯತ್ತ ಚಲಿಸುತ್ತಿರುವಂತೆ ತೋರುತ್ತಿದೆ. ಭಾರತ, ಯೂರೋಪ್, ಟರ್ಕಿ (ಇಸ್ಲಾಂ ಜಗತ್ತಿನಲ್ಲಿ ಭರವಸೆ ಮತ್ತು ಸ್ಥಿರತೆಯ ಪ್ರತೀಕವಾಗಿದ್ದ ದೇಶ) ಮತ್ತು ಈಗ ಅಮೆರಿಕದ ರಾಜಕಾರಣಿಗಳು ಧರ್ಮ ಮತ್ತು ಜನಾಂಗೀಯ ಮೂಲಗಳ ವ್ಯತ್ಯಾಸಗಳನ್ನು ದುರ್ಬಳಕೆ ಮಾಡಿಕೊಂಡು ಅಧಿಕಾರವನ್ನು ಪಡೆಯುತ್ತಿದ್ದಾರೆ.

ಶೀತಲ ಸಮರದ ನಂತರದ ಪ್ರಪಂಚವನ್ನು ಕುರಿತು ಬರೆದ ಪ್ರಬಂಧ 'Clash of Civilizations' ಸಾಮ್ಯುಯಲ್ ಹಂಟಿಂಗ್ಟನ್ನರನ್ನು ಒಬ್ಬ ಪ್ರವಾದಿಯನ್ನಾಗಿಸಿದೆ. ಅವರು ಈ ಪ್ರಬಂಧದಲ್ಲಿ "ಮಾನವಕುಲದ ಇಬ್ಭಾಗಗಳ ಸಂಘರ್ಷಣೆಯ ಮೂಲ ಸಾಂಸ್ಕೃತಿಕವಾಗಿರುತ್ತದೆ. ಜಾಗತಿಕ ರಾಜಕೀಯವು ಸಂಘರ್ಷಣೆಯಿಂದ ಕೂಡಿದ್ದು ವಿವಿಧ ದೇಶಗಳ ರಾಜಕೀಯದ ಸ್ಥಿತಿ ಮತ್ತು ಆ ದೇಶಗಳ ನಾಗರಿಕತೆ (ಧರ್ಮ) ಗಳ ತಿಕ್ಕಾಟಗಳಿಂದ ಅನಿಶ್ಚಿತತೆ ಇರುತ್ತದೆ" ಎಂದಿದ್ದಾರೆ. ಅವರ ಈ ವಾದದಲ್ಲಿ ಧರ್ಮ ಮತ್ತು ಸಂಸ್ಕೃತಿಗಳು ಪರಸ್ಪರ ಪೂರಕವಾಗಿವೆ. ಹಂಟಿಂಗ್ಟನ್ನರ ಈ ವಾದವನ್ನು

ಹಲವರು ಒಪ್ಪದಿದ್ದರೂ ಕೆಲವಂಶಗಳು ೨೦ ವರ್ಷಗಳ ಹಿಂದೆ ನುಡಿದ ಅವರ ಭವಿಷ್ಯ ಭಾಗಶಃ ಸರಿಯೆಂದೆನಿಸುತ್ತದೆ.

ಪ್ರಪಂಚದ ಎಲ್ಲ ಧರ್ಮಗಳು ಪ್ರೀತಿ, ಕರುಣೆ ಮತ್ತು ಸಹನೆಗಳನ್ನು ಬೋಧಿಸಿದರೂ ನಾವು ಈಗ ಧರ್ಮದ ಹೆಸರಿನಲ್ಲಿ ನಡೆಯುವ ಹಿಂಸೆಯನ್ನು ದಿನನಿತ್ಯ ನೋಡುತ್ತಿದ್ದೇವೆ. ಸತ್ಪ್ರಜೆಗಳಾಗಿ ನಾವು ಧರ್ಮವನ್ನು ವಿವಿಧ ಪ್ರಮಾಣದಲ್ಲಿ ಒಪ್ಪುತ್ತೇವೆ ಇಲ್ಲ ತಿರಸ್ಕರಿಸುತ್ತೇವೆ. ಆಷ್ಟಾದರೂ ಧರ್ಮವು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ನಮ್ಮ ಮೇಲೆ ಪ್ರಭಾವ ಬೀರುತ್ತಲಿದೆ. ಪ್ರತಿ ವ್ಯಕ್ತಿಯೂ ತನ್ನ ಜೀವನದ ಒಂದಲ್ಲ ಒಂದು ಸಮಯದಲ್ಲಿ ಈ ಪ್ರಪಂಚದಲ್ಲಿ ತನ್ನ ಪಾತ್ರವನ್ನು ಅಥವಾ ಜೀವನದ ಉದ್ದೇಶವನ್ನು ಅಥವಾ ಆಧುನಿಕ ಸಂಘರ್ಷಗಳ ಬಗ್ಗೆ ಯೋಚಿಸಿಯೇ ಇರುತ್ತಾನೆ. ನಮ್ಮ ಧರ್ಮ ಮತ್ತು ಧಾರ್ಮಿಕ ಸಾಹಿತ್ಯ ಇವುಗಳನ್ನು ನಮಗೆ ಉತ್ತರಿಸಲು ಪ್ರಯತ್ನಿಸಿವೆ. ನಮ್ಮ ಧರ್ಮದ ಬಗ್ಗೆ ನಮ್ಮ ವರ್ತನೆಯನ್ನು ಪರೀಕ್ಷಿಸಿಕೊಳ್ಳಬೇಕಾಗುತ್ತದೆ. ಸದಾಕಾಲವೂ ಬದಲಾಗುತ್ತಿರುವ ಧರ್ಮ ಮತ್ತು ರಾಜಕೀಯದ ಅಡ್ಡಪ್ರವಾಹಗಳಿಗೆ ನಾವು ಹೇಗೆ ಪ್ರತಿಸ್ಪಂದಿಸುತ್ತೇವೆ ಎನ್ನುವುದು ಈಗಿನ ಪ್ರಶ್ನೆ.

ಇಂಥ ಸಮಯದಲ್ಲಿ ದ್ವೇಷ ಮತ್ತು ಭೇದಗಳನ್ನು ಎದುರಿಸಲು ನಮಗೆ ಭರವಸೆಗಳ ಆಸರೆ ಬೇಕು. ಕನ್ನಡ ಸಾಹಿತ್ಯ ರಂಗವು ಈಗ ಭಕ್ತಿ ಸಾಹಿತ್ಯವನ್ನು ಕುರಿತು ಪುಸ್ತಕ ತರುತ್ತಿರುವುದು ಸಮಂಜಸವಾಗಿದೆ. ಎಲ್ಲ ಧರ್ಮಗಳಲ್ಲೂ ಭಕ್ತಿಯ ಪಥ ಹರಿದಿರುವುದನ್ನು ನೋಡಬಹುದು. ಭಾರತದಿಂದ ವಲಸೆ ಬಂದ ನಮಗೆ ಎರಡು ಸಮಸ್ಯೆಗಳಿವೆ. ಭಾರತದಲ್ಲಿ ನಾವು ಮೆಜಾರಿಟಿ ಅಂದರೆ ಬಲಪಂಥದ ಕಡೆಗಿದ್ದೇವೆ. ಆದರೆ ಅಮೆರಿಕದಲ್ಲಿ ನಾವು ಮೈನಾರಿಟಿ ಅಂದರೆ ಎಡಪಂಥದ ಕಡೆಗಿದ್ದೇವೆ. ಅಂದರೆ ನಮ್ಮ ಈ ಅನನ್ಯ ದೃಷ್ಟಿಕೋನ ನಮಗೆ ಭಾರತದಲ್ಲಿ ಮೈನಾರಿಟಿಯಲ್ಲಿರುವವರು ಹೇಗಿರಬಹುದು ಎನ್ನುವುದರ ಒಂದು ಕಲ್ಪನೆ ಕೊಡುತ್ತದೆ. ದುರ್ದೈವವಶಾತ್ ನಮ್ಮ ಕೆಲ ಭಾರತೀಯರು ತಮ್ಮ ಇಲ್ಲಿನ ಸ್ಥಿತಿಯ ಬಗ್ಗೆ ಆಕ್ಷೇಪವೆತ್ತಿದರೂ ಭಾರತವನ್ನು ಕುರಿತು ಮಾತ್ರ ಅವರು ಬಲಪಂಥವನ್ನು ಸಮರ್ಥಿಸಲು ಹಿಂಜರಿಯುವುದಿಲ್ಲ. ಇದೊಂದು ರೀತಿಯ ವಿಪರ್ಯಾಸ ಅಲ್ಲವೆ?

ನಮ್ಮ ಧಾರ್ಮಿಕ ಮತ್ತು ಜನಾಂಗೀಯ ಗುರುತುಗಳಿಂದ ನಮಗೆ ಭರವಸೆಯ ಆಳವಾದ ಸಂದೇಶ ಬೇಕಾಗಿದೆ. ನಾವು ಕನ್ನಡಿಗರಿಗೆ ಭಕ್ತಿ ಮಾರ್ಗದ ಶಿವಶರಣರ ವಚನಗಳು ಬೇರೇ ಕಾಲದಲ್ಲಿ ಬೇರೇ ಸಾಮಾಜಿಕ ಸನ್ನಿವೇಶದಲ್ಲಿ ರಚಿಸಲ್ಪಟ್ಟರೂ ಒಂದು ಪರ್ಯಾಯ ಪರಿಹಾರವನ್ನು ಕೊಡುತ್ತವೆಯೆಂದು ನನ್ನ ಅಭಿಪ್ರಾಯ. ವಚನಕಾರರು ನಮ್ಮನ್ನು ಅರ್ಥವಿಲ್ಲದ ಧಾರ್ಮಿಕ ಕ್ರಿಯಾವಿಧಿಗಳನ್ನು ತಿರಸ್ಕರಿಸಿ

ಆಧ್ಯಾತ್ಮಿಕತೆಯತ್ತ ಗಮನ ಹರಿಸಲು ಹೇಳಿದರು. ಅವರ ಈ ಸಂದೇಶಗಳು ವಿಧ್ವಂಸಕಾರಿ ಶಕ್ತಿಗಳಿಂದ ತತ್ತರಿಸುತ್ತಿರುವ ದೇಶಗಳನ್ನು ಶಾಂತಿಯ ಸಹಬಾಳ್ವೆಗೆ ಒಯ್ಯಲು ಸಹಕಾರಿಯಾಗಬಲ್ಲವು.

ಈ ಒಂದು ಸಣ್ಣ ಲೇಖನ, ಕನ್ನಡದ ವಚನಗಳನ್ನು ಕುರಿತು ಒಬ್ಬ ಸಾಮಾನ್ಯ ವ್ಯಕ್ತಿಯ ಅಭಿಪ್ರಾಯಗಳನ್ನು ಪರೀಕ್ಷಿಸುವ ಪ್ರಯತ್ನ ಆಗಿದೆ. ಬಹುಶಃ ಜೀವನದ ಅರ್ಥವನ್ನು ಹುಡುಕುವಲ್ಲಿ ಆತ್ಮಾವಲೋಕನದ ಅವಶ್ಯಕತೆ ಮತ್ತು ಸಾಧಾರಣ ಜಗತ್ತಿನಿಂದ ಮೇಲೇರುವ ಬಗ್ಗೆ ಸಂದೇಶವನ್ನು ಸಾರುವ ಈ ವಚನಗಳು ಇಂದಿನ ಕಾಲಕ್ಕೂ ಪ್ರಸ್ತುತವೆಂದು ನನ್ನ ನಂಬಿಕೆ.

*

ಧರ್ಮದ ಮೂಲಕ ಆಧ್ಯಾತ್ಮಿಕತೆಯ ದೃಷ್ಟಿಕೋನದ ಕಡೆಗೆ ಗಮನಿಸುವ ಬದಲಾವಣೆಯ ಸಂದೇಶವಿರುವ ಈ ವಚನವನ್ನು ನಾನು ಹಲವು ವರ್ಷಗಳ ಹಿಂದೆ ಕೇಳಿದ್ದೆ.

ಈ ವಚನದ ಶಬ್ದಾರ್ಥ ಮತ್ತು ಚಿತ್ರಣ ನನ್ನನ್ನು ವಿಚಲಿತಗೊಳಿಸಿತು. ಕೇವಲ ಐದು ಸಾಲುಗಳಲ್ಲಿ ಅದೆಷ್ಟು ಶಕ್ತಿ ಮತ್ತು ಮಾಧುರ್ಯ ತುಂಬಿದೆ ಈ ವಚನದಲ್ಲಿ..

**ಎನ್ನ ಕಾಯವ ದಂಡಿಗೆಯ ಮಾಡಯ್ಯ**
**ಎನ್ನ ಶಿರವ ಸೋರೆಯ ಮಾಡಯ್ಯ**
**ಎನ್ನ ನರಗಳ ತಂತಿಯ ಮಾಡಯ್ಯ**
**ಬತ್ತೀಸರಾಗವ ಹಾಡಯ್ಯ**
**ಉರದಲೊತ್ತಿ ಬಾರಿಸು ಕೂಡಲಸಂಗಮದೇವ!**

ಇದನ್ನು ಹಾಡಿದವರು ಪ್ರಭುದೇವ ಸರದಾರ. ಈ ವಚನದ ಸಾಹಿತ್ಯ ನನ್ನ ಬುದ್ಧಿಗೆ ಕೆಲಸ ಕೊಟ್ಟರೆ ಅದರ ಸಂಗೀತ ನನ್ನ ಮನಸ್ಸಿಗೆ ಮುದ ಕೊಟ್ಟಿತು. ನಮ್ಮ ದೇಹವನ್ನು ದೇವ ಪೂಜೆಗೆ ಉಪಯೋಗಿಸುವ ತಂತಿವಾದ್ಯಕ್ಕೆ ಹೋಲಿಸುವ ಚಿತ್ರಣ ಮತ್ತು ನಮ್ಮ ಮತ್ತು ದೇವರ ನೇರ ಸಂಬಂಧ ನನ್ನ ಹೃದಯ ಮುಟ್ಟಿತು. ಧಾರ್ಮಿಕ ತೋರಿಕೆಗಳು, ಅರ್ಥಹೀನ ಕಟ್ಟು-ಕಟ್ಟಲೆಗಳು, ಪುರೋಹಿತಶಾಹಿಗಳ ನಿರಾಕರಣೆ, ದೇವ-ಮಾನವ ನೇರ ಸಂಬಂಧ ಈ ವಚನದ ವೈಶಿಷ್ಟ್ಯ.

ಕಾಕತಾಳೀಯವೆನ್ನುವಂತೆ ಈ ವಚನವನ್ನು ಮೊದಲ ಬಾರಿ ಕೇಳಿದಾಗ ಧರ್ಮದ ಬಗೆಗೆ ನನ್ನ ನಿಲವು, ಚಿಂತನೆಗಳು ಇನ್ನೂ ರೂಪುಗೊಳ್ಳುತ್ತಿತ್ತು. ಏಕೆಂದರೆ ನನ್ನ ಪಾಲನೆಯಲ್ಲಿ ಮಿಶ್ರ ವಾತಾವರಣವಿತ್ತು. ನನ್ನ ತಂದೆ ನಾಸ್ತಿಕರಾದರೆ ನನ್ನ ತಾಯಿಯ ಕಡೆಯವರು ಕಟ್ಟಾ ಸಂಪ್ರದಾಯಸ್ಥರು ಮತ್ತು ದೈವ ಭೀರುಗಳು ಆಗಿದ್ದರು. ನನ್ನ

ತಂದೆಯ ತಂದೆ (ಅಜ್ಜ) ಕೂಡ ಆಧುನಿಕರಾಗಿದ್ದರು ಆದರೆ ಅವರ ಪತ್ನಿ ನಮ್ಮಜ್ಜಿ ಸಂಪ್ರದಾಯಸ್ಥ ಮನೆತನದಿಂದ ಬಂದವರಾಗಿ ಅವರ ಸಂಸಾರ ಧಾರ್ಮಿಕತೆ ಮತ್ತು ಆಚರಣೆಗಳ ಅಸಂಪ್ರಾದಾಯಿಕ ಮಿಶ್ರಣವಾಗಿತ್ತು. ಇನ್ನು ಅವರ ಮಗ, ನನ್ನ ತಂದೆ, ಎಲ್ಲಾ ಮತೀಯ ಸಂಪ್ರದಾಯಗಳ ಉಗ್ರ ವಿರೋಧಿ ಮತ್ತು ನಾಸ್ತಿಕನಾಗಿ ನಮ್ಮೆಲ್ಲ ಸಂಬಂಧಿಕರ ಅಸಮಾಧಾನಕ್ಕೆ ಗುರಿಯಾಗಿದ್ದರು.

ನಮ್ಮ ಮನೆಯಲ್ಲಿ ಅದರಲ್ಲೂ ನಮ್ಮಮ್ಮ ಮತ್ತು ಅಕ್ಕಂದಿರ ಮೇಲೆ ಧಾರ್ಮಿಕ ಮತ್ತು ಸಾಮಾಜಿಕ ಸಂಪ್ರದಾಯಗಳ ಆಚರಣೆಯ ಪರಿಣಾಮ ಆಗುತ್ತಿದ್ದನ್ನು ಗಮನಿಸಿದ್ದೆ. ನನ್ನ ಅಕ್ಕಂದಿರು ಅರ್ಥವಿಲ್ಲದ ಮಡಿ, ಮುಟ್ಟು, ಇತ್ಯಾದಿಗಳ ಬಗ್ಗೆ ಶಾಂತವಾಗಿ ಬಂಡಾಯವೆತ್ತುತ್ತಿದ್ದರು. ಈ ಸಂಪ್ರದಾಯಗಳಿಗೆ ಅರ್ಥಾತ್ ಸಂಬಂಧವಿರದ ಸಂಗೀತದ ಮೇಲೂ ಅವರು ನಿರ್ಬಂಧಗಳನ್ನು ಹಾಕುತ್ತಿದ್ದರು. ನಮ್ಮ ಮನೆಯ ಹಿರಿಯರೊಬ್ಬರು ಹಿಂದುಸ್ತಾನಿ ಸಂಗೀತ ನಮ್ಮ ಧರ್ಮಕ್ಕೆ ಸೇರಿದುದಲ್ಲ ಅದರಲ್ಲಿ ಹೊರಗಿನವರ ಪ್ರಭಾವವಿದೆ. ಆದ್ದರಿಂದ ಕರ್ನಾಟಕ ಶಾಸ್ತ್ರೀಯ ಸಂಗೀತವನ್ನು ಮಾತ್ರ ಕೇಳಬೇಕು ಅಂತ ಹೇಳುವುದನ್ನು ಕೇಳಿದ್ದೇನೆ. ಇದೇ ಕಾರಣಕ್ಕಾಗಿ ಸಿನೇಮಾ ಮತ್ತು ಅವುಗಳ ಸಂಗೀತವನ್ನು ವಿರೋಧಿಸಲಾಗುತ್ತಿತ್ತು.

ನನ್ನ ಬಾಲ್ಯದಲ್ಲಿ ನಾವು ಪ್ರತಿ ವರ್ಷ ಮನೆಯಲ್ಲಿ ಮಾಡುತ್ತಿದ್ದ ಒಂದು ಪೂಜೆಯ ನೆನಪಿದೆ. ಪೂಜೆಯ ನಂತರ ಪೂಜಾಫಲದ ಕಥೆಯನ್ನು ಓದಲಾಗುತ್ತಿತ್ತು. ಅದರಲ್ಲಿ ಪೂಜೆ ಮಾಡಿದರೆ ಅದರಿಂದಾಗುವ ಲಾಭವನ್ನು ಮಾಡದಿದ್ದಲ್ಲಿ ಅದರಿಂದಾಗುವ ಕೆಟ್ಟ ಪರಿಣಾಮಗಳನ್ನು ಕಥೆಯಲ್ಲಿ ಹೇಳಲಾಗುತ್ತಿತ್ತು. ದೇವರಲ್ಲಿ ಪ್ರೇಮದ ಬದಲು ಹೆದರಿಕೆ ಅಥವಾ ಭಯವನ್ನು ಹುಟ್ಟಿಸುವ ಮೂಲಕ ಪೂಜಿಸಲು ಪ್ರೋತ್ಸಾಹಿಸುವಂತಿತ್ತು. ಪೂಜೆಯ ಲಾಭಗಳು ಆಧ್ಯಾತ್ಮಿಕತೆಗೆ ಸಂಬಂಧಿಸುವುದಕ್ಕೆ ಬದಲಾಗಿ ಪ್ರಾಪಂಚಿಕ ವಸ್ತುಗಳಾದ ಸಕಲ ಧನ, ಧಾನ್ಯ, ಸಂಪತ್ತು, ಆಯುರಾರೋಗ್ಯ, ಇತ್ಯಾದಿಗಳನ್ನೊಳ ಗೊಂಡಿತ್ತು. ನನಗೆ ಆ ವಯಸ್ಸಿನಲ್ಲಾಗಲೇ ದೇವರ ಕಲ್ಪನೆ ಈ ಕಥೆಯಲ್ಲಿ ಹೇಳುವುದಕ್ಕಿಂತ ಭಿನ್ನವಾಗಿ ಪವಿತ್ರತೆ ಮತ್ತು ಪ್ರೀತಿ, ಕರುಣೆಗಳಿಂದ ಕೂಡಿರಬೇಕೆಂದೆನಿಸಿತ್ತು.

ಆಗಿನ ಕಾಲದಲ್ಲಿ ಮನೆಯ ಹೊರಗಿನ ವಾತಾವರಣದಲ್ಲಿ ಕೂಡ ಜಾತಿ ಮತ್ತು ಧರ್ಮಗಳನ್ನು ಕುರಿತಾದ ಭಾವನೆಗಳು ಉದ್ರೇಕಕಾರಿಯಾಗಿದ್ದವು. ಭಾರತ–ಪಾಕಿಸ್ತಾನಗಳ ರಕ್ತಸಿಕ್ತ ವಿಭಜನೆ ನಮ್ಮ ದೇಶದಲ್ಲಿ ಮತೀಯ ಭಾವನೆಗಳನ್ನು ಕೆರಳಿಸಿತ್ತು. ಆಗಾಗ್ಗೆ ದೇಶದ ಹಲವಾರು ಭಾಗಗಳಲ್ಲಿ ಹಿಂದು–ಇಸ್ಲಾಂಗಳ ಗಲಭೆಯಾಗುತ್ತಿತ್ತು. ಗಾಂಧಿ ಕಂಡ ಕನಸಿನ ಭಾರತವಾಗಿರಲಿಲ್ಲ. ಧಾರ್ಮಿಕ ಒಕ್ಕೂಟಕ್ಕೆ ಬದಲಾಗಿ ವಿಭಾಗವನ್ನು ನೋಡುತ್ತಿದ್ದೆವು. ಅಲ್ಲಾ ತೇರೋನಾಮ್, ಈಶ್ವರ್ ತೇರೋನಾಮ್ ಸಂಗೀತವನ್ನು ಕೇಳುತ್ತಿದ್ದೆವಾದರೂ ಅವುಗಳು ಸಾಮಾಜಿಕ ಪ್ರಸ್ತುತತೆಯನ್ನು ಕಳೆದುಕೊಂಡಿದ್ದವು.

ಇಂತಹಾ ಸನ್ನಿವೇಶದಲ್ಲಿ ವೈಯಕ್ತಿಕವಾಗಿಯೂ ಮತ್ತು ಸಾರ್ವತ್ರಿಕವಾಗಿಯೂ ಒಂದು ಸಂಘಟಿತ ಧರ್ಮದ ಅವಶ್ಯಕತೆಯಿರಲಿಲ್ಲ. ಆಗ ನನಗೆ ಹಲವಾರು ಶತಮಾನಗಳಷ್ಟು ಹಳೆಯದಾದ ವಚನಗಳು ಈ ಹೊಸ ಕಾಲದಲ್ಲಿಯೂ ಅದೆಷ್ಟು ಪ್ರಸ್ತುತವೆಂದು ಅನಿಸಿತು. ವಚನಗಳು ನಮ್ಮ ದೈನಂದಿನ ಜೀವನಕ್ಕೆ ನೇರವಾದ ಸಲಹೆಯನ್ನು ಕೊಡದಿದ್ದರೂ, ಜೀವನ ಮೌಲ್ಯವನ್ನೂ ಮತ್ತು ತತ್ವವನ್ನೂ ಕಾಲರಹಿತವಾಗಿ ಬೋಧಿಸುತ್ತವೆ. ಈ ವಚನಗಳು ನನಗೆ ಆಗ ನನ್ನ ಮಾನಸಿಕ ಬೆಳವಣಿಗೆಗೆ ತುಂಬಾ ಸಹಕಾರಿಯಾದವು.

ಆನಂತರ ನಾನು ಭಾರತದಿಂದ ಅಮೆರಿಕಕ್ಕೆ ಬಂದು ೩೦ ವರ್ಷಗಳು ಕಳೆದಿವೆ. ಇಲ್ಲೂ ಕೂಡ ಈಗ ಎಲ್ಲ ದೊಡ್ಡ ನಗರಗಳಲ್ಲಿ ನಮ್ಮ ಹಿಂದೂ ದೇವಾಲಯಗಳನ್ನು ನೋಡುತ್ತಿದ್ದೇನೆ. ಮಿಲಿಯನ್‌ಗಟ್ಟಲೆ ಹಣವನ್ನು ದಾನಿಗಳಿಂದ ಸಂಗ್ರಹಿಸಿ ಈ ದೇಗುಲಗಳನ್ನು ಭವ್ಯವಾಗಿ ಕಟ್ಟಲಾಗಿದೆ. ನಾನಾರೀತಿಯ ಕಮಿಟಿಗಳು, ಮ್ಯಾನೇಜಮೆಂಟ್‌ಗಳು ಇದರ ವ್ಯವಹಾರಗಳನ್ನು ನೋಡಿಕೊಳ್ಳುತ್ತವೆ. ಇವರು ಎಲ್ಲ ರೀತಿಯ ಧಾರ್ಮಿಕ ಆಚರಣೆಗಳನ್ನು ಯಥಾವತ್ತಾಗಿ ಒಳ್ಳೆಯದು-ಕೆಟ್ಟದ್ದೆನ್ನದೆ ಎಲ್ಲವನ್ನೂ ಭಾರತದಿಂದ ಆಮದು ಮಾಡಿಕೊಂಡಿದ್ದಾರೆ. ಮ್ಯಾನೇಜ್‌ಮೆಂಟ್ ಕಮಿಟಿಗಳಲ್ಲಿ ಕೂಡ ಅವರ ಮತ, ಅಂತಸ್ತು, ಭಾಷೆ, ಇತ್ಯಾದಿಗಳನ್ನು ಅನುಸರಿಸಿ ನಡೆವ ತಿಕ್ಕಾಟಗಳನ್ನು ಗಮನಿಸಬಹುದು. ಹೀಗೆ ನಮ್ಮ ಶಕ್ತಿ, ದೌರ್ಬಲ್ಯ ಮತ್ತು ಪ್ರಾಪಂಚಿಕ ಅಸ್ತಿತ್ವಕ್ಕೆ ಸಾಕ್ಷಿಯೆನ್ನುವಂತೆ ದೇವರನ್ನು ಎಳೆತಂದಿದ್ದೇವೆ. ದೇವರಿಗೂ ನಮ್ಮ ಆಯ್ಕೆಗಳ ಬಗ್ಗೆ ಯಾವುದೇ ಅಧಿಕಾರವಿರುವಂತೆ ತೋರುವುದಿಲ್ಲ!

ಇಲ್ಲೊಂದು ಸ್ಥಳೀಯ ದೇವಸ್ಥಾನದಲ್ಲಿ ಕೊನೆಯಿಲ್ಲದ ನಿಧಿ ಸಂಗ್ರಹ ಯೋಜನೆ ನಿರಂತರವಾಗಿ ನಡೆಯುತ್ತಿದೆ. ಅಲ್ಲಿ ಬರುವ ಭಕ್ತಾದಿಗಳನ್ನು ಹೊಸ ಕಟ್ಟಡ, ಯಜ್ಞ-ಯಾಗ, ಗೋಪಾಲನೆ, ವಿಶೇಷ ಪೂಜೆ, ಇತ್ಯಾದಿಗಳಿಗಾಗಿ ದಾನ ಮಾಡಲು ನಿರಂತರ ಪ್ರಯತ್ನ ಸದಾಕಾಲವೂ ನಾನಾ ರೀತಿಯಲ್ಲಿ ನಡೆಯುತ್ತಿರುತ್ತದೆ. ದೇವಾಲಯದ ಒಳಗೂ ಕೂಡ ದೇಣಿಗೆ ಕೇಳುವ ಪೋಸ್ಟರ್‌ಗಳನ್ನು ನೋಡಬಹುದು. ಈ ದೇವಾಲಯಗಳಿಗೆ ಉಪಯುಕ್ತ ಉದ್ದೇಶ ಇದೆ. ಆದರೆ ಆಧ್ಯಾತ್ಮಿಕತೆಯಿಲ್ಲದ ಕೇವಲ ಧಾರ್ಮಿಕ ಆಚರಣೆಗಳಿಗೆ ಮಹತ್ವವನ್ನು ಕೊಡುತ್ತಿದ್ದಾರೆ.

*

ನಮಗೆ ಈಗಲೂ ಪ್ರಸ್ತುತವಾಗಿರುವ ಈ ವಚನ ಕವಿಗಳ ಕಾಲ ಮತ್ತು ಅವರ ಜೀವನದ ಬಗ್ಗೆ ನಮಗೆ ಎಷ್ಟು ಗೊತ್ತಿದೆ? ವಚನ ಸಾಹಿತ್ಯವನ್ನು ಕುರಿತಾದ ಸಂಶೋಧನೆಗಳು ಇನ್ನೂ ನಡೆಯುತ್ತಿವೆ ಮತ್ತು ಹೊಸ ಹೊಸ ವಿಷಯಗಳು ಇನ್ನೂ ದೊರಕುತ್ತಿವೆ. ಸಮಕಾಲೀನ ವಚನಕಾರರಿಂದ ಅವರ ಬಗ್ಗೆ ಹೆಚ್ಚಾಗಿ ತಿಳಿಯದಿದ್ದರೂ

ಕಾಲಾನಂತರದಲ್ಲಿ ಬರೆದ ಜೀವನ ಚರಿತ್ರೆಗಳು ಹೇರಳವಾಗಿವೆ. ಹಾಗಾಗಿ ವಚನಕಾರರನ್ನು ಕುರಿತಾದ ಕಟುಸತ್ಯಗಳು ಹೆಚ್ಚು ತಿಳಿದಿಲ್ಲ. ಸಿಕ್ಕಿರುವ ಆಧಾರಗಳ ಮೇಲೆ ಇನ್ನೂ ಆಳವಾದ ಆಧ್ಯಯನ ಮತ್ತು ಸಂಶೋಧನೆಗಳು ನಡೆಯಬೇಕಿದೆ.

ಎ. ಕೆ. ರಾಮಾನುಜನ್ ಅವರ ಪುಸ್ತಕ "Speaking of Siva" ನಲ್ಲಿ ವಚನಗಳನ್ನು ಕುರಿತು ಹೀಗೆ ಹೇಳಿದ್ದಾರೆ. "Of the four major Dravidian languages, Kannada is the second only to Tamil in antiquity of literary tradition. There is evidence of at least fifteen centuries of literary work in Kannada. Yet in all the length and variety of of this literature, there is no body of lyrics more strikingly original and impassioned than the vachanas of the medieval Virasaiva saints. They all speak of Siva and speak to Siva."

"ಕನ್ನಡದ ಉಪನಿಷತ್ತುಗಳು" ಎಂದು ಕರೆಯಲ್ಪಡುವ ಈ ವಚನ ಸಾಹಿತ್ಯದ ಕಾಲ ೧೧ರಿಂದ ೧೨ನೆಯ ಶತಮಾನವೆಂದು ತಿಳಿಯುತ್ತದೆ. ಸುಮಾರು ೩೦೦ ವಚನಕಾರರ ೨೧೦೦೦ ಕ್ಕೂ ಮೀರಿದ ವಚನಗಳನ್ನು ಇದುವರೆವಿಗೆ ಸಂಗ್ರಹಿಸಲಾಗಿದೆ. ಇವರಲ್ಲಿ ಬಸವಣ್ಣನವರು ಅಗ್ರಗಣ್ಯರಾದ ವಚಕಾರರೆನ್ನುವುದರಲ್ಲಿ ಸಂದೇಹವಿಲ್ಲ.

ರಾಮಾನುಜನ್ ಹೇಳುತ್ತಾರೆ.. 'ವೀರಶೈವ ಚಳುವಳಿಯ ನೇತಾರರು ಬಸವಣ್ಣನವರಾದರೆ, ವಚನಗಳು ಅದರ ಮುಖ್ಯ ಸಂದೇಶ'. ಕೆಳಗಿನ ವಚನವನ್ನು ಉದಾಹರಣೆಯನ್ನಾಗಿ ಕೊಡುತ್ತಾ ಹೀಗೆ ಹೇಳುತ್ತಾರೆ "ಅಸಾಮಾನ್ಯ ವಚನಸಾಹಿತ್ಯ ಭಂಡಾರದ ಸತ್ವವನ್ನು ಅಥವಾ ಸಾರವನ್ನು ಹೇಳುವ ಒಂದು ವಚನವನ್ನು ಆರಿಸುವುದಾದಲ್ಲಿ ಬಸವಣ್ಣನವರ ಕೆಳಗಿನ ವಚನವನ್ನು ಮೀರಿಸುವ ವಚನ ಬೇರೊಂದಿಲ್ಲ"

**ಉಳ್ಳವರು ಶಿವಾಲಯವ ಮಾಡುವರು**
**ನಾನೇನು ಮಾಡಲಿ ಬಡವನಯ್ಯ?**
**ಎನ್ನ ಕಾಲೇ ಕಂಬ ದೇಹವೇ ದೇಗುಲ**
**ಶಿರವೇ ಹೊನ್ನ ಕಲಶವಯ್ಯ!**
**ಕೂಡಲಸಂಗಮ ದೇವ ಕೇಳಯ್ಯ**
**ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ!**

ರಾಮಾನುಜನ್ ಈ ವಚನದ ಅಂಶಗಳನ್ನು ಮತ್ತು ಅದರ ಗುಣಲಕ್ಷಣಗಳನ್ನು ಹೀಗೆ ವಿವರಿಸುತ್ತಾರೆ.

೧. ದೈವಿಕ ಅನುಗ್ರಹವನ್ನು ಖರೀದಿಸಲು ನಾನಾ ರೀತಿಯ ಸೇವೆಗಳ ಅಗತ್ಯವಿಲ್ಲ.
೨. ದೇವರೊಡನೆ ನೇರ ಸಂಪರ್ಕ. ಪುರೋಹಿತರ, ಆಚರಣೆಗಳ ತೋರಿಕೆಗಳ ಅಗತ್ಯವಿಲ್ಲ.
೩. ದೇವರಿಗೆ ಧಾರ್ಮಿಕ ಅರ್ಪಣೆಗಳ ಅವಶ್ಯಕತೆಯಿಲ್ಲ ಆದರೆ ಸಂಪೂರ್ಣ ನಂಬಿಕೆ ಅತ್ಯವಶ್ಯ.
೪. ದೇವರ ಮೂಲ ದೇಗುಲ–ನಮ್ಮ ದೇಹ. ಭೌತಿಕ ಸಾಕಾರವಾದ ದೇವಾಲಯವಲ್ಲ.
೫. ಸ್ಥಾವರ (ಕಲ್ಲಿನ ದೇಗುಲಗಳು) ಮತ್ತು ಜಂಗಮರ ವ್ಯತ್ಯಾಸಗಳು.
೬. ಮಾತೃಭಾಷೆ ಕನ್ನಡ ಭಾಷೆಯಲ್ಲಿ ವಚನ (ಸಂಸ್ಕೃತದ ಅವಶ್ಯಕತೆಯಿಲ್ಲ. ಸಾಧಾರಣ ಜನರಿಗೂ ಲಭ್ಯ).

ನಮಗೆ ಅತ್ಯಂತ ಸುಂದರವಾದ ಮತ್ತು ಅದ್ಭುತ ವಚನ ಸಾಹಿತ್ಯ ನೀಡಿದ ಬಸವಣ್ಣನವರ ನಿಖರವಾದ ಜೀವನ ಚರಿತ್ರೆ ನಮ್ಮಲ್ಲಿಲ್ಲ. ಹಾಗಾಗಿ ಅವರ ಕಾಲ ಮತ್ತು ಜೀವನದ ಬಗ್ಗೆ ಹೆಚ್ಚಿನ ವಿವರಗಳು ಲಭ್ಯವಾಗಿಲ್ಲ. ಅವರದೆನ್ನುವ ಸುಮಾರು ೧೪೦೦ ವಚನಗಳನ್ನು ಸಂಗ್ರಹಿಸಲಾಗಿದೆ.

ಅವರ ಜೀವನದಲ್ಲಿ ಪ್ರಭಾವ ಮೂಡಿರಬಹುದಾದ ಕೆಲವು ವಿಷಯಗಳನ್ನು ಕುರಿತು ನಮಗೆ ತಿಳಿದಿರುವ ಮಾಹಿತಿಗಳೆಂದರೆ, ಅವರ ಬಾಲ್ಯದಲ್ಲಿ ಸಂಸ್ಕೃತದ ಅಭ್ಯಾಸವಾಗಿತ್ತು ಮತ್ತು ಉಪನಯನವೂ ಆಗಿತ್ತು. ಚಿಕ್ಕಂದಿನಿಂದಲೂ ಅವರಿಗೆ ಶಿವನು ಆರಾಧ್ಯ ದೈವವಾಗಿದ್ದ. ೧೬ ನೆಯ ವಯಸ್ಸಿನಲ್ಲಿ ಅವರು ತಮ್ಮ ಜೀವನವನ್ನು ಶಿವನ ಆರಾಧನೆಯಲ್ಲಿ ಕಳೆಯಲು ನಿರ್ಧರಿಸಿದರು. ಅವರಿಗೆ ತಮ್ಮ ಮನೆಯ ಜಾತಿ ಪದ್ಧತಿಯ ಮೂಢ ಕಂದಾಚಾರಗಳು ಉಸಿರುಕಟ್ಟಿಸುತ್ತಿತ್ತು. ಅವರು ಹಿಂದಿನ ಜನ್ಮದ ಪ್ರಾರಬ್ಧ ಕರ್ಮದಿಂದ ಬಂಧಿಸಿದಂತಿದ್ದ ತಮ್ಮ ಜನಿವಾರವನ್ನು ಕಿತ್ತೆಸೆದು ಮನೆ ಬಿಟ್ಟು ತಂದೆ, ತಾಯಿ, ಬಂಧುವರ್ಗಗಳನ್ನು ತೊರೆದು ಹೊರಬಂದರು. ಅಲ್ಲಿಂದ ಅವರು ತ್ರಿವೇಣಿ ಸಂಗಮಕ್ಕೆ ಬಂದು ಕೂಡಲಸಂಗಮದೇವನನ್ನು ತಮ್ಮ ಆರಾಧ್ಯ ದೈವವನ್ನಾಗಿಸಿ-ಕೊಂಡರು.

ಪವಿತ್ರವಾದ ಬಸವನ ಮುಖದಿಂದ ಅವರಿಗೆ ಶಿವನ ದರ್ಶನವಾಗಿ ಶಿವ ಭಕ್ತರ ಸಮಾಜವನ್ನು ನಿರ್ಮಿಸುವ ಕಾರ್ಯ ವಹಿಸಿತೆನ್ನುವ ಕಥೆಯೂ ಉಂಟು. ನಂತರ ಅವರು ಬಿಜ್ಜಳರಾಜನ ಆಸ್ಥಾನವನ್ನು ಸೇರಿ ಅಲ್ಲಿ ವಿವಿಧ ಸಂಸ್ಥೆಗಳಲ್ಲಿ ಸೇವೆ ಮಾಡಿ ರಾಜನ ಭಂಡಾರಿ ಆಗುತ್ತಾರೆ. ಸಂಪತ್ತಿನ ಮಾತ್ರವಲ್ಲ ಭಕ್ತಿಯ ಭಂಡಾರಿ ಕೂಡ. ಅವರ ದರ್ಶನಕ್ಕೆ ಮತ್ತು ಅವರ ವಚನಗಳನ್ನು ಕೇಳಲು ಭಕ್ತಾದಿ ಜನರು ದೂರ ದೂರ ಪ್ರದೇಶಗಳಿಂದ ಬರುತ್ತಿದ್ದರು. ಜನರ ಉತ್ಸಾಹ ಮತ್ತು ಭಕ್ತಿಯನ್ನು ಶಿವಪೂಜೆಯತ್ತ

ತಿರುಗಿಸಿ ಜಾತಿ-ಮತಗಳನ್ನು ಧಿಕ್ಕರಿಸಿ ಸಮಾನತಾವಾದದ ಆದರ್ಶಗಳನ್ನು ತುಂಬಿಸಿ ಕಲ್ಯಾಣದಲ್ಲಿ ವೀರಶೈವವೆನ್ನುವ ಪಂಗಡವನ್ನು ಬೆಳೆಸುತ್ತಾರೆ. ಸಾಂಪ್ರದಾಯಿಕತೆಗೆ ಸವಾಲು ಹಾಕುವ ಈ ಹೊಸ ಆದರ್ಶ ಒಂದು ರೀತಿಯ ರಾಜಕೀಯ ಬಿಕ್ಕಟ್ಟನ್ನುಂಟುಮಾಡುತ್ತದೆ.

ಅಂದಿನ ಸಮಾಜದ ರೀತಿ-ರಿವಾಜಿಗೆ ವಿರೋಧವಾದ ಒಂದು ಅಂತರ್ಜಾತಿಯಲ್ಲಿ ವಿವಾಹವಾದ ದಂಪತಿಗಳನ್ನು ರಾಜನು ದಂಡಿಸುತ್ತಾನೆ. ವೀರಶೈವ ಸಮುದಾಯವು ದಂಡನೆಯ ಸೇಡು ತೀರಿಸಿಕೊಳ್ಳಲು ರಾಜನ ವಿರುದ್ಧ ದಂಗೆಯೇಳುತ್ತದೆ. ಅಹಿಂಸಾವಾದಿ ಬಸವಣ್ಣನವರು ತಮ್ಮ ಕೆಲವು ಉಗ್ರ ಅನುಯಾಯಿಗಳ ಮನಸ್ಸನ್ನು ಬದಲಾಯಿಸುವುದರಲ್ಲಿ ವಿಫಲರಾಗುತ್ತಾರೆ. ಮನನೊಂದ ಬಸವಣ್ಣ ಸಂಗಮಕ್ಕೆ ಹಿಂತಿರುಗಿ ಕೆಲಕಾಲದ ನಂತರ ಕಾಲವಶರಾಗುತ್ತಾರೆ.

ವೀರಶೈವ ಮತ ಸ್ಥಾಪನೆಯಲ್ಲಿ ಬಸವಣ್ಣನವರು ಜಾತೀಯತೆ ತೊಲಗಿಸುವ, ಸಮಾಜದ ಎಲ್ಲ ರೀತಿಯ ಅಸಮಾನತೆಯನ್ನು ಅಳಿಸುವ, ಅರ್ಥವಿಲ್ಲದ ಧಾರ್ಮಿಕ ಕ್ರಿಯಾವಿಧಿಗಳು ಮತ್ತು ನಿಷೇಧಗಳನ್ನು ತಿರಸ್ಕರಿಸುವ ಮತ್ತು ಶಿವನನ್ನು ಪೂಜಿಸಲು ಕಾಯಕವೇ ಕೈಲಾಸವೆನ್ನುವ ಮಂತ್ರಗಳು ಸೇರಿದಂತೆ ಒಟ್ಟು ಎಂಟು ಅಂಶಗಳನ್ನು ಕೊಡುತ್ತಾರೆ. ಆದರೆ, ಬಸವಣ್ಣನವರೇ ವೀರಶೈವ ಮತ ಸಂಸ್ಥಾಪಕರು ಎನ್ನುವುದರಲ್ಲಿ ಸಂದೇಹಗಳಿದ್ದರೂ ಅವರು ವೀರಶೈವ ಮತವನ್ನು ಸುಧಾರಿಸುವಲ್ಲಿ ಮತ್ತು ಚೈತನ್ಯ ತುಂಬುವುದರಲ್ಲಿ ತುಂಬ ಕೆಲಸ ಮಾಡಿದರು ಎನ್ನುವುದಕ್ಕೆ ಹೇರಳ ಸಾಕ್ಷ್ಯಾಧಾರಗಳಿವೆ.

ಅಲ್ಲಮ ಪ್ರಭು ಮತ್ತು ಅಕ್ಕ ಮಹಾದೇವಿಯವರು ಬಸವಣ್ಣನವರ ಸಮಕಾಲೀನರು. ಜನರು ಪ್ರೀತಿ ಮತ್ತು ಗೌರವದಿಂದ ಬಸವಣ್ಣನವರನ್ನು 'ಅಣ್ಣ' ಎಂದು ಕರೆದರೆ, ಮಹಾದೇವಿಯನ್ನು 'ಅಕ್ಕ' ಎಂದು ಮತ್ತು ಅಲ್ಲಮನನ್ನು 'ಪ್ರಭು' ಎಂದು ಕರೆಯುತ್ತಿದ್ದರು. ಬಸವ ಮತ್ತು ಮಹಾದೇವಿಗಿಂತ ವಯಸ್ಸಿನಲ್ಲಿ ಹಿರಿಯರಾದ ಅಲ್ಲಮರು ಅವರಿಬ್ಬರಿಗೂ 'ಅನುಭವ ಮಂಟಪ' ದಲ್ಲಿ ಮಾರ್ಗದರ್ಶಕರಾಗಿದ್ದರು.

ವಚನಸಾಹಿತ್ಯದ ಮಹಿಳೆಯರಲ್ಲಿ ಅಕ್ಕಮಹಾದೇವಿಯು ನಿಸ್ಸಂದೇಹವಾಗಿ ಅಗ್ರಗಣ್ಯೆ. ಸುಮಾರು ೩೫೦ ವಚನಗಳು ಅವಳ ಹೆಸರಲ್ಲಿವೆ. ಒಬ್ಬ ಅಪರಿಚಿತ ಗುರುವಿನಿಂದ ಅವಳಿಗೆ ಶಿವನ ಸಾಕ್ಷಾತ್ಕಾರವಾಗಿ ಅದು ತನ್ನ ಪುನರ್ಜನ್ಮವೆಂದು ಭಾವಿಸುತ್ತಾಳೆ. ಶಿವನನ್ನು ತನ್ನ ಆರಾಧ್ಯದೈವವೆಂದು ಬಗೆದು ಇತರ ಜಗತ್ತನ್ನು ನಿರ್ಲಕ್ಷಿಸುತ್ತಾಳೆ. ಕೌಶಿಕನೆನ್ನುವ ಸ್ಥಳೀಯ ರಾಜ ಅವಳನ್ನು ಬಯಸಿ ಮದುವೆಯಾಗಲು ಅಪೇಕ್ಷಿಸುತ್ತಾನೆ. ಮಹಾದೇವಿ ಇಷ್ಟವಿಲ್ಲದಿದ್ದರೂ ಹಲವಾರು ಕಟ್ಟಾಣೆಗಳನ್ನು ಹಾಕಿ ಮದುವೆಗೆ ಸಮ್ಮತಿಸಿದಳೆಂದೂ ಹೇಳುತ್ತಾರೆ. ಆದರೆ ಅವಳು ರಾಜನನ್ನು ಮದುವೆಯಾಗಿ ಅವನೊಂದಿಗೆ ಇದ್ದಳೆನ್ನುವುದರಲ್ಲಿ ಹಲವಾರು ಸಂದೇಹಗಳಿವೆ. ಅವಳಿಗೆ ವಿಷಯ ಲೋಲುಪತೆಗಳಲ್ಲಿ ಸ್ವಲ್ಪವೂ ಆಸಕ್ತಿ ಬಾರದೆ ಕೊನೆಗೆ ಅವನನ್ನು ಮಾತ್ರವಲ್ಲ, ಎಲ್ಲ

ಸಂಬಂಧಗಳನ್ನು, ಊರಿನ, ಹೆತ್ತವರ, ಬಂಧುಗಳನ್ನು ತೊರೆಯುತ್ತಾಳೆ. ಅಷ್ಟು ಮಾತ್ರವಲ್ಲದೆ ಅವಳ ದೇಹದ ಮೇಲಿನ ಎಲ್ಲ ವೇಷಾಲಂಕಾರಗಳನ್ನು ತ್ಯಜಿಸಿ ಸಂಪೂರ್ಣ ನಗ್ನಳಾಗಿ ತನ್ನ ನೀಳ ಕೇಶರಾಶಿಯಿಂದ ದೇಹವನ್ನು ಮರೆಮಾಚಿಕೊಂಡು ಶಿವನಿಗಾಗಿ ಅಲೆಯುತ್ತಾ ಅನುಭವಮಂಟಪಕ್ಕೆ ಬರುತ್ತಾಳೆ. ಅಲ್ಲಿ ಅವಳಿಗೆ ಬಸವ ಮತ್ತು ಪ್ರಭುವಿನ ದರ್ಶನವಾಗುತ್ತದೆ. ಅಲ್ಲಮನ ತೀಕ್ಷ್ಣ ಪ್ರಶ್ನೆಗಳಿಗೆ ಗುರಿಯಾಗುತ್ತಾಳೆ. ಅವಳ ಮತ್ತು ಅವಳ ಗಂಡನ ಪರಿಚಯವನ್ನು ಕೇಳಿದಾಗ, ಮಹಾದೇವಿ ತಾನು ಚನ್ನಮಲ್ಲಿಕಾರ್ಜುನನ ಆಜೀವ ಸಂಗಾತಿಯೆನ್ನುತ್ತಾಳೆ. ಅಲ್ಲಮನು ಆಗ ಕೇವಲ ವಸ್ತ್ರವನ್ನು ತ್ಯಜಿಸಿದ್ದೀಯ ಆದರೆ ನಿನ್ನ ನಗ್ನತೆಯನ್ನು ಕೇಶದಿಂದ ಮುಚ್ಚಿಕೊಂಡಿದ್ದೀಯೆಂದು ಜರಿಯುತ್ತಾನೆ. ಆಗ ಮಹಾದೇವಿಯು 'ಹಣ್ಣು ಪೂರ್ಣವಾಗಿ ಅಳಿಯುವವರೆಗೆ ಅದು ಬೀಳುವುದಿಲ್ಲ' ವೆಂದು ಹೇಳುತ್ತಾ ಅಲ್ಲಮನನ್ನು ಮತ್ತೆ ಕೆಣಕದಿರಲು ಪ್ರಾರ್ಥಿಸುತ್ತಾಳೆ. ನಂತರ ಅವಳನ್ನು ಶರಣರ ಗುಂಪಿಗೆ ಸೇರಿಸಿಕೊಳ್ಳಲಾಗುತ್ತದೆ.

ಅಕ್ಕ ಮಹಾದೇವಿಯು ಅನುಭವ ಮಂಟಪದಲ್ಲಿ ಕೆಲ ಕಾಲ ತಂಗಿದ್ದು ಶಿವನನ್ನು ಕಾಣದೆ ಮತ್ತು ಅಲೆಯುತ್ತಾ ಶ್ರೀಶೈಲವನ್ನು ತಲುಪಿ ಅಲ್ಲೇ ಶಿವಸನ್ನಿಧಿಯಲ್ಲಿರುತ್ತಾಳೆ.

ರಾಮಾನುಜನ್ ಶಿವಶರಣೆಯರನ್ನು ಕುರಿತು ಹೇಳುತ್ತಾರೆ, "ಸ್ತ್ರೀಯರು ತಮ್ಮ ವಿಷಯಕಾಮನೆಗಳನ್ನು ಮಾತ್ರವಲ್ಲದೆ ಅವರ ಬಂಧು-ಬಳಗ, ಗಂಡ, ಕಾಮುಕರು ಇತ್ಯಾದಿಗಳ ವಿರುದ್ಧ ಹೋರಾಡಬೇಕಿತ್ತು. ಮಾತ್ರವಲ್ಲ ಶಿವಶರಣೆಯಾಗಲೂ ಸಹ ಅವರು ಹೋರಾಡಬೇಕಿತ್ತು. ಸ್ತ್ರೀಯರಿಗೆ ಯಾವುದೂ ಸುಲಭವಾಗಿರಲಿಲ್ಲ. ಸ್ತ್ರೀಯರಿಗೆ ಶಿವಶರಣೆಯಾಗುವುದಷ್ಟೇ ಗುರಿಯಾಗಿರಲಿಲ್ಲ. ಶಿವನನ್ನು ತಮ್ಮ ಇಷ್ಟದೈವವಾಗಿಯೂ ಮತ್ತು ಪತಿಯಾಗಿಯೂ ಪಡೆಯುವ ಸ್ವಾತಂತ್ರ್ಯದ ಹಂಬಲವಿತ್ತು.

ವಚನಸಾಹಿತ್ಯದಲ್ಲಿ ಅತಿ ದೊಡ್ಡವರೆಂದು ಹೆಸರುಮಾಡಿದವರು ಅಲ್ಲಮಪ್ರಭು. ಉಳಿದೆಲ್ಲ ವಚನಸಾಹಿತಿಗಳು ಅವನನ್ನು 'ಗುರು' ಎಂದೇ ಭಾವಿಸುತ್ತಾರೆ. ರಾಮಾನುಜನ್ ಹೇಳುತ್ತಾರೆ- "ಅಲ್ಲಮರು ತತ್ವಶಃ ಬಹಿರಂಗ ಧಾರ್ಮಿಕ ಪೂಜಾ ಪ್ರಕ್ರಿಯೆಗಳನ್ನು ಸಾರಾಸಗಟಾಗಿ ತಿರಸ್ಕರಿಸಿದರು". ಅಲ್ಲಮರು ಇತರ ಶರಣರ ಜೊತೆಗೆ ಚರ್ಚಿಸುವಾಗ ಅವರನ್ನು ವಿವಿಧ ರೀತಿಯಲ್ಲಿ ಪರೀಕ್ಷೆಗೆ ಒಳಪಡಿಸುತ್ತ ಅವರ ಅನುಮಾನಗಳನ್ನು ಬಗೆಹರಿಸುತ್ತಾರೆ .... ವಾದ, ಪ್ರತಿವಾದ, ಖಂಡನೆ, ಹಾಸ್ಯ, ಕವನ, ಪ್ರೀತಿ, ವಾತ್ಸಲ್ಯ, ಇತ್ಯಾದಿಗಳಿಂದ ಅಲ್ಲಮರು ಸಾಧಾರಣ ಜನರಿಗೆ ಜ್ಞಾನೋದಯವನ್ನುಂಟು ಮಾಡಿದರೆ ಶರಣರಿಗೆ ಮಾರ್ಗದರ್ಶನ ಮಾಡಿದರು.

ಸುಮಾರು ೧೬೦೦ ವಚನಗಳನ್ನು ಅಲ್ಲಮಪ್ರಭು ರಚಿಸಿದ್ದರೆಂದು ಒಂದು ಅಂದಾಜು. ಅವರ ಬಾಲ್ಯ, ಬೆಳವಣಿಗೆ, ಭಾವೋದ್ರೇಕಗಳು ಮತ್ತು ಆಂತರಿಕ ಘರ್ಷಣೆಗಳ ಬಗ್ಗೆ ಹೆಚ್ಚಿನ ಮಾಹಿತಿಯಿಲ್ಲ.

ಅವರು ಅನುಭವ ಮಂಟಪದಲ್ಲಿ ಕನ್ನಡದಲ್ಲಿ ಮಾಡಿದ ಚರ್ಚೆಗಳ ದಾಖಲೆಗಳೇ ಈ ವಚನಗಳು ಎಂದು ಭಾವಿಸಲಾಗಿದೆ.

ಒಟ್ಟಾರೆ ನಮಗೆ ಈ ವಚನಕಾರರಿಂದ ಸಿಗುವ ಚಿತ್ರಣ – ಜೀವನದ ಕಾಮನೆ ಮತ್ತು ಆಮಿಷಗಳಿಗೆ ಮೀರಿದ ಒಂದು ಪರಿಪೂರ್ಣತೆಯ ಅನ್ವೇಷನೆ ಮತ್ತು ಸಾಧಾರಣ ಜೀವನಮಟ್ಟದಿಂದ ಮೇಲೇರುತ್ತಾ ಜೀವನದ ಅರ್ಥವನ್ನು ಹುಡುಕುವುದು. ಎಲ್ಲ ಮನುಷ್ಯರಿಗೂ ಜೀವನದ ಪ್ರಯಾಣದಲ್ಲಿ ಈ ಅನುಭವ ಆಗುತ್ತದೆ. ಆದರೆ ಕೆಲವರಿಗೆ ಮಾತ್ರ ಇದು ಸಂಪೂರ್ಣ.

*

ನಾವು ವಚನಕಾರರ ಅಂದಿನ ಸಮಾಜದ ಬಗ್ಗೆ, ಅವರ ಕಾಲದ ಬಗ್ಗೆ ಮತ್ತು ಅವರ ಜೀವನದ ಬಗ್ಗೆ ತಿಳಿದುಕೊಳ್ಳುವುದು ಹೇಗೆ? ವಚನಕಾರರ ಮತ್ತು ಶಿವಶರಣರನ್ನು ಕುರಿತು ಚರಿತ್ರಕಾರರು ಮತ್ತು ವಿದ್ವಾಂಸರು ಎರಡು ರೀತಿಯ ವಿಚಾರಧಾರೆಯನ್ನು ನಮ್ಮ ಮುಂದಿಡುತ್ತಾರೆ.

ಮೊದಲನೆಯದು ಆ ಕಾಲದ ಸ್ಥಿತಿಗತಿ ಮತ್ತು ಧಾರ್ಮಿಕ ರೀತಿರಿವಾಜುಗಳನ್ನು ಪ್ರತಿಭಟಿಸುವುದಾಗಿತ್ತು. ಈ ಪ್ರತಿಭಟನೆ ಕ್ರೈಸ್ತ ಧರ್ಮದಲ್ಲಾದ 'ಪ್ರೊಟೆಸ್ಟಂಟ್ ಮೂವ್-ಮೆಂಟ್' ನಂತಿತ್ತು ಎಂದು ಚರಿತ್ರಕಾರರು ಅಭಿಪ್ರಾಯಪಡುತ್ತಾರೆ.

ಈ ವಿಚಾರಧಾರೆಯ ಪ್ರಕಾರ, ೧೨ನೆಯ ಶತಮಾನ – ದೇವಸ್ಥಾನಗಳ ಕಾಲ. ದೇವಾಲಯಗಳು ಸಾರ್ವಭೌಮತೆ ಮತ್ತು ಶೋಷಣೆಯ ಕೇಂದ್ರಗಳಾಗಿದ್ದವು. ಅಲ್ಲಿ ಎಲ್ಲವೂ ಇತ್ತು. ಪುರೋಹಿತರಿಂದ ದೇವದಾಸಿಯರವರೆಗೆ ಮತ್ತು ಹಣ ತೆಗೆದುಕೊಳ್ಳುವುದು ಮತ್ತು ಕಡ ಕೊಡುವುದರವರೆಗೆ. ಶೋಷಿತರ ಮತ್ತು ಮೌಢ್ಯಜನರ ನಂಬಿಕೆಗಳಿಂದ ಹಿಡಿದು ದೇವಾಲಯಗಳಿಗೆ ಎಲ್ಲವನ್ನೂ ನಿಯಂತ್ರಿಸುವ ಶಕ್ತಿ ಇತ್ತು. ಶ್ರೀಮಂತರು ದೇವಾಲಯಗಳನ್ನು ಕಟ್ಟಿಸುತ್ತಿದ್ದರು. ಅವರಿಗೆ ಇದು ಅನ್ಯಾಯದಿಂದ ಸಂಗ್ರಹಿಸಿದ ಹಣವನ್ನು ಖರ್ಚು ಮಾಡುವ ಮತ್ತು ದೇವಾಲಯಗಳನ್ನು ನಿಯಂತ್ರಿಸುವ ಮಾರ್ಗವಾಗಿತ್ತು. ಬಡವರಿಗೆ ದೇವಸ್ಥಾನಗಳನ್ನು ಕಟ್ಟುವ ಮತ್ತು ಪೋಷಿಸುವ ಶಕ್ತಿ ಇರಲಿಲ್ಲ. ಇದೇ ಬಸವಣ್ಣನವರ ವಚನದ ಸ್ಫೂರ್ತಿ – "ನಾನೇನು ಮಾಡಲಿ ಬಡವನಯ್ಯ?"

ಆಗಿನ ಕಾಲದ ರಾಜರು ಮತ್ತು ಪುರೋಹಿತಶಾಹಿಗಳು ಸಮಾಜದ ವಿವಿಧ ಸ್ತರಗಳಲ್ಲಿ ನಿರ್ಮಿಸಿದ್ದ ಅಸಮತೆಯು ಈ ವೀರಶೈವ ಚಳುವಳಿಗೆ ಮೂಲ ಕಾರಣವಾಗಿರಬೇಕೆಂದು ಇತಿಹಾಸಕಾರರು ಅನುಮಾನಿಸುತ್ತಾರೆ. ಶಿವಶರಣರು ಭ್ರಷ್ಟ ಪುರೋಹಿತವರ್ಗ ಮತ್ತು ಕಲ್ಲಿನ ದೇವಸ್ಥಾನಗಳನ್ನು 'ಸ್ಥಾವರ'ಗಳೆಂದು ವಿರೋಧಿಸಿ

ಚೈತನ್ಯ ಮತ್ತು ಬದಲಾವಣೆಯ ಸಂಕೇತವಾಗಿ 'ಜಂಗಮ' ವೆನ್ನುವ ಪರಿಕಲ್ಪನೆಯನ್ನು ಕೊಡುತ್ತಾರೆ. ಈ ಜಂಗಮರು ನಡೆದಾಡುವ ಶರಣರು. ಅವರು ಶಿವ ರೂಪವಾದ ಆತ್ಮಲಿಂಗವನ್ನು ತಮ್ಮ ದೇಹದಲ್ಲಿ ಧರಿಸಿರುತ್ತಾರೆ ಮತ್ತು ಜನರಿಗೆ ಮಾರ್ಗದರ್ಶನ ಮಾಡುತ್ತಾರೆ. ಇವರ ಗುರಿ ಸಮಾಜದಲ್ಲಿ ನ್ಯಾಯ ಮತ್ತು ಸಮಾನತೆಯನ್ನು ಸ್ಥಾಪಿಸುವುದು. ಈ ಚಳುವಳಿಯ ಉದ್ದೇಶ ಉದಾತ್ತ ಆದರ್ಶಗಳಿಂದ ಆರಂಭವಾದರೂ ಕಾಲಾನಂತರದ ಬೆಳವಣಿಗೆಯು ಮತ್ತೆ ತನ್ನದೇ ಆದ ಸ್ತರಗಳನ್ನು ನಿರ್ಮಿಸಿಕೊಂಡು ಮತ್ತೆ ಅಸಮಾನತೆ ತಲೆಯೆತ್ತಿತು. ಹಾಗೆಂದ ಮಾತ್ರಕ್ಕೆ ಶಿವಶರಣರ ಮೂಲ ಉದ್ದೇಶದ ಆದರ್ಶಗಳನ್ನು ದೂಷಿಸಲಾಗುವುದಿಲ್ಲ.

ಶಿವ ಶರಣರು ಹಿಂದಿನ ತೋರಿಕೆಯ ದೊಡ್ಡ ದೇಗುಲಗಳು, ದುಬಾರಿ ಮತ್ತು ವಿಸ್ತಾರವಾದ ಧಾರ್ಮಿಕ ವಿಧಿಗಳ ಆಚರಣೆಗಳನ್ನು ಪ್ರಜ್ಞಾಪೂರ್ವಕವಾಗಿಯೇ ವಿರೋಧಿಸಿ ಆಗಿನ ಕಾಲದ ಅಲ್ಲಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಧಾನಗಳನ್ನು ಬದಲಾಯಿಸುವ ಪ್ರಯತ್ನ ಮಾಡುತ್ತಾರೆ. ಕುಶಲಕರ್ಮಿಗಳು, ವ್ಯಾಪಾರಿಗಳು ಮತ್ತು ಸೇವಕರನ್ನು "ಎಡಗೈ" ಎಂದೂ ಮತ್ತು ಕೃಷಿಕರನ್ನು "ಬಲಗೈ" ಎಂದು ವರ್ಗೀಕರಿಸಲಾಗಿತ್ತು. ಒಂದು ಕಥೆಯ ಪ್ರಕಾರ ಕೆಳ ಜಾತಿಯ ಗಂಡು, ಬ್ರಾಹ್ಮಣ ಕನ್ಯೆಯನ್ನು ವರಿಸಿದ್ದಕ್ಕಾಗಿ ರಾಜನು ಅವರ ಪೋಷಕರಿಗೆ ಮರಣದಂಡನೆಯನ್ನು ವಿಧಿಸುತ್ತಾನೆ. ಇದಕ್ಕಾಗಿ ವೀರಶೈವರು ದಂಗೆಯೆದ್ದು ರಾಜನನ್ನು ಕೊಲ್ಲುತ್ತಾರೆ.

ಶಿವಶರಣರ ಕಾಲಕ್ಕೆ ಮುಂಚೆ ಪಶ್ಚಿಮ ಕರಾವಳಿಯಲ್ಲಿ ಮುಸ್ಲಿಮರ ಸಂಖ್ಯೆ ವೃದ್ಧಿಸುತ್ತಾ ಅವರ ಧರ್ಮದ ಪ್ರಭಾವವು ಹರಡುತ್ತಿತ್ತು. ಜಾತಿಗಳಿಂದ ಅನಿರ್ಬಂಧಿತವಾದ ಆ ಮುಸ್ಲಿಂ ಸಾಮಾಜಿಕ ಪದ್ಧತಿ ಬಸವಣ್ಣನವರನ್ನು ಆಕರ್ಷಿಸಿತೆಂದು ಇತಿಹಾಸಜ್ಞೆ ವೆಂಡಿ ಡೋನಿಗರ್ ಅಭಿಪ್ರಾಯಪಡುತ್ತಾರೆ. ಮೂರ್ತಿಭಂಜನೆಯ ಇಸ್ಲಾಂ ಧರ್ಮ-ವನ್ನೆದುರಿಸಲು ದೇಹದಲ್ಲೇ ಧರಿಸುವ ಆತ್ಮಲಿಂಗ ಸೂಕ್ತವಾದುದೆಂದೆನಿಸಿರಬೇಕು. ಇನ್ನು ಭಾಷೆ, ಸಾಂಪ್ರದಾಯಿಕ ಸಂಸ್ಕೃತ ಭಾಷೆಗಿಂತ ಸ್ಥಳೀಯ ಜನರ ಭಾಷೆಗಳಾದ ಕನ್ನಡ ಮತ್ತು ತೆಲುಗುಗಳಿಗೆ ಒತ್ತು ಕೊಡುವುದು ಸಮಾನತೆಯ ದೃಷ್ಟಿಯಿಂದ ಸೂಕ್ತವೆನಿಸಿರಬೇಕು.

ಕನ್ನಡದ ಸಮಾಜಶಾಸ್ತ್ರಜ್ಞರಾದ ಹಿರೇಮಲ್ಲೂರ್ ಈಶ್ವರನ್ ಅವರು ವಚನಗಳ ಮೂರು ಮಹತ್ವವನ್ನು ಹೀಗೆ ವಿವರಿಸುತ್ತಾರೆ. ೧. ಸಮಾಜದ ಸುಧಾರಣೆ, ೨. ಸಾಮಾಜಿಕ ಪದ್ಧತಿಗಳಲ್ಲಿ ಮತ್ತು ತತ್ವಶಾಸ್ತ್ರದಲ್ಲಿ ಸಮಾನತೆ, ೩. ಆಧ್ಯಾತ್ಮಿಕತೆಯ ಅಭಿವೃದ್ಧಿ.

ಅವುಗಳಲ್ಲೂ ಬಹಳ ಮುಖ್ಯವಾದದ್ದು ಸಮಾಜ ಸುಧಾರಣೆ ಅಥವಾ ಬದಲಾವಣೆ. ಶರಣರ ಮುಖ್ಯ ಗುರಿ ಸಮಾಜದ ಅಸಮಾನತೆಯನ್ನು ತೊಲಗಿಸುವುದು.

ಬಸವಣ್ಣನವರು ಕಾಲವಾಗಿ ಸುಮಾರು ೨೦೦ ವರ್ಷಗಳ ನಂತರ ಬಂದ ಬಸವಪುರಾಣದಲ್ಲಿ ಹೇಗೆ ಸಾಂಪ್ರದಾಯಿಕ ಧರ್ಮವನ್ನು ಆಕ್ರಮಣಕಾರಿಯಾಗಿ ತಿರಸ್ಕರಿಸಲಾಯಿತೆಂದು ತಿಳಿಸಲಾಗಿದೆ. ಹಲವಾರು ಹಿಂಸಾತ್ಮಕ ಕೃತ್ಯಗಳನ್ನು ಸಚಿತ್ರವಾಗಿ ಚಿತ್ರಿಸಲಾಗಿದೆ. ತನ್ನ ಹಿಂಬಾಲಕರಿಂದಲೇ ಆಗುತ್ತಿರುವ ಹಿಂಸಾಚಾರವನ್ನು ಸಹಿಸದ ಬಸವಣ್ಣನವರು ಮನನೊಂದು ದೂರ ಸರಿದರೆಂದು ಹೇಳಲಾಗಿದೆ.

ಈ ವಾದವನ್ನು ಸಮರ್ಥಿಸುತ್ತಾ ರಾಮಾನುಜನ್ ಹೇಳುತ್ತಾರೆ. ಭಾರತೀಯ ನಾಗರಿಕತೆಯಲ್ಲಿ ಎರಡು ದಾರಿಗಳನ್ನು ನೋಡಬಹುದು. ಒಂದು 'ಮಾರ್ಗ' ಹಾಗೂ ಇನ್ನೊಂದು 'ದೇಸಿ'. ಮಾರ್ಗದ ಭಾಷೆ ಸಂಸ್ಕೃತವಾದರೆ ದೇಸಿಯ ಭಾಷೆ ಸ್ಥಳೀಯ ಭಾಷೆಗಳು. ಎರಡನ್ನು ಕುರಿತು ಹತ್ತು ಹಲವು ಕಥೆಗಳು, ದಂತಕಥೆಗಳು ಬೇಕಾದಷ್ಟಿವೆ. ಈ ಎರಡೂ ದಾರಿಗಳಿಗೆ ತಮ್ಮದೇ ಆದ ಗಂಡು-ಹೆಣ್ಣು ದೇವರುಗಳು ಮತ್ತು ಅದರ ವಿವಿಧ ರೂಪಗಳು – ಮರ, ನದಿ, ಕಲ್ಲುಗಳು, ಇತ್ಯಾದಿಗಳಲ್ಲಿ ಇವೆ. ವಚನ ಚಳುವಳಿಯ ದಾರಿ ಇವೆರಡೂ ಅಲ್ಲದ ಮೂರನೆಯ ದಾರಿ. ವಚನಗಳು ವೇದಗಳನ್ನು ತಿರಸ್ಕರಿಸುವುದಷ್ಟೇ ಅಲ್ಲ, ಸ್ಥಳೀಯ ದೇವರುಗಳನ್ನೂ ಸಹ ಅವರು ಒಪ್ಪಲಿಲ್ಲ. ಶಿವ ಶರಣರ ಪ್ರಕಾರ ಜಾತಿ, ಧರ್ಮವೆನ್ನುವುದು ಹುಟ್ಟಿನಿಂದ ಬರುವುದಲ್ಲ. ಆದರೆ ಅವನು ಇಷ್ಟಪಟ್ಟ ತತ್ವಗಳಿಗೆ ಬದ್ಧನಾಗಿ ಬಾಳುವ ಅರ್ಹತೆ ಇದ್ದಲ್ಲಿ ಅದನ್ನು ಆಯ್ದುಕೊಳ್ಳುವ ಅಧಿಕಾರ ಇದೆ. ಅಂದರೆ ಮನುಷ್ಯನಿಗೆ ತಾನು ಇಷ್ಟಪಡುವ ನಂಬಿಕೆಗಳನ್ನು ಆಯ್ದುಕೊಳ್ಳಬಹುದು. ತನ್ನ ಹುಟ್ಟಿನಿಂದ ನಿರ್ಬಂಧಿತನಾಗಬೇಕಿಲ್ಲ. "ಶಾಸ್ತ್ರೀಯ ಹಿಂದೂ ಧರ್ಮದಂತಲ್ಲದೆ, ಭಕ್ತಿಯ ಧರ್ಮದಲ್ಲಿ ಮತಾಂತರ ಸಾಧ್ಯ."

ಶರಣರ ಪ್ರಕಾರ ಸಾಂಪ್ರದಾಯಿಕ ಪೂಜಾ ವಿಧಾನಗಳಾದ ಆಚರಣೆಗಳು, ತೀರ್ಥಯಾತ್ರೆ, ದೇವಸ್ಥಾನದಲ್ಲಿ ದೇವರಿಗೆ, ಪೂಜಾರಿಗಳಿಗೆ ವಿವಿಧ ಅರ್ಪಣೆಗಳು, ಇತ್ಯಾದಿಗಳು ಮೋಕ್ಷವನ್ನು ಖರೀದಿಸಲು ಇರುವ ಸುಲಭ ದಾರಿ. ಮಾರ್ಗ ಮತ್ತು ದೇಸಿ ವಿಧಾನಗಳ ಈ ಆಚರಣೆಗಳನ್ನು ಶರಣರು ತಿರಸ್ಕರಿಸುತ್ತಾರೆ. ಅವರ ಪ್ರಕಾರ ಎಲ್ಲ ಒಳ್ಳೆಯ ಅನುಭವಗಳು ಶಿವನ ಕೃಪೆ. ಅದನ್ನು ಆಚರಣೆ, ಪ್ರಾರ್ಥನೆ, ಮಂತ್ರ ಅಥವಾ ವಸ್ತುಗಳ ತ್ಯಾಗ, ದಾನಗಳಿಂದ ಖರೀದಿಸಲು ಸಾಧ್ಯವಿಲ್ಲ. ಪ್ರಾಮಾಣಿಕವಾಗಿ ಬಯಸಿದರೆ ಮತ್ತು ಶಿವನ ಕೃಪೆಯಿದ್ದರೆ ಮೋಕ್ಷ ಸಿಗುತ್ತದೆ.

ಹೀಗೆ ಶಿವಶರಣರ ವಚನಕಾಲವು ಸನಾತನಧರ್ಮದ ನ್ಯೂನತೆಗಳನ್ನು ಯಶಸ್ವಿಯಾಗಿ ಪ್ರತಿಭಟಿಸಿತೆನ್ನಬಹುದು. ವಚನಗಳು ನಮ್ಮ ಸಾಹಿತ್ಯದ ಬೌದ್ಧಿಕತೆಯ ಸಂಕೇತ.

ಈ ವಿಚಾರಧಾರೆಯನ್ನು ಕುರಿತು ಇರುವ ದೊಡ್ಡ ಟೀಕೆ, ಬ್ರಾಹ್ಮಣಿಕೆಯ ಮತ್ತು ವೀರಶೈವ ಮತದ ರೂಢಿಗತ ಲಕ್ಷಣಗಳನ್ನು ಊಹಿಸಿ ತೀರ್ಮಾನಿಸುವುದು. ಎರಡೂ

ಕೂಡ ಬಹಳ ಸಂಕೀರ್ಣವಾದದ್ದು. ಹಾಗಾಗಿ ಇವುಗಳು ಏಕತಾನತೆಯ ಮಾದರಿಗಳಾಗಿ-ಬಿಡುತ್ತವೆ. ಅವೆರಡರ ವ್ಯತ್ಯಾಸಗಳನ್ನು ಈ ರೀತಿ ಹುಡುಕುವುದು ಸರಿಯಲ್ಲ.

ವಚನಗಳನ್ನು ಸಾಧಾರಣೀಕರಿಸಿ ಅವುಗಳು ಕೇವಲ ಸನಾತನ ಧರ್ಮದ ಪ್ರತಿಭಟನೆಯ ಸಂಕೇತವೆಂದು ಹೇಳುವುದು ಸರಿಯಲ್ಲ. ಮೊದಲನೆಯದಾಗಿ ಸುಮಾರು ೩೦೦ ವರ್ಷಗಳ ಕಾಲಾವಧಿಯಲ್ಲಿ ಸುಮಾರು ೩೦೦ ವಚನಕಾರರ ೨೧೦೦೦ಕ್ಕೂ ಮೀರಿದ ವಚನಗಳನ್ನೆಲ್ಲ ಸಾರ್ವತ್ರೀಕರಿಸಿ ತೀರ್ಮಾನಮಾಡುವುದು ಸೂಕ್ತವಲ್ಲ. ಪ್ರತಿಯೊಬ್ಬ ವಚನಕಾರರ ವಚನಗಳನ್ನು ಅಭ್ಯಾಸ ಮಾಡಿ ತೀರ್ಮಾನಿಸಬೇಕು. ಅಲ್ಲಲ್ಲಿ ಕೆಲ ನಿರ್ದಿಷ್ಟ ಮಾದರಿಗಳು ಗೋಚರಿಸಿದರೂ ಅದು ಆ ವಚನಕಾರನ ವೈಯಕ್ತಿಕ ಅನುಭವವಾಗಿರಬೇಕೇ ಹೊರತು ಅದು ಒಟ್ಟಾರೆ ವೀರಶೈವ ಚಳುವಳಿಯ ಸಮಾಜ ಸುಧಾರಣೆಯ ಅಂಶವೆಂದು ಭಾವಿಸಬಾರದು.

ನನ್ನ ಸೀಮಿತ ಓದಿನ ಸಂಶೋಧನೆಯ ಪ್ರಕಾರ ಎಸ್. ಎನ್. ಬಾಲಗಂಗಾಧರ ಮತ್ತು ಡಂಕಿನ್ ಝಳಕಿಯವರು ವಚನ ಸಾಹಿತ್ಯದ ವಿದ್ವಾಂಸರು. ಝಳಕಿಯವರು ಹೇಳುತ್ತಾರೆ–ವಚನಗಳೆಲ್ಲ ಸಾಂಪ್ರದಾಯಿಕ ಜಾತಿಪದ್ಧತಿಯನ್ನು ವಿರೋಧಿಸುವುದೆಂದರೆ ಬಹುತೇಕ ವಚನಗಳು ಜಾತಿಗಳನ್ನು ಕುರಿತು ಎಂದು ಭಾವಿಸಬೇಕಾಗುತ್ತದೆ. ಆದರೆ ಎಲ್ಲ ವಚನಗಳನ್ನು ವಿಶ್ಲೇಷಣೆ ಮಾಡಿದಾಗ ನಮಗೆ ಗೋಚರವಾದದ್ದು:

**ಕರ್ನಾಟಕ ಸರ್ಕಾರದಿಂದ ಇದುವರೆಗೆ ಆಗಿರುವ ವಚನ ಸಂಗ್ರಹ – ೨೧,೭೮೮**
**ಬ್ರಾಹ್ಮಣರನ್ನು ಕುರಿತಾದ ವಚನಗಳು – ೧೯೫**
**ಜಾತಿ, ಕುಲ, ಇತ್ಯಾದಿಗಳನ್ನು ಕುರಿತಾದ ವಚನಗಳು – ೪೫೮**

ಇಷ್ಟು ಸಣ್ಣ ಪ್ರಮಾಣದ (೦.೮೯% ಮತ್ತು ೨.೧%) ವಚನಗಳನ್ನು ಆಧಾರವಾಗಿಟ್ಟುಕೊಂಡು ವಚನಗಳು ಬ್ರಾಹ್ಮಣರನ್ನು ಮತ್ತು ಜಾತಿ, ಕುಲಗಳನ್ನು ಕುರಿತಾದದ್ದು ಎಂದು ಸಾಧಾರಣೀಕರಿಸುವುದು ಸಾಧುವಲ್ಲ.

ಜಾತಿ ಪದ್ಧತಿ ಕುರಿತಂತೆ ಯಾವೊಬ್ಬ ವಚನಕಾರನ ಅಭಿಪ್ರಾಯ ಅಷ್ಟೊಂದು ಸ್ಥಿರವಾಗಿಲ್ಲ. ರಹಮತ್ ತರೀಕೆರೆಯವರ ಪ್ರಕಾರ "ಬಸವಣ್ಣನವರು ತಮ್ಮ ಕಲ್ಪನೆಗಳನ್ನು ವೈಜ್ಞಾನಿಕವಾಗಿ ಅಥವಾ ತಾರ್ಕಿಕವಾಗಿ ಪ್ರತಿಪಾದಿಸಿಲ್ಲ. ಹಾಗಾಗಿ ಅವರ ವಚನಗಳಲ್ಲಿ ಸ್ಥಿರತೆ ಇಲ್ಲ. ನಾವು ಕಾರ್ಲ್‌ಮಾರ್ಕ್ಸ್‌ರ ತತ್ವದಲ್ಲಿ ಅಥವಾ ವಿಜ್ಞಾನಿಯ ಪ್ರಬಂಧದಲ್ಲಿ ನೋಡುವ ಸ್ಥಿರತೆ ಅವರ ವಚನದಲ್ಲಿ ಕಾಣಸಿಗುವುದಿಲ್ಲ. ಅಲ್ಲಿ ಕಾಣುವುದು ಒಬ್ಬ ಕವಿ ಮತ್ತು ಕ್ರಾಂತಿಕಾರಿಯ ವಿವಿಧ ಮತ್ತು ವಿರೋಧಾಭಾಸಗಳಿಂದ ಕೂಡಿದ ಅಸ್ಪಷ್ಟ ಧ್ವನಿ ಚಿತ್ರಣ."

ಈ ವಿಚಾರಧಾರೆಯ ಮತ್ತೊಂದು ನಿಲುವು ಏನೆಂದರೆ ಜಾತಿಪದ್ಧತಿಯ ವಿರೋಧಿ ಭಾವನೆ ವಚನಕಾರರ ಕಾಲದಲ್ಲಿ ಹೊಸದೇನೂ ಆಗಿರಲಿಲ್ಲ. ಬೌದ್ಧರು ಮತ್ತು ಜೈನರು

ಹಲವು ಶತಮಾನಗಳಿಗೂ ಮೊದಲೇ ಅದನ್ನು ವ್ಯಕ್ತಪಡಿಸಿದ್ದರು. ದಕ್ಷಿಣ ಭಾರತದ ಇತರ ಭಾಷಾಸಾಹಿತ್ಯದಲ್ಲಿ ಅದರಲ್ಲೂ ತಮಿಳಿನಲ್ಲಿ ಜಾತಿಪದ್ಧತಿ ವಿರುದ್ಧ ಸಾಹಿತ್ಯವು ಆಗಾಗಲೇ ಇದ್ದುದನ್ನು ಗಮನಿಸಬಹುದು. ಆದ್ದರಿಂದ ಇದೇನೂ ಒಂದು ಹೊಸ ಪ್ರತಿಭಟನೆ ಆಗಿರಲಿಲ್ಲ. ಹಳೆಯ ವಿರೋಧಿ ಸಂಪ್ರದಾಯವನ್ನು ಮುಂದುವರಿಸಿತು ಅಷ್ಟೆ

ಹಾಗಾಗಿ ಇಲ್ಲಿರುವ ವಾದ ವಚನಗಳು ಜಾತಿಪದ್ಧತಿಯನ್ನು ಪ್ರತಿಭಟಿಸಿದವು ಎನ್ನುವ ಚಾಲ್ತಿಯಲ್ಲಿರುವ ಭಾವನೆ ಕೇವಲ ಕೆಲವು ಆಯ್ದ ವಚನಗಳಿಂದ ಬಂದಿರಬಹುದು.

ವಿಶ್ವಾಸಾರ್ಹ ಐತಿಹಾಸಿಕ ದಾಖಲೆಗಳ ಮೂಲಕ ನೋಡಿದಲ್ಲಿ ಮೊದಲಿನ ವಚನಕಾರರ ಅಭಿಪ್ರಾಯಗಳು ಪ್ರಾಮುಖ್ಯತೆಯನ್ನು ಪಡೆಯುತ್ತವೆ. ಆದ್ದರಿಂದ ಅವರ ವಚನಗಳನ್ನು ಮೊದಲು ಸರಿಯಾಗಿ ಅರ್ಥಮಾಡಿಕೊಳ್ಳುವುದು.

ವಿದ್ವಾಂಸರ ಅಭಿಪ್ರಾಯದಂತೆ ವಚನ ಭಕ್ತಿ ಸಾಹಿತ್ಯದಲ್ಲಿ ಬರುವ ಅಸ್ಪಷ್ಟತೆ ಮತ್ತು ವೈರುಧ್ಯಗಳಿಗೆ ಕಾರಣ ವಚನಗಳನ್ನು ಕ್ರೈಸ್ತ ಧರ್ಮದ ಮತ್ತು ಪೂರ್ವ ದೇಶಗಳ ಚಿಂತನೆಗಳ ಚೌಕಟ್ಟಿನಲ್ಲಿ ('ಓರಿಯಂಟಲಿಸ್ಮ್') ನೋಡುವುದರಿಂದ. ಎಡ್ವರ್ಡ್ ಸಯದ್ 'ಓರಿಯಂಟಲಿಸ್ಮ್' ಎನ್ನುವ ಪದದ ವ್ಯಾಖ್ಯಾನವನ್ನು ಹೀಗೆ ಮಾಡುತ್ತಾನೆ. "೧೮ ಮತ್ತು ೧೯ನೆಯ ಶತಮಾನಗಳ ಯೂರೋಪಿನ ಸಾಮ್ರಾಜ್ಯಶಾಹಿಯ ಸಾಂಸ್ಕೃತಿಕ ನಿಲುವುಗಳಿಂದ ಪ್ರೇರಿತವಾದ ಶೈಕ್ಷಣಿಕ ಮತ್ತು ಕಲಾತ್ಮಕ – ವ್ಯಾಪಕವಾದ ಪಶ್ಚಿಮ ಸಂಪ್ರದಾಯವು ಪೂರ್ವ ದೇಶಗಳನ್ನು ನೋಡುವ ಮತ್ತು ಅಭ್ಯಾಸ ಮಾಡುವ ರೀತಿಯು ಪೂರ್ವಕಲ್ಪಿತ ಹೊರಗಿನವನ ಪಕ್ಷಪಾತದ ವ್ಯಾಖ್ಯಾನವಾಗಿರುತ್ತದೆ".

ಹಾಗಾದರೆ ನಾವು ಈ ವಚನಗಳನ್ನು ಹೇಗೆ ನೋಡಬೇಕು? ಬ್ರಾಹ್ಮಣ–ವಿರೋಧ ಮತ್ತು ಜಾತೀಯತೆ–ವಿರೋಧ ಭಾವಗಳು ಇದರ ಕೇಂದ್ರೀಕೃತ ಗಮನವಲ್ಲದಿದ್ದಲ್ಲಿ ಯಾವ ಒಂದು ಏಕೀಕೃತ ಭಾವನೆ ಇವುಗಳಲ್ಲಿದೆ ಎನ್ನುವ ಪ್ರಶ್ನೆ ಉದ್ಭವಿಸುತ್ತದೆ. ಇದನ್ನು ಉತ್ತರಿಸಲು ಇನ್ನೊಂದು ಪರ್ಯಾಯ ವಿಚಾರಧಾರೆಯನ್ನು ಪ್ರಸ್ತಾಪಿಸ ಬೇಕಾಗುತ್ತದೆ. ಅದರ ಪ್ರಕಾರ – ವಚನಗಳು ಜಾತಿಗಳನ್ನು ಕುರಿತು ಹೊಸದೇನನ್ನೂ ಹೇಳುವುದಿಲ್ಲ. ಜಾತಿಯ ಪ್ರಸ್ತಾವನೆ ಕೇವಲ ಸೀಮಿತ ಪರಿಸರಕ್ಕೆ ಸಂಬಂಧಪಟ್ಟಿದುದು ಮತ್ತು ಆಧ್ಯಾತ್ಮಿಕತೆಯ ಪ್ರಯಾಣದಲ್ಲಿ ಇದೊಂದು ಆರಂಭದಲ್ಲಿ ಬರುವ ಒಂದು ಸಣ್ಣ ಮೈಲಿಗಲ್ಲು ಅಥವಾ ಘಟ್ಟ ಅಷ್ಟೆ.

ಭಕ್ತನೊಬ್ಬನು ತನ್ನ ಆಧ್ಯಾತ್ಮಿಕತೆಯ ಪ್ರಯಾಣದಲ್ಲಿ ಜ್ಞಾನೋದಯ ಅಥವಾ ಅನುಭಾವವನ್ನು ಹೊಂದಲು ಸಾಧಾರಣ ಮನುಷ್ಯರಿಗಿಂತ ನಾನಾ ರೀತಿಯ ಸಾಮಾಜಿಕ ತೊಡಕುಗಳನ್ನು ಎದುರಿಸಬೇಕಾಗುತ್ತದೆ. ಅವುಗಳಲ್ಲಿ ಸಣ್ಣದಾದರೂ ಎದುರಿಸಲೇಬೇಕಾದ ತೊಡಕು ಸಮಾಜದಲ್ಲಿರುವ ಜಾತೀಯತೆಯದು. ಇದನ್ನು ಸಾಧಾರಣವಾಗಿ ಆರಂಭದ ಘಟ್ಟವೆಂದು ಭಾವಿಸಬಹುದು. ಈ ಆಧ್ಯಾತ್ಮಿಕ ಪ್ರಯಾಣವನ್ನು ಷಟ್–ಸ್ಥಳವೆಂದು

ಆರು ಹಂತಗಳಾಗಿ ವಿಂಗಡಿಸಲಾಗಿದೆ. ಇದರ ಒಂದೊಂದು ಸ್ಥಳವೂ ಸಹ ಅದರ ಮುಂದಿನ ಹಂತಕ್ಕೆ ತಯಾರಾಗಲು ತೊಡಗಬೇಕಾದ ಸ್ಥಳವೆಂದು ಭಾವಿಸಬಹುದು.

ನಾನು ಈ ಎರಡು ವಿರೋಧಿ ಭಾವಗಳ ಮೂಲಭೂತ ವಾದವನ್ನು ಈ ಕಿರು ಲೇಖನದಲ್ಲಿ ಹಂಚಿಕೊಳ್ಳಲು ಪ್ರಯತ್ನಿಸಿದ್ದೇನೆ.

ಕೊನೆಯದಾಗಿ, ಈ ಎರಡೂ ವಿಚಾರಧಾರೆಗಳಲ್ಲಿ ಸಮಾನಾತ್ಮಕವಾದ ಅಂಶಗಳು ಬೇಕಾದಷ್ಟಿವೆ. ಮೊದಲನೆಯ ವಾದದಲ್ಲಿ ವಚನಗಳು ಸಾಂಪ್ರದಾಯಿಕ ಜಾತಿಪದ್ಧತಿಯನ್ನು ವಿರೋಧಿಸುವುದೆಂದರೆ ಎರಡನೆಯ ವಾದ ವಚನದ ಮಹತ್ವವಿರುವುದು ಆಧ್ಯಾತ್ಮಿಕತೆಯಲ್ಲಿ ಅದರಲ್ಲೂ ಕೂಡ ಜಾತಿಪದ್ಧತಿಯ ವಿರೋಧವಿದ್ದು ಅದು ಆಧ್ಯಾತ್ಮಿಕ ಬೆಳವಣಿಗೆ ಮತ್ತು ಅಭಿವೃದ್ಧಿಯ ಹಾದಿಯಲ್ಲಿ ಕೇವಲ ಆರಂಭದ ಮೈಲುಗಲ್ಲಾಗಿ ಅಷ್ಟು ಮಹತ್ವದ್ದೆನಿಸುವುದಿಲ್ಲ. ಈ ವಿಚಾರಗಳ ಚರ್ಚೆಯು ಬಹುಶಃ ಇನ್ನೂ ಹಲವಾರು ವರ್ಷಗಳು ಹೊಸ ಹೊಸ ಸಾಕ್ಷಿ ಮತ್ತು ಆಧಾರಗಳ ಮೇಲೆ ನಡೆಯುತ್ತಾ ಹೋಗಬಹುದು. ಅದನ್ನು ನಾವು ವಿದ್ವಾಂಸರ ತೀರ್ಮಾನಕ್ಕೆ ಬಿಟ್ಟು ನಮ್ಮ ತೀರ್ಮಾನವನ್ನು ಸದ್ಯಕ್ಕೆ ಸಿಕ್ಕಿರುವ ಮಾಹಿತಿಗಳಿಂದ ಮಾಡಬಹುದು.

ನಾವು ಯಾವುದೇ ವಿಚಾರಧಾರೆಯನ್ನು ಮೆಚ್ಚಿದರೂ ಅಂತಿಮ ಸತ್ಯ ನಿರ್ವಿವಾದ. ಅದೇನೆಂದರೆ ನಾವು ನಮ್ಮ ಮತೀಯ ಧಾರ್ಮಿಕ ವರ್ತನೆಗಳನ್ನು ಪರಿಶೀಲಿಸುವ ಜೊತೆಗೆ ಅದಕ್ಕೂ ಹೆಚ್ಚಿನ ಆಧ್ಯಾತ್ಮಿಕ ಮಾರ್ಗವನ್ನು ಅರಸುವುದು.

*

ವಚನಗಳನ್ನು ಕುರಿತಾದ ನನ್ನ ಅನುಭವಗಳು ಆರಂಭವಾಗಿ ಹಲವು ದಶಕಗಳು ಕಳೆದನಂತರ ನಾನೀಗ ಈ ಅಮೆರಿಕ ದೇಶದಲ್ಲಿ ನೆಲೆಸಿದ್ದೇನೆ. ದೈಹಿಕವಾಗಿಯೂ, ಮಾನಸಿಕವಾಗಿಯೂ ಭಾರತದಿಂದ ಹೊರಗಿದ್ದೇನೆ. ಅಲ್ಲಿನ ಸದ್ಯದ ರಾಜಕೀಯ ಮತ್ತಿತರ ಬದಲಾವಣೆಗಳು ನನ್ನನ್ನು ಭಾವನಾತ್ಮಕವಾಗಿ ಬಾಧಿಸುವುದಿಲ್ಲ. ಈಗ ಭಾರತ ಬಲಕ್ಕೆ (ಹಿಂದು ರಾಷ್ಟ್ರವಾಗಿ) ವಾಲಿದಂತೆ ತೋರುತ್ತದೆ. ಮೋದಿಯವರು ಈಗಿನ ಪ್ರಧಾನಿ. ಅವರನ್ನು ಅತಿಯಾಗಿ ಪ್ರೀತಿಸುವ ಮತ್ತು ದ್ವೇಷಿಸುವ ಜನರು ಇದ್ದಾರೆ. ಎಡ ಪಕ್ಷಗಳು ಅವರ ಚಲನೆಯನ್ನು ಅತ್ಯಂತ ಕಾಳಜಿಯಿಂದ ಗಮನಿಸಿದರೆ ಬಲಪಂಥೀಯರು ರಾಮ ರಾಜ್ಯದ ಕನಸು ಕಾಣುತ್ತಿದ್ದಾರೆ.

ಅಮೆರಿಕದಲ್ಲೂ ಬಲಪಂಥೀಯ ಡಾನಲ್ಡ್ ಟ್ರಂಪ್ ಅಧ್ಯಕ್ಷನಾಗಿ ಆಯ್ಕೆಯಾದರೆ, ಕಾಂಗ್ರೆಸ್ ಮತ್ತು ಸೆನೆಟ್ ಕೂಡ ಬಲಕ್ಕೆ ವಾಲಿದೆ. ಇದು ಸಾಲದೆಂಬಂತೆ ಅನೇಕ ರಾಜ್ಯಗಳ ರಾಜ್ಯಪಾಲರೂ ಸಹ ಬಲಪಕ್ಷವಾದ ರಿಪಬ್ಲಿಕನ್ ಪಾರ್ಟಿಗೆ ಸೇರಿದವರು. ಈ ಬಾರಿಯ ಚುನಾವಣೆಯಲ್ಲಿ ಧರ್ಮ ಮತ್ತು ಜನಾಂಗೀಯ ಭಾವನೆಗಳು ಮುಖ್ಯ

ಪಾತ್ರ ವಹಿಸಿತು. ಅಮೆರಿಕದಲ್ಲಿರುವ ಅಸಂಖ್ಯಾತ ವಲಸೆಗಾರರ ಮತ್ತು ಅಷ್ಟೇಕೆ ಅಮೆರಿಕನ್ ಪ್ರಜೆಗಳಾಗಿರುವ ನಮ್ಮ ಮಕ್ಕಳ ಭವಿಷ್ಯದ ಬಗ್ಗೆ ಕಳವಳ ಮೂಡಿದೆ.

ಒಂದು ಗಮನಾರ್ಹ ರೀತಿಯಲ್ಲಿ ಹಂಟಿಂಗ್ಟನ್ನರ 'Clash of Civilizations'ನ ಕೆಲವಾರು ಅಂಶಗಳು ನಿಜವೆನಿಸುವಂತೆ ತೋರುತ್ತಿದೆ. ಇಸ್ಲಾಂ ದೇಶಗಳು ತಮ್ಮ ಧರ್ಮ ಮತ್ತು ಅವರ ಜೀವನದಲ್ಲಿ ಇಸ್ಲಾಂನ ಪಾತ್ರವನ್ನು ಕುರಿತಾದ ಸಮಸ್ಯೆಗಳಲ್ಲಿ ಹೆಣಗಾಡುತ್ತಿವೆ. ಪ್ರಕ್ಷುಬ್ಧ ಸ್ಥಿತಿಯಲ್ಲಿರುವ ಹಲವಾರು ಇಸ್ಲಾಂ ದೇಶಗಳಿಂದ ಲಕ್ಷಾಂತರ ಮುಗ್ಧಜನರು ತಮ್ಮ ಆಂತರಿಕ ಸಮಸ್ಯೆಗಳಿಂದಾಗಿ ಅಥವಾ ಪಾಶ್ಚಿಮಾತ್ಯ ದೇಶಗಳ ಹಸ್ತಕ್ಷೇಪದಿಂದಾಗಿ ಬೇರೆ ದೇಶಗಳಿಗೆ ವಲಸೆ ಹೋಗುತ್ತಿದ್ದಾರೆ. ಈ ಸಾಮೂಹಿಕ ವಲಸೆಗಳು ಮತ್ತು ಭಯೋತ್ಪಾದನೆಗಳು ಪಾಶ್ಚಿಮಾತ್ಯ ದೇಶಗಳ ಸಹನೆಯನ್ನು ಪರೀಕ್ಷಿಸುತ್ತಿವೆ. ಇವು ಅವರ ಮತೀಯ ಮತ್ತು ಸಾಂಸ್ಕೃತಿಕ ವರ್ತನೆಗಳನ್ನು ಕಠಿಣವಾಗಿಸಿವೆ. ಹಾಗಾಗಿ ನಾವು ಎಲ್ಲ ಸ್ವತಂತ್ರ ಮತ್ತು ಪ್ರಜಾಪ್ರಭುತ್ವದ ರಾಷ್ಟ್ರಗಳು ಬಲಕ್ಕೆ ವಾಲುತ್ತಿರುವುದನ್ನು ನೋಡಬಹುದು. ವಿಶ್ವದಲ್ಲಿ ಹಲವಾರು ದಶಕಗಳ ಸಹನೆ ಮತ್ತು ಧಾರ್ಮಿಕ ಸಹಬಾಳ್ವೆಯ ನಂತರ ಈಗ ಮತೀಯ ಧಾರ್ಮಿಕ ಭಾವನೆಗಳು ಪ್ರಾಮುಖ್ಯತೆಯನ್ನು ಹೊಂದುತ್ತಿರುವಂತೆ ಕಾಣುತ್ತಿದೆ.

ಧರ್ಮವನ್ನು ಕುರಿತ ಕ್ರಾಂತಿಕಾರಿ ವಿಚಾರಗಳಿಂದ ನಾವು ಪಾಠ ಕಲಿಯಬಹುದು. ಗಾಂಧಿಯವರು ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಂತರಾದ ಕಬೀರ, ಗುರುನಾನಕ, ಮೀರಾ ಮತ್ತಿತರರ ಸದ್ವಿಚಾರಪೂರ್ವಕ ಉಕ್ತಿಗಳನ್ನು ವಿವಿಧ ಪಂಗಡಗಳ ಜನರನ್ನು ಸೇರಿಸಿಕೊಳ್ಳುವಲ್ಲಿ ಸಮರ್ಥವಾಗಿ ಉಪಯೋಗಿಸಿಕೊಂಡರು. ಬೇರೆ-ಬೇರೆ ಭಾಷೆಗಳ, ಪ್ರಾಂತ್ಯಗಳ, ಜಾತಿ-ಮತಗಳಿಗೆ ಸೇರಿದ ಕೋಟ್ಯಾಂತರ ಜನರನ್ನು ಬ್ರಿಟಿಷರ ವಿರುದ್ಧ ಒಗ್ಗೂಡಿಸುವುದಕ್ಕೆ ಈ ಸಂತರ ಪ್ರಾರ್ಥನೆಗಳನ್ನು ಉಪಯೋಗಿಸಿದರು. ಅವರ ಅತ್ಯಂತ ಪ್ರೀತಿಯ ಭಜನೆ "ವೈಷ್ಣವ ಜನತೋ" – ಸಮಾನತೆ, ಸದ್ಭಾವನೆ, ಸಮಸ್ತರ ಸುಖ-ಶಾಂತಿ ಮತ್ತು ಆಧ್ಯಾತ್ಮಿಕತೆಯ ಚಿಂತನೆಗಳಂತಹ ಉದಾತ್ತ ಭಾವನೆಗಳನ್ನು ಹರಡುವುದಕ್ಕೆ ಬಹಳ ಒಳ್ಳೆಯ ಉದಾಹರಣೆ.

ಇತ್ತೀಚಿನ ಪ್ರಪಂಚದ ಚರಿತ್ರೆಯಲ್ಲಿ ನಮಗೆ ಧಾರ್ಮಿಕ ಸಂದೇಶದಿಂದ ಕಾರ್ಯ ಸಾಧಿಸಿದ ಉದಾಹರಣೆಗಳಿವೆ. ಮೊದಲನೆಯ ಉದಾಹರಣೆ ದಕ್ಷಿಣ ಆಫ್ರಿಕ. ವರ್ಣಭೇದದ ನೀತಿಯನ್ನು ಬಹಿಷ್ಕರಿಸಿದ ನಂತರ ನಡೆದ ಚುನಾವಣೆಯಲ್ಲಿ ಜಯಗಳಿಸಿದ ನೆಲ್ಸನ್ ಮಾಂಡೆಲಾ ಸರ್ಕಾರ ಅಲ್ಲಿನ ಬಹು ಸಂಖ್ಯಾತ ಕಪ್ಪುಜನಾಂಗದ ಮೊಟ್ಟಮೊದಲ ಸರ್ಕಾರ. ಅಲ್ಲಿಯವರೆಗೆ ಅಧಿಕಾರ ನಡೆಸಿದ ಅಲ್ಪಸಂಖ್ಯಾತ ಬಿಳಿಯರಿಗೆ ಅದು ಆತಂಕದ ಕಾಲ. ಶತಮಾನಗಳಿಂದ ದಬ್ಬಾಳಿಕೆಗೆ ಒಳಗಾದ ಕಪ್ಪುಜನಾಂಗಕ್ಕೆ ಬಿಳಿಯರ ವಿರುದ್ಧ ಸೇಡು ತೀರಿಸಿಕೊಳ್ಳುವ ಅವಕಾಶ. ಮಾಂಡೆಲಾ ತನ್ನ ಸ್ಫೂರ್ತಿಯ ಮಹಾನ್ ಕ್ಷಣದಲ್ಲಿ ಬಿಶಪ್ ಡೆಸ್ಮಂಡ್ ಟುಟು ಅವರ ನೇತೃತ್ವದಲ್ಲಿ ಸತ್ಯ ಮತ್ತು ಸಾಮರಸ್ಯ

ಸಮಿತಿಯನ್ನು ರಚಿಸುತ್ತಾರೆ. ಈ ಸಮಿತಿಯ ಉದ್ದೇಶ 'ಆಂತರಿಕ ಭದ್ರತಾ ಸೇವೆ' ಯಿಂದ ಕರಿಯರ ಮೇಲೆ ನಡೆಸಿದ ಶೋಷಣೆಗಳ ಭಯಂಕರ ವಿವರಗಳನ್ನು ಸಾರ್ವಜನಿಕರಿಂದ ಕೇಳಿ ತಿಳಿಯುವುದು. ಈ ವಿವರಗಳಿಂದ ವರ್ಣನೀತಿಯ ನಿಜವಾದ ರಾಷ್ಟ್ರೀಯ ಚಿಕಿತ್ಸೆಯನ್ನು ಮಾಡುವುದೇ ಹೊರತು ಬಿಳಿಯರ ವಿರುದ್ಧ ಸೇಡು ತೀರಿಸಿಕೊಳ್ಳುವುದಕ್ಕಾಗಿ ಅಲ್ಲ. ಇದು ನಿಜವಾದ ಕ್ರಿಶ್ಚಿಯನ್ ಧರ್ಮದ ಮೂಲ ಸಂದೇಶ ಮತ್ತು ಈ ಉದಾಹರಣೆಯಲ್ಲಿ ಧರ್ಮವು ಮಾನವನ ದೌರ್ಬಲ್ಯದ ವಿರುದ್ಧ ಸಾಧಿಸಿದ ಜಯವನ್ನು ನೋಡಬಹುದು. ಇದಕ್ಕೆ ಸಂಪೂರ್ಣ ತದ್ವಿರುದ್ಧವಾಗಿ ದಕ್ಷಿಣ ಆಫ್ರಿಕದ ಪಕ್ಕದ ದೇಶ ಜಿಂಬಾಬ್ವೆಯು ಬಿಳಿಯರಿಂದ ಸ್ವಾತಂತ್ರ್ಯವನ್ನು ಪಡೆದ ನಂತರ ರಾಬರ್ಟ್ ಮುಗಾಬೆ ಸರ್ವಾಧಿಕಾರಿಯಂತೆ ಅಧಿಕಾರ ನಡೆಸಿದ. ಅವನು ಎಲ್ಲ ಬಿಳಿಯರನ್ನು ದೇಶದಿಂದ ಹೊರಗೋಡಿಸಿ ಅವರ ಸಂಪತ್ತುಗಳನ್ನು ವಶಪಡಿಸಿಕೊಂಡ. ಇಂದಿಗೂ ಅವನ ಸರ್ವಾಧಿಕಾರ ಮುಂದುವರಿಯುತ್ತಿದೆ.

ಇನ್ನೊಂದು ಉದಾಹರಣೆ ಕೊಡುವುದಾದರೆ, ಇಲ್ಲೇ ಅಮೆರಿಕದಲ್ಲಿ ಮಾರ್ಟಿನ್ ಲುಥರ್ ಕಿಂಗ್‌ರ ನಾಯಕತ್ವದಲ್ಲಿ ಕಪ್ಪುಜನರ ನಾಗರಿಕ ಹಕ್ಕುಗಳಿಗಾಗಿ ಹೋರಾಟ ನಡೆಸಿದರು. ದಕ್ಷಿಣರಾಜ್ಯಗಳ ಆಡಳಿತಗಾರರು ಮತ್ತು ಪೊಲೀಸರು ಅವರನ್ನು ಹತ್ತಿಕ್ಕಲು ಏನೆಲ್ಲ ದೌರ್ಜನ್ಯ ನಡೆಸಿದರು? ಕಿಂಗ್‌ರ ಪ್ರತಿಭಟನೆಯು ಅವರ ಕ್ರಿಶ್ಚಿಯನ್ ನಂಬಿಕೆಗಳು ಮತ್ತು ಗಾಂಧಿಯವರಿಂದ ಪ್ರಭಾವಿತವಾದ ಅಹಿಂಸೆಯಿಂದ ಕೂಡಿತ್ತು. ಅವರ ಸಹವರ್ತಿಗಳನ್ನು ಲಾಠಿಗಳಿಂದ, ಪೊಲೀಸ್ ನಾಯಿಗಳಿಂದ, ನೀರಿನ ಫಿರಂಗಿಗಳಿಂದ ಹಿಂಸಿಸಿದರು. ಅತ್ಯಂತ ಕಠಿಣ ಪರಿಸ್ಥಿತಿಯಲ್ಲೂ ಅವರು ಕ್ರೈಸ್ತಧರ್ಮದ ಮೂಲ ಸಂದೇಶದಲ್ಲಿ ವಿಶ್ವಾಸ ಕಳೆದುಕೊಳ್ಳಲಿಲ್ಲ. ಕೊನೆಯಲ್ಲಿ ಅವರ ಅಹಿಂಸಾತ್ಮಕ ಚಳುವಳಿಯು ಕಪ್ಪು ಜನರಿಗೆ ಸಮಾನತೆಯನ್ನು ಕೊಡಿಸುವಲ್ಲಿ ಯಶಸ್ವಿಯಾಯಿತು. ವಿಶ್ವ ಚರಿತ್ರೆಯಲ್ಲಿ ಇದೊಂದು ಹೊಳೆಯುವ ನಕ್ಷತ್ರದಂತೆ ನಮಗೆ ಕಾಣುತ್ತದೆ. ಅಗಾಧ ಅಸಂಭಾವ್ಯ ಸನ್ನಿವೇಶದಲ್ಲೂ ಆಧ್ಯಾತ್ಮಿಕ ಸಂದೇಶದ ವಿಜಯವನ್ನು ಇದರಲ್ಲಿ ನಾವು ನೋಡಬಹುದು.

ನಮ್ಮ ಈ ಸದ್ಯದ ಸನ್ನಿವೇಶದಲ್ಲಿ ವಚನಕಾರರಿಗೆ ತುರ್ತಾದ ಒಂದು ಹೊಸ ಪ್ರಸ್ತುತತೆ ಇದೆಯೆನ್ನಬಹುದು. ಅವರ ನೇರ ಚಿಂತನೆಗಳು ಮತ್ತು ಆತ್ಮಪರೀಕ್ಷಾ ವಿಧಾನಗಳು ನಮಗೆ ಜೀವನದ ಅಂತಿಮ ಉದ್ದೇಶ ಮತ್ತು ಅದರಲ್ಲಿ ನಮ್ಮ ಪಾತ್ರವನ್ನು ತಿಳಿದುಕೊಳ್ಳುವುದರಲ್ಲಿ ಸಹಕಾರಿಯಾಗುವುದು. ಈ ವಚನಕಾರರು ಹಲವಾರು ಶತಮಾನಗಳ ಚರಿತ್ರೆ ಮತ್ತು ಕಾಲವನ್ನು ದಾಟಿ ತಮ್ಮ ಆತ್ಮ ಕಥೆಯ ಮೂಲಕ ನಮಗೆ ದಾರಿ ದೀಪವಾಗಿ ಜೀವನದಲ್ಲಿ ನಮ್ಮ ಪಾತ್ರ ಮತ್ತು ಉದ್ದೇಶದ ಹುಡುಕುವಿಕೆಯಲ್ಲಿ ಸಹಭಾಗಿಯಾಗಿದ್ದಾರೆ. ಆದರೆ ನಮ್ಮ ನಿರೀಕ್ಷೆಯು ನಾವು ಅವರ ವಚನಗಳನ್ನು ಹೇಗೆ ವ್ಯಾಖ್ಯಾನಿಸುತ್ತೇವೆ ಎನ್ನುವುದನ್ನು ಅವಲಂಬಿಸಿದೆ.

# ಭಕ್ತಿಯೆಂಬ ಭಾವಮೂಸೆ

–ವೈಶಾಲಿ ಹೆಗಡೆ

**ಭ**ಕ್ತಿಯ ಪರಿಭಾಷೆ ಕಾಲದಿಂದ ಕಾಲಕ್ಕೆ, ಸಾಮಾಜಿಕ ಸ್ತರಗಳಿಗೆ, ಅನುಭವಕ್ಕೆ, ಪ್ರದೇಶಕ್ಕೆ ಮತ್ತು ಆಧ್ಯಾತ್ಮಿಕ ನೆಲಗಟ್ಟಿಗೆ ಅನುಗುಣವಾಗಿ ಸಂಪೂರ್ಣ ವಿಭಿನ್ನ. ಆದರೆ ಆ ಮೂಲದ ಭಕ್ತಿರಸದ ಭಾವೋತ್ಕಟತೆ ಮಾತ್ರ ಒಂದೇ. ಈ ಭಕ್ತಿಯೆಂಬ ಭಾವದ ಉಗಮವಾದದ್ದೆಲ್ಲಿ? ಮನುಷ್ಯನ ಜೀವ ವಿಕಸನದ ಹಾದಿಯಲ್ಲಿ ಸಂವೇದನಗಳ ತಂತುಗಳೆಲ್ಲಾ ಮಿಡಿವಾಗ ಕಾಣದ ಕರುಣೆಯೊಂದು ಎಲ್ಲ ಭಾವಗಳ ದಾರಿದೀಪ–ವಾಗುವುದು ಹೇಗೆ? ಏನೆಲ್ಲಾ ಸಾಧಿಸುವ ಮನುಷ್ಯನ ಛಲ ಅಸಹಾಯಕತೆಯಾಗಿ ಮಾರ್ಪಟ್ಟಾಗ ಮೊರೆಹೋಗುವ ಒಂದು ಬಿಡುಗಡೆಯ ಭಾವವೇ ಅಲ್ಲವೇ ಭಕ್ತಿ? ಹಾಗಾಗಿಯೇ ಏನೋ ನನಗೆ ಭಕ್ತಿ ಸಾಹಿತ್ಯದ ಸಾಲುಗಳು ಅವುಗಳ ಕರ್ತೃವಿನ ಮೇಲೆ ಅವಲಂಬಿಸಿ ಹಲವು ಹೊಳಹುಗಳನ್ನೂ, ತೀವ್ರತೆಯಲ್ಲಿ ವ್ಯತ್ಯಾಸಗಳನ್ನೂ ತೋರುತ್ತವೆ.

ಕನ್ನಡದ ಬಹುಮುಖ್ಯ ಭಕ್ತಿಸಾಹಿತ್ಯ ಮುಖ್ಯ ಪ್ರಕಾರಗಳನ್ನೇ ತೆಗೆದುಕೊಂಡರೆ, ಈ ಭಕ್ತಿಯ ಅಭಿವ್ಯಕ್ತಿಯಲ್ಲಿ ಹಲವು ವ್ಯತ್ಯಾಸಗಳನ್ನು ಗಮನಿಸಬಹುದು. ದಾಸ ಸಾಹಿತ್ಯ ಮತ್ತು ವಚನ ಸಾಹಿತ್ಯಗಳೆರಡರಲ್ಲೂ ಗಮನಿಸಿದಂತೆ, ಭಗವಂತನ ಹಲವು ಬಗೆಯ ವರ್ಣನೆಯಿದೆ, ಸಮಾಜಕ್ಕೆ ನೀತಿ ಬೋಧೆಯಿದೆ, ಕರುಣೆಯಿದೆ, ಬೇಡಿಕೆಯಿದೆ. ಆದರೆ ಕೆಲವೇ ಕೆಲವು ಕರ್ತೃಗಳ ಕೃತಿಗಳಲ್ಲಿ ಭಗವಂತನ ಮೇಲೊಂದು ಹಕ್ಕು ಸ್ಥಾಪನೆಯಿದೆ, ಪ್ರೀತಿಯಿದೆ, ಈರ್ಷ್ಯೆಯಿದೆ, ಮಗುವಿನ ಹಠವಿದೆ, ಆಗ್ರಹವಿದೆ, ಉಳಿದೆಲ್ಲರ ಕೃತಿಗಳಿಗೆ ಹೋಲಿಸಿದರೆ ಒಂದು ಅಗಾಧ ನಂಬಿಕೆಯಿದೆ. ಈ ಬಗೆಯ ಎಲ್ಲ ಗುಣಗಳನ್ನು ನಾನು ಗಮನಿಸಿದ್ದು ಕನಕದಾಸರ ಕೀರ್ತನೆಗಳಲ್ಲಿ ಮತ್ತು ಅಕ್ಕನ ವಚನಗಳಲ್ಲಿ. ಯಾಕೆಂದು ಯೋಚಿಸುತ್ತ ಹೊರಟಾಗ ಅನಿಸಿದ್ದು, ಸಮಾಜದಲ್ಲಿ ಶೋಷಿತರಿಗೆ ಹತ್ತಿರವಾದಷ್ಟು ಭಗವಂತ ಬೇರೊಬ್ಬರಿಗೆ ಆಪ್ತನಾಗಲಾರನೆ? ಆ ಬಗೆಯ ಅಸಹಾಯಕತೆಯಿಂದ ಹೊಮ್ಮುವ ಭಕ್ತಿಯ ಸ್ತರವೇ ಬಹುಶಃ ಬೇರೆ. ಕನಕದಾಸರೋ, ಕೀಳುಜಾತಿಯೆಂಬ ಹಣೆಪಟ್ಟಿಯನ್ನು ಹೊತ್ತು ಹರಿಯನ್ನು ಪಡೆಯಲು ಹರಸಾಹಸ ಪಟ್ಟಾಗ ಅನುಭವಿಸಿದ

ಅವಮಾನಕ್ಕೆ ಇನ್ನಾವುದಿದೆ ಹೋಲಿಕೆ? ಇನ್ನು ಹೆಂಗಸರಂತೂ ಪೂರ್ವನಿಯೋಜಿತ ರೆಂಬಂತೆ ಶೋಷಿತರು. ಹಾಗಾಗಿಯೇ ಏನೋ ಅವರ ಸಾಹಿತ್ಯದಲ್ಲಿರುವ ರೊಚ್ಚಿನ ಪ್ರೀತಿಯ ಭಕ್ತಿ ಪರಾಕಾಷ್ಠೆ ನನಗೆ ಉಳಿದ ದಾಸರಲ್ಲಿ ಅಥವಾ ವಚನಕಾರರಲ್ಲಿ ಕಾಣಿಸಲಿಲ್ಲ. ಅಂದರೆ ಅತೀವ ಅಸಹಾಯಕತೆ ಮತ್ತು ಶೋಷಿತ ಜೀವನದಿಂದ ಹೊಮ್ಮಿದ ಭಕ್ತಿ ಸಾಹಿತ್ಯದಲ್ಲಿ ಸಿಗುವಷ್ಟು ಸ್ವಂತದ ಭಗವಂತ ನಾವೇ ಹುಡುಕಿಕೊಂಡು ಹೊರಟಾಗ ಸಿಗದೇ, ತನ್ನಿಂದ ಬೇರಾದ ಭಗವಂತ ಮಾತ್ರ ಕಾಣಿಸುವನೆ?

ಇಲ್ಲಿ ದಾಸಾನುದಾಸರಾದ ಪುರಂದರದಾಸರ ಭಕ್ತಿಯನ್ನಾಗಲೀ, ಬಸವಣ್ಣನ ಮುತ್ತಿನಂಥ ನುಡಿಗಳನ್ನಾಗಲೀ ಯಾವುದೇ ಕಾರಣಕ್ಕೂ ಅಲ್ಲಗಳೆಯುತ್ತಿಲ್ಲ. ಅವರ ನುಡಿಗಳಲ್ಲಿ ಅದಮ್ಯ ಕಳಕಳಿಯಿದೆ. ಸಮಾಜಕ್ಕೆ ನೈತಿಕ ಜೀವನಕ್ಕೆ ಬೇಕಾಗುವ ಸಲಹೆ ಸೂತ್ರಗಳಿವೆ, ಭಕ್ತಿಯಲ್ಲಿ ನಡೆದರೆ ದೊರಕುವ ಜೀವನದ ಬಗೆಗಿನ ದರ್ಶನಗಳಿವೆ. ದೇವರ ಪುರಾಣದ ಹಲವು ಬಗೆಯ ವರ್ಣನೆಯಿದೆ. ಉದಾಹರಣೆಗೆ 'ಡೊಂಕು ಬಾಲದ ನಾಯಕರೆ', 'ರಾಗಿ ತಂದೀರಾ', 'ಅಂಬಿಗ ನಾನಿನ್ನ ನಂಬಿದೆ' ಇತ್ಯಾದಿ ಪ್ರಚಲಿತ ಕೀರ್ತನೆಗಳಲ್ಲಿ ಅಧ್ಯಾತ್ಮದ ಹೊಳಹಿನ ಜೀವನದ ದಾರಿಯಿದೆ. "ರಾಮ ಮಂತ್ರವ ಜಪಿಸೋ ಹೇ ಮನುಜಾ", "ಕೃಷ್ಣಾ ಬಾರೋ", "ಆಡ ಪೋಗೋಣ ಬಾರೋ ರಂಗ" ಇನ್ನಿತರ ಬಹುತೇಕ ಪುರಂದರ ದಾಸರ ಕೀರ್ತನೆಗಳಲ್ಲಿ, ಹರಿನಾಮದ ಹೊಗಳಿಕೆಯಿದೆ, ಆತನ ಜೀವನದ ವರ್ಣನೆಯಿದೆ, ಭಕ್ತಿ ಇಲ್ಲಿ ಉಘೇ ಉಘೇ ಎಂಬಂಥ ಧಾಟಿಯಲ್ಲಿ ಹರಿಯುತ್ತದೆ.

"ಅಲ್ಲಿದೆ ನಮ್ಮನೆ ಇಲ್ಲಿ ಬಂದೆ ಸುಮ್ಮನೆ", "ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ", "ಬಂದದ್ದೆಲ್ಲ ಬರಲಿ ಗೋವಿಂದನ ದಯೆಯೊಂದಿರಲಿ" ಮತ್ತು ಇನ್ನು ಕೆಲವು ಕೀರ್ತನೆಗಳಲ್ಲಿ ಭಕ್ತಿಯ ತೊಳಲಾಟದ ಭಾವದ ಉತ್ಕಟತೆ ಖಂಡಿತ ಹಾದು ಹೋಗುತ್ತದೆ. ಅಂತೆಯೇ ವಚನಕಾರರ ಮುಂಚೂಣಿಯಲ್ಲಿರುವ ಬಸವಣ್ಣನವರ ವಚನಗಳಲ್ಲಿ ಕೂಡ ನೀತಿ ಬೋಧೆಯ ವಚನಗಳೇ ಬಹುಮುಖ್ಯವಾದವುಗಳು. ಬಸವಣ್ಣ ಸಮಾಜ ಪರಿವರ್ತನೆಗಾಗಿ ವಚನಗಳನ್ನು ಬಳಸಿಕೊಂಡವರು. "ನುಡಿದರೆ ಮುತ್ತಿನ ಹಾರದಂತಿರಬೇಕು", "ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ" ಮುಂತಾದ ವಚನಗಳಲ್ಲಿ ಬಸವಣ್ಣ ಹೇಗೆ ಬದುಕಿದರೆ ಶಿವ ಮೆಚ್ಚುವನೆಂಬ ಸಲಹೆ ನೀಡುತ್ತ ಹೋಗುತ್ತಾರೆ. "ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ, ನೀರ ಕಂಡಲ್ಲಿ ಮುಳುಗುವರಯ್ಯಾ ಮರವ ಕಂಡಲ್ಲಿ ಸುತ್ತುವರಯ್ಯ, ಆನೆಯನೇರಿಕೊಂಡು ಹೋದಿರಿ ನೀವು" ಇತರ ವಚನಗಳಲ್ಲಿ, ಹೇಗೆ ಬದುಕಿದರೆ ಅದೊಂದು ನಿರರ್ಥಕ ಯತ್ನವೆಂಬ ಬುದ್ಧಿಮಾತಿದೆ. ಬಸವಣ್ಣನ ವಚನಗಳಲ್ಲಿ ಕೂಡಲಸಂಗಮನೊಲಿಸಿ ಬದುಕುವ ಬದುಕಲ್ಲದೆ ಬೇರೆ ಬದುಕಿಲ್ಲ. ಅಲ್ಲೊಂದು ತಾತ್ವಿಕ ಭಕ್ತಿಯಿದೆ.

ಇವೆಲ್ಲವೂ ಭಕ್ತಿಯ ವಿವಿಧ ಅಭಿವ್ಯಕ್ತಿಗಳೇ ನಿಜ. ಆ ಪರಶಕ್ತಿಯ ಪಾದಗಳಲ್ಲಿ ಒಪ್ಪಿಸಿ ಬಿಡುಗಡೆಯ ಬೇಡುವ ಭಕ್ತಿ ನಿಜ. ಆದರೆ ಇಲ್ಲಿ ಇವರು ಎಲ್ಲೂ ಭಗವಂತನನ್ನು ತನ್ನ ಸ್ವಂತದವನೆಂದು ಪರಿಗಣಿಸುವುದಿಲ್ಲ. ಆತನ ಮೇಲೊಂದು ಭಕ್ತನ ಒಡೆತನವಿಲ್ಲ. ಸ್ವಾಮ್ಯ, ಹಕ್ಕು ಒತ್ತಾಯವಿಲ್ಲ. ಯಾಕೆ? ಆ ಬಗೆಯ ಹಕ್ಕಿನ ಭಕ್ತಿ ಯಾಕೆ ಕೆಲವರಲ್ಲಿ ಮಾತ್ರ ಸಾಧ್ಯ? ಒಬ್ಬ ಮನುಷ್ಯ ಜೀವಿತಾವಧಿಯಲ್ಲಿ ಇನ್ನೇನೂ ಇರದ ಒಂದು ತಳಸ್ಥಿತಿಯನ್ನು ತಲುಪಿದಾಗ ಮಾತ್ರವೇ ಭಗವಂತನ ಮೇಲೆ ಒಡೆತನ ಸಾಧ್ಯವೇ?

ಕನಕದಾಸರ ಕೀರ್ತನೆಗಳಲ್ಲೂ ಸಾಮಾಜಿಕ ನ್ಯಾಯ ನೀತಿಯಿದೆ, ಹರಿ ವರ್ಣನೆ-ಯಿದೆ, ಭಾಗವತದ ಉದಾಹರಣೆಗಳಿವೆ. ಜೊತೆಗೆ ಒಂದು ವಿಚಿತ್ರ ಒಡೆತನದ ಪ್ರೇಮವಿದೆ.

**"ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ**
**ಕುಲವಿಲ್ಲದ ದಾಸ ಕುರುಬ ದಾಸ**
**ಛಲದಿ ನಿನ್ನ ಭಜಿಸುವರ ಮನೆಯ ಮಾದಿಗದಾಸ**
**ಸಲೆ ಮುಕ್ತಿ ಪಾಲಿಸೆನ್ನೊಡೆಯ ಆದಿಕೇಶವ"**

ಕನಕದಾಸರು ಎಷ್ಟೊಂದು ಮಾರ್ಮಿಕವಾಗಿ ಇಲ್ಲಿ ಸಾಮಾಜಿಕ ಸ್ತರಗಳ ಹೀನ ಹಿಂಸೆಯ ಬದುಕಿನ ಜೊತೆಗೆ ಯಾರಾದರೇನು ಯಾವ ಜಾತಿಯ ದಾಸರಾದರೇನು ನಿನ್ನ ಹೆಸರು ಭಜಿಸಿದರೂ ಸಾಕು ಅವರೆಲ್ಲರ ದಾಸ ನಾನು ಎನ್ನುವ ಸಾಲುಗಳಲ್ಲಿ ನಿಜಕ್ಕೂ ಅಹಂ ಮೀರಿದ ಭಕ್ತಿಯ "ನಾನು ಹೋದರೆ ಹೋದೇನು" ಮತ್ತೆ ಧ್ವನಿತವಾಗಿದೆ. ಇಲ್ಲಿ ದೇವರನ್ನು ಹಂಗಿಸುವ ಒಂದು ಉಡಾಫೆಯ ಧ್ವನಿಯಿದೆ. ನೀನೆ ಸೃಷ್ಟಿಸಿದ ಈ ಲೋಕ ನೋಡು ಆದರೆ ಅವರು ನಿನ್ನ ಹೆಸರು ಹೇಳಿದರೂ ಸಾಕು ನಾ ಅವರ ದಾಸ ಎನ್ನುವ ಸಾಲುಗಳು ಒಂದು ಬಗೆಯಲ್ಲಿ ಹರಿಗೆಸೆಯುವ ಸವಾಲಿನಂತಿದೆ. ಬಾಗಿಲನು ತೆರೆದು ಸೇವೆಯನು ಕೊಡೊ ಹರಿಯೇ.... ಕೀರ್ತನೆಯಲ್ಲಿ ಅವರು ಹರಿಗೆ ತನ್ನ ಕರ್ತವ್ಯವನ್ನೇ ನೆನಪಿಸುತ್ತಾರೆ. "ಸಮಯಾಸಮಯವುಂಟೆ ಭಕ್ತವತ್ಸಲ ನಿನಗೆ ಕಮಲಾಕ್ಷ ಆದಿಕೇಶವನೆ?" ಎನ್ನುವ ಸಾಲುಗಳು ನಿಜಕ್ಕೂ ಭಕ್ತಿರಸದ ಒಡೆತನವನ್ನು ಮತ್ತೆ ನಿರೂಪಿಸುತ್ತವೆ. ನಾ ಕರೆದರೆ ನೀ ಬರಲೇ ಬೇಕು, ಭಕ್ತ ಕರೆದರೂ ಬರುವುದಿಲ್ಲ ಎನ್ನಲು ನೀ ಯಾರು? ಮಕ್ಕಳು ಕರೆದಾಗ ಇಲ್ಲ ಎನ್ನುವ ಅಪ್ಪ, ಅಮ್ಮ ಇರುವರೇ ಎಂಬ ಧಾಟಿಯಲ್ಲಿದೆ ಕನಕದಾಸರ ಆಗ್ರಹ. ಇದಲ್ಲವೇ ಭಕ್ತನೊಬ್ಬನ ಹಕ್ಕೊತ್ತಾಯದ ಭಕ್ತಿ ಎಂದರೆ? ತನ್ನ ಭಕ್ತಿಯ ಮೇಲೆ, ಆ ಭಕ್ತವತ್ಸಲನ ಮೇಲೆ ಇರುವ ಅಚಲ ನಂಬಿಕೆಯೆಂದರೆ?

**"ತಲ್ಲಣಿಸದಿರು ಕಂಡ್ಯ ತಾಳು ಮನವೆ**
**ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ**
**ಅಡವಿಯೊಳಗಾಡುವ ಮೃಗಪಕ್ಷಿಗಳಿಗೆಲ್ಲ**

**ಅಡಿಗಡಿಗೆ ಆಹಾರವಿತ್ತವರು ಯಾರೋ**
**ಹಡೆದ ಜನನಿಯ ತೆರದೆ ಸ್ವಾಮಿ ಹೊಣೆಗೀಡಾಗಿ**
**ಬಿಡದೆ ರಕ್ಷಿಪನಿದಕೆ ಸಂದೇಹ ಬೇಡ"**

ಇಂಥದ್ದೊಂದು ತಣ್ಣನೆಯ ನಿಶ್ಚಿಂತ ನಂಬಿಕೆ ಸುಲಭಕ್ಕೆ ದಕ್ಕುವಂತದ್ದೆ? ಎಲ್ಲ ಕಳಕೊಂಡವಗೆ ಮಾತ್ರ ಸಿದ್ಧಿಸುವಂತದ್ದೆ? ಏನೂ ಇಲ್ಲ ಯಾರೂ ಇಲ್ಲ ಎನ್ನುವ ಸಂದರ್ಭದಲ್ಲಿ ಕೂಡ ನಿಶ್ಚಿಂತನಾಗಿರು ನೀ ಮನುಜ ಎಂದು ಒಬ್ಬ ತನ್ನ ಅನುಭವದಿಂದ ಹೇಳಬೇಕಾದರೆ, ಆತ ಆ ಪರಿಯ ಕಳಕೊಳ್ಳುವಿಕೆಯಲ್ಲಿ ಸಾಗಿರಬೇಕಲ್ಲವೇ? ಅಲ್ಲಿಂದ ಆ ಭಗವಂತ ನಾಮ ಮಾತ್ರದ ಬಲದಿಂದೆದ್ದು ಬಂದಿರಬೇಕಲ್ಲವೇ? ಇನ್ನು ಯಾವ ಹೊತ್ತಿನಲ್ಲಿ ಓದಿದರೂ ಕೇಳಿದರೂ ಪ್ರತಿ ಬಾರಿಯೂ ತನ್ನದೇ ರೀತಿಯಲ್ಲಿ ರೋಮಾಂಚನ ನೀಡುವ ಕೀರ್ತನೆಯೆಂದರೆ "ತೊರೆದು ಜೀವಿಸಬಹುದೇ ಹರಿ ನಿನ್ನ ಚರಣಗಳ..."

ರಾಜ್ಯ, ಭೋಗ, ಮಡದಿ, ಮಕ್ಕಳು, ಮನೆ, ತಾಯಿ, ತಂದೆ, ಬಂಧು ಬಳಗ ಏನೆಲ್ಲಾ ಬಿಡಬಹುದು ಎನ್ನುತ್ತಾ ಕನಕನಳಲು ಉತ್ತುಂಗಕ್ಕೇರುತ್ತದೆ.

**"ಪ್ರಾಣವನ್ನು ಪರರು ಬೇಡಿದರೆತ್ತಿ ಕೊಡಬಹುದು**
**ಮಾನಾಭಿಮಾನವನು ತಗ್ಗಿಸಲು ಬಹುದು**
**ಪ್ರಾಣದಾಯಕನಾದ ಆದಿಕೇಶವರಾಯ**
**ಜಾಣ ಶ್ರೀಕೃಷ್ಣಾ ನಿನ್ನಡಿಯ ಬಿಡಲಾಗದು"**

ಇಂಥದ್ದೊಂದು ಆರ್ತ ಭಕ್ತಿ ಸಿಗುವುದು ಬಹು ವಿರಳ. ನೀನಲ್ಲದೆ ನಿಜಕ್ಕೂ ಬೇರೆ ಗತಿಯಿಲ್ಲ ಎನ್ನುವ ಖಡಾಖಂಡಿತ ಘೋಷಣೆಯಿದೆ ಇಲ್ಲಿ. ಅಂತೆಯೇ ಏನೋ, ಕನಕದಾಸರ ಕೀರ್ತನೆಗಳಲ್ಲಿ ಒಂದು ವಿಸ್ಮಯಕಾರೀ ಭಕ್ತಿಯ ಉತ್ತುಂಗ ಬೇರೆಯೇ ಆಗಿ ತಾಕುತ್ತದೆ.

ಇಂಥದ್ದೇ ಒಂದು ಹಸಿ ಹಸಿ ಭಕ್ತಿ ನನಗೆ ದೊರಕಿದ್ದು ಅಕ್ಕನ ವಚನಗಳಲ್ಲಿ. ಹಾಗೆ ನೋಡಿದರೆ ವಚನ ಸಾಹಿತ್ಯ ಹುಟ್ಟಿದ್ದೇ ಒಂದು ಸಾಮಾಜಿಕ ಕ್ರಾಂತಿ ಎಂಬಂತೆ. ಹಲವು ವಿಧದ ಜನಸಾಮಾನ್ಯರ ಅಳಲು, ಅನುಭವ ಅನುಭಾವವಾಗಿ ಹೊಮ್ಮಿದ ಇತಿಹಾಸ ವಚನ ಸಾಹಿತ್ಯ ಚಳುವಳಿಯದ್ದು. ಅಂತೆಯೇ ವಚನಗಳಲ್ಲಿ ಶಿವ ಹಲವು ರೂಪದಲ್ಲಷ್ಟೇ ಅಲ್ಲ, ಮಾದರಿಗಳಲ್ಲಿ ಕುರುಹುಗಳಲ್ಲಿ ಹುದುಗಿ ಹೊಮ್ಮಿದ್ದಾನೆ. ಆದರೂ ಅಕ್ಕಮಹಾದೇವಿ ಮಲ್ಲಿಕಾರ್ಜುನನನ್ನು ಒಳಗೊಳ್ಳುವ ಪರಿ, ಪ್ರೀತಿಸುವ ಪರಿ, ಆಗ್ರಹಿಸುವ ಪರಿ ಆಕೆಯ ಅಂದಿನ ಸಾಮಾಜಿಕ ಸ್ಥಿತಿ, ಮಾನಸಿಕ ತೊಳಲಾಟಗಳ ನಡುವೆ ಬೆಂದೆದ್ದು ಬಂದ ರೀತಿಯ ಫಲವೇ ಎಂಬಂತ ಪ್ರಶ್ನೆ ಒಡ್ಡುತ್ತವೆ. ಹಾಗೆ ನೋಡಿದರೆ ಇಂದಿನ ಮಹಿಳಾ ಸಮಾನತೆಯ ಹೋರಾಟಗಾರರಿಗಿಂತ ಬಲು ಮುಂಚೆ ೧೨ನೇ ಶತಮಾನದಲ್ಲೇ

ನಿರ್ಭಿಡೆಯಿಂದ ಹೇಳಿದ್ದಳು ಅಕ್ಕ "ಗಂಡಿಗೆ ಹೆಣ್ಣು ಮಾಯೆಯಾದರೆ, ಹೆಣ್ಣಿಗೆ ಗಂಡು ಮಾಯೆ" ಆ ನನ್ನ ಮತ್ತು ಶಿವನ ನಡುವೆ ನುಸುಳುವ ಎಲ್ಲವನ್ನೂ ಮಾಯೆಯೆಂದು ಸಾರಿದವಳು ಅಕ್ಕ. ಅಧ್ಯಾತ್ಮವೇನು ನಿಮ್ಮೊಬ್ಬರ ಸ್ವತ್ತೋ? ಎಂಬಂತೆ ಮಾಯೆಯ ಮೀರಿ ನಿಂತಿದ್ದಳು ಆಕೆ.

**"ಬಿಟ್ಟೆನೆಂದರೂ ಬಿಡದೀ ಮಾಯೆ**
**ಬಿಡದಿದ್ದರೆ ಬೆಂಬತ್ತಿತ್ತು ಮಾಯೆ**
**ಯೋಗಿಗೆ ಯೋಗಿನಿಯಾಗಿತ್ತು ಮಾಯೆ**
**ಯತಿಗೆ ಪರಾಕಿಯಾಗಿತ್ತು ಮಾಯೆ**
**ನಿಮ್ಮ ಮಾಯೆಗೆ ನಾನಂಜುವಳಲ್ಲ**
**ಚೆನ್ನಮಲ್ಲಿಕಾರ್ಜುನದೇವ, ನಿಮ್ಮಾಣೆ"**

ಛಲ, ದೇವರಿಗೆ ಸವಾಲು ಅದೇ ಉತ್ಕಟ ಭಾವ, ಅಕ್ಕನ ವಚನಗಳಲ್ಲೂ ಜಿನುಗುತ್ತದೆ.

**"ಕೋಲ ತುದಿಯ ಕೋಡಗದಂತೆ**
**ನೇಣ ತುದಿಯ ಬೊಂಬೆಯಂತೆ**
**ಆಡಿದೆನಯ್ಯ ನೀನಾಡಿಸಿದಂತೆ**
**ನಾ ನುಡಿದೆನಯ್ಯ ನೀ ನುಡಿಸಿದಂತೆ**
**ನಾನಿದ್ದೆನಯ್ಯ ನೀನಿರಿಸಿದಂತೆ**
**ಜಗದ ಯಂತ್ರವಾಹಕ**
**ಚೆನ್ನಮಲ್ಲಿಕಾರ್ಜುನ ಸಾಕೆಂಬನಕ"**

ನೀ ಸಾಕೆನ್ನುವ ತನಕ ಈ ಜಗದ ಕೋಟಲೆ ಅನುಭವಿಸಿಬಿಡುತ್ತೇನೆ, ಕಷ್ಟ ತೀರುವುದಾದರೆ ಅದು ನಿನ್ನಿಂದ ಮಾತ್ರ ಎನ್ನುವಂತೆ ಇಲ್ಲೂ ಅಕ್ಕ ಮತ್ತೆ ಸವಾಲಿಗಿಳಿಯುತ್ತಾಳೆ. ನಾವು ನಮ್ಮ ಸಿಟ್ಟು, ಆಕ್ರೋಶ, ಹತಾಶೆಗಳನೆಲ್ಲ ನಮ್ಮ ಪ್ರೀತಿ ಪಾತ್ರರ ಬಳಿ ತಾನೇ ತೋಡಿಕೊಳ್ಳುವುದು? ಅಕ್ಕ ಚೆನ್ನಮಲ್ಲಿಕಾರ್ಜುನನಲ್ಲಿ ಆ ಬಗೆಯ ಒಂದು ಆತ್ಮೀಯ ಮೋಹಿತ ಭಕ್ತಿಯಲ್ಲಿ ಅಲವತ್ತುಕೊಳ್ಳುತ್ತಿದ್ದರೆ ಹೀಗೂ ದೇವರನ್ನು ಭಜಿಸಬಹುದೇ ಎನಿಸಿಬಿಡುತ್ತದೆ! ಆತನನ್ನೇ ಮಾನಸ ವಿವಾಹವಾಗಿದ್ದ ಅಕ್ಕನಲ್ಲಿ ಭಕ್ತಿಯೂ ಪ್ರೇಮವೂ ವಿರಹವೂ ಎಲ್ಲ ಮೇಳೈಸಿಬಿಟ್ಟ ಭಾವೋದ್ವೇಗ!

**"ಅಕ್ಕ ಕೇಳಕ್ಕಾ, ನಾನೊಂದು ಕನಸ ಕಂಡೆ.**
**ಚಿಕ್ಕ ಚಿಕ್ಕ ಕೆಂಜಡೆಗಳ ಸುಲಿಪಲ್ಲ ಗೊರವನು**
**ಬಂದೆನ್ನ ನೆರೆದ ನೋಡವ್ವಾ.**

ಆತನನಪ್ಪಿಕೊಂಡು ತಳವೆಳಗಾದೆನು.
ಚೆನ್ನಮಲ್ಲಿಕಾರ್ಜುನನ ಕಂಡು
ಕಣ್ಣುಮುಚ್ಚಿ ತೆರೆದು ತಳವೆಳಗಾದೆನು."

ಇಂಥದ್ದೊಂದು ಶೃಂಗಾರಮಿಳಿತ ಅಧ್ಯಾತ್ಮ, ಅಕ್ಕ ಹೆಣ್ಣಾಗಿದ್ದಕ್ಕೆ ಮಾತ್ರ ಸಾಧ್ಯವಾಯಿತೆ?

"ಹಿಡಿವೆನೆಂದಡೆ ಹಿಡಿಗೆ ಬಾರನವ್ವಾ.
ತಡೆವೆನೆಂದಡೆ ಮೀರಿ ಹೋಹನವ್ವಾ.
ಒಪ್ಪಚ್ಚಿ ಅಗಲಿದಡೆ ಕಳವಳಗೊಂಡೆ.
ಚೆನ್ನಮಲ್ಲಿಕಾರ್ಜುನನ ಕಾಣದೆ ಆನಾರೆಂದರಿಯೆ ಕೇಳಾ, ತಾಯೆ."

ಅಬ್ಬಾ ಅದೆಂಥ ಕಳವಳ ಆಕೆಯದು ಇಲ್ಲಿ! ವಿಚಿತ್ರವಾದ ಹತಾಶೆ, ಆತ ತನ್ನ ಸ್ವಂತ, ತನ್ನ ಹಕ್ಕು ಸ್ವಾಮ್ಯದ ಒಡೆತನ ತಪ್ಪಿಹೋದೀತೆಂಬ ಭೀತಿ ಏನೆಲ್ಲಾ ಭಾವಗಳು ಒಂದು ಸರಳ, ಆತನಿನ್ನೂ ದಕ್ಕಲಿಲ್ಲ ಎಂಬಂತ ಸಾಲುಗಳಲ್ಲಿ ಧ್ವನಿತವಾಗಿವೆ. ಆಕೆ ತನ್ನ ಯಾವೊಂದು ವಚನದಲ್ಲೂ ಚೆನ್ನಮಲ್ಲಿಕಾರ್ಜುನನನ್ನು ತನಗಿಂತ ಬೇರೆಯಾಗಿ ಕಾಣುವುದೇ ಇಲ್ಲ.

"ಮೊಲೆ ಬಿದ್ದು, ಮುಡಿ ಸಡಲಿ, ಗಲ್ಲ ಬತ್ತಿ, ತೋಳು ಕಂದಿದವಳ
ಎನ್ನನೇಕೆ ನೋಡುವಿರಿ ಎಲೆ ಅಣ್ಣಗಳಿರಾ?
ಕುಲವಳಿದು ಛಲವಳಿದು ಭವಗೆಟ್ಟು ಭಕ್ತೆಯಾದವಳ,
ಎನ್ನನೇಕೆ ನೋಡುವಿರಿ ಎಲೆ ತಂದೆಗಳಿರಾ? ಚೆನ್ನಮಲ್ಲಿಕಾರ್ಜುನನ
ಕೂಡಿ ಕುಲವಳಿದು ಛಲವಳಿದವಳನು "

ಅಕ್ಕ ಸಮಾಜಕ್ಕೆ ಚಾಟಿ ಏಟು ನೀಡುವ ಸಾಲುಗಳಲ್ಲೂ ಚೆನ್ನಮಲ್ಲಿಕಾರ್ಜುನನ ಮೋಹವನ್ನು ಸ್ಥಾಪಿಸದೆ ಬಿಡಳು.

"ತನು ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯ ನೀನು,
ಮನ ಕರಗದವರಲ್ಲಿ ಗಂಧಾಕ್ಷತೆಯನೊಲ್ಲೆಯ್ಯಾ ನೀನು;
ಅರಿವು ಕಣ್ ತೆರೆಯದವರಲ್ಲಿ ಆರತಿಯನೊಲ್ಲೆಯ್ಯ ನೀನು,
ಭಾವಶುದ್ಧವಿಲ್ಲದವರಲಿ ಧೂಪವನೊಲ್ಲೆಯ್ಯ ನೀನು;
ಪರಿಣಾಮಿಗಳಲ್ಲದವರಲಿ ನೈವೇದ್ಯವನೊಲ್ಲೆಯ್ಯ ನೀನು,
ಹೃದಯಕಮಲವಿಲ್ಲದವರಲಿ ಇರಲೊಲ್ಲೆಯ್ಯ ನೀನು,
ಎನ್ನಲಿ ಏನುಂಟೆಂದು ಕರಸ್ಥಲದಲ್ಲಿ ಇಂಬುಗೊಂಡೆ ಹೇಳು
ಚೆನ್ನಮಲ್ಲಿಕಾರ್ಜುನ"

ಇಲ್ಲಂತೂ ಅಕ್ಕನ ಆರ್ತ ಪ್ರೇಮಭರಿತ ಭಕ್ತಿಗೆ ಬೇರೆ ಸಾಟಿಯೇ ಇಲ್ಲ. ಎಷ್ಟೊಂದು ಶರಣರು, ಭಕ್ತರು ನಿನ್ನ ಭಜಿಸಿದರು, ಪೂಜಿಸಿದರು. ಆದರೆ ನನ್ನಂಥ ಏನೂ ಇಲ್ಲದ ಭವಗೆಟ್ಟವಳಲ್ಲಿ ಏನು ಕಂಡು ಒಲಿದೆ ಚೆನ್ನಮಲ್ಲಿಕಾರ್ಜುನ ಎಂದು ಒತ್ತಾಯಿಸಿ ಕೇಳುವ ಅಕ್ಕನಿಗೆ ತನ್ನ ಭಕ್ತಿಯ ಮೇಲೆ, ತನ್ನ ಶಿವನ ಮೇಲೆ ಅದೆಂಥ ಗಾಢ ನಂಬಿಕೆ! ಆತ ತನ್ನವನೆಂಬ ಅದೆಂಥ ಅದಮ್ಯ ವಿಶ್ವಾಸ! ಯಾವ ಭಕ್ತ ಅಷ್ಟೊಂದು ಆತ್ಮವಿಶ್ವಾಸದಲ್ಲಿ ದೇವರು ನನ್ನವನೆಂದು ಹೇಳಿಕೊಳ್ಳಬಲ್ಲ!

ದೇವರ ಮೇಲೆ ಇಷ್ಟು ಪೊಸೆಸಿವ್ ಆಗಿ ಒಡೆತನ ಹೊಂದುವುದು ಭಕ್ತರೆಲ್ಲರಿಗೂ ಸಿದ್ಧಿಸಿಬಿಡುವ ಘಟ್ಟವಲ್ಲ. ಭಕ್ತಿ ಸಾಹಿತ್ಯದ ಹಲವು ಮಜಲುಗಳ ಕೀರ್ತನೆಗಳಿವೆ, ವಚನಗಳಿವೆ. ಆದರೆ ಅಕ್ಕನ ವಾಕ್ಕುಗಳಲ್ಲಿ, ಕನಕನ ಭಜನೆಗಳಲ್ಲಿನ ತಾದಾತ್ಮ್ಯ ಭಕ್ತಿಗೆ ಕೇವಲ ಅಧ್ಯಾತ್ಮ ಸಾಧನೆಯೊಂದೇ ಖಂಡಿತ ಕಾರಣವಲ್ಲ. ಸಾಮಾಜಿಕ ಅನ್ಯಾಯ ಅವರಿಂದ ಕಸಿದುಕೊಂಡಿದ್ದು ಹಲವನ್ನು; ಎಲ್ಲವನ್ನು! ಯಾರೊಬ್ಬರ ಬೆಂಬಲವೂ ಇಲ್ಲದೆ ದಿಕ್ಕೆಟ್ಟ ಅವರ ಬಳಿಯಿದ್ದದ್ದು ಅವರು ನಂಬಿದ ನಾಮಸ್ಮರಣೆಯೊಂದೆ! ಹಾಗಿದ್ದರೆ ಭವದ ಬವಣೆಗಳಿಂದ ಬಲವಂತವಾಗಿ ಬೇರಾಗುವ ಸಂದರ್ಭಗಳು ಅವರನ್ನು ಭಕ್ತಿ ಸಾಧನೆಯೆಡೆಗೆ ಅನಿವಾರ್ಯವಾಗಿ ತಂದೊಡ್ಡಿತ್ತೆ?

ಎಲ್ಲ ಕಳಕೊಂಡಲ್ಲದೆ ಅವನ ಪಡಕೊಳಲುಬಹುದೇ? ತಾನಾಗೆ ಎಲ್ಲ ತ್ಯಜಿಸಿ ಭಜಿಸಿದರೆ ಸ್ವಂತಕ್ಕೆ ದಕ್ಕುವನೆ? ಇದ್ದುದೆಲ್ಲವ ಕಸಿದು ದಬ್ಬಿ ನೂಕಿದರೆ ಸಿಕ್ಕುವ ತಳದಲ್ಲಿ ಅವ ಕಂಡರೆ ಮಾತ್ರ ಅವನೊಡನೆ ಇದ್ದುಬಿಡಬಹುದು, ಎದ್ದು ಬರಬಹುದು. ಇಲ್ಲದಿರೆ ಎಷ್ಟು ಬಿಟ್ಟರೂ, ಎಲ್ಲ ಬಿಟ್ಟರೂ ಹುಡುಕಾಟವೊಂದೆ ಕೊನೆಮುಗಿಲು.

ಅಂತೆಯೇ ಅಕ್ಕನಿಗೆ ಸಿಕ್ಕ ಸುಲಿಪಲ್ಲ ಗೊರವನನ್ನೂ ಕನಕನ ಸಮಯಾಸಮಯ ವಿಲ್ಲದ ಭಕ್ತವತ್ಸಲನನ್ನು ಅವರ ಎದೆ ಹಿಂಡುವ ಪದಗಳಲ್ಲಷ್ಟೇ ನಾ ಕಾಣಬಲ್ಲೆ.



# ದಾಸರ ಪದಗಳ ಒಗಟಿನ ಮೋಜು

–ಅನಿಲ ದೇಶಪಾಂಡೆ

**ಮಾ**ನವ ಜನ್ಮ ತಳೆದು ಬಂದ ಎಲ್ಲರಿಗೂ ಬರುವ ಪ್ರಶ್ನೆಗಳು "ನಾನು ಯಾರು?", "ನಾನೇಕೆ ಹುಟ್ಟಿಬಂದೆ"?, "ಕೇವಲ ಆಹಾರ, ನಿದ್ರೆ, ಮೈಥುನ ಮತ್ತು ಅದಕ್ಕೆ ಬೇಕಾದ ವ್ಯವಸ್ಥೆ ಮಾಡುವದೇ ಜೀವನವೇ?" "ಅದನ್ನು ಪ್ರಾಣಿಗಳೂ ಮಾಡುತ್ತವಲ್ಲ, ಅವುಗಳ ಹುಟ್ಟಿಗೂ ಅರ್ಥವಿದೆಯೇ? ನಮಗೂ ಪ್ರಾಣಿಗಳಿಗೂ ವ್ಯತ್ಯಾಸವೇನು?" "ಈ ಬದುಕಿನಲ್ಲಿ ಸಾಧಿಸಬೇಕಾದದ್ದಾದರೂ ಏನು?" "ಈ ಬದುಕಿನ ಉದ್ದೇಶವಾದರೂ ಏನು?"... ಒಂದೇ? ಎರಡೇ?

ಪ್ರಶ್ನೆಗಳು ಅನೇಕ. ಅವುಗಳಿಗೆ ಉತ್ತರ ಹುಡುಕುವ ದಾರಿಯೇ ಅಧ್ಯಾತ್ಮ. ಬದುಕಿನ ಬಸ್ ಹತ್ತಿದ ಮೇಲೆ ನಮ್ಮ ಕೊನೆ ಊರು ಸೇರುವ ತನಕ ಪಯಣದ ಮಧ್ಯದಲ್ಲಿ ಬರುವ ಅನೇಕ ಜನಗಳ, ಊರುಗಳ ಪರಿಸ್ಥಿತಿಗಳ ಪರಿಚಯ ಮತ್ತು ವಿವಿಧ ರೀತಿಯ ಅನುಭವ ನಮಗೆ ಆಗುತ್ತದೆ. ಅವನೇಕೆ ಹೀಗೆ? ಅವಳೇಕೆ ಹಾಗೆ? ಪ್ರತಿಯೊಬ್ಬರು ಭಿನ್ನರೆ? ಆ ಸಂದರ್ಭದಲ್ಲಿ ನಾನು ಆ ರೀತಿ ವರ್ತಿಸಿದ್ದು ಸರಿಯೆ? ನನ್ನ ಯಾವ ಕಾರ್ಯಕ್ಕಾಗಿ ಈ ಫಲಿತ? ಅಂತೆಲ್ಲ ಪ್ರಶ್ನೆಗಳು ಕಾಡುತ್ತವೆ .

ಇವೆಲ್ಲ ಒಗಟುಗಳಿಗೆ ಉತ್ತರ ಇದೆಯೆ? ಇದೆ. "ನಿನ್ನ ಒಗಟಿಗೆ ಉತ್ತರ ಕೊಡುವೆ ಬಾರೆ ಹತ್ತಿರ" ಎನ್ನುತ್ತಾರೆ ದಾಸರು (ದಯವಿಟ್ಟು ಇದು ದಾಸರ ಪದದ ಸಾಲು ಎಂದು ಭಾವಿಸಬೇಡಿ, ಹಾಸ್ಯಕ್ಕಾಗಿ ನಾನು ಸೇರಿಸಿದ್ದು.) ಆದರೆ ದಾಸರು ಕೊಡುವ ಉತ್ತರವೂ ಒಗಟಾದರೆ? ಅದಕ್ಕಾಗಿಯೇ "ಬಾರೆ ಹತ್ತಿರ" ಅಂದದ್ದು. "To go" "to know". "ಹತ್ತಿರ ಹೋಗುವದು" ಅಂದರೆ "ತಿಳಿದು ಕೊಳ್ಳುವದು" ಅಂತಲ್ಲವೇ? ಉಪ(ಹತ್ತಿರ)ನಿಷತ್(ಕುಳಿತುಕೊ) ಅಂದರೂ, ಉಪ (ಹತ್ತಿರ) ವಾಸ (ಇರುವದು) ಅಂದರೂ ಅದೇ ಅರ್ಥ ಕೊಡುತ್ತದೆ "To know". ಈ ಲೇಖನದ ಉದ್ದೇಶ ದಾಸರ ಒಗಟಿನ ಮಾತುಗಳನ್ನು ಅರಿಯುವ ಪ್ರಯತ್ನ. ಬನ್ನಿ ಅವುಗಳ ಹತ್ತಿರ ಹೋಗೋಣ.

ಒಗಟುಗಳನ್ನು ಒಡೆಯುವುದೇ ಒಂದು ಮೋಜು. ಕಪ್ಪೆಚಿಪ್ಪು ಒಡೆದು ಮುತ್ತು ಹೆಕ್ಕಿದಂತೆ. ಹೀಗಾಗಿ ಬಾಳಿಗೆ ಅಧ್ಯಾತ್ಮದ ದಾರಿ ಅವಶ್ಯಕವಾಗಿಬಿಡುತ್ತದೆ. ಜಗತ್ತಿನ ಯಾವುದೇ ಭಾಷೆ ಇರಲಿ ಅಲ್ಲಿಯ ಕವಿಗಳು ಮತ್ತು ಲೇಖಕರು ಅಧ್ಯಾತ್ಮ ಸಂದೇಶಗಳನ್ನು ಸಾರದೆ ಬಿಟ್ಟಿಲ್ಲ. ಒಂದು ರೀತಿಯಲ್ಲಿ ನೋಡಿದರೆ, ಯಾವ ಭಾಷೆ ಎಷ್ಟು ಸಮೃದ್ಧವಾಗಿ ಬೆಳೆದಿದೆ ಎನ್ನುವದಕ್ಕೆ ಆ ಭಾಷೆಯಲ್ಲಿಯ ಅಧ್ಯಾತ್ಮ ಸಂಬಂಧಿತ ಕೃತಿಗಳು ಅಳತೆಗೋಲಾಗುತ್ತವೆ. ನನ್ನ ಮಿತವಾದ ಅಧ್ಯಯನದ ಪ್ರಕಾರ ಆಂಗ್ಲ ಭಾಷೆ ಮತ್ತು ಇನ್ನಿತರ ಭಾರತಿಯ ಭಾಷೆಗಳನ್ನು ಹೋಲಿಸಿದರೆ ಕನ್ನಡ ಭಾಷೆಯ ಅಧ್ಯಾತ್ಮ ಸಂಬಂಧಿತ ಕೃತಿಗಳು ಸಂಖ್ಯೆ ಮತ್ತು ಶಾಸ್ತ್ರದ ದೃಷ್ಟಿಯಿಂದ ಅಗ್ರಸ್ಥಾನದಲ್ಲಿವೆ. ಸಂಸ್ಕೃತ ಭಾಷೆಯ ನಂತರ ಕನ್ನಡ ಭಾಷೆಯ ಕೃತಿಗಳೇ ಹೆಚ್ಚು ಅಧ್ಯಾತ್ಮ ಸಂದೇಶಗಳನ್ನು ಒಳಗೊಂಡಿವೆ ಎನ್ನಬಹುದು. ಅದಕ್ಕೆ ಕಾರಣ ದಾಸಸಾಹಿತ್ಯದ ಅಪಾರ ಕೊಡುಗೆ.

ದಾಸರು ಹೇಳುವಂತೆ "ಅಲ್ಲಿದೆ ನಮ್ಮನೆ ಇಲ್ಲಿ ಬಂದೆವು ಸುಮ್ಮನೆ" ಅನ್ನುವದಾಗಲಿ ಅಥವಾ "ಮಾನವ ಜನುಮ ದೊಡ್ಡದೋ ಇದ ಹಾನಿ ಮಾಡಲುಬ್ಯಾಡಿ ಹುಚ್ಚಪ್ಪಗಳಿರಾ" ಎನ್ನುವ ಸಂದೇಶಗಳು, ನಮ್ಮನ್ನು ಈ ನಿತ್ಯದ ಹೈಸ್ಪೀಡ್ ಬದುಕಿನಲ್ಲಿ ಒಂದು ಕ್ಷಣ ನಿಂತು ನೋಡುವಂತೆ ಮಾಡುತ್ತವೆ. ಈ ಲೇಖನದ ಮೂಲಕ ನಾವು ದಾಸಸಾಹಿತ್ಯದ ಕೆಲವು ಕೃತಿಗಳ ಅಧ್ಯಯನ ಮಾಡಲು ಪ್ರಯತ್ನಿಸೋಣ. ಅಧ್ಯಯನದೊಂದಿಗೆ ಕೃತಿಯ ಆಳದ ಪರಿಚಯ ಮತ್ತು ಕಾವ್ಯಶಕ್ತಿಯ ರಸಾನುಭವವೂ ಆದೀತು. ಅಲ್ಲಿಗೆ ಅಧ್ಯಾತ್ಮ ಪ್ರಪಂಚಕ್ಕೆ ಕನ್ನಡ ಭಾಷೆಯ ಕೊಡುಗೆಗಳ ಪರಿಚಯವೂ ಆದಂತೆ. ಸುಮಾರು ನಾಲ್ಕುವರೆ–ಐದು ಲಕ್ಷ ಪದ್ಯಗಳ ರಚನೆಗಳೊಂದಿಗೆ ಪುರಂದರ ದಾಸರು ದಾಸಸಾಹಿತ್ಯದ ಅಗ್ರಗಣ್ಯರೆನಿಸಿಕೋಳ್ಳುತ್ತಾರೆ. ಇಲ್ಲಿ ನಾನು ಮೂರು ಪದ್ಯಗಳನ್ನು ಆಯ್ದುಕೊಂಡಿದ್ದೇನೆ. ಈ ಮೂರು ಪದ್ಯಗಳು ನಮ್ಮ ನಿತ್ಯ ಜೀವನದ ಅನುಭವಕ್ಕೆ ಹತ್ತಿರವಾದವು. "ಗಡಿಗೆ ಮಾಡುವ ಕುಂಬಾರ", ಮನೆಯ ಮುಂದೆ ನಿಂತು "ಶುಭಶಕುನ ಹೇಳುವ ಬುಡುಬುಡಿಕೆ", "ಅಕ್ಕನೊಡನೆ ನೀರು ತರಲು ಹೋಗುವದು", ಇಂಥ ದಿನ ನಿತ್ಯದ ಸಂಗತಿಗಳಲ್ಲೇ ದಾಸರು ಸರಳ ಸುಂದರ ಭಾಷೆಯಲ್ಲಿ ಅತ್ಯಂತ ಮಹತ್ವದ ವಿಷಯವನ್ನು ಹೇಳುವ ರೀತಿ ವಾಮನ ತ್ರಿವಿಕ್ರಮನಾದ ಬಗೆಯನ್ನು ತೋರುತ್ತಾರೆ. ಅವರು ಹಾಡಿದ್ದೆಲ್ಲ ಉಪನಿಷತ್ತು.

**ಮುಳ್ಳು ಕೊನೆಯ ಮೇಲೆ ಮೂರು ಕೆರೆಯ ಕಟ್ಟಿ**
**ಎರಡು ತುಂಬದು ಒಂದು ತುಂಬಲೆ ಇಲ್ಲ**
**ತುಂಬಲಿಲ್ಲದ ಕೆರೆಗೆ ಬಂದರು ಮೂವರು ಒಡ್ಡರು**
**ಇಬ್ಬರು ಕುಂಟರು ಒಬ್ಬಗೆ ಕಾಲೇ ಇಲ್ಲ**
**ಕಾಲಿಲ್ಲದ ಒಡ್ಡಗೆ ಕೊಟ್ಟರು ಮೂರು ಎಮ್ಮೆಗಳ**

ಎರಡು ಬರಡು ಒಂದಕೆ ಕರುವೇ ಇಲ್ಲ
ಕರುವಿಲ್ಲದ ಎಮ್ಮೆಗೆ ಕೊಟ್ಟರು ಮೂರು ಹೊನ್ನುಗಳ
ಎರಡು ಸವೆಕಲು ಒಂದು ಸಲ್ಲಲೆ ಇಲ್ಲ
ಸಲ್ಲದಿದ್ದ ಹೊನ್ನಿಗೆ ಬಂದರು ಮೂವರು ನೋಟಗಾರರು
ಇಬ್ಬರು ಕುರುಡರು ಒಬ್ಬಗೆ ಕಣ್ಣೇ ಇಲ್ಲ
ಕಣ್ಣಿಲ್ಲದ ನೋಟಗಾರಗೆ ಕೊಟ್ಟರು ಮೂರು ಊರುಗಳ
ಎರಡು ಹಾಳು ಒಂದಕೆ ಒಕ್ಕಲೆ ಇಲ್ಲ ಒಕ್ಕಲಿಲ್ಲದ ಊರಿಗೆ
ಬಂದರು ಮೂವರು ಕುಂಬಾರರು
ಇಬ್ಬರು ಚೊಂಚರು ಒಬ್ಬಗೆ ಕೈಯೇ ಇಲ್ಲ
ಕೈಯಿಲ್ಲದ ಕುಂಬಾರನು ಮಾಡಿದ ಮೂರು ಮಡಕೆಗಳ
ಎರಡು ಒಡಕು ಒಂದಕೆ ಬುಡವೇ ಇಲ್ಲ
ಬುಡವಿಲ್ಲದ ಮಡಕೆಗೆ ಹಾಕಿದರು ಮೂರಕ್ಕಿಕಾಳ
ಎರಡು ಬೇಯದು ಒಂದು ಬೇಯಲೇ ಇಲ್ಲ
ಬೇಯಲಿಲ್ಲದ ಅಕ್ಕಿಗೆ ಬಂದರು ಮೂವರು ನಂಟರು
ಇಬ್ಬರು ಉಣ್ಣರು ಒಬ್ಬಗೆ ಹಸಿವೇ ಇಲ್ಲ
ಹಸಿವಿಲ್ಲದ ನಂಟಗೆ ಕೊಟ್ಟರು ಮೂರು ಟೊಣಪೆಗಳ
ಎರಡು ಸೊಂಕವು ಒಂದು ತಾಕಲೆ ಇಲ್ಲ
ತಾಕಲಿಲ್ಲದ ಟೊಣಪೆಯ ತಾಕಿಸಿ ಸದ್ಗತಿಯ
ನೀಯಬೇಕು ಪುರಂದರವಿಠಲ ನೀನು

"ಮುಳ್ಳು ಕೊನೆಯ ಮೇಲೆ ಮೂರು ಕೆರೆಯ ಕಟ್ಟಿ" ಎನ್ನುವ ಈ ಪದ್ಯದಲ್ಲಿ ಮೋಕ್ಷ ಸಾಧನೆಗಾಗಿ ಮಾನವ ಜನ್ಮ ಪಡೆದು ಬರುವ ಜೀವಿಗಳು ಹೇಗೆ ಬಂದ ಉದ್ದೇಶವನ್ನೇ ಮರೆತು ವಿಷಯ ಭೋಗಗಳಲ್ಲಿ ಆಸಕ್ತರಾಗಿ ಬಳಲುತ್ತಾರೆ ಅನ್ನುವದರ ಕಥೆ ಇದೆ. ಇದೇ ತರಹದ ಒಗಟಿನ ಕಥೆಯನ್ನು ನಾವು ಭಾಗವತ ಪುರಾಣದ "ಪುರಂಜನ ಉಪಾಖ್ಯಾನ"ದಲ್ಲಿ ಕಾಣಬಹುದು. ಈ ರಚನೆಯನ್ನು ಜಾನಪದ ಶೈಲಿಯ ಲಾವಣಿ ಪದದ ಧಾಟಿಯಲ್ಲಿ ಹಾಡಿ ಆನಂದಿಸಬಹುದು. ಇಲ್ಲಿ ದಾಸರು ಬದುಕನ್ನು ಮೂರರ ಆವೃತ್ತಿ ರೂಪದಲ್ಲಿ ಪರಿಚಯಿಸಿ, ತಮ್ಮ ಸಂಖ್ಯಾ ಶಾಸ್ತ್ರ, ವೇದ ಶಾಸ್ತ್ರ ಮತ್ತು creative ಕಾವ್ಯ ಶೈಲಿಯನ್ನು ಮೆರೆಯುತ್ತಾರೆ. ಈ ಪದ್ಯದಲ್ಲಿ ಬರುವ "ಮುಳ್ಳುಕೊನೆ" ಅಣುಪರಮಾಣು "ಜೀವ", ಮೂರು ಕೆರೆಗಳು ಅಂದರೆ ಜೀವದ ಮೇಲಿನ ಮೂರು ಕವಚ ಎನ್ನಿಸಿಕೊಳ್ಳುವ ಲಿಂಗದೇಹ, ಅನಿರುದ್ಧದೇಹ (ತುಂಬಲಾರದವು) ಹಾಗೂ ಸ್ಥೂಲದೇಹ. Astral, Causal and Gross body. ಲಿಂಗ ಮತ್ತು

ಅನಿರುದ್ಧ ದೇಹಗಳು ಅಪ್ರಾಕೃತಿಕ (non physical) ದೇಹಗಳು ಆದುದರಿಂದ ಸಾಧನೆಯಿಂದ ತುಂಬಲಾರದ್ದವು. ಸಾಧನೆಗೆ ಅನುಕೂಲವಾದದ್ದು ಸ್ಥೂಲ (ಪ್ರಾಕೃತಿಕ physical) ದೇಹ. ಅದೇ ಸಾಧನ ಶರೀರ. ಆದರೆ ಸ್ಥೂಲದೇಹ ಪಡೆದ ಜೀವ, ದೇಹ ಭಾವಕ್ಕೆ ಒಳಗಾಗಿ ಸಾಧನೆ ಮಾಡದೆ ಇರುವದರಿಂದ ಕೆರೆ ತುಂಬಲೇ ಇಲ್ಲ ಆಗುತ್ತದೆ (ಅಧ್ಯಾತ್ಮ ಸಾಧನೆ ಆಗಲೆ ಇಲ್ಲ ಎಂದು ಅರ್ಥ).

ಅಲ್ಲಿಗೆ ಬಂದ "ಮೂವರು ಒಡ್ಡರು" ಸ್ಥೂಲದೇಹದ ಮೂರು ಅವಸ್ಥೆಗಳನ್ನು ಹೇಳುತ್ತವೆ. "ಬಾಲ್ಯ", "ಯವ್ವನ" ಮತ್ತು "ವೃದ್ಧಾಪ್ಯ". ಬಾಲ್ಯ ಮತ್ತು ಮುಪ್ಪಿನಲ್ಲಿ ತಿಳಿಯುವ ಶಕ್ತಿ ಕಡಿಮೆ ಇದ್ದುದರಿಂದ ಅವು "ಕುಂಟರು" ಎನ್ನಿಸಿಕೊಳ್ಳುತ್ತವೆ. ಯವ್ವನದಲ್ಲಿ ವಿಷಯ ಭೋಗಗಳ ಆಕರ್ಷಣೆ ಹೆಚ್ಚಾಗಿ ಮನ ಹುಚ್ಚಾಗಿ ಅಧ್ಯಾತ್ಮದ ಕಡೆಗೆ ಕಾಲು ಹಾಕಲೇ ಇಲ್ಲ! "ಮೂರು ಎಮ್ಮೆಗಳು ಅಂದರೆ ಜೀವನದ ಮೂರು ಬಗೆಯ ಬಯಕೆಗಳು; ಲೋಕಮನ್ನಣೆ, ಸಂಗಾತಿ ಹಾಗೂ ಧನ. ಸಂಗಾತಿ ಮತ್ತು ಲೋಕಮನ್ನಣೆಗಳಿಂದ ಅಧ್ಯಾತ್ಮ ಸಾಧನೆ ಸಾಧ್ಯತೆ ಕಡಿಮೆ ಆದ್ದರಿಂದ ಅವು ಬರಡು ಎಮ್ಮೆಗಳೆಂದೆನಿಸಿಕೊಳ್ಳುತ್ತವೆ. ಇದ್ದುದರಲ್ಲಿ ಧನ ಉಪಯೋಗಿಸಿ ದಾನ ಧರ್ಮ ಮಾಡಬಹುದಿತ್ತೇನೊ? ಅದನ್ನೂ ಮಾಡದೆ ಇರುವದರಿಂದ, ಇನ್ನೊಂದಕ್ಕೆ ಕರುವೇ ಇಲ್ಲ (ಫಲವೇ ಇಲ್ಲ) ಎಂದಾಗುತ್ತದೆ. ಧನಕ್ಕೆ ಇರುವ ಮೂರು ದಾರಿಗಳೆಂದರೆ ಭೋಗ, ನಾಶ, ದಾನ. ಭೋಗ ಮತ್ತು ನಾಶ ಇವೆರಡು ಸವಕಲು ನಾಣ್ಯಗಳು ಅಧ್ಯಾತ್ಮ ಸಾಧನೆಗೆ ಪೂರಕ ಅಲ್ಲದವು. "ದಾನ"ದಿಂದ ಏನಾದರು ಸಾಧನೆ ಮಾಡಬಹುದಿತ್ತೇನೋ ಆದರೆ ಮಾನವರು ಅದನ್ನು ಮಾಡದೆ ಸಲ್ಲದಾಗುವರು. ದಾನಕ್ಕೆ ಬಂದ ಮೂವರು ನೋಟಗಾರರು ಮೂರು ಕರ್ಮಗಳು ಸಂಚಿತ (past accumulated), ಆಗಾಮಿ (future) ಮತ್ತು ಪ್ರಾರಬ್ಧ (current). ಈ ಕರ್ಮಗಳಿಂದಲೇ ಕಾಲಕ್ಕೆ ತಕ್ಕಂತೆ ಫಲ. "ನನಗೇ ಏಕೆ ಹೀಗಾಯಿತು?" ಎನ್ನುವಂಥ ಪ್ರಶ್ನೆಗಳಿಗೆ ಉತ್ತರ. ಸಂಚಿತ ಕರ್ಮಗಳು ಹಿಂದಿನ ಜನ್ಮದಿಂದ ಬಂದವು, ಆಗಾಮಿ ಕೂಡ ಕಾಣ ಸಿಗವು ಆದರೆ ಪ್ರಾರಬ್ಧಕರ್ಮವನ್ನು ಮಾನವರು ಅನುಭವಿಸಿಯೇ ತೀರಬೇಕು, ಅದರಿಂದ ಪಾಠ ಕಲಿಯಬೇಕು, ಕಲಿತು ತಿದ್ದಿಕೊಳ್ಳಬೇಕು, ಸಾಧನೆಗೆ ದಾರಿ ಕಾಣಬೇಕು. ಅಷ್ಟಿದ್ದರೂ ನಾವು ವಿಷಯಭೋಗದಲ್ಲಿ ಲೀನರಾಗಿ ಅದನ್ನೂ ಕಾಣದಾದೆವು. ಅದಕೆಂದೇ ದಾಸರು ಹೇಳುವುದು "ಇಬ್ಬರು ಕುರುಡರು, ಒಬ್ಬಗೆ ಕಣ್ಣೇ ಇಲ್ಲ" ಎಂದು.

ಈ ರೀತಿಯಲ್ಲಿ ಪುರಂದರ ದಾಸರು ವೈದಿಕ ಶಾಸ್ತ್ರದ ವಿಷಯಗಳನ್ನು ಸುಂದರ ಮತ್ತು ಸರಳ ಕಾವ್ಯ ರೂಪದಲ್ಲಿ ಪರಿಚಯಿಸುತ್ತಾರೆ. ಇಲ್ಲಿನ ಜಿಜ್ಞಾಸೆಗಳಿಗೆ, ದಾಸರು ಒಗಟಿನ ರೂಪದಲ್ಲಿ ಹೇಳಿದ್ದನ್ನು ಅರ್ಥಮಾಡಿಕೊಳ್ಳುವುದಕ್ಕೆ ವೈದಿಕ ಶಾಸ್ತ್ರದ ಬಗೆಗಿನ ಆಸಕ್ತಿ ಮತ್ತು ಅಧ್ಯಯನ ಅವಶ್ಯವಾಗುತ್ತದೆ. ಇಲ್ಲದೇ ಹೋದರೆ, ರಸಪೂರಿ ಮಾವಿನ

ಹಣ್ಣನ್ನು ಕೇವಲ ಕಣ್ಣಿನಿಂದ ನೋಡಿ ಅನುಭವಿಸದಂತೆ ಆಗುತ್ತದೆ. ಅದರ ರಸಸ್ವಾದದ ಅನುಭವದಿಂದ ವಂಚಿತರಾಗುತ್ತಾರೆ. ಈ ತರಹದ ಕಾವ್ಯಶಕ್ತಿ ಮತ್ತು ಶಾಸ್ತ್ರ ಪ್ರಮೇಯಗಳ ಮಿಲನ ಕನ್ನಡ ಸಾಹಿತ್ಯದಲ್ಲಿ, ಅದೂ ದಾಸ ಸಾಹಿತ್ಯದಲ್ಲಿ ಹೇರಳವಾಗಿ ಕಾಣಬಹುದು. ಈಗ ಪದ್ಯದ ಮುಂದಿನ ಭಾಗದ ರುಚಿ ಸವಿಯೋಣ. ಅದರ ಮಾಧುರ್ಯ, ಅದರಿಂದಾಗುವ ಆನಂದವೇ ಬೇರೆ ಅಲ್ಲವೆ? ಕಾಮನ ಬಿಲ್ಲನು ಕಂಡಾಗ ಆಗುವ ಆಶ್ಚರ್ಯಚಕಿತ ಆನಂದದಂತೆ.

"ಕಣ್ಣಿಲ್ಲದ ನೋಟಗಾರಗೆ ಕೊಟ್ಟರು ಮೂರು ಊರುಗಳ" ಇಲ್ಲಿ ಮೂರು ಊರುಗಳು ಮನುಷ್ಯ ಜೀವದ ಗುಣಗಳು. ಸತ್ವ, ರಜಸ್ಸು ಮತ್ತು ತಮಸ್ಸು. ಊರುಗಳಿದ್ದಲ್ಲಿ ಅಲ್ಲವೆ ನಮ್ಮ ವ್ಯವಹಾರ, ವಹಿವಾಟುಗಳು ಮತ್ತು ಏಳಿಗೆ. "ತಮ" ಮತ್ತು "ರಜೊ" ಗುಣಗಳು ಅಧ್ಯಾತ್ಮ ಸಾಧನೆಗೆ ಪೂರಕವಲ್ಲದವು. ಇದಕ್ಕೆ ವಿಶ್ವಾಮಿತ್ರನ ಸಾಧನೆಯ ಪ್ರಯತ್ನಗಳು ನಮಗೆ ಒಳ್ಳೆಯ ಉದಾಹರಣೆ ಆಗುತ್ತವೆ. ಆ ಕಥೆಯನ್ನು ದೇವುಡು ಅವರ "ಮಹಾ ಬ್ರಾಹ್ಮಣ" ಕೃತಿ ಚೆನ್ನಾಗಿ ಚಿತ್ರಿಸಿದೆ. "ತಮ" ಮತ್ತು "ರಜೊ" ಗುಣಗಳು ಸಮಾಜದ ವ್ಯವಹಾರದ ದೃಷ್ಟಿಯಿಂದ ಅವಶ್ಯವಾದರೂ, ಅಧ್ಯಾತ್ಮ ಸಾಧನೆಗೆ ಉಪಯೋಗವಿಲ್ಲದ ಹಾಳುಬಿದ್ದ ಊರುಗಳು. "ಸಾತ್ವಿಕ ಗುಣವೆಂಬ" ಊರು ಅಧ್ಯಾತ್ಮ ಸಾಧನೆಗೆ ಪೂರಕ, ಆದರೆ ಮಾನವರು, ದೊರೆತ ಆ ಒಂದು ಊರನ್ನು (ಅವಕಾಶ) ಸರಿಯಾಗಿ ಉಪಯೋಗಿಸದೇ "ಒಕ್ಕಲೆ ಇಲ್ಲದಂತೆ" ಆಗುತ್ತಾರೆ. ಇದನ್ನೇ ದಾಸರ ಇನ್ನೊಂದು ಪದ್ಯದಲ್ಲಿ ಕಾಣಬಹುದು. "ಮಾನವ ಜನ್ಮ ದೊಡ್ಡದೊ, ಇದ ಹಾನಿ ಮಾಡಲು ಬ್ಯಾಡಿ ಹುಚ್ಚಪ್ಪಗಳಿರ" ಎಂದು. ಅಂಥ ಒಕ್ಕಲಿಲ್ಲದ ಊರಿಗೆ ಕೆಲಸಕ್ಕೆ ಬಂದ ಮೂವರು ಕಲೆಗಾರರು ಮಣ್ಣಿಂದ ಮಡಕೆ ಮಾಡುವ ಕಲೆ ಅರಿತ ಕುಂಬಾರರು! ಬ್ರಹ್ಮ, ವಿಷ್ಣು, ಮಹೇಶ್ವರರು. ಸೃಷ್ಟಿ, ಸ್ಥಿತಿ, ಲಯಕ್ಕೆ ಕಾರಣರು. ಮಣ್ಣಿಂದ ಮಡಕೆ ಮಾಡುವಲ್ಲಿ ಬೇಕಾದ ವಸ್ತುಗಳು "ಮಣ್ಣು"– ತಮೋ ಪ್ರಧಾನ, "ನೀರು"– ಸತ್ವ ಪ್ರಧಾನ, "ಬೆಂಕಿ"– ರಜೋ ಪ್ರಧಾನ ಮತ್ತು ಕಲೆ ಅರಿತ ಕುಂಬಾರ (creator). ಆದರೆ ಇಲ್ಲಿ ಒಂದು ಮುಖ್ಯ ವಿಷಯ ಅರಿತುಕೊಳ್ಳಬೇಕು. ಮೊದಲೇ ಹೇಳಿದಂತೆ ಕಾವ್ಯ ಆಸ್ವಾದನೆಗೆ ಕವಿಯ ಹಿನ್ನೆಲೆ, ಕಾಲ ಮಾನಗಳ ಅರಿವು ಸಹಾಯಕವಾಗುತ್ತವೆ. ದಾಸ ಸಾಹಿತ್ಯಕ್ಕೆ ಮುಖ್ಯವಾಗಿ ಮಧ್ವ ಸಿದ್ಧಾಂತದ "ತತ್ವವಾದ" ಆಧಾರವಾಗಿದೆ, ತತ್ವವಾದದ ಪ್ರಕಾರ ಸೃಷ್ಟಿಯ ತತ್ವಗಳಲ್ಲಿ ಎರಡು ವಿಧ. ಸಂಪೂರ್ಣ ಸ್ವತಂತ್ರ ತತ್ವ Independent Reality ಒಂದೇ ಒಂದು. ಅದು "ಹರಿ" ಅಥವಾ ಪರಮಾತ್ಮ, ಉಳಿದೆಲ್ಲ ತತ್ವಗಳು ಅಸ್ವತಂತ್ರವಾದವು Dependent reality. ಬ್ರಹ್ಮ ಮತ್ತು ಮಹೇಶರನ್ನೂ ಸೇರಿ, ಗಣಪ, ಇಂದ್ರ, ವಾಯು ಇತ್ಯಾದಿ ದೇವತೆಗಳು, ಮಾನವರು, ಇತರೆ ಚರಾಚರ ಜೀವಿಗಳು ಕೂಡ ಅಸ್ವತಂತ್ರರು! ಮುಂದಿನ ಪದ್ಯ ಭಾಗವನ್ನು

ಅರ್ಥ ಮಾಡಿಕೊಳ್ಳಲು ಇಷ್ಟು ಹಿನ್ನೆಲೆ ಸಾಕು. ಇಲ್ಲಿ ಒಕ್ಕಲೆದ್ದ ಊರಿಗೆ ಬಂದ ಮೂವರು ಕಲೆಗಾರಲ್ಲಿ ಇಬ್ಬರು ಅಸ್ವತಂತ್ರರು ಅಂದರೆ, ಕುಂಬಾರನಿಗೆ ಮುಖ್ಯವಾದ ಅಂಗ, ಕೈ ಇಲ್ಲದವರು, ಅದಕ್ಕಾಗಿ ಅವರು ಚೊಂಚರು. ಇನ್ನು ಉಳಿದ ಸ್ವತಂತ್ರನಾದ ಪರಮಾತ್ಮ ಎಲ್ಲ ತತ್ವಗಳಲ್ಲಿ ನಿಂತು ಕೃತಿಯ ನಡೆಸುವನು(ಳು), ಅವನೇ ಕಾಣದ ಕೈ. ಆದರೆ, ಮಾನವರು ಅದನ್ನು ಅರಿಯದೆ, ತಮ್ಮಲ್ಲಿ ಮತ್ತು ಎಲ್ಲರದಲ್ಲಿಯೂ (ಪಿಂಡಾಂಡ ಮತ್ತು ಬ್ರಹ್ಮಾಂಡ) ಇರುವ ಹಿರಿಯ ತತ್ವವನ್ನು ಅರಿಯದೆ, ಅದರೆಡೆಗೆ ಮನಸು ಕೊಡದೆ, ಕುಂಬಾರನಿಗೆ ಮಣ್ಣಿಂದೆ ಮಡಿಕೆ ಮಾಡುವುದಕ್ಕೆ ಕೈಬಾರದಂತೆ ಆಗುತ್ತದೆ. ಆದ್ದರಿಂದ "ಇಬ್ಬರು ಚೊಂಚರು ಒಬ್ಬಗೆ ಕೈಯೇ ಇಲ್ಲ". ಆದರೂ ಮಡಿಕೆ ಆಯಿತೆಂದು ತಿಳಿಯೋಣ, ಆಗಿದ್ದಾದರು ಎಂಥ ಮಡಕೆಗಳು? "ಎರಡು ಒಡಕಲು, ಒಂದಕ್ಕೆ ತಳವೇ ಇಲ್ಲ."

ಈ ಮೂರು ಮಡಕೆಗಳೆಂದರೆ ಜ್ಞಾನ, ಭಕ್ತಿ ಮತ್ತು ವೈರಾಗ್ಯ. ಈ ಮೂರು ಮಡಕೆಗಳು ಮೋಕ್ಷ ಸಾಧನೆಯ ಉಪಾಯಗಳು. "ಮಡಕೆ"– "ಜ್ಞಾನ" ಎನ್ನುವಾಗ ನಿಮಗೆ ಈಗ ಭಕ್ತ ಕುಂಬಾರ ಚಲನ ಚಿತ್ರದ ಸಂಭಾಷಣೆ ನೆನಪಾಗಿರಲೂಬಹುದು ಅಲ್ಲವೇ? ಅದರಲ್ಲಿ ಭಕ್ತ ಕುಂಬಾರ, ಜ್ಞಾನಿಯಾದ ವಾಮದೇವನ ತಲೆಗೆ ಬಾರಿಸಿ "ಇದು ಅರ್ಧ ಬೆಂದ ಮಡಿಕೆ" ಎನ್ನುವ ಮಾತು "ಜ್ಞಾನದ" ಅಥವಾ ಅರಿವಿನ ಬಗೆಗೆ ಹೇಳಿದ್ದು. ಅದೇನೆ ಇರಲಿ, ಮಾನವ ಜನ್ಮದಲ್ಲಿ ಮೋಕ್ಷಸಾಧನೆಗೆ ಈ ಮೂರು ಉಪಾಯಗಳು, ಮಡಕೆಗಳು. ಆದರೆ ಆ ಮೂರು ಮಡಕೆಗಳಲ್ಲಿ, ಜೀವನಿಗೆ "ಜ್ಞಾನ" ಮತ್ತು "ವೈರಾಗ್ಯ" ತಾನಾಗಿಯೇ ಬಾರವು, ಆದರೆ ಮಾನವರು "ಭಕ್ತಿಗೆ" ಮನಸ್ಸು ಮಾಡರು! ಹಾಗಾಗಿ "ಎರಡು ಒಡಕಲು ಒಂದಕ್ಕೆ ತಳವೇ ಇಲ್ಲ" ಎಂದಾಗುತ್ತದೆ! ಒಂದು ವೇಳೆ ಮಡಕೆಗೆ ತಳವಿದೆ (ಭಕ್ತಿ ಬಂತೆಂದು) ಎಂದು ಭಾವಿಸೋಣ. ಅದರಲ್ಲಿ ಹಾಕಿದ ಮೂರು ವಿಧದ ಅಕ್ಕಿಗಳೆಂದರೆ ಬಾಹ್ಯ–ಭಕ್ತಿ (ತಮೊ ಆಧರಿತ, ತೋರಿಕೆಯದು), "ಅನನ್ಯ–ಭಕ್ತಿ" exclusive and passionate (ರಾಜಸಿಕ ಆಧಾರಿತ) ಮತ್ತು "ಏಕಾಂತ–ಭಕ್ತಿ" ಸಾತ್ವಿಕವಾದುದು ಅಥವಾ Selfless divine love. ಮೊದಲ ಎರಡು ಭಕ್ತಿಗಳು ಕಾಮನೆಯೊಂದಿಗೆ ಕೂಡಿರುವುದರಿಂದ ಅವು ಬೇಯಲಾರದ ಅಕ್ಕಿಗಳು. ಇನ್ನು ಬೇಯಬಹುದಾಗಿದ್ದ ಮೂರನೆಯ "ಭಕ್ತಿಗೆ" ಭಗವಂತನ ಪ್ರೇರಣೆ ಇಲ್ಲದೆ ಬೇಯಲೇ ಇಲ್ಲ. ಆ ಬೇಯದ ಅನ್ನಕೆ ಉಣ್ಣಲು ಬಂದ ಮೂವರು ನೆಂಟರು ಅಂದರೆ, ತ್ರಿಕರಣಗಳಾದ "ಮನಸ್ಸು", "ಮಾತು" ಮತ್ತು "ಇಂದ್ರಿಯಗಳು". "ಮಾತು" ಮತ್ತು ಉಳಿದ "ಇಂದ್ರಿಯಗಳು" ವಿಷಯ ಭೋಗದಲ್ಲೇ ಆಸಕ್ತಿ ಹೊಂದಿರುವುದರಿಂದ ಅವುಗಳಿಂದ ಅಧ್ಯಾತ್ಮ ಸಾಧನೆ ಲಭ್ಯವಾಗದು. ಆದ್ದರಿಂದ ಅವು ಉಣ್ಣದವರು. ಇನ್ನೊಬ್ಬ "ಮನಸ್ಸ್", ಸಾಧನೆಗೆ ತೊಡಗಬಹುದಾದರೂ (ಉಣ್ಣಬಹುದಾದವ), ಸಾಧನೆಗೆ

ಮನಸ್ಸು ಮಾಡುವ ಹಸಿವೆ ಇಲ್ಲದವ. ಕೊನೆಗೆ ಸಾಧನೆಗೆ ಮನಸ್ಸು ಮಾಡದವನಿಗೆ ಮೂರು ಪೆಟ್ಟುಗಳು (ಉತ್ತರ ಕರ್ನಾಟಕ ಭಾಷೆಯಲ್ಲಿ ಟೊಣಪೆಗಳು) ಬೀಳುತ್ತವೆ, ಆ ಬಿದ್ದ ಮೂರು ಪೆಟ್ಟುಗಳಲ್ಲಿಯೂ "ಎರಡು ಸೊಂಕವು ಒಂದು ತಾಕಲೇ ಇಲ್ಲ!" ಈ ಮೂರು ಪೆಟ್ಟುಗಳು, ಮೂರು ರೀತಿಯ ದುಃಖಗಳು "ಅತೀತ", "ಅನಾಗತ" ಮತ್ತು "ವರ್ತಮಾನ". ಅತೀತ ಮತ್ತು ಅನಾಗತ ದುಃಖಗಳು ಅನುಭವಕ್ಕೆ ದೂರ, ವರ್ತಮಾನದ ದುಃಖಗಳಿಂದ ವಿರಕ್ತಿ ಹುಟ್ಟಿ ಸಾಧನೆಗೆ ಎಡೆಮಾಡಬಹುದೇನೋ ಆದರೆ ಅದರಿಂದಲೂ ಪಾಠ ಕಲಿಯದಾದೆವು. ಇಷ್ಟೆಲ್ಲಾ ಅಡತಡೆಗಳಿದ್ದ ಬದುಕಿನಲ್ಲಿ, ನಾವು ಕೊನೆಗೆ ಭಗವಂತನಲ್ಲಿ ಬೇಡುವುದೇನೆಂದರೆ, ಈ ವರ್ತಮಾನದ ದುಃಖಗಳಿಂದಾದರೂ ಪಾಠ ಕಲಿಸಿ, ವಿರಕ್ತಿ ಹುಟ್ಟಿಸಿ ಅದರಿಂದ ಭಕ್ತಿ ಕರುಣಿಸು. ಮುಕುತಿಗೆ ದಾರಿಮಾಡಿಕೊಡು ಎಂದು. ಈ ರೀತಿ ದಾಸರು ಜಾನಪದ ಶೈಲಿಯಲ್ಲಿ ಬರೆದ ಈ ಪದ್ಯವನ್ನು ಸುಶ್ರಾವ್ಯವಾಗಿ ಹಾಡಿ, ಕುಣಿದು ಆನಂದಿಸುವದರ ಜೊತೆಗೆ ಅರ್ಥಾನುಸಂಧಾನದ ಹೂರಣ ಸೇರಿದರೆ ಅದರ ಅನುಭವವೇ ಬೇರೆ ಅಲ್ಲವೆ? ದಾಸರು ಪ್ರತಿಯೊಂದು ಸಾಲಿನಲ್ಲಿ ತ್ರಿವಳಿಗಳನ್ನು ಬಳಸಿರುವ ಸೊಬಗು ನೋಡಿ, ಇಡೀ ಬದುಕೆ ತ್ರಿವಳಿಗಳಿಂದ ಕೂಡಿದೆ ಅನ್ನಿಸುವದಲ್ಲವೆ? ಆ ಪದ್ಯದ ನಡೆಯಲ್ಲಿ ಬದುಕಿನ ಕಥೆ ಹೇಳುವ ಶೈಲಿ ಅನನ್ಯ. ಇಡಿ ಬದುಕಿನ ಹೋರಾಟದ ಚಿತ್ರಣ ಇದೆ. ಇಂಥ creative ಸಾಹಿತ್ಯ ರಚನೆ ಬಹಳ ವಿರಳ. ನನ್ನ ಅಭಿಪ್ರಾಯದ ಪ್ರಕಾರ ದೈವಿ ದತ್ತವಾದದ್ದು intuitional only. ಅದಕೆಂದೆ ಇಂಥ ಕಾವ್ಯಕ್ಕೆ ಅನುಭಾವ ಕಾವ್ಯ ಎನ್ನುವರು. ಇದರಿಂದಾಗಿ ಕನ್ನಡ ಸಾಹಿತ್ಯಕ್ಕೆ ದಾಸರ ಕೊಡುಗೆ ಅಪಾರ, ಅದು ಕನ್ನಡ ಸಾಹಿತ್ಯವನ್ನು ಸಮೃದ್ಧಗೊಳಿಸುತ್ತದೆ.

ಈ ಮೇಲೆ ನೋಡಿದ ದಾಸರ ಪದವು ಶಾಸ್ತ್ರೀಯ ಪ್ರಮೇಯಗಳಿಂದ ಕೂಡಿ ಸಂಕೀರ್ಣವೆನ್ನಿಸಿದರೂ, ಅಧ್ಯಯನದಿಂದ ಆನಂದಿಸಬಹುದು. ಇಂತಹದೇ ಇನ್ನೂ ಸುಂದರವಾದ ದಾಸರ ಕೃತಿ ಇನ್ನೊಂದಿದೆ. ಈ ಪದ "ಬುಡು ಬುಡಿಕನ ಪದ" ಎಂದೇ ಪ್ರಸಿದ್ಧಿ. ಅದರ ನಡೆ ಹಾಗಿದೆ.

**ಜಯವದೆ ಜಯವದೆ ಈ ಮನೆತನಕೆ**
**ಬಿಡುಬಿಡು ಬಿಡುಬಿಡು ಮನ ಸಂಶಯವ**
**ಶುಕನೆಂಬ್ಹಕ್ಕಿ ಹೇಳುತದಪ್ಪ**
**ಜಗವೆಂಬೋ ಗಿಡ ಹುಟ್ಟೈತಣ್ಣ**
**ಹಣ್ಣುಗಳೆರಡು ಆ ಇದಾವಪ್ಪ**
**ಮೂರು ಬುಡದ ಗಿಡ ಕೇಳಣ್ಣ**
**ಹಣ್ಣಿನ ಒಳಗೆ ನಾಲ್ಕು ರಸವು**
**ಐದು ದೊಡ್ಡ ಹರೆ ಕಾಣಪ್ಪ**

ಆರು ಬಗೆಯ ಸ್ವರೂಪ ಕೇಳು
ಏಳು ಬಗೆಯ ತೊಗಟುಂಟಣ್ಣ
ಸಣ್ಣ ಗರಿಗಳು ಎಂಟೈದಾವೆ
ಅಕ್ಷವು ಇದಕೆ ಒಂಬತ್ತೈತೆ
ಎಲೆಗಳು ಹತ್ತು ಐದವಾಪ್ಪ
ಒಂದೆ ಹಕ್ಕಿ ಹಣ್ತಿಂತೈತೆ
ಮತ್ತೊಂದ್ಹಕ್ಕಿ ನೋಡುತದಪ್ಪ
ಹಣ್ತಿಂದ್ಹಕ್ಕಿ ಬಡವಾಗೈತೆ
ತಿನ್ನದ ಹಕ್ಕಿ ಬಲಿತೈತಣ್ಣ
ಸುಳ್ಳಲ್ಲ ನೀ ಕೇಳೊ ತಮ್ಮ
ದ್ವಸುಪರ್ಣದ ಶೃತಿಯಲ್ಲೈತೆ
ಒಂದೇ ಕುಲದ ಹಕ್ಕೆಲ್ಲಣ್ಣ
ಒಂದೇ ಕುಲವೆಂದು ತಿಳಿಯಲಿ ಬೇಡ
ತಿಳಿದರೆ ನಿಮಗೆ ಕೇಡಾದೀತ ಹಳೆ ವಸ್ತ್ರವ ಬೀಸಾಡಣ್ಣ
ಹೊಸವಸ್ತ್ರ ನಿಮಗೆ ದೇವರು ಕೊಟ್ಟಾನು
ಹಕ್ಕಿಯರಸ ಆಡಿದ ಮಾತು
ಉತ್ತಮ ಮಾರ್ಗ ಹಿಡಿಯೊ ತಮ್ಮ
ಮಾರ್ಗವ ಕಟ್ಟಿ ಸುಲಿಯುತ್ತಾರೆ
ಗಿರಿ ದುರ್ಗಗಳು ಐದಾವಪ್ಪ
ಮಾರನೆಂಬ ಕಳ್ಳೈದಾನೆ
ಸಮೀರನಾದರೆ ಹೊರಟ್ಹೋಗ್ತಾನೆ
ಪುರಂದರನಾದರೆ ಬಿಡುವನಲ್ಲ
ಸುರಜ್ಯೇಷ್ಠನ ಸಂಗತಿ ಹಿಡಿಯೋ
ಕಣ್ಣು ಮೂಗು ಕಿವಿ ನಾಲಿಗೆಯಪ್ಪ
ಒಂದೊಂದೊಬ್ಬರ ಕೋಂದಾವಣ್ಣ
ಕುರಂಗ ಮಾತಂಗ ಪತಂಗ ಕೇಳೊ
ಭೃಂಗ ಮೀನಾ ಹತವಾದವಣ್ಣ
ಜ್ಞಾನ ಭಕ್ತಿಯೆಂಬ ಮಾರ್ಗವು ಎರಡು
ದೊಡ್ಡ ಮಾರ್ಗವ ಹಿಡಿಬೇಕಣ್ಣ
ದೊಡ್ಡ ಸಂಗತಿ ಬರುವೋ ತನಕ
ಎರಡು ಮನೆಯಲ್ಲಿರಬೇಕಣ್ಣ

**ದಾನದ ಕೈಯ ತೋರಿಸಬೇಕು**
**ಅದರಿಂದ ನದಿಯ ದಾಟುತಿಯಪ್ಪ**
**ನಿನ್ನ ಯೋಗ್ಯತೆ ತಿಳಿದ ಮೇಲೆ**
**ಪುರಂದರವಿಠಲ ಸ್ಥಳ ಕೊಟ್ಟಾನು**

ಇನ್ನೂ "ಬುಡು ಬುಡಿಕ" ಅಂದರೆ ಯಾರು ಎನ್ನುವ ಪ್ರಶ್ನೆ ಕೆಲವರಿಗೆ ಬರಬಹುದು. "ಬುಡು ಬುಡಿಕ" ಉತ್ತರ ಕರ್ನಾಟಕ ಗ್ರಾಮೀಣ ಬದುಕಿನ ಒಂದು ಅವಿಭಾಜ್ಯ ಅಲೆಮಾರಿ ಜನಾಂಗದ ವ್ಯಕ್ತಿ. ಅವನ ಕೈಯಲ್ಲಿ ಚಿಕ್ಕದೊಂದು ಡಮರುಗ, ನೆರೆದ ಮೀಸೆ, ಕಣ್ಣಲ್ಲಿ ಕಾಡಿಗೆ, ಕೆನ್ನೆಗೆ ಅರಿಶಿಣ, ತಲೆಗೊಂದು ಬಣ್ಣ ಬಣ್ಣದ ರುಮಾಲು, ಮೈಮೇಲೆ ಕಂಬಳಿ, ಅವನು ಆಡುವ ಮಾತು ಕಾವ್ಯ. ಅವನ ಕೈಯಲ್ಲಿಯ ಡಮರುಗದ "ಬುಡು ಬುಡು" ಶಬ್ದವೇ ಅವನ ಅನ್ವರ್ಥಕ ನಾಮ "ಬುಡು ಬುಡಿಕ"! ಹಿಂದೆ ಕಾಳಿದಾಸನ ಕಥೆಯಲ್ಲಿ ಬರುವ ಡಿಂಡಿಮ ಕವಿ ಇಂಥ ಜನಾಂಗದವನಿರಬಹುದೇನೋ? ನಾನು ಚಿಕ್ಕವನಿದ್ದಾಗ ನನ್ನ ಹಳ್ಳಿಯಲ್ಲಿ ಸುಗ್ಗಿಯ ಸಮಯದಲ್ಲಿ, "ಬುಡು ಬುಡಿಕ"ರು ಬರುತ್ತಿದ್ದರು. ಬೆಳಗಿನ ಜಾವದಲ್ಲಿ ಅವ್ವ ಅಂಗಳಕ್ಕೆ ಥಳಿ-ರಂಗೋಲೆ ಹಾಕುವ ಸಮಯದಲ್ಲಿ ಅವರ ಆಗಮನ. ಕೈಯಲ್ಲಿಯ ಡಮರುಗದ "ಬುಡು ಬುಡು" ಶಬ್ದದೊಂದಿಗೆ ಶುಭ ಶಕುನದ ಹಾಡುಗಳನ್ನು ಹಾಡುತ್ತಿದ್ದರು. ಅದೇ ಆಗ ಸುಗ್ಗಿ ಆಗಿದ್ದರಿಂದ ಮನೆ ತುಂಬ ಕಾಳು, ಮನೆಯ ಒಡೆಯರು ಮನತುಂಬಿ ಸೇರುಗಟ್ಟಲೆ ಕಾಳುಗಳನ್ನು ಅವನ ಜೋಳಿಗೆಗೆ ಹಾಕುವರು. ಅವನು ಬಾಯಿತುಂಬಿ ಹರಸುವ. ಅಂಗಳದಲ್ಲಿದ್ದ ಮಕ್ಕಳಿಗೆ ಮುದ್ದಿಸುವ. ಮಕ್ಕಳಿಗೆ ಅವನ ವೇಷ-ಭೂಷಣಗಳೆಂದರೆ ಮೋಜು. ಕಣ್ಣರಳಿಸಿ ನೋಡುವರು. ಕೆಲವೊಮ್ಮೆ ಡಮರುಗವನ್ನು ಅವನಿಂದ ಕೇಳಿ ಪಡೆದು ತಾವು ಬಾರಿಸಿ ನೋಡುವರು. "ಬುಡು ಬುಡಿಕ"ನ ಬಗ್ಗೆ ಇಷ್ಟು ವಿವರಣೆ ಸಾಕು ಎನ್ನಿಸುತ್ತದೆ.

ಪುರಂದರ ದಾಸರು, "ಬುಡು ಬುಡಿಕ"ನ ಹಾಡಿನ ಶೈಲಿಯಲ್ಲಿ ಈ ಪದವನ್ನು ರಚಿಸಿದ್ದಾರೆ. ಹಾಡಲು ತುಂಬ ಚೆಂದವಾಗಿದೆ, ಅರ್ಥ ಅಪಾರ. ಈ ಪದ್ಯ ಅಥರ್ವಣ ಉಪನಿಷತ್ತಿನ "ದ್ವಾಸುಪರ್ಣ" ಎನ್ನುವ ಶೃತಿಯ ವ್ಯಾಖ್ಯಾನ. ಇದರ ನಡೆ "ಒಂದು ಎರಡು ಬಾಳೆಲೆಹರಡು' ಪದ್ಯದ ರೀತಿಯಲ್ಲಿದೆ. ಸಂಖ್ಯಾಶಾಸ್ತ್ರದಿಂದಲೂ ಮಹತ್ವವಾದುದು.

**"ಜಯವದೆ ಜಯವದೆ ಈ ಮನೆತನಕೆ**
**ಬಿಡುಬಿಡು ಬಿಡುಬಿಡು ಮನ ಸಂಶಯವ"**

ಜಯವಿದೆ ಈ ಮನೆತನಕೆ ಎನ್ನುವಲ್ಲಿ, "ಜಯ" ಯಾವುದು? ಯಾವುದು ಈ "ಮನೆತನ"? ಎನ್ನುವ ವಿಚಾರ ಬರುವದು ಸಹಜ. ಮೊದಲ ಪದ್ಯದಲ್ಲಿ ವಿಶ್ಲೇಷಿಸಿದಂತೆ. ಜೀವಿಗಳು (ಅಸ್ವತಂತ್ರ Dependent reality) ಮಾನವಜನ್ಮ (ಮನೆತನ– ಈ

ತನು- ಮನ) ಪಡೆದು ಸಾಧನೆ ಮಾಡುತ್ತಾರೆ. ಅದಕ್ಕೆ ಬರುವ ತೊಂದರೆಗಳನ್ನು "ಮುಳ್ಳು ಕೊನೆ" ಪದ್ಯ ಹೇಳಿದರೆ, "ಜಯವಿದೆ" ಎಂದು ಸಾರುವ ಬುಡುಬುಡಿಕನ ಈ ಪದ್ಯ, ನಮ್ಮ ಸಾಧನೆಗೆ ಜಯವಿದೆ, ಮೋಕ್ಷಸಾಧನೆಯ ಪ್ರಯತ್ನಕೆ ಜಯವಿದೆ ಎಂದು ಭರವಸೆಯನ್ನು ಕೊಡುತ್ತದೆ. ಈ ಮನೆತನದ "ಪುರುಷ ಶರೀರ"ದಲ್ಲಿ "ಜೀವನ" ಜೊತೆಗೆ ಸರ್ವತ್ರ ಸ್ವತಂತ್ರನಾದ (independent reality) ಪರಮ ಪುರುಷನಾದ ಪರಮಾತ್ಮನೂ ಇರುತ್ತಾನೆ. ಇದು ಆತ್ಮ – ಪರಮಾತ್ಮಗಳ ಸಂಬಂಧ. ಪ್ರತಿಬಿಂಬ-ಬಿಂಬಗಳ ಸಂಬಂಧದಂತೆ. ಇದು ವೇದಕಾಲದಿಂದಲೂ ಬಂದ ಸನಾತನ ಧರ್ಮದ ನಂಬಿಕೆ ಕೂಡ. ಎಲ್ಲರ ನಂಬಿಕೆ ಆಗಬೇಕಾದ ಅವಶ್ಯಕತೆ ಇಲ್ಲ. ಚಾರುವಾಕ ಋಷಿ ಇದನ್ನು ನಂಬಿರಲಿಲ್ಲವಂತೆ! ಆದರೆ ನಾವು ನಮ್ಮ ಅನುಭವದ (experiential) ಆಧಾರದ ಮೇಲೆ ನಂಬುವದಾದರೆ, ನಾವು ಮಲಗಿರುವಾಗ ನಾನು ಎನ್ನುವ ಅರಿವು ಇಲ್ಲದಾಗ, ಇನ್ನಾವುದೊ ಶಕ್ತಿ ನಮ್ಮ ಉಸಿರಾಟ, ರಕ್ತ ಚಲನೆ, ಹೃದಯ ಬಡಿತ ಇತ್ಯಾದಿ ಕ್ರಿಯೆಗಳನ್ನು ನಮಗೆ ಅರಿವಿಲ್ಲದೆ ನಡೆಸಿಕೊಂಡು ಹೋಗುತ್ತದೆ. ನಾವು ತಿನ್ನುವ ಬೇರೆಯ ಆಓಂ ಪದಾರ್ಥವನ್ನು ಜೀರ್ಣಿಸಿ ನಮ್ಮ ಆಓಂಗೆ ಬದಲಾಯಿಸಿ ನಮ್ಮ ಬೆಳವಣಿಗೆ ಮಾಡುವ ವೈಶ್ವಾನರ ಶಕ್ತಿ. ಇವೆಲ್ಲ ಇನ್ನೊಂದು ನಮಗಿಂತ ಹಿರಿದಾದ ಶಕ್ತಿ ನಮ್ಮಲ್ಲಿರುವುದನ್ನು ಅನುಭವಕ್ಕೆ ತರುತ್ತದೆ ಅಲ್ಲವೇ?

**"ಶುಕನೆಂಬಕ್ಕಿ ಹೇಳುತದಪ್ಪ**
**ಜಗವೆಂಬೋ ಗಿಡ ಹುಟ್ಟೈತಣ್ಣ"**

ಅದಕೆಂದೆ ದಾಸರು ಹೇಳುವದು ಈ ಸೃಷ್ಟಿಯೆಂಬ ಹುಟ್ಟಿನಲ್ಲಿ ಜಗವೆಂಬೋ ಗಿಡ ಹುಟ್ಟಿದೆ. ಈ ಗಿಡದಲ್ಲಿ (ಮರದಲ್ಲಿ) ಎರಡು ಹಣ್ಣುಗಳು ಹುಟ್ಟಿವೆ. ಸುಖ ಮತ್ತು ದುಃಖ ಎನ್ನುವ ಕರ್ಮ ಫಲಗಳು pleasure and pain. ಆ ಗಿಡಕ್ಕೆ ಮೂರರ ಬುಡ (base) ಮಣ್ಣು, ನೀರು, ಬೆಂಕಿ (ಶಾಖ) ಅಥವಾ ಸತ್ವ,ರಜೋ ಮತ್ತು ತಮೋ ಗುಣಗಳು. ಈ ಜಗತ್ತಿನ ಸೃಷ್ಟಿ ಇರುವದೆ ಈ ಮೂರರಿಂದ! ಈ ಬುಡದಿಂದ ಮೇಲೆ ಹರಿಯುವ ರಸಗಳು ನಾಲ್ಕು: ಸರ್ವ ಇಂದ್ರಿಯಗಳ ಪ್ರೇರಕನಾದ ಭಗವಂತನ ಕರುಣೆಯ ರಸಗಳು "ಪ್ರೇರಕ", "ನಿಯಾಮಕ", "ಸಾಕ್ಷಿ" ಮತ್ತು "ಉದ್ಧಾರಕ" ಶಕ್ತಿಗಳು. **ಉದಾಹರಣೆಗೆ ಕೆಲವರಿಗೆ ಕಣ್ಣುಗಳಿರುವ ಜಾಗದಲ್ಲಿ ಕಣ್ಣುಗಳಿದ್ದರೂ ಕಾಣಿಸುವದಿಲ್ಲ!** ಕಿವಿಗಳಿದ್ದರೂ ಕೇಳುವದಿಲ್ಲ, ಕಾರಣ ಆ ಪ್ರೇರಕ – ನಿಯಾಮಕ ಶಕ್ತಿ ಇಲ್ಲದಿರುವದು. ಈ ನಾಲ್ಕು ರಸಗಳು ಹರಿಯುವದು ಐದು ಹರಿಗಳಲ್ಲಿ ಅವೇ ಪಂಚೇಂದ್ರಿಯಗಳು. ಕಣ್ಣು, ಕಿವಿ, ಮೂಗು, ನಾಲಿಗೆ ಹಾಗು ಚರ್ಮ. ಇವು ನಮಗೆ ಪ್ರಾಕೃತಿಕ ಬದುಕಿನ ಅನುಭವ ಕೊಡುವವು. ಇಲ್ಲಿಂದಲೇ ನಮ್ಮ ಸಂಸಾರದ ವಾಸನೆಗಳ ಪ್ರಯಾಣ ಪ್ರಾರಂಭ. ಅವುಗಳ ಅನುಭವದಿಂದಲೇ ಆರು ಬಗೆಯ ಸಾಧನೆಯ ವೈರಿಗಳ ಸ್ವರೂಪದ

ಪರಿಚಯ. ಅವನ್ನೇ ನಾವು "ಅರಿಷಡ್ವರ್ಗಗಳು" ಎಂದು ಕರೆಯುವ "ಕಾಮ, ಕ್ರೋಧ, ಲೋಭ, ಮದ, ಮತ್ಸರ ಹಾಗು ಮೋಹ". ಇವೆಲ್ಲಕ್ಕೆ ಕವಚಪ್ರಾಯಿಯಾಗಿ ಏಳು ಬಗೆಯ ತೊಗಟೆಗಳು ಏಳು ವ್ಯಸನಗಳು. "ಜೂಜು, ಮಾಂಸ ಭಕ್ಷಣೆ, ಮದ್ಯಪಾನ, ವೇಶ್ಯೆಯರ ಸಂಗ, ಶಿಕಾರಿ, ಕಳವು, ಪರಸ್ತ್ರೀ ಆಸಕ್ತಿ". ಈ ಸಂಸಾರ ಗಿಡಕ್ಕೆ ಗರಿಗಳು ಎಂಟು. ಅವೇ ಭಗವತ್ ಗೀತೆಯ ಏಳನೇ ಅಧ್ಯಾಯದ ನಾಲ್ಕನೇ ಶ್ಲೋಕದಲ್ಲಿ ಕೃಷ್ಣ ಹೇಳಿರುವ ಅಷ್ಟ ಪ್ರಕೃತಿಗಳು "ಮಣ್ಣು, ನೀರು, ಬೆಂಕಿ, ಗಾಳಿ, ಆಗಸ, ಮನಸ್ಸು, ಬುದ್ಧಿ, ಅಹಂಕಾರ, ಹೀಗೆ ಅಧೀನವಾದ ಪ್ರಕೃತಿಗಳು ಎಂಟು". ಒಂಬತ್ತು ವಿಧದ ಆವರಣಗಳು (ನವವಿಧ ಆವರಣಗಳು) ಅಕ್ಷಗಳೆನಿಸಿಕೊಳ್ಳುತ್ತವೆ. ಈ ಒಂಬತ್ತು ವಿಧದ ಆವರಣ ಶಕ್ತಿಗಳು ಜೀವನನ್ನು ಸುತ್ತುವರಿದು, ಜೀವನಿಗೆ ತನ್ನ ಅರಿವು ಬರದಂತೆ ಮಾಯೆಯ ಮುಸುಕಾಗಿರುತ್ತವೆ ಅನ್ನಬಹುದು. ಅವೆ "ವಿಕ್ಷೇಪ, ನಿರ್ಮಾಣ, ಮೋಹ, ಮಾಯಾ, ಅವಿದ್ಯಾ," ಇತ್ಯಾದಿ. ಹತ್ತು ಎಲೆಗಳು ಅಂದರೆ, ದಶೇಂದ್ರಿಯ ವೃತ್ತಿಗಳು. ಇವೇ ನಮ್ಮ ಸಂಸಾರದ ವೃತ್ತಿಗೆ ಬಾಗಿಲುಗಳು. ಐದು ಕರ್ಮೇಂದ್ರಿಯಗಳು (Action oriented) "ಕಾಲು, ಕೈ, ಪಾಯು (excretory organs), ಉಪಾಸ್ಥಾನ (Reproductive), ಮತ್ತು ಮಾತು". ಐದು ಜ್ಞಾನೇಂದ್ರೀಯಗಳು (Sensory) "ರಸ, ರೂಪ, ಗಂಧ, ಸ್ಪರ್ಶ ಮತ್ತು ಶ್ರವಣ". ಈ ರೀತಿ ಇರುವ ಸಂಸಾರ ಗಿಡದಲ್ಲಿ ಎರಡು ಹಕ್ಕಿಗಳು, "ಜೀವ" ಹಣ್ಣು ತಿನ್ನುವ ಹಕ್ಕಿ, "ಈಶ" ತಿನ್ನದೆ ಹಾಗೆ ನೋಡುತಿರುವ ಹಕ್ಕಿ (simply witnessing). ಹಣ್ಣು ತಿನ್ನುವ ಹಕ್ಕಿ ಬಡವ (ಅಸ್ವತಂತ್ರ) ಹಕ್ಕಿ, ತಿನ್ನದ ಹಕ್ಕಿ "ಈಶ" ಬಲವಂತ (ಸ್ವತಂತ್ರ) . ಅದಕೆಂದೆ ಎರಡೂ ಬೇರೆ ಬೇರೆ ಕುಲದವು ಎನ್ನುವರು ದಾಸರು. ಜೀವ–ಈಶ ಭೇದ ಅರಿಯದೆ ಹೋದರೆ ತಪ್ಪಾದೀತು ಎಂದು ಎಚ್ಚರಿಸುತ್ತಾರೆ. ಅದಕ್ಕೆ ಅಥರ್ವಣ ವೇದದ "ದ್ವಾಸುಪರ್ಣ" ಶೃತಿಯೇ ಪ್ರಮಾಣ ಎಂದು ಹೇಳುತ್ತಾರೆ. ಈ ಸಂಸಾರದಲ್ಲಿ ಹುಟ್ಟು–ಸಾವಿನ ಕ್ರಿಯೆ "ಜೀವ" ಮುಕ್ತಿ ಪಡೆಯುವವರೆಗೆ ನಿರಂತರ (cyclic) ಎಂದು ಹೇಳುತ್ತಾರೆ. ಹಳೆವಸ್ತ್ರ ಅಂದರೆ ಈ ದೇಹ. ಅದನ್ನು ಕಳೆದುಕೊಂಡರೆ ಭಗವಂತ ಸಾಧನೆಗೆ ಹೊಸ ಹುಟ್ಟು ಕೊಡುವ (ಕರ್ಮಾನುಸಾರ). ಇದೂ ಕೂಡ ಭಗವತ್ ಗೀತೆಯಲ್ಲಿ ಬರುವ "ವಾಸಾಂಸಿ ಜೀರ್ಣಾನಿ ಯಥಾ ವಿಹಾಯ" ಎನ್ನುವ ಮಾತು. ಇದು ಹಕ್ಕಿಯ ಅರಸ ಆಡಿದ ಮಾತು ಎನ್ನುವಲ್ಲಿ ಗರುಡಾರೂಢ ಹರಿ ಅಥವಾ ಕೃಷ್ಣ ಎಂದು ಭಾವಿಸಬಹುದು. ಅಥವಾ ಜೀವ ಎನ್ನುವ ಹಕ್ಕಿಯ ಜೊತೆಗಿರುವ ಸ್ವತಂತ್ರನಾದ ಒಡೆಯ "ಈಶ" ಅಂದುಕೊಂಡರೂ ಸರಿಯೇ. ಆದರೆ ಸಾಧನೆ ಮಾರ್ಗದಲ್ಲಿ ತೊಂದರೆಗಳು ಬರುತ್ತವೆ. ಅದನ್ನೇ, ದಾಸರು "ಮಾರ್ಗವ ಕಟ್ಟಿ ಸುಲಿಯುತ್ತಾರೆ" ಎಂದಿರಬಹುದು. "ಗಿರಿಕಂದರಗಳು ಐದಾವಪ್ಪ" ಅನ್ನುವಲ್ಲಿ ಐದು ಇಂದ್ರಿಯ ವಿಷಯ ಭೋಗಗಳು (addictive in nature) ಎಂದು ತಿಳಿಯಬೇಕು. "ಮಾರನೆಂಬ ಕಳ್ಳ"– ಮನ್ಮಥ, ಕಾಮನೆಗಳನ್ನು ಕೊಡುವ ಕಾಮದೇವ. "ಸಮೀರ": ಪ್ರಾಣದೇವ,

ನಮ್ಮ ಉಸಿರಿನ ನಿಯಾಮಕ, ಅದರ ಮೂಲಕ ನಮಗೆ ಜೀವ ಚೈತನ್ಯ ನೀಡುವ ಶಕ್ತಿ. ಸಾಧನೆಗೆ ಮಾರ್ಗವಾದ ಉಸಿರಿನ ದೇವತೆ. "ಪುರಂದರ" ಅಂದರೆ ಇಂದ್ರ, ನಮ್ಮ ಎಲ್ಲ ಇಂದ್ರಿಯಗಳ ನಿಯಾಮಕ, ಸುಖದ ಅಪೇಕ್ಷೆ ಇಟ್ಟವ. "ಸುರ ಜೇಷ್ಟ" ಅಂದರೆ ಪ್ರಾಣದೇವ, ಸಾಧನೆಗೆ ಮಾರ್ಗ ಕೋಡುವವ. ಈಗ ನಿಮಗೆ ಇವೆಲ್ಲ code words ತರಹ ಅನ್ನಿಸಿರಬಹುದಲ್ಲವೆ? ಹೌದು, ಈ ಇಡೀ ಪದ್ಯ, ಅದರಲ್ಲಿ ಬರುವ, ಗಿಡ, ಹಣ್ಣು, ಹಕ್ಕಿ ಎಲ್ಲವೂ ಸಾಂಕೇತಿಕ! ಅದೇ ದಾಸರ ಕ್ರಿಯಾಶಕ್ತಿ (creativity), ಎಷ್ಟು ಹೊಗಳಿದರೂ ಮುಗಿಯದಂಥ ಅದ್ಭುತ ಕಾವ್ಯ ಶಕ್ತಿ. ಈ ಪದ್ಯದ ಕೊನೆಯ ಸಾಲುಗಳು "ತತ್ವವಾದ"ದ ಸಿದ್ಧಾಂತವನ್ನು ಪರಿಚಯಿಸುವ ಸಂಕೇತಗಳು. "ತತ್ವವಾದ" ಜೀವ–ಈಶ ಭೇದದ ಜೊತೆಗೆ ಅನೇಕ ಶಾಸ್ತ್ರೀಯ ಪ್ರಮೇಯಗಳನ್ನು ಒಳಗೊಂಡಿದೆ. ಅದರಲ್ಲಿ "ಜೀವಿಗಳ ತಾರತಮ್ಯ (Hierarchy)" ಕೂಡ ಒಂದು. ಉದಾಹರಣೆಗೆ ಮುಕ್ತಿ ಯೋಗ್ಯವಾದ ಅಸ್ವತಂತ್ರ ಜೀವಿಗಳಲ್ಲಿ ತಾರತಮ್ಯ ಇದೆ. ಮಾನವರು, ಕಿನ್ನರರು, ಗಂಧರ್ವರು, ದೇವತೆಗಳು ಅದರಲ್ಲಿ ಗಣಪ, ಸೂರ್ಯ, ನಾರದ, ಇಂದ್ರ, ಕಾಮ, ಗರುಡ, ಶೇಷ, ರುದ್ರ, ಹೀಗೆ ಕೊನೆಗೆ ವಾಯು, ಬ್ರಹ್ಮ, ಲಕ್ಷ್ಮಿ ಎಲ್ಲವು Ascending Hierarchical orderನಲ್ಲಿ ಇದೆ. ಅದಕ್ಕೆ ಅಳತೆಯ ಲೆಕ್ಕವೂ ಇದೆ. ಈ Ascending orderನ್ನು ನಾವು ಪದ್ಯದ ನಡೆಯಲ್ಲಿ ಕಾಣಬಬುದು. ನಾನು ಹೇಳ ಹೊರಟಿದ್ದು ಇಷ್ಟೆ, ಜೀವಿಗಳಲ್ಲಿ ಶ್ರೇಷ್ಠರಾದ ರುದ್ರ – ವಾಯುವಿನ ಮಾರ್ಗ ಹಿಡಿದರೆ ಮುಕುತಿ ಪಥ ಸುಗಮವಾದೀತು ಎನ್ನುವದು ಕೊನೆಯ ಸಾಲುಗಳ ಸಾರಾಂಶ. ಇನ್ನು ಉಳಿದ ಸಂಕೇತಗಳನ್ನು ಸಂಕ್ಷಿಪ್ತವಾಗಿ ನೋಡೋಣ.

**"ಕಣ್ಣು ಮೂಗು ನಾಲಿಗೆಯಪ್ಪಾ,**
**ಒಂದೊಂದೊಬ್ಬರ ಕೊಂದಾವಣ್ಣ**
**ಕುರಂಗ, ಮಾತಂಗ, ಪತಂಗ ಕೇಳೊ**
**ಭೃಂಗ ಮೀನಾ ಹತವಾದವಣ್ಣ"**

ಕಣ್ಣು, ಮೂಗು, ನಾಲಿಗೆಯ ಚಾಪಲ್ಯಗಳು ಜೀವನದಲ್ಲಿ ಅಪಾಯಕಾರಿ. ಅವು **"ಒಂದೊಂದೊಬ್ಬರ ಕೊಂದಾವಣ್ಣ"**. ಅದು ಹೇಗೆಂದರೆ ಕುರಂಗ, ಮಾತಂಗ, ಪತಂಗ, ಭೃಂಗ ಹಾಗು ಮೀನು ಒಂದೊಂದು ಚಾಪಲ್ಯಕ್ಕೆ ಹೇಗೆ ಬಲಿಯಾಗಿ ಜೀವ ಕಳೆದು ಕೊಳ್ಳುತ್ತವೆಯೊ ಹಾಗೆ. ಅಂದರೆ ಕಾಡಿನಲ್ಲಿ ಬೇಟೆಗಾರರು ಜಿಂಕೆ (ಕುರಂಗ)ಯನ್ನು ಹಿಡಿಯಲು ಲೋರಿ ಎನ್ನುವ ತಂತಿ ವಾದ್ಯವನ್ನು ನುಡಿಸುತ್ತಾರೆ. ಕಿವಿಗೆ ಇಂಪಾದ ಆ ವಾದ್ಯಕ್ಕೆ ಮರುಳಾಗಿ ಜಿಂಕೆ ಇದ್ದಲ್ಲಿಯೇ ನಿಂತುಬಿಡುತ್ತದೆ. ಆಗ ಬೇಟೆಗಾರ ಬಲೆ ಬೀಸಿ ಅದನ್ನು ಹಿಡಿಯುತ್ತಾನೆ. ಅದರಂತೆ ಮಾತಂಗ ಅಂದರೆ ಆನೆ ಕೂಡಾ ವಾಸನೆಗೆ

(ಮೂಗು) ಮರುಳಾಗಿ, ತಾನಾಗಿ ಬಂದು ಖೆಡ್ಡಕ್ಕೆ ಬೀಳುತ್ತದೆ. (Elephants Have 2,000 Genes for Smell-Most Ever Found). ಬೆಂಕಿಗೆ(ಕಣ್ಣು) ಮರುಳಾಗಿ ಹಾರಿ ಬರುವ ಪತಂಗ ಬೆಂಕಿಗೆ ಬಿದ್ದು ಸಾಯುತ್ತದೆ. ದುಂಬಿ ಹೂವಿನ ಮಕರಂದಕ್ಕಾಗಿ (ರಸ) ಬಂದು ರಸ ಸಂಗ್ರಹಿಸಿ, ಜೀವ ಕಳೆದುಕೊಳ್ಳುತ್ತದೆ. ಮೀನು ಗಾಳಕ್ಕೆ ಹಚ್ಚಿದ ಮಾಂಸದ ಆಸೆಗೆ ಬಾಯಿ ಹಾಕಿ ಸಿಕ್ಕಿಬೀಳುತ್ತದೆ. ಅಂತೆಯೆ, ಸಾಧನೆಗಾಗಿ ಬಂದ ಮಾನವ ನೀನು ಇವುಗಳಿಂದ ಅರಿತುಕೋ, ಆಮಿಷಕ್ಕೆ ಒಳಗಾಗಬೇಡ. ಎಷ್ಟು ಸಾಧ್ಯವೋ ಅಷ್ಟು ಬೇಗ ಸಾಧನೆ ಮಾರ್ಗ ಹಿಡಿ ಎನ್ನುವದು ದಾಸರ ಅನುಭವದ ಮಾತುಗಳು. ಈ ಮಾತನ್ನು ಸಂಸ್ಕೃತ ಸುಭಾಷಿತದಲ್ಲಿಯೂ ಕಾಣಬಹುದು. ಇದನ್ನೇ ಭಾಗವತದಲ್ಲಿ ಬರುವ ಉದ್ಧವ ಗೀತೆಯಲ್ಲಿಯ ಅವಧೂತ, ಯದು ಮಹಾರಾಜನಿಗೆ "ನಾನು ಪ್ರಕೃತಿಯಿಂದ ಪಾಠ ಕಲಿತೆ" ಎಂದು ಹೇಳುವಾಗ ಕೊಡುವ ಉದಾಹರಣೆಗಳು.

ಕೊನೆಯದಾಗಿ ದಾಸರು ಉಪಾಯವನ್ನು ಹೇಳುತ್ತಾರೆ. ಜ್ಞಾನ-ಭಕ್ತಿ ಎನ್ನುವ ಎರಡು ಮಾರ್ಗಗಳನ್ನು ಹಿಡಿ. "ದೊಡ್ಡಸಂಗತಿ" ಅಂದರೆ ವೈರಾಗ್ಯ ಪ್ರಾಪ್ತಿಯಾಗುವವರೆಗೆ "ಸಂಸಾರ" ಮತ್ತು "ಅಂತರಂಗ" ಎರಡು ಕೋಣೆಗಳಲ್ಲಿದ್ದು ಸಾಧನೆ ಮಾಡು, ದಾನ ಧರ್ಮಗಳನ್ನು ಮಾಡು. ಅದರಿಂದ ಈ ಸಂಸಾರ ಚಕ್ರವೆಂಬ ಕಾಲದ ನದಿಯನ್ನು ದಾಟು. ಮತ್ತೆ ಸಾಧನೆಗಾಗಿ ಸಂಸಾರ ಬಂಧನಕ್ಕೆ ಬರುವ ಅವಶ್ಯಕತೆ ಇಲ್ಲ. ಆಗ ನಿನ್ನನ್ನು ನೀನು ಅರಿಯುವೆ, ಅದನ್ನೇ ಆತ್ಮ ಸಾಕ್ಷಾತ್ಕಾರ ಎನ್ನುವರೇನೋ. ಅದರ ನಂತರ ಭಗವಂತನ ಸಾಕ್ಷಾತ್ಕಾರ, ಭಗವಂತನ (ಪುರಂದರ ವಿಠಲ) ಅರಿವು, ಅವನಲ್ಲೇ ನಿನ್ನ ಇರುವು. ಅದುವೆ ನಿನ್ನಯ ಮನೆತನದ ಜಯವು!

ಈ ಮೇಲಿನ ಮಾತು ಎರಡು ವಿಷಯಗಳನ್ನು ನೆನೆಪಿಗೆ ತರುತ್ತವೆ. ಮೊದಲನೆಯದು ಭಾಗವತದಲ್ಲಿ ಬರುವ "ಜಡ ಭರತ"ನ ಕಥೆ. ಎರಡನೆಯದು ಡಿವಿಜಿ ಅವರ ಮಂಕುತಿಮ್ಮನ ಪದ್ಯದ ಈ ಸಾಲುಗಳು.

**ಎರಡು ಕೋಣೆಗಳ ನೀಂ ಮಾಡು ಮನದಾಲಯದಿ**
**ಹೊರಕೋಣೆಯಲಿ ಲೋಕರಾಟಗಳನಾಡು**
**ವಿರಮಿಸೊಬ್ಬನೆ ಮೌನದೊಳಮನೆಯ ಶಾಂತಿಯಲಿ**
**ವರಯೋಗಸೂತ್ರವಿದು ಮಂಕುತಿಮ್ಮ**

ಇನ್ನೊಂದು ಚಿಕ್ಕ ಪದ್ಯ "ತಾರಕ್ಕ ಬಿಂದಿಗೆ ನಾ ನೀರಿಗೆ ಹೋಗುವೆ" ಇದನ್ನು ಲಾವಣಿ ಶೈಲಿಯಲ್ಲಿ ಹಾಡಬಹುದು, ಇದೂ ಕೂಡ ಅಧ್ಯಾತ್ಮ ಸಂದೇಶವನ್ನು ಸಾರುತ್ತದೆ, ಅರ್ಥ ಮಾಡಿ ಕೊಳ್ಳುವದು ಸುಲಭ ಕೂಡ. ಇದನ್ನು ಅರಿತುಕೊಳ್ಳುವ ಪ್ರಯತ್ನ ಮಾಡೋಣ.

ತಾರಕ್ಕ ಬಿಂದಿಗೆ ನೀರಿಗೆ ಹೋಗುವೆ ತಾರೇ ಬಿಂದಿಗೆಯ
ಬಿಂದಿಗೆ ಒಡೆದರೆ ಒಂದೇ ಕಾಸು ತಾರೇ ಬಿಂದಿಗೆಯ
ರಾಮನಾಮವೆಂಬ ರಸವುಳ್ಳ ನೀರಿಗೆ ತಾರೇ ಬಿಂದಿಗೆಯ
ಕಾಮಿನಿಯರ ಕೂಡೆ ಏಕಾಂತವಾಡೇನು ತಾರೇ ಬಿಂದಿಗೆಯ

ಬಿಂದುಮಾಧವನ ಘಟ್ಟಕ್ಕೆ ಹೋಗುವೆ ತಾರೇ ಬಿಂದಿಗೆಯ
ಪುರಂದರವಿಠಲಗೆ ಅಭಿಷೇಕ ಮಾಡುವೆ ತಾರೇ ಬಿಂದಿಗೆಯ
ಬಿಂದಿಗೆ ನೀರಿಗೆ ಹೋಗುವೆ ತಾರೇ ಬಿಂದಿಗೆಯ

ಬಿಂದಿಗೆ ಒಡೆದರೆ ಒಂದೇ ಕಾಸು ತಾರೇ ಬಿಂದಿಗೆಯ

ರಾಮನಾಮವೆಂಬ ರಸವುಳ್ಳ ನೀರಿಗೆ ತಾರೇ ಬಿಂದಿಗೆಯ
ಕಾಮಿನಿಯರ ಕೂಡೆ ಏಕಾಂತವಾಡೇನು ತಾರೇ ಬಿಂದಿಗೆಯ

ಬಿಂದುಮಾಧವನ ಘಟ್ಟಕ್ಕೆ ಹೋಗುವೆ ತಾರೇ ಬಿಂದಿಗೆಯ
ಪುರಂದರವಿಠಲಗೆ ಅಭಿಷೇಕ ಮಾಡುವೆ ತಾರೇ
ತಾರಕ್ಕ ಬಿಂದಿಗೆ ನೀರಿಗೆ ಹೋಗುವೆ ತಾರೇ ಬಿಂದಿಗೆಯ

ಬಿಂದಿಗೆ ಒಡೆದರೆ ಒಂದೇ ಕಾಸು ತಾರೇ ಬಿಂದಿಗೆಯ

ರಾಮನಾಮವೆಂಬ ರಸವುಳ್ಳ ನೀರಿಗೆ ತಾರೇ ಬಿಂದಿಗೆಯ
ಕಾಮಿನಿಯರ ಕೂಡೆ ಏಕಾಂತವಾಡೇನು ತಾರೇ ಬಿಂದಿಗೆಯ

ಬಿಂದುಮಾಧವನ ಘಟ್ಟಕ್ಕೆ ಹೋಗುವೆ ತಾರೇ ಬಿಂದಿಗೆಯ
ಪುರಂದರವಿಠಲಗೆ ಅಭಿಷೇಕ ಮಾಡುವೆ ತಾರೇ ಬಿಂದಿಗೆಯ

ಇಲ್ಲಿ "ಬಿಂದಿಗೆ"ಸಾಧನ ಶರೀರದ ಸಂಕೇತ. "ಅಕ್ಕ" ಮನಸ್ಸಿನ ಅಭಿಮಾನಿ ದೇವತೆ ಪಾರ್ವತಿ (ಶಿವ ಶಕ್ತಿ), "ನೀರು" ಭಗವತ್ ಸ್ವರೂಪದ ಸಂಕೇತಗಳೆಂದು ತಿಳಿಯೋಣ. ಅಕ್ಕನ ಜೊತೆಗೆ ನೀರು ತರಲು ಹೋಗುವುದು ಹಳ್ಳಿಯ ದೈನಂದಿನ ಬದುಕಿನ ಒಂದು ಸಾಮಾನ್ಯ ದೃಶ್ಯ. ಅಲ್ಲದೆ ನಮಗೆ ಅಕ್ಕನಲ್ಲಿ ಅಮ್ಮನಿಗಿಂತ (ಲಕ್ಷ್ಮಿ) ಸ್ವಲ್ಪ ಸಲುಗೆ ಜಾಸ್ತಿ ಅಲ್ಲವೇ? "ನೀರು" ತರುವುದು ಎಂದರೆ ಆತ್ಮ ಸಾಕ್ಷಾತ್ಕಾರ. ಈ ಸಾಧನ ಶರೀರದಲ್ಲಿ ಜೀವ ಮತ್ತು ಈಶ ಒಟ್ಟಿಗೆ ಇರುವದೆಂಬುದು ತತ್ವಶಾಸ್ತ್ರದ ಸಿದ್ಧಾಂತ. ಇವೆರಡರ ಜೀವ-ಈಶರ ಅರಿವು ಪಡೆಯುವ ಪ್ರಯತ್ನವೇ ನೀರು ತರುವುದು, ಅದೂ ಈ ಮಾನವ ಶರೀರ ಎನ್ನುವ "ಬಿಂದಿಗೆ" (ಮಡಕೆ), ಸಾಧನ ಶರೀರದ ಮೂಲಕ. ನಮ್ಮ ಅಕ್ಕ ಮನದ ಅಭಿಮಾನಿ ಪಾರ್ವತಿಯ ಸಹಾಯದಿಂದ ಅರಿವಿನೆಡೆಗೆ ಮನಸ್ಸು ಮಾಡಲು ಈ ಕರೆ!

"ಬಿಂದಿಗೆ ಒಡೆಯುವದು" ಅಂದರೆ ಈ ಲಿಂಗ ದೇಹ ಭಂಗವಾಗವದು, ದೇಹ ಅಭಿಮಾನ ತೊರೆಯುವದು. ಈ ದೇಹಕ್ಕೆ ಇರುವ ಬೆಲೆಯಾದರೂ ಎಷ್ಟು? "ಒಂದೇ ಕಾಸು. ಜೀವ-ಈಶರಿಲ್ಲದ ದೇಹದ ಬೆಲೆ. ಹೆಣವು ತೃಣಕ್ಕಿಂತ ಕಡೆ ಅಲ್ಲವೇ?"

**ರಾಮನಾಮವೇ ಈ ಜೀವನದಲ್ಲಿಕ್ಕೆ ರಸ, ಈ ನೀರಲ್ಲಿರುವ ಮಧುರತೆ.**

ಕಾಮಿನಿಯರು ಎಂದರೆ ಕಾಮನೆಗಳನ್ನು ಅನುಭವಿಸಲು ಅನುಕೂಲವಾಗುವ ನಮ್ಮ ಇಂದ್ರಿಯಗಳು ಅದಕ್ಕೆ ಜವಬ್ದಾರರಾದ ಅಭಿಮಾನಿ ದೇವತೆಗಳು. ಉದಾಹರಣೆಗೆ ಬಾಯಿಗೆ "ಅಗ್ನಿ", ಕಣ್ಣಿಗೆ "ಇಂದ್ರ", ಮನಸ್ಸಿಗೆ "ಪಾರ್ವತಿ", ಮಾತಿಗೆ "ಸರಸ್ವತಿ" ಇತ್ಯಾದಿ. ಕಾಮಿನಿಯರೊಂದಿಗೆ ಏಕಾಂತವಾಡುವದು ಎಂದರೆ ಈ ಅಭಿಮಾನಿದೇವತೆಗಳ ಸಾಕ್ಷಾತ್ಕಾರ (ಸಂಪೂರ್ಣ ಅರಿವು) ಮತ್ತು ನಿಗ್ರಹ.

"ಗೋವಿಂದ ಎನ್ನುವ" ಗುಣ ಯಾವುದು? ಎನ್ನುವ ಪ್ರಶ್ನೆಗೆ, "ಗೋವಿಂದ" ಪದದ ಅರ್ಥ ತಿಳಿದರೆ ಅನುಕೂಲ. ಸಂಸ್ಕೃತ ಭಾಷೆಯ ಈ ಪದಕ್ಕೆ ಅನೇಕ ಅರ್ಥಗಳಿವೆಯಾದರೂ, ಈ ಸಂದರ್ಭಕ್ಕೆ "ಜ್ಞಾನಿಗಳಿಗೆ ಒಲಿದು ಬರುವವ" ಮತ್ತು "ನೀರಿನಲ್ಲಿ ಆಶ್ರಿತನಾದವ" ಎನ್ನುವ ಅರ್ಥಗಳು ಹೆಚ್ಚು ಸಮಂಜಸ ಅನ್ನಿಸುತ್ತವೆ. "ಗೋವಿಂದನೆಂಬೊ ಗುಣಉಳ್ಳ ನೀರಿಗೆ ತಾರೆ ಬಿಂದಿಗೆಯ" ಅಂದರೆ "ಜ್ಞಾನಿಗಳಿಗೆ ಒಲಿದು ಬರುವ ಗುಣ ಉಳ್ಳವ ಆ ಭಗವತ್ ಸ್ವರೂಪವನ್ನು ಮನಸ್ಸಲ್ಲಿ ತುಂಬಿಸಿ-ಕೊಳ್ಳೋಣ" ಎಂದು ಅರ್ಥ.

"ಆವಾವ ಪರಿಯಲ್ಲಿ ಅಮೃತದ ನೀರು" ಅನ್ನುವದಕ್ಕೆ ಸರ್ವ ಗುಣಗಳಲ್ಲಿಯೂ ಶ್ರೇಷ್ಠನಾದ ಎಂದು ತಿಳಿದರೆ ಭಗವಂತನ ಅನುಸಂಧಾನ ಮಾಡಿದಂತೆ.

"ಬಿಂದುಮಾಧವನ ಘಟ್ಟ" ಇದು ಹಿಂದುಗಳ ಪವಿತ್ರ ಕ್ಷೇತ್ರವಾದ ಕಾಶಿಯಲ್ಲಿರುವ "ಪಂಚ ಮಾಧವ" ಘಟ್ಟಗಳಲ್ಲಿ ಮೊದಲನೆಯದು. ಇದನ್ನು ಇಂದ್ರ ತನ್ನ ಎಲ್ಲ ಪಾಪಗಳನ್ನು (ದೋಷ) ಕಳೆದುಕೊಳ್ಳಲು ನಿರ್ಮಿಸಿದನೆಂದು ಪ್ರತೀತಿ. ಈ ಘಟ್ಟಗಳ ಸಂದರ್ಶನದಿಂದ ಪ್ರಾಕೃತಿಕ ಪಂಚಭೂತ ದೇಹದ ದೋಷಗಳೆಲ್ಲ ಕಳೆದು (ಅಂದರೆ ಲಿಂಗ ದೇಹ ಭಂಗವಾಗಿ) ಮೊಕ್ಷಸಾಧನೆ ಆಗುವದು ಎಂದು ನಂಬಿಕೆ. ಅಲ್ಲದೆ "ಬಿಂದುಮಾಧವನ ಘಟ್ಟ" ಅಂದರೆ ಮನಸ್ಸಿನ "ಸಮಾಧಿ ಸ್ಥಿತಿ" ಅಂತಲೂ ಅರ್ಥೈಸಬಹುದು.

ಇಷ್ಟೆಲ್ಲ ಸಾಧನೆ ಆದ ಮೇಲೆ ಜೀವ ಸೇರುವನಾದರೂ ಎಲ್ಲಿಗೆ? ಸಂಪೂರ್ಣವಾಗಿ ಅರಳಿದ ಕುಸುಮ ಪುರಂದರ ವಿಠಲನ (ಭಗವಂತನ) ಪಾದದಡಿ ಸೇರಿ ಸಾರ್ಥಕತೆ ಪಡೆಯುವುದು.

ಈ ರೀತಿಯಾಗಿ ದಾಸರುಗಳು ಭಕ್ತಿ ಸಾಹಿತ್ಯದಲ್ಲಿ ಅತ್ಯಂತ ಶ್ರೇಷ್ಠವಾದ ಮತ್ತು ಕ್ಲಿಷ್ಟಕರವಾದ ವೈದಿಕ ಶಾಸ್ತ್ರದ ಪ್ರಮೇಯಗಳನ್ನು ಸುಂದರವಾದ ಮತ್ತು ಸರಳವಾದ ಜನಸಾಮಾನ್ಯರ ಆಡುಭಾಷೆಯಲ್ಲಿ ತುಂಬಿರುವರು. Super computerಗಳು Smart phone ರೂಪದಲ್ಲಿ ನಮ್ಮ ಕೈಸೇರಿದಂತೆ! ಆಸಕ್ತರು ಈ ಸುಂದರ ಹಾಡುಗಳ ಕಾವ್ಯ ರಸಾನುಭದೊಂದಿಗೆ ಅಧ್ಯಾತ್ಮ ಅನುಸಂಧಾನದಿಂದ ಸಾಧನೆಗೆ ತೊಡಗಿಸಿಕೊಳ್ಳಬಹುದು. Phoneಗಳೇನೋ smart ಆದವು ನಾವು smart ಆಗಬೇಕಲ್ಲವೆ. ಅದಕ್ಕೇ "ದೈವ ಸಂಕಲ್ಪ" ಬೇಕು ಅನ್ನೋದು. ನಮಗೆ ಅದನ್ನು ನಮ್ಮೆಲ್ಲರಲ್ಲಿ ಇರುವ ಭಗವಂತ ಕರುಣಿಸಲಿ ಎಂದು ಆಶಿಸೋಣ.



# ಕಠೋಪನಿಷತ್ತಿನ ನಚಿಕೇತನ ಭಕ್ತಿ, ಶ್ರದ್ಧೆ ಮತ್ತು ಜ್ಞಾನಪಿಪಾಸೆ

–ವಿಶ್ವನಾಥ್ ಹುಲಿಕಲ್

**ನ**ಮಗೆ ಒಟ್ಟು ಸುಮಾರು ೧೦೮ ಉಪನಿಷತ್ತುಗಳು ಲಭ್ಯವಾಗಿದ್ದರೂ, ಅವುಗಳಲ್ಲಿ ೧೦ ಉಪನಿಷತ್ತುಗಳು ಮಾತ್ರ ಮುಖ್ಯವಾದವು. ಇವುಗಳಲ್ಲಿ ಕಠೋಪನಿಷತ್ತು ಬಹುಶಃ ಅತ್ಯಂತ ಸ್ಪಷ್ಟವೂ, ಸರಳವೂ ಆದ ಉಪನಿಷತ್ತು. ಉಪನಿಷತ್ತು ಬ್ರಹ್ಮನನ್ನು ಕುರಿತಾದ ಜ್ಞಾನದ (ಅಂದರೆ ಬ್ರಹ್ಮವಿದ್ಯೆಯ) ಬಗ್ಗೆ ವಿವರಿಸುತ್ತದೆ. ಕಠೋಪನಿಷತ್ತು ಬ್ರಹ್ಮವಿದ್ಯೆಯನ್ನು ಬಹಳ ಸುಲಭವಾಗಿ ತಿಳಿಯುವಂತೆ ವರ್ಣಿಸಿ, ಅದನ್ನು ಮನದಟ್ಟು ಮಾಡಲು ಅದರ ಮುಖ್ಯಾಂಶಗಳನ್ನು ಪುನಃ ಪುನಃ ನಮ್ಮ ಗಮನಕ್ಕೆ ತರುತ್ತದೆ. ಇದರಲ್ಲಿ ಬ್ರಹ್ಮ ಅಥವಾ ಪರಮಾರ್ಥಸತ್ಯವೆನಿಸುವ ಶುದ್ಧ ಆತ್ಮನ ವಿಚಾರವಾಗಿ ಒಂದೊಂದು ವಿವರವನ್ನೂ ಪದರ ಪದರವಾಗಿ ವಿವರಿಸುತ್ತಾ ಹೋಗಿದೆ. ಇದಲ್ಲದೆ ಕಠೋಪನಿಷತ್ತು ಸಾಧನಾಪ್ರಧಾನವಾದುದು. ವೇದಾಂತ ಸಾಧಕನಲ್ಲಿ ಇರಬೇಕಾದ ಸಾಧನ ಚತುಷ್ಟಯಗಳನ್ನು ನಚಿಕೇತನ ಕಥೆಯ ಮೂಲಕ ಹೃದಯಂಗಮವಾಗಿ ವಿವರಿಸಲಾಗಿದೆ.

ಕಠೋಪನಿಷತ್ತಿನ ಆರಂಭದ ದೃಶ್ಯವು ನಾಟಕೀಯವಾಗಿದೆ. ಅದೊಂದು ಪವಿತ್ರವಾದ ಯಜ್ಞಶಾಲೆ. ವಾಜಶ್ರವಸ್ ಎಂಬ ಋಷಿಯು ವಿಶ್ವಜಿತ್ ಎಂಬ ಮಹಾಯಜ್ಞವನ್ನು ಮಾಡಿದ್ದಾನೆ. ದಾನಧರ್ಮಗಳಿಗೆ ಪ್ರಸಿದ್ಧವಾದ ವಂಶದಲ್ಲಿ ಜನಿಸಿದ ಅವನು ತನ್ನಲ್ಲಿರುವುದನ್ನೆಲ್ಲಾ ದಾನ ಮಾಡಿಬಿಟ್ಟಿದ್ದಾನೆ. ಆಗ ಯಾಗದ ಕೊನೆಯಲ್ಲಿ ದಕ್ಷಿಣೆ ಕೊಡುವ ಸಮಯ ಬಂದಾಗ, ತನ್ನಲ್ಲಿ ಏನೂ ಇರದ ಕಾರಣ, ಬರಡು ಗೋವುಗಳನ್ನು ದಾನ ಕೊಡಲಾರಂಭಿಸುತ್ತಾನೆ. ಆಗ ಅವನ ಮಗ ನಚಿಕೇತ ಅಲ್ಲಿಯೇ ಇರುತ್ತಾನೆ. ಆಗ ಅವನಿಗೆ ಎಂಟು ಒಂಭತ್ತು ವರ್ಷಗಳಿರಬಹುದು; ಉಪನಯನವಾಗಿರುತ್ತದೆ. ಕೆಲಸಕ್ಕೆ ಬಾರದ ಹಸುಗಳನ್ನು ದಾನಮಾಡುವುದರಿಂದ ಯಾಗದಫಲವು ನಷ್ಟವಾಗುವುದಿಲ್ಲವೇ ಎಂದು ಅವನು ಯೋಚಿಸುತ್ತಾನೆ. ಅಪ್ಪನದು ತಪ್ಪು ಎಂದು ಮಗ ಹೇಗೆ ಹೇಳಿಯಾನು? ಆ ಸಂದರ್ಭದಲ್ಲಿ ತನ್ನನ್ನು ದಾನಮಾಡಿದರೆ, ಸ್ವಲ್ಪವಾದರೂ

ಪರಿಹಾರವಾದೀತು ಎಂದು ಬಗೆದು, ತನ್ನನ್ನು ಯಾರಿಗೆ ದಾನಮಾಡುತ್ತೀಯ ಎಂದು ಅಪ್ಪನನ್ನು ಕೇಳುತ್ತಾನೆ. ಅವನು ಸುಮ್ಮನೆ ಇದ್ದಾಗ, ಪುನಃ ಪುನಃ ಅದೇ ಪ್ರಶ್ನೆಯನ್ನು ಮಾಡುತ್ತಾನೆ. ಆಗ ಕೋಪಗೊಂಡ ತಂದೆ, ನಿನ್ನನ್ನು ಯಮನಿಗೆ ದಾನಮಾಡುತ್ತೇನೆ ಎಂದುಬಿಡುತ್ತಾನೆ! ತನ್ನನ್ನೇಕೆ ಮೃತ್ಯುದೇವತೆಗೆ ದಾನಮಾಡಿದ ಎಂದು ನಚಿಕೇತನಿಗೆ ಅರ್ಥವಾಗದಿದ್ದರೂ, ತಂದೆಯ ಮಾತನ್ನು ಪಾಲಿಸಲೋಸುಗ, ಯಮನ ಬಳಿಗೆ ಹೋಗಲು ತಂದೆಯ ಅನುಮತಿಯನ್ನು ಬೇಡುತ್ತಾನೆ. ಆ ಚಿಕ್ಕ ವಯಸ್ಸಿನಲ್ಲಿಯೇ ಅವನು ಜ್ಞಾನಾಕಾಂಕ್ಷಿಯಾಗಿ ಈ ಜಗತ್ತು, ಸೃಷ್ಟಿ, ಬ್ರಹ್ಮ, ಮೃತ್ಯು ಮತ್ತು ನಂತರದ ರಹಸ್ಯಗಳನ್ನು ತಿಳಿದುಕೊಳ್ಳಲು ಕಾತುರನಾಗಿರುತ್ತಾನೆ. ಮನಸ್ಸಿಲ್ಲದಿದ್ದರೂ, ಆಗ ಮಗನನ್ನು ಯಮನ ಬಳಿಗೆ ಕಳುಹಿಸುವುದು ವಾಜಶ್ರವಸನಿಗೆ ಅನಿವಾರ್ಯವಾಗುತ್ತದೆ.

ಕೂಡಲೇ ನಚಿಕೇತನು ಯಮಲೋಕಕ್ಕೆ ಹೋಗುತ್ತಾನೆ. ಅಲ್ಲಿ ಅವನನ್ನು ಆದರಪೂರ್ವಕವಾಗಿ ಸ್ವಾಗತಿಸಲಾಗುತ್ತದೆ. ಆಗ ಅಲ್ಲಿ ಯಮ ಇರದಿದ್ದ ಕಾರಣ, ನಚಿಕೇತ ಅವನಿಗಾಗಿ ಮೂರು ದಿನಗಳ ಕಾಲ ಕಾಯಬೇಕಾಗುತ್ತದೆ. ಆಗ ನಚಿಕೇತ ನಿದ್ರಾಹಾರಗಳನ್ನು ಬಿಟ್ಟು, ಭಕ್ತಿಪೂರ್ವಕವಾಗಿ, ಶ್ರದ್ಧೆಯಿಂದ ಯಮರಾಜನಿಗಾಗಿ ಕಾಯುತ್ತಾನೆ. ಯಮ ಹಿಂದಿರುಗಿದ ಮೇಲೆ, ನಚಿಕೇತ ತನಗಾಗಿ ಮೂರು ದಿನಗಳ ಕಾಲ ಉಪವಾಸವಿದ್ದುದನ್ನು ತಿಳಿದು, ಅವನಿಗೆ ಬೇಸರವಾಗುತ್ತದೆ. ಅದಕ್ಕೆ ಪ್ರಾಯಶ್ಚಿತ್ತವೋ ಎಂಬಂತೆ ಅವನಿಗೆ ಮೂರು ವರಗಳನ್ನು ದಯಪಾಲಿಸುತ್ತಾನೆ.

ನಚಿಕೇತನಿಗೆ ಸಹಜವಾಗಿಯೇ ಸಂತೋಷವಾಗುತ್ತದೆ. ತನ್ನ ತಂದೆಯು ತನ್ನ ಬಗ್ಗೆ ಕ್ರೋಧರಹಿತನಾಗಿ, ಶಾಂತಚಿತ್ತನಾಗಲಿ ಎಂದು ಮೊದಲನೆಯ ವರವನ್ನು ಕೇಳುತ್ತಾನೆ; ಈ ವರವನ್ನು ಕೊಟ್ಟರೆ, ಯಮನು ತನ್ನನ್ನು ಮೃತ್ಯುವಿಗೆ ಒಪ್ಪಿಸದೆ, ಮತ್ತೆ ಭೂಲೋಕಕ್ಕೆ ಕಳುಹಿಸುತ್ತಾನೆ ಎಂಬುದು ಖಾತ್ರಿಯಾಗುತ್ತದೆ ಎಂದು ಅವನ ಲೆಕ್ಕಾಚಾರ. ಯಮನು ಆ ವರವನ್ನು ದಯಪಾಲಿಸುತ್ತಾನೆ. ಎರಡನೆಯ ವರವಾಗಿ ಅಮೃತತ್ವವನ್ನು ಪಡೆಯುವ ಸ್ವರ್ಗಕ್ಕೆ ಹೋಗುವ ದಾರಿಯನ್ನು ತನಗೆ ತಿಳಿಸಬೇಕೆಂದು ಕೇಳಿಕೊಳ್ಳುತ್ತಾನೆ; ಜನಸಾಮಾನ್ಯರು ಕೇಳಿಕೊಳ್ಳುವ ಹಾಗೆ ದೀರ್ಘಾಯುಷ್ಯವನ್ನು ಮತ್ತು ಲೌಕಿಕ ಐಶ್ವರ್ಯವನ್ನು ಕೊಡು ಎಂದು ನಚಿಕೇತನು ಕೇಳಿಕೊಳ್ಳಲಿಲ್ಲ ಎಂಬುದು ಇಲ್ಲಿ ಗಮನಾರ್ಹ. ಯಮನು ಸ್ವರ್ಗಲೋಕಕ್ಕೆ ಕರೆದೊಯ್ಯುವ ಯಾಗದ ಮಂತ್ರಗಳನ್ನೂ, ವಿಧಿ–ವಿಧಾನಗಳನ್ನೂ ವಿವರಿಸುತ್ತಾನೆ.

ಮುಂದೆ ನಚಿಕೇತನು ಕೇಳುವ ಮೂರನೆಯ ವರವು ಕಠೋಪನಿಷತ್ತಿನ ಗೂಢವಾದ ಆಧ್ಯಾತ್ಮಿಕಕ್ಕೆ ತಳಹದಿಯನ್ನು ಹಾಕುತ್ತದೆ: ಮನುಷ್ಯನು ಸತ್ತ ಮೇಲೆ ಏನಾಗುತ್ತಾನೆ? ದೇಹದಿಂದ ಪ್ರಾಣವು ನಿರ್ಗಮಿಸಿದ ಬಳಿಕ ಭೌತಿಕ ಶರೀರ ನಿಷ್ಪ್ರಯೋಜಕವಾಗುತ್ತದೆ. ಹಾಗಿದ್ದರೆ, ಬದುಕಿರುವಾಗ ದೇಹಕ್ಕೆ ಆ ಶಕ್ತಿ ಎಲ್ಲಿಂದ ಬರುತ್ತದೆ ಮತ್ತು ಮರಣಾನಂತರ

ಅದು ಎಲ್ಲಿಗೆ ಹೋಗುತ್ತದೆ ಎಂಬುದು ನಿಗೂಢವಾಗಿದೆ. ಯಮನು ಮೃತ್ಯುದೇವತೆ. ಅವನಿಗೆ ಪೃಥ್ವಿಯ ಜನಗಳ ಜನನ, ಬದುಕು, ಮರಣ ಮೊದಲಾದವುಗಳ ಪೂರ್ಣ ಅರಿವು ಇರುತ್ತದೆ; ಅವನು ಸಕಲ ಜ್ಞಾನಿಯಾಗಿರುತ್ತಾನೆ. ಆದುದರಿಂದ ಅವನು ನಚಿಕೇತನಿಗೆ ಜ್ಞಾನೋಪದೇಶ ಮಾಡಲು ಅರ್ಹವ್ಯಕ್ತಿಯಾಗಿರುತ್ತಾನೆ. ಹೀಗಿದ್ದರೂ, ಅವನು ಮೊದಲು ತನ್ನ ಶಿಷ್ಯನ ಶ್ರದ್ಧೆ, ವಿಧೇಯತೆ ಮತ್ತು ಆಧ್ಯಾತ್ಮಿಕ ಜ್ಞಾನವನ್ನು ಪಡೆಯುವ ಉತ್ಕಟ ಆಕಾಂಕ್ಷೆ ಮೊದಲಾದವುಗಳನ್ನು ಪರೀಕ್ಷಿಸಿದ ನಂತರವೇ ಅವನಿಗೆ ಆಧ್ಯಾತ್ಮಿಕ ತತ್ವವನ್ನು ಉಪದೇಶಿಸುತ್ತಾನೆ.

ಅಮರತ್ವವನ್ನು ಪಡೆಯುವುದು ಅಥವಾ ಆತ್ಮಸಾಕ್ಷಾತ್ಕಾರವೇ ಜೀವನದ ಪರಮ ಗುರಿ. ಇದನ್ನು ಪಡೆಯುವುದು ಹೇಗೆ ಎಂದು ನಚಿಕೇತ ಕೇಳಿರುವುದು ಯಮನಿಗೆ ನಿಜಕ್ಕೂ ಸಂತೋಷವಾಗುತ್ತದೆ. ಆದರೆ ಅವನನ್ನು ಪರೀಕ್ಷಿಸಲೋಸುಗ ಹೇಳುತ್ತಾನೆ: "ನೀನು ಅಷ್ಟೈಶ್ವರ್ಯ, ದೀರ್ಘಾಯಸ್ಸು, ರಾಜಯೋಗ, ಇತ್ಯಾದಿ ಏನು ಬೇಕಾದರೂ ಕೇಳಿಕೋ, ಕೊಡುತ್ತೇನೆ" ಎನ್ನುತ್ತಾನೆ. ಆಗ ನಚಿಕೇತ, "ಪ್ರಪಂಚದ ಎಲ್ಲ ಭೋಗ ಮತ್ತು ಐಶ್ವರ್ಯಗಳು ಕ್ಷಣಿಕ. ಆದ್ದರಿಂದ ನನಗೆ ಅವುಗಳು ಬೇಡ. ನಾನು ಜನನ-ಮರಣಗಳ ಚಕ್ರದಿಂದ ಹೊರಬಂದು, ಮುಕ್ತಿಯನ್ನು ಹೊಂದಬೇಕಾಗಿದೆ. ಅಂತಹ ಜ್ಞಾನವನ್ನು ನನಗೆ ಬೋಧಿಸು" ಎಂದು ವಿನಂತಿಸಿಕೊಳ್ಳುತ್ತಾನೆ. ಜ್ಞಾನದ ಬೆಳಕನ್ನು ತೋರಿಸುವ ಗುರುವೊಬ್ಬನಿಂದ ಮಾತ್ರ ಜನನ ಮರಣದಿಂದ ಮುಕ್ತಿಯನ್ನು ಪಡೆಯಲು ಸಾಧ್ಯ. ಅಂತಹ ಆತ್ಮಜ್ಞಾನವನ್ನು ತರ್ಕದಿಂದ ಪಡೆಯುವುದು ಸಾಧ್ಯವಿಲ್ಲ. ಈ ವಿಚಾರ ನಚಿಕೇತನಿಗೆ ಅರಿವಾಗಿದೆ ಎಂದು ಯಮನಿಗೆ ಖಾತ್ರಿಯಾಗುತ್ತದೆ. ಅವನ ಶುದ್ಧವಾದ ಮನಸ್ಸನ್ನೂ, ಶ್ರದ್ಧೆಯನ್ನೂ, ಐಹಿಕ ಉಪಭೋಗಗಳನ್ನು ಕ್ಷಣಿಕವೆಂದು ನಂಬಿದ ದೃಢ ಮನಸ್ಸನ್ನೂ ಹೊಂದಿದ ನಚಿಕೇತನಿಗೆ ಆತ್ಮಜ್ಞಾನವನ್ನು ಧಾರೆಯೆರೆಯಲು ಯಮ ಸಿದ್ಧನಾಗುತ್ತಾನೆ.

"ಕಣ್ಣಿಗೆ ಕಾಣುವ ನಮ್ಮ ಶರೀರ ಪಂಚಭೂತಗಳಾದ ಪೃಥ್ವಿ, ನೀರು, ವಾಯು, ಅಗ್ನಿ ಮತ್ತು ಆಕಾಶ (ಅವಕಾಶ) ಇವುಗಳಿಂದ ಆಗಿದೆ. ನಾವು ಇಚ್ಛಿಸುವ ಕೆಲಸಗಳನ್ನು ದೇಹ ಸ್ವತಂತ್ರವಾಗಿ ಮಾಡಲು ಶಕ್ತವಲ್ಲ. ಶರೀರದ ಕ್ರಿಯಾ ಚಟುವಟಿಕೆಗಳನ್ನು ಮಾಡಿಸಲು ಪ್ರಾಣಶಕ್ತಿ ಇದೆ; ಕೆಲಸಗಳನ್ನು ಮಾಡಲು ಇದು ಶಕ್ತಿಯನ್ನು ಕೊಡುತ್ತದೆ. ಕೆಲಸವನ್ನು ಮಾಡುವಂತೆ ಸಂಕಲ್ಪಿಸುವುದು ಮನಸ್ಸು. ಈ ಮನಸ್ಸಿನ ಹಿಂದೆ ಒಂದು ಶಕ್ತಿ ಇದೆ ಎಂದು ಭಾವಿಸುವುದಾದರೆ, ಅದನ್ನು ಆತ್ಮ ಎನ್ನಬಹುದು. ಆತ್ಮ ಕಣ್ಣಿಗೆ ಕಾಣಿಸುವುದಿಲ್ಲ. ಶರೀರವು ಕೈಗೊಳ್ಳುವ ಕೆಲಸಗಳಲ್ಲಿ ಭಾಗವಹಿಸುವುದಿಲ್ಲ, ಅದು ಕೇವಲ ಸಾಕ್ಷೀಭೂತವಾಗಿರುತ್ತದೆ. ಇಂತಹ ಆತ್ಮನು ಸಕಲ ಚರಾಚರ ಜೀವಿಗಳಲ್ಲಿ (ಅಂದರೆ ಗಿಡ, ಮರ, ಪ್ರಾಣಿ, ಪಕ್ಷಿ ಮೊದಲಾದುವುಗಳಲ್ಲಿ) ಇರುವನು. ಉಪನಿಷತ್ತಿನ ಪ್ರಕಾರ,

ಪರಮಾತ್ಮನು ಸಕಲವನ್ನೂ ಸೃಷ್ಟಿಸಿದ ಬಳಿಕ, ಆ ಸೃಷ್ಟಿಯ ಸರ್ವಸ್ವವನ್ನೂ ಪ್ರವೇಶಿಸಿದನು. ಅಂದರೆ, ಪ್ರವೇಶಿಸಿದವನು ಆತ್ಮ. ಇಂತಹ ಆತ್ಮ ಪ್ರವೇಶಿಸುವುದಕ್ಕೆ ಮೊದಲು ಪರಮಾತ್ಮನಾಗಿದ್ದ. ಅಂದರೆ ಆತ್ಮ ಮತ್ತು ಪರಮಾತ್ಮ ಒಂದೇ! ಚರಾಚರಗಳಲ್ಲಿರುವ ಈ ಆತ್ಮವೇ ವಿಶ್ವವನ್ನು ಸೃಷ್ಟಿಸಿದ ಹಾಗೂ ಅದನ್ನು ಆವರಿಸಿರುವ ಪರಮಾತ್ಮನು. ಹೀಗೆ ಆತ್ಮ ಮತ್ತು ಪರಮಾತ್ಮ ಒಂದೇ ಎಂಬ ಸಾಕ್ಷಾತ್ಕಾರವೇ ಜೀವನದ ಅಂತಿಮ ಗುರಿ; ಅದೇ ಮೋಕ್ಷ, ಅದೇ ಬ್ರಹ್ಮಜ್ಞಾನ. ವಿಶ್ವಕುಟುಂಬಿಯಾದ ಪರಮಾತ್ಮನನ್ನೇ ಬ್ರಹ್ಮನ್ ಎಂದು ಉಪನಿಷತ್ತಿನ ಋಷಿಗಳು ಹೇಳಿದ್ದಾರೆ.

**ನಾಯಮಾತ್ಮಾ ಪ್ರವಚನೇನ ಲಭ್ಯೋ**
**ನ ಮೇಧಯಾ ನ ಬಹುನಾ ಶ್ರುತೇನ ।**
**ಯಮೇವೈಷ ವೃಣುತೇ ತೇನ ಲಭ್ಯಃ**
**ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥** [೧, ೨, ೨೩]

"ಇದು ಬಹುಜನರ ಶ್ರವಣಕ್ಕೂ ಲಭ್ಯವಿಲ್ಲ, ಶ್ರವಣ ಮಾಡಿದ ಮೇಲೂ ಇವನನ್ನು ಬಹುಜನರು ಅರಿಯಲು ಅಸಮರ್ಥರಾಗುತ್ತಾರೆ. ಆತ್ಮನ ವಿಷಯವನ್ನು ಕುರಿತು ತಿಳಿದವರು ಹೇಳಿದರೂ, ಅದನ್ನು ತಿಳಿದುಕೊಳ್ಳುವುದು ಕಷ್ಟ. ಆತ್ಮನನ್ನು ವಾದ, ಚರ್ಚೆ ಮತ್ತು ತರ್ಕಗಳಿಂದ ಪಡೆಯಲು ಸಾಧ್ಯವಿಲ್ಲ. ಇದನ್ನು ಅನುಭವಿಸಬೇಕು." ಹೀಗೆ ಹೇಳಿ ಯಮ ಆತ್ಮವನ್ನು ಬೋಧಿಸಲು ತನಗೆ ನಚಿಕೇತನಂತಹ ಶ್ರದ್ಧಾಳು ಮತ್ತು ಮನಸ್ಸನ್ನು ತೆರೆದಿಟ್ಟುಕೊಂಡಿರುವವನು ದೊರಕಿದ್ದಾನೆ. ಆದುದರಿಂದ ಅವನಿಗೆ ಆತ್ಮಬೋಧೆಯನ್ನು ಮಾಡುತ್ತೇನೆ ಎಂದು ಯಮ ನಿರ್ಧರಿಸಿದ್ದಾನೆ.

"ಆ ಆತ್ಮನು ಪ್ರವಚನದಿಂದ ಲಭ್ಯನಲ್ಲ, ಮೇಧಾಶಕ್ತಿಯಿಂದಲೂ, ಶ್ರವಣದಿಂದಲೂ ಲಭ್ಯನಲ್ಲ. ಯಾರನ್ನು ಈ ಸಾಧಕ (ಮುಮುಕ್ಷು) ಬೇಡುತ್ತಾನೆಯೋ, ಅವನಿಂದ ಲಭ್ಯನು. ಅವನಿಗೆ ಆತ್ಮನು ತನ್ನತನವನ್ನೇ ತೋರುತ್ತಾನೆ. ಆದ್ದರಿಂದ ಅನೇಕ ಗ್ರಂಥಗಳನ್ನು ಓದಿ, ತಾನು ಸರ್ವಸ್ವವನ್ನು ತಿಳಿದಿದ್ದೇನೆ ಎನ್ನುವವನಿಗೆ ಆತ್ಮನು ಲಭ್ಯನಲ್ಲ. ಸಾಧಕನಾದವನು ಸಾಧನೆಯ ಮೂಲಕ ಆತ್ಮವನ್ನು ನೇರವಾಗಿ ನನಗೆ ನಿನ್ನ ಜ್ಞಾನ ಕೊಡು ಎಂದು ಪ್ರಾರ್ಥಿಸಿದರೆ, ಅವನು ಲಭ್ಯನಾಗುತ್ತಾನೆ. ಆಗಲೇ ಆತ್ಮಸಾಕ್ಷಾತ್ಕಾರ ವಾಗುವುದು."

"ಆತ್ಮವು ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಇವನು ಯಾವುದರಿಂದಲೂ ಹುಟ್ಟಲಿಲ್ಲ, ಇವನಿಂದ ಯಾರೂ ಹುಟ್ಟಲಿಲ್ಲ. ಆತ್ಮ ಜನ್ಮರಹಿತ, ನಿತ್ಯ, ಶಾಶ್ವತ; ಶರೀರ ನಾಶವಾಗುತ್ತಿದ್ದರೂ ಆತ್ಮ ನಾಶವಾಗುವುದಿಲ್ಲ. ಆತ್ಮನು ಪ್ರಾಣಿಗಳ ದೇಹವೆಂಬ ಗುಹೆಯಲ್ಲಿ ಇದ್ದಾನೆ. ಶೋಕವನ್ನು ಕಳೆದುಕೊಂಡವನು ಮಾತ್ರ ಆತ್ಮನನ್ನು ನೋಡುತ್ತಾನೆ. ಆದುದ್ದರಿಂದ ಅವನು ಶೋಕದಿಂದ ಶಾಶ್ವತವಾಗಿ ಪಾರಾಗುತ್ತಾನೆ."

**ಅಣೋರಣೀಯಾನ್ ಮಹತೋಮಹೀಮಾನ್**
**ಆತ್ಮಾಸ್ಯ ಜಂತೋರ್ನಿಹಿತೋಗುಹಾಯಾಮ್।**
**ತಮಕ್ರತುಃ ಪಶ್ಯತಿ ವೀತಶೋಕೋ**
**ಧಾತುಪ್ರಸಾದಾನ್ಮಹಿಮಾನಮಾತ್ಮನಃ॥** [೧, ೨, ೨೦]

"ಆತ್ಮನು ಅಣುವಿಗಿಂತಲೂ ಸೂಕ್ಷ್ಮನಾದವನಾಗಿದ್ದಾನೆ. ಪ್ರಪಂಚದ ಅತಿ ದೊಡ್ಡ ವಸ್ತುವಿಗಿಂತಲೂ ದೊಡ್ಡವನಾಗಿದ್ದಾನೆ. ಆತ್ಮನು ಸರ್ವಪ್ರಾಣಿಗಳ, ಜೀವಿಗಳ ಹೃದಯಾಂತರಾಳದಲ್ಲಿ ಇರುವವನು. ಅಜ್ಞಾನಿಗಳಿಗೆ ಆತ್ಮನನ್ನು ತಿಳಿಯಲಾಗುವುದಿಲ್ಲ. ಆಸೆಗಳನ್ನು, ಪಂಚೇಂದ್ರಿಯಗಳನ್ನು ಜಯಿಸಿದವನಿಗೆ ಮಾತ್ರ ಆತ್ಮನು ಕಾಣಸಿಗುವವನು. ಶೋಕವನ್ನು ಕಳೆದುಕೊಂಡವನು ಮಾತ್ರ ಆತ್ಮನನ್ನು ನೋಡುತ್ತಾನೆ. ಆತ್ಮಜ್ಞಾನಿಯಾದವನು ಯಾವ ಶೋಕಕ್ಕೂ ಈಡಾಗುವುದಿಲ್ಲ. ಅನಿತ್ಯವಾದ ಶರೀರದಲ್ಲಿ ನಿತ್ಯನಾದ ಆತ್ಮನು ನೆಲೆಸಿರುತ್ತಾನೆ. ಹಾಗೆಯೇ ಅವನು ಸರ್ವ ವ್ಯಾಪಿಯಾಗಿಯೂ ಇರುತ್ತಾನೆ (ಪರಮಾತ್ಮ). ಇಂತಹ ಆತ್ಮನನ್ನು ಸೂಕ್ಷ್ಮಬುದ್ಧಿಯಿಂದ ಮಾತ್ರ ತಿಳಿಯಬಹುದು. ಸಾಮಾನ್ಯ ಮನುಷ್ಯನು ಹೊರಗಿನ ಶರೀರವನ್ನು ಕಾಣಬಲ್ಲನೇ ಹೊರತು, ಹೃದಯದಲ್ಲಿ ಅಡಗಿರುವ ಆತ್ಮನನ್ನು ತಿಳಿಯಲಾರ. ಬುದ್ಧಿಯನ್ನು ಆತ್ಮನಲ್ಲಿ ಲೀನಮಾಡುವ, ಅಂತರಂಗದ ಒಳಗಣ್ಣಿನಿಂದ ನೋಡುವ ಸೂಕ್ಷ್ಮದರ್ಶಿಯು ಆತ್ಮನನ್ನು ಕಾಣಬಹುದು.

ಮನುಷ್ಯನು ಪಂಚೇಂದ್ರಿಯಗಳಾದ ಕಣ್ಣು, ಕಿವಿ, ಮೂಗು, ನಾಲಗೆ ಮತ್ತು ಚರ್ಮಗಳ ಮೂಲಕ ಪ್ರಪಂಚವನ್ನು ಅನುಭವಿಸುತ್ತಾನೆ; ಆದರೆ ಇವುಗಳಿಂದ ತನ್ನ ಅಂತರಂಗದಲ್ಲಿರುವ ಆತ್ಮನನ್ನು ಕಾಣಲಾರ. ಆದರೆ ಧೀರರಾದವರು ಅಮರತ್ವವನ್ನು ಬಯಸಿ, ಕಣ್ಣುಗಳನ್ನು ಒಳಗಡೆಗೆ ತಿರುಗಿಸಿ ತಮ್ಮ ಆತ್ಮನನ್ನು ಕಾಣುತ್ತಾರೆ. ಪಂಚೇಂದ್ರಿಯಗಳ ಕಾರ್ಯವನ್ನು ಸ್ಥಗಿತಗೊಳಿಸಿ, ಅಂತರಂಗದ ಕಡೆಗೆ ಕಣ್ಣುಗಳನ್ನು ತಿರುಗಿಸುವವನೇ ಧೀರ. ಸಾಮಾನ್ಯ ಜನರು ತಮ್ಮ ಒಳಗೇ ಇರುವ ಆತ್ಮನನ್ನು ಕಾಣಲಾರರು. ಸಾಧಕನಾದ ತಪಸ್ವಿಗೆ ಮಾತ್ರ ಇದು ಸಾಧ್ಯ. ಇಂತಹ ಸಾಧಕರು ಜಗತ್ತಿನಲ್ಲಿ ಎಷ್ಟು ಮಂದಿ ದೊರಕಿಯಾರು? ಆದ್ದರಿಂದ ಯಮ ಆತ್ಮಜ್ಞಾನಿಗಳಾಗ ಬಯಸುವ ಶತ್ರುಗಳಿಗೆ ಈ ಎಚ್ಚರಿಕೆಯನ್ನು ನೀಡಿದ್ದಾನೆ:

**ಉತ್ತಿಷ್ಠತ ಜಾಗ್ರತ**
**ಪ್ರಾಪ್ಯವರಾನ್ನಿಬೋಧತ ।**
**ಕ್ಷುರಸ್ಯ ಧಾರಾ ನಿಶಿತಾದುರತ್ಯಯಾ**
**ದುರ್ಗಂ ಪಥಸ್ತತ್ ಕವಯೋ ವದಂತಿ ॥** [೧, ೩, ೧೪]

"ಏಳಿ, ಜಾಗ್ರತರಾಗಿ. ಶ್ರೇಷ್ಠರಾದ ಗುರುಗಳನ್ನು ಸೇರಿ, ಜ್ಞಾನವನ್ನು ಪಡೆದುಕೊಳ್ಳಿ.

ಕತ್ತಿಯ ಅಲಗಿನಂತೆ ಈ ಅಧ್ಯಾತ್ಮ ಮಾರ್ಗವು ನಡೆಯಲು, ದಾಟಲೂ ದುರ್ಗಮವು ಎಂದು ಜ್ಞಾನಿಗಳು ಹೇಳುತ್ತಾರೆ."

"ಈ ಸಾಧನೆಗೆ ಆತ್ಮಜ್ಞಾನವನ್ನು ಸಾಕ್ಷಾತ್ಕರಿಸಿಕೊಂಡ ಗುರುಗಳ ಅಗತ್ಯ ಮತ್ತು ಸಹಾಯ ಬೇಕಿದೆ. ಅವರು ದೊರಕಿದರೂ, ಇಂತಹ ಸತ್ಯಾನ್ವೇಷಣೆಯ ಹಾದಿ ಸುಗಮವಲ್ಲ. ಸದಾಚಾರ, ಶ್ರದ್ಧೆ, ಭಕ್ತಿ, ಧ್ಯಾನ ಮೊದಲಾದ ರಕ್ಷಾಕವಚಗಳಿಂದ ಸಿದ್ಧತೆಯನ್ನು ಮಾಡಿಕೊಂಡು, ಶ್ರೇಯಸ್ಸಿನ ಮಾರ್ಗದಲ್ಲಿ ನಡೆಯಬೇಕು. ದಾರಿ ತಪ್ಪಿಸಲು ಕಾಮ, ಕ್ರೋಧ, ಮೋಹ, ಲೋಭ, ಮದ ಮತ್ತು ಮತ್ಸರಗಳೆಂಬ ದುಷ್ಟಶಕ್ತಿಗಳು ಹೊಂಚು ಹಾಕುತ್ತಿರುತ್ತವೆ. ಇಂದ್ರಿಯಗಳನ್ನು ತಮ್ಮ ವಶದಲ್ಲಿಟ್ಟುಕೊಂಡು, ಸಂಯಮಿಯಾಗಿ ಅವುಗಳ ಹಿಡಿತಕ್ಕೆ ಸಿಕ್ಕದೆ ಪಾರಾಗಬೇಕು. ಹಾಗೆ ಮಾಡಿದಲ್ಲಿ ಮುಮುಕ್ಷು (ಮೋಕ್ಷದ ಮಹತ್ವಾಕಾಂಕ್ಷೆಯಿಂದ ಸರ್ವ ಪ್ರಯತ್ನಮಾಡುವ ಮನುಷ್ಯ) ಈ ಜೀವನದಲ್ಲಿಯೇ ಮುಕ್ತಿಯನ್ನು ಪಡೆಯಲು ಸಾಧ್ಯ: ಮರಣವನ್ನಪ್ಪುವ ಮುಂಚೆಯೇ ಇಲ್ಲಿಯೇ ಬ್ರಹ್ಮನನ್ನು ತಿಳಿದುಕೊಳ್ಳಲು ಸಮರ್ಥನಾದರೆ, ಅವನು ಮುಕ್ತನಾಗುತ್ತಾನೆ. ಆದ್ದರಿಂದ ವ್ಯರ್ಥವಾಗಿ ಕಾಲ ಕಳೆಯದೆ, ಶಕ್ತಿ ಇರುವಾಗಲೇ ಆತ್ಮದ ಅನ್ವೇಷಣೆ ಮಾಡಿ, ಈ ಜನ್ಮದಲ್ಲಿಯೇ ಮುಕ್ತಿಯನ್ನು ಪಡೆಯಬೇಕಾಗಿದೆ; ಇದಕ್ಕೆ ಪರಬ್ರಹ್ಮನಲ್ಲಿ ಅಚಲ ಮತ್ತು ಅನನ್ಯ ಭಕ್ತಿ ಇರಬೇಕಾಗುತ್ತದೆ. ಇಲ್ಲದಿದ್ದರೆ, ತಮ್ಮ ತಮ್ಮ ಕರ್ಮಾನುಸಾರ ಪುನರ್ಜನ್ಮ ತಳೆದು, ಪಶು, ಪಕ್ಷಿ, ಕ್ರಿಮಿ, ಪ್ರಾಣಿ ಅಥವಾ ಮಾನವನಾಗಿ ಜನ್ಮ ತಳೆದು, ಮತ್ತೆ ಸಂಸಾರ ಬಂಧನದಲ್ಲಿ ತೊಳಲಾಡುವುದು ಅನಿವಾರ್ಯವಾಗುತ್ತದೆ.

**ವಾಯುರ್ಯಥೈಕೋ ಭುವನಂ ಪ್ರವಿಷ್ಟೋ**
**ರೂಪಂ ರೂಪಂ ಪ್ರತಿರೂಪೋ ಬಭೂವ ।**
**ಏಕಸ್ತಥಾ ಸರ್ವಭೂತಾಂತರಾತ್ಮಾ**
**ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥** [೨, ೨, ೧೦]

ಸರ್ವಾಂತರ್ಯಾಮಿಯಾದ ಆತ್ಮನು ಒಬ್ಬನೇ. ಅವನೇ ಸರ್ವಜೀವಿಗಳ ಅಂತರಾತ್ಮನು. ವಾಯುವು ಹೇಗೆ ಭುವನವನ್ನು ಹೊಕ್ಕು ಬೇರೆ ಬೇರೆ ವಸ್ತುಗಳ ರೂಪಕ್ಕೆ ತಕ್ಕಂತೆ ರೂಪವನ್ನು ಧರಿಸುವುದೋ, ಮತ್ತು ಎಲ್ಲ ಜೀವಿಗಳಲ್ಲಿಯೂ ಪ್ರವೇಶಮಾಡಿ ಎಲ್ಲ ಕಡೆಯೂ ವ್ಯಾಪಿಸಿರುವುದೋ, ಹಾಗೆಯೇ ಎಲ್ಲ ವಿಧವಾದ ದೇಹಗಳನ್ನು ಆತ್ಮನು ಧರಿಸಿದ್ದರೂ, ಅದಕ್ಕೆ ಯಾವ ರೂಪವೂ ಇಲ್ಲ. ಹೀಗೆ ಸರ್ವದೇಹಿಗಳಲ್ಲಿರುವ ಆತ್ಮನೂ, ಬ್ರಹ್ಮಾಂಡವನ್ನೊಳಗೊಂಡಿರುವ ಆತ್ಮನೂ (ಪರಮಾತ್ಮನೂ) ಒಂದೇ! ಪರಮಾತ್ಮನು ವಿಶ್ವದಲ್ಲಿ ಎಲ್ಲೆಡೆಯಲ್ಲಿಯೂ ನೆಲೆಸಿರುವನು. ಈ ಬ್ರಹ್ಮನು ಸತ್ಯಸ್ವರೂಪನು. ಅವನಿಗಿಂತ ಬೃಹತ್ತಾದುದು ಯಾವುದೂ ಇಲ್ಲ. ಅವನು ಎಲ್ಲದರಲ್ಲಿಯೂ ಇರುವವನು. ಎಲ್ಲವನ್ನೂ ಮೀರಿ ನಿಂತವನೂ ಆಗಿದ್ದಾನೆ.

ಪರಮಾತ್ಮನೇ ಜ್ಯೋತಿ, ಅವನಿಲ್ಲದೇ ಯಾವುದೂ ಬೆಳಗಲಾರದು. ಬ್ರಹ್ಮಾಂಡದಲ್ಲಿ ಎಲ್ಲವೂ ಪರಬ್ರಹ್ಮನಿಂದಲೇ ಶಕ್ತಿಯನ್ನು ಪಡೆಯುತ್ತವೆ. ಅವನಿಲ್ಲದೇ ಯಾವುದೂ ಕೆಲಸ ಮಾಡಲಾರದು. ವಿಶ್ವದ ಸಮಸ್ತವೂ ಚೈತನ್ಯದಿಂದ ತಮ್ಮ ಕಾರ್ಯಗಳನ್ನು ನಿರ್ವಹಿಸುವುದು ಬ್ರಹ್ಮನಿಂದಲೇ ಎಂಬುದು ಸತ್ಯ. ಪರಬ್ರಹ್ಮವಸ್ತುವನ್ನು ತಿಳಿಯುವುದು ಸುಲಭವಲ್ಲ. ಶಿಷ್ಯನಾಗಿ ಬ್ರಹ್ಮಜ್ಞಾನಿಯ ಬಳಿಗೆ ಹೋಗಿ, ಗುರುವಿನಿಂದ ಉಪದೇಶ ಪಡೆದು, ಅಂತಃಚಕ್ಷುವನ್ನು ತೆರೆದು, ಸಾಧನೆಯ ಮೂಲಕ ಬ್ರಹ್ಮವೇ ಸರ್ವಸ್ವ ಎಂಬ ಜ್ಞಾನವನ್ನು ಪಡೆದವನು ಅಮೃತದ ಭಾಗಿಯಾಗುತ್ತಾನೆ. ಬ್ರಹ್ಮಚರ್ಯವನ್ನು ಆಚರಿಸುತ್ತಾ, ತನ್ನ ಇಂದ್ರಿಯಗಳನ್ನು ಬಾಹ್ಯದ ವಿಷಯವಸ್ತುಗಳಿಂದ ಸೆಳೆದು, ಮನಸ್ಸನ್ನು ಬ್ರಹ್ಮನ ಕಡೆಗೆ ಹರಿಸಬೇಕು. ನಿರಾಕಾರನಾದ ಪರಬ್ರಹ್ಮನನ್ನು ಅರಸಲು, ಋಷಿಗಳು ಓಂಕಾರವನ್ನು ಸಾಧನಮಾಡಿಕೊಳ್ಳಿ ಎಂದು ಹೇಳಿದ್ದಾರೆ. ಓಂಕಾರವು ವ್ಯಕ್ತಬ್ರಹ್ಮಕ್ಕೆ ಚಿಹ್ನೆಯಾಗಿರುವಂತೆ, ಕ್ರಮೇಣ ಅವ್ಯಕ್ತ ಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ಸಾಧನವಾಗಿದೆ. ಓಂಕಾರವು ವ್ಯಕ್ತದಿಂದ ಅವ್ಯಕ್ತಕ್ಕೆ ಹೋಗುವುದಕ್ಕೆ ಒಂದು ಸೇತುವೆಯಾಗಿದೆ. "ಓಂ ಅಕ್ಷರವೇ ಬ್ರಹ್ಮ, ಈ ಅಕ್ಷರವೇ ಪರ, ಈ ಅಕ್ಷರವನ್ನೇ ತಿಳಿದುಕೊಂಡು, ಯಾವನು ಯಾವುದನ್ನು ಬಯಸುತ್ತಾನೆಯೋ, ಅವನು ಅದೇ ಆಗುವನು" ಎಂದು ಯಮ ಓಂಕಾರದ ಮೂಲಕ ಸಾಧನೆಯನ್ನು ಮಾಡು ಎಂದು ನಚಿಕೇತನಿಗೆ ಹೇಳುತ್ತಾನೆ. ಈ ಓಂಕಾರವನ್ನು ಅರ್ಥಮಾಡಿಕೊಂಡು ಉಪಾಸನೆ ಮಾಡುತ್ತಾ, ಕ್ರಮೇಣ ಸಾಧಕನು ಬ್ರಹ್ಮನನ್ನು ತಿಳಿದುಕೊಂಡು ತನ್ನ ಗುರಿಯನ್ನು ಮುಟ್ಟುತ್ತಾನೆ.

ಯಮನು ಎರಡು ಸುಂದರ ದೃಷ್ಟಾಂತಗಳ ಮೂಲಕ ಸಂಸಾರವನ್ನು ಅಶ್ವತ್ಥವೃಕ್ಷಕ್ಕೂ ಮತ್ತು ರಥಕ್ಕೂ ಹೋಲಿಸಿರುತ್ತಾನೆ. ಈ ಅಶ್ವತ್ಥವೃಕ್ಷವು ನಾವು ನೋಡುವ ಮರದಂತೆ ಅಲ್ಲ. ಈ ವೃಕ್ಷಕ್ಕೆ ಬೇರುಗಳು ಆಕಾಶದಲ್ಲಿವೆ. ಈ ಅಶ್ವತ್ಥವು ಅನಾದಿ ಮತ್ತು ಅನಂತ. ಈ ಸಂಸಾರವೃಕ್ಷದ ಬೇರು ಪರಮಾತ್ಮ. ಕೆಳಗೆ ನಿಂತು ನೋಡಿದರೆ, ನಮಗೆ ಮರದ ಎಲೆಗಳು, ಕಾಯಿ ಮತ್ತು ಹಣ್ಣುಗಳು ಕಾಣಿಸುತ್ತವೆ; ಇವೆಲ್ಲಾ ಜೀವರಾಶಿಗಳು. ಎಲೆಗಳು ಉದುರುತ್ತಿರುತ್ತವೆ, ಹೊಸ ಚಿಗುರು ಅವುಗಳ ಸ್ಥಾನದಲ್ಲಿ ಹುಟ್ಟುತ್ತಿರುತ್ತವೆ. ಅದೇ ರೀತಿ ಜೀವಿಗಳು ಸಾಯುತ್ತವೆ, ಅವುಗಳ ದೇಹಗಳು ಮಣ್ಣಿನಲ್ಲಿ ಸೇರಿಹೋಗುತ್ತವೆ. ಮರದಿಂದ ಉದುರಿದ ಎಲೆಗಳು ಹೊಸದಾಗಿ ಹುಟ್ಟುವ ಚಿಗುರುಗಳಂತೆ, ಆತ್ಮವು ದೇಹಿಯ ಕರ್ಮಕ್ಕನುಸಾರವಾಗಿ ಪುನರ್ಜನ್ಮವನ್ನು ಪಡೆಯುತ್ತದೆ. ಸಾಮಾನ್ಯ ಜೀವಿಗಳಿಗೆ ಮರ (ಅಂದರೆ ಈ ಜಗತ್ತು) ಮಾತ್ರ ಕಾಣುತ್ತದೆ, ಆದರೆ ಆಕಾಶದಲ್ಲಿರುವ ಬೇರುಗಳು (ಅಂದರೆ ಪರಬ್ರಹ್ಮ) ಕಾಣಿಸುವುದಿಲ್ಲ. ಸಾಮಾನ್ಯ ಮಾನವ ಕಾಣದ ಪರಬ್ರಹ್ಮ ಆದ್ಯಂತರಹಿತನಾಗಿದ್ದಾನೆ. ಯಾವಾಗ ಸಾಧಕನು ಅಂತಃಚಕ್ಷುವಿನ ಮೂಲಕ ಪರಬ್ರಹ್ಮನನ್ನು ಅರಿಯುವನೋ, ಆವಾಗಲೇ ಅವನಿಗೆ ಮುಕ್ತಿ.

ಆತ್ಮಾನಂ ರಥಿನಂ ವಿದ್ಧಿ
ಶರೀರಂ ರಥಮೇವ ತು ।
ಬುದ್ಧಿಂ ತು ಸಾರಥಿಂ ವಿದ್ಧಿ
ಮನಃ ಪ್ರಗ್ರಹಮೇವ ಚ ॥ [೧, ೩, ೩]

ಇನ್ನೊಂದು ಉದಾಹರಣೆ ರಥ: "ರಥದಲ್ಲಿರುವ ಯಜಮಾನನನ್ನು ಆತ್ಮನೆಂದು ತಿಳಿ. ಶರೀರವೇ ರಥ. ಬುದ್ಧಿಯನ್ನು ಸಾರಥಿಯೆಂದು ತಿಳಿ. ಮನಸ್ಸನ್ನು ಲಗಾಮು ಎಂದು ತಿಳಿ. ಇಂದ್ರಿಯಗಳನ್ನು ಕುದುರೆಗಳೆಂದು ಹೇಳುತ್ತಾರೆ. ಕುದುರೆಗಳಿಗೆ ಕಾಣಿಸುವ ದಾರಿ ವಿಷಯಗಳು (ಪ್ರಲೋಭನೆಗಳು, ಆಸೆಗಳು). ಶರೀರ, ಇಂದ್ರಿಯ ಮತ್ತು ಮನಸ್ಸುಗಳಿಂದ ಕೂಡಿದವನನ್ನು ಭೋಕ್ತೃ (ಸಂಸಾರಿ) ಎಂದು ಪ್ರಾಜ್ಞರು ಹೇಳುತ್ತಾರೆ." ಯಜಮಾನನು ಸಾರಥಿಗೆ ಎಲ್ಲಿಗೆ ಪ್ರಯಾಣ ಮಾಡಬೇಕು ಮತ್ತು ಹೇಗೆ ಹೋಗಬೇಕು ಎಂಬುದಾಗಿ ಅಪ್ಪಣೆ ಮಾಡುತ್ತಾನೆ. ಅವನ ಆಜ್ಞೆಯಂತೆ ಸಾರಥಿ ಕುದುರೆಗಳನ್ನು ಹತೋಟಿಯಲ್ಲಿಟ್ಟುಕೊಂಡು, ರಥವನ್ನು ನಡೆಸುತ್ತಾನೆ. ಆಗ ಪ್ರಯಾಣವು ಸರಿಯಾದ ದಾರಿಯಲ್ಲಿ ಸಾಗಿ, ಅವರು ಗುರಿಯನ್ನು ಸೇರುತ್ತಾರೆ. ಇದೇ ರೀತಿ ಶರೀರದಲ್ಲಿರುವ ಯಜಮಾನನಾದ ಆತ್ಮನು ಸರಿಯಾಗಿ ಕಾರ್ಯ ನಿರ್ವಹಿಸುವಂತೆ ಬುದ್ಧಿಗೆ ಆದೇಶಿಸುತ್ತಾನೆ. ಆಗ ಬುದ್ಧಿಯು ಯಾವ ರೀತಿಯಲ್ಲಿ ಕೆಲಸಗಳು ನಡೆಯಬೇಕೋ ಅದನ್ನು ಯೋಚಿಸಿ, ಮನಸ್ಸಿಗೆ ಹೇಳುತ್ತದೆ. ಆಗ ಮನಸ್ಸು ಇಂದ್ರಿಯಗಳ ಮೂಲಕ ಕಾರ್ಯಸಾಧನೆ ಮಾಡುತ್ತದೆ.

ಇಲ್ಲಿ ಯಜಮಾನ, ರಥ, ಸಾರಥಿ, ಕುದುರೆಗಳು ಮತ್ತು ಲಗಾಮು ಸಮನ್ವಯದೊಂದಿಗೆ ಕೆಲಸ ಮಾಡಬೇಕು. ಯಾವುದೊಂದೂ ಇನ್ನೊಂದರೊಂದಿಗೆ ಸಹಕರಿಸದಿದ್ದರೆ, ಎಲ್ಲವೂ ಏರುಪೇರು! ಅದೇ ರೀತಿ, ಶರೀರದಲ್ಲಿರುವ ಯಜಮಾನನಾದ ಆತ್ಮ ಹೇಳಿದಂತೆ ಬುದ್ಧಿಗೆ ತರಬೇತಿ ಕೊಡಬೇಕು. ಒಳ್ಳೆಯ ದಾರಿಯಲ್ಲಿ ಜೀವನದ ಆಧ್ಯಾತ್ಮಿಕ ಯಾತ್ರೆ ಸಾಗಬೇಕಾದರೆ, ಯಾವುದು ಶ್ರೇಯಸ್ಸು (ಒಳ್ಳೆಯದು) ಮತ್ತು ಯಾವುದು ಪ್ರೇಯಸ್ಸು (ಪ್ರಿಯಕರವಾದರೂ ಹಿತಕರವಲ್ಲದ್ದು) ಎಂಬುದನ್ನು ಬುದ್ಧಿಗೆ ಕಲಿಸಬೇಕು. ಬುದ್ಧಿಯ ಮಾತನ್ನು ಮನಸ್ಸು ಆಲಿಸಬೇಕು ಮತ್ತು ಪಾಲಿಸಬೇಕು. ಬುದ್ಧಿಯ ಮಾತನ್ನು ಪಾಲಿಸದೆ ಮನಸ್ಸು ಸ್ವತಂತ್ರವಾಗಿ ವರ್ತಿಸಿದರೆ, ಇಂದ್ರಿಯಗಳು ಸ್ವಚ್ಛಂದವಾಗಿ ವಿಷಯ ಸುಖಗಳನ್ನು ಭೋಗಿಸಲು ಮುನ್ನುಗ್ಗುತ್ತವೆ; ಆಗ ಮನಸ್ಸಿಗೆ ಕಡಿವಾಣ ಹಾಕಬೇಕು. ಇಂದ್ರಿಯ ನಿಗ್ರಹಕ್ಕೆ ಮನಸ್ಸು ಬಹಳ ಮುಖ್ಯ. ಆದ್ದರಿಂದ ಆಧ್ಯಾತ್ಮಿಕ ಯಾತ್ರೆಯು ಆತ್ಮೋನ್ನತಿಯ ಹಾದಿಯಲ್ಲಿ ಸುಗಮವಾಗಿ ಸಾಗಬೇಕಾದರೆ, ಬುದ್ಧಿ, ಮನಸ್ಸು ಮತ್ತು ಇಂದ್ರಿಯಗಳಿಗೆ ತರಬೇತಿ ಕೊಟ್ಟು, ಅವು ನಿಗದಿತ ಗುರಿಮುಟ್ಟುವಂತೆ ಆತ್ಮ ಅವುಗಳನ್ನು ಇಂತಹ ಸಾಹಸಯಾತ್ರೆಗೆ ಸಜ್ಜುಗೊಳಿಸಬೇಕು.

ಹೀಗೆ ವಾಜಶ್ರವಸ್ ನಡೆಸುತ್ತಿದ್ದ ಯಾಗದಿಂದ ಆರಂಭವಾದ ಕಥೆಯು, ಯಮ ಮತ್ತು ನಚಿಕೇತರ ಸಂವಾದದ ಮೂಲಕ, ಕಠೋಪನಿಷತ್ತು ಸಾರಭೂತವಾದ ತತ್ವದರ್ಶನವನ್ನು ಮಾಡಿಸುತ್ತದೆ. ಹೀಗೆ ನಚಿಕೇತನು ಯಮನ ಉಪದೇಶವನ್ನು ಪಡೆದು, ತೇಜಸ್ಸಿನಿಂದ ಬೆಳಗುತ್ತ ಭೂಲೋಕಕ್ಕೆ ಹಿಂದಿರುಗುತ್ತಾನೆ. ತಂದೆಯು ಮಗನನ್ನು ಸಂತೋಷದಿಂದ ಸ್ವಾಗತಿಸುತ್ತಾನೆ. ನಂತರ ನಚಿಕೇತನು ಯಮನು ಸೂಚಿಸಿದ ತತ್ವಗಳ ಬೆಳಕಿನ ಮಾರ್ಗದಲ್ಲಿ ಸಾಧನೆ ಮಾಡಿ ಬ್ರಹ್ಮಜ್ಞಾನಿಯಾಗುತ್ತಾನೆ.

ಇದಿಷ್ಟು ನಚಿಕೇತನ ಸಂಕ್ಷೇಪವಾದ ಕಥೆ. ನಾನು ಈ ಲೇಖನವನ್ನು ಬರೆಯಲು ಎರಡು ಆಕರಗ್ರಂಥಗಳನ್ನು ಬಳಸಿದ್ದೇನೆ: ಮೊದಲನೆಯದು, ಪ್ರೊ. ಕೆ. ಎಸ್. ಕೃಷ್ಣಮೂರ್ತಿಯವರ "ಉಪನಿಷತ್ತಿನ ಕಥೆಗಳು" [೧]. ಈ ಪುಸ್ತಕದಲ್ಲಿ ಪ್ರಸಿದ್ಧ ಉಪನಿಷತ್ತುಗಳಲ್ಲಿ ಉಲ್ಲೇಖವಾಗಿರುವ ಹಲವಾರು ಕಥೆಗಳಿವೆ. ಉಪನಿಷತ್ತುಗಳಲ್ಲಿ ಬರುವ ಪ್ರಸಂಗಗಳನ್ನು ಕಥೆಗಳೆಂದು ಹೇಳುವುದು ವಾಡಿಕೆಯಾಗಿದೆ. ಗುರು-ಶಿಷ್ಯರ ಸಂವಾದದ ಮೂಲಕ ಕಥೆ ಸಾಗುತ್ತದೆ. ಶಿಷ್ಯರು ಕೇಳುವ ಜೀವ, ಜಗತ್ತು, ಪ್ರಾಣ, ಆತ್ಮ, ಬ್ರಹ್ಮ - ಇವುಗಳನ್ನು ಕುರಿತಾದ ಪ್ರಶ್ನೆಗಳಿಗೆ ಗುರುಗಳು ಕೊಡುವ ಉತ್ತರಗಳು ರಹಸ್ಯವಾದ ತತ್ವಗಳನ್ನೂ, ಜೀವ, ಜಗತ್ತು, ಜನನ, ಮರಣ ಮೊದಲಾದ ಗೂಢವಾದ ವಿಷಯಗಳನ್ನೂ ಒಳಗೊಂಡು, ಜ್ಞಾನಾನ್ವೇಷಣೆಗೆ ನಮ್ಮನ್ನು ಪ್ರೇರೇಪಿಸುತ್ತವೆ. ಕೃಷ್ಣಮೂರ್ತಿಯವರ ಕಥನಕಲೆ ಹಾಗೂ ಅಧ್ಯಾತ್ಮದ ಕ್ಲಿಷ್ಟ ಮತ್ತು ಗಹನವಾದ ವಿಷಯಗಳನ್ನು ಸರಳವಾಗಿ, ಸಂಕ್ಷಿಪ್ತವಾಗಿ ಪ್ರತಿಪಾದಿಸುವ ಅಂಶ ನನಗೆ ಬಹಳ ಮೆಚ್ಚುಗೆಯಾಯಿತು. ಅಷ್ಟೇ ಅಲ್ಲದೆ, ಉಪನಿಷತ್ತಿನ ಸಾರವನ್ನು ಅವರು ಶ್ರೀಸಾಮಾನ್ಯರ ಮನಸ್ಸಿಗೆ ತಟ್ಟುವಂತೆ ಸರಳವಾಗಿ ಮತ್ತು ಸುಂದರವಾಗಿ ನಿರೂಪಿಸಿರುವ ಪರಿ ಅನನ್ಯವಾಗಿದೆ.

ಇನ್ನು ನಾನು ಬಳಸಿದ ಎರಡನೆಯ ಪುಸ್ತಕ ಸ್ವಾಮಿ ಚಿನ್ಮಯಾನಂದರ "ಕಠೋಪನಿಷತ್ತು" [೨]. ಸಂಸ್ಕೃತದ ಮೂಲ ಕಠೋಪನಿಷತ್ತಿನಲ್ಲಿ ಎರಡು ಅಧ್ಯಾಯಗಳಿವೆ; ಪ್ರತಿಯೊಂದು ಅಧ್ಯಾಯದಲ್ಲಿ ಮೂರು ವಲ್ಲಿಗಳಿವೆ. ಮೊದಲನೆಯ ಅಧ್ಯಾಯದ ಮೂರು ವಲ್ಲಿಗಳಲ್ಲಿ ಅನುಕ್ರಮವಾಗಿ ೨೯, ೨೫ ಮತ್ತು ೧೭ ಮಂತ್ರಗಳಿವೆ. ಎರಡನೇ ಅಧ್ಯಾಯದ ಮೂರು ವಲ್ಲಿಗಳಲ್ಲಿ ೧೫, ೧೫ ಮತ್ತು ೧೮ ಮಂತ್ರಗಳಿವೆ. ಸ್ವಾಮಿ ಚಿನ್ಮಯಾನಂದರ ಈ ಕೃತಿ ಸಂಸ್ಕೃತದ ಮೂಲ ಗ್ರಂಥದ ಕನ್ನಡ ಅನುವಾದವಷ್ಟೇ ಅಲ್ಲ, ಅದು ವ್ಯಾಖ್ಯಾನವನ್ನೂ ಕೂಡಾ ಒಳಗೊಂಡಿದೆ. ಸ್ವಾಮೀಜಿಯವರ ವ್ಯಾಖ್ಯಾನ ಆದಿ ಶಂಕರಾಚಾರ್ಯರ ಭಾಷ್ಯಾನುಸಾರವಾಗಿ ಇರುವುದು ಮಾತ್ರವಲ್ಲ, ಆಧುನಿಕ ದೃಷ್ಟಾಂತಗಳಿಂದಲೂ ತುಂಬಿದ್ದು, ಇಂದಿನ ಸಾಧಕನಿಗೆ ಅರ್ಥವನ್ನು ಗ್ರಹಿಸುವಲ್ಲಿ ಅತ್ಯಂತ ಉಪಯುಕ್ತವಾಗಿದೆ. ವಿಷಯಸುಖಗಳನ್ನು ವಿಷವೆಂದು ತುಚ್ಛೀಕರಿಸಿ, ಆತ್ಮಜ್ಞಾನವನ್ನು ಗಳಿಸುವಲ್ಲಿ ತನ್ನ ನಿಷ್ಠೆಯನ್ನು ವೃದ್ಧಿಸಿಕೊಳ್ಳುತ್ತದೆ. ಆರಂಭದ ಸಾಧಕನ

ಹೃದಯ, ಈ ಕಥೆಯನ್ನು ಶ್ರವಣಮಾಡುತ್ತಲೇ ತನಗೆ ಅರಿವಿಲ್ಲದಂತೆಯೇ ವಿವೇಕ ವೈರಾಗ್ಯಾದಿಗಳನ್ನು ಬೆಳೆಸಿಕೊಳ್ಳುತ್ತದೆ. ಈ ಉಪನಿಷತ್ತು ಸಾಧನಾಪ್ರಧಾನವಾದುದಲ್ಲದೆ, ಸಾಧ್ಯವಸ್ತುವನ್ನೂ ಸುಂದರ ಶೈಲಿಯಲ್ಲಿ ನಿರೂಪಿಸುತ್ತದೆ. ಕಠೋಪನಿಷತ್ತನ್ನು ಆಳವಾಗಿ ಅಭ್ಯಾಸಮಾಡಬೇಕಾದವರಿಗೆ, ಇದೊಂದು ಅತ್ಯುತ್ತಮ ಗ್ರಂಥ ಎಂದು ನನ್ನ ಖಚಿತ ಅಭಿಪ್ರಾಯ.

ಕಠೋಪನಿಷತ್ತಿನ ನಚಿಕೇತನ ಕಥೆ, ಈ ಕಾಲದ ನಮಗೆ ಎಷ್ಟು ಪ್ರಸ್ತುತ? ವೇದಗಳೇ ಅಂತಿಮ ಪ್ರಮಾಣ. ಇನ್ನು ವೇದಗಳ ಸಾರಸಂಗ್ರಹವಾದ ಉಪನಿಷತ್ತುಗಳು ಸಾರ್ವಕಾಲಿಕ ಸತ್ಯ, ಸಾರ್ವದೇಶಿಕ ಸತ್ಯ. ಹೀಗಾಗಿ ಉಪನಿಷತ್ತಿನಲ್ಲಿ ಪ್ರಸ್ತಾಪಮಾಡಿರುವ ವಿಷಯಗಳು ನಮಗೆಲ್ಲರಿಗೂ ಇಂದಿಗೂ ಪ್ರಸ್ತುತ. ನಮಗೆ ತಿಳಿದಿರುವಂತೆ, ಪುರುಷಾರ್ಥಗಳು ನಾಲ್ಕು: ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ. ಇವುಗಳಲ್ಲಿ ಮೋಕ್ಷವು ಪರಮ ಪುರುಷಾರ್ಥವೆಂಬುದು ನಿಸ್ಸಂದೇಹ. ಈ ಮೋಕ್ಷವನ್ನು ಗಳಿಸುವುದು ಹೇಗೆ ಎಂಬ ಪ್ರಶ್ನೆ ನಮ್ಮಲ್ಲಿ ಏಳುವುದು ಸಹಜ. ಆತ್ಮ ಸಾಕ್ಷಾತ್ಕಾರದಿಂದ ಮಾತ್ರ ಮೊಕ್ಷಪ್ರಾಪ್ತಿ ಸಾಧ್ಯ. ಈ ಮೋಕ್ಷವೆನ್ನುವುದನ್ನು ನಾವು ಇಲ್ಲಿಯೇ, ಈ ಜನ್ಮದಲ್ಲಿಯೇ ಗಳಿಸಬೇಕಾಗಿರುವುದು. ಸುಕೃತದಿಂದ ನಮಗೆ ಒದಗಿ ಬಂದ ಈ ಮಾನವಜನ್ಮವನ್ನು ವ್ಯರ್ಥಗೊಳಿಸದೆಯೇ, ಆತ್ಮಜ್ಞಾನವನ್ನು ಪಡೆಯಲು ಅರಿಷಡ್ವರ್ಗಗಳ ಮೇಲೆ ವಿಜಯ ಸಾಧಿಸಿ, ವಿವೇಕ ಮತ್ತು ವೈರಾಗ್ಯಗಳನ್ನು ಪ್ರಯತ್ನಪೂರ್ವಕವಾಗಿ ಸಾಧಿಸಿಕೊಳ್ಳ-ಬೇಕಾಗುತ್ತದೆ. ಈ ಕೆಳಕಂಡ ಪೂರ್ವಸಿದ್ಧತೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ; ಇವುಗಳನ್ನೇ ಸಾಧನ ಚತುಷ್ಟಯಗಳೆಂದು ಕರೆದಿರುವುದು:

೧. ವೈರಾಗ್ಯ: ಇಹ ಮತ್ತು ಪರಲೋಕದ ಸುಖಭೋಗಗಳಲ್ಲಿ ಉಪೇಕ್ಷೆ.

೨. ವಿವೇಕ: ನಿತ್ಯ ಮತ್ತು ಅನಿತ್ಯ ವಸ್ತುಗಳಲ್ಲಿ ಭೇದಜ್ಞಾನ.

೩. ಷಟ್ ಸಂಪತ್ತಿ: ಆರು ನೀತಿ-ನಿಯಮಗಳು ಯಾವುವೆಂದರೆ ಶಮ (ಮನೋನಿಗ್ರಹ), ದಮ (ಇಂದ್ರಿಯನಿಗ್ರಹ), ಉಪರತಿ (ಆಶಾತ್ಯಾಗ), ತಿತಿಕ್ಷಾ (ಸಹಿಷ್ಣುತೆ), ಶ್ರದ್ಧಾ (ಗುರು ಮತ್ತು ಶಾಸ್ತ್ರಗಳಲ್ಲಿ ಅಚಲವಾದ ನಂಬಿಕೆ ಅಥವಾ ಆಸ್ತಿಕ್ಯಬುದ್ಧಿ) ಮತ್ತು ಸಮಾಧಾನ (ಮನಸ್ಸಿನ ಸ್ಥಿಮಿತ ಭಾವ).

೪. ಮುಮುಕ್ಷತ್ವ: ಮೋಕ್ಷ ಪಡೆಯಲು ತೀವ್ರವಾದ ಬಯಕೆ. ಸಕಲ ಜೀವಿಗಳಲ್ಲಿರುವ ಆತ್ಮವೇ ತನ್ನ ಆತ್ಮಸ್ವರೂಪವೆಂದರಿತು, ಅದರ ಸಾಕ್ಷಾತ್ಕಾರಕ್ಕಾಗಿ ಸರ್ವಪ್ರಯತ್ನಪಡುವುದು.

ಈ ಬಗೆಯ ಪೂರ್ವಸಿದ್ಧತೆಯ ನಂತರ, ಆತ್ಮಸಾಕ್ಷಾತ್ಕಾರವನ್ನು ಕಂಡುಕೊಂಡ ಗುರುವಿನ ಸಹಾಯವನ್ನು ಯಾಚಿಸುವುದು ಅತ್ಯಂತ ಉಪಯುಕ್ತ ಹಾಗೂ ಅನಿವಾರ್ಯ. ಅಂತಹ ಗುರುವಿನ ಮಾರ್ಗದರ್ಶನದಲ್ಲಿಯೇ ನಾವು ನಡೆಯಬೇಕಾಗಿರುವುದು; ಅವರ

ಮಾರ್ಗದರ್ಶನವಿಲ್ಲದೆ, ನಮಗೆ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುವುದು ಖಂಡಿತಾ ಸಾಧ್ಯವಿಲ್ಲ! ಹೀಗಾಗಿ ನಚಿಕೇತನ ಕಥೆಯ ಮೂಲಕ, ಯಮನು ಧಾರೆಯೆರೆದಿರುವ ತತ್ವಗಳನ್ನು ನಾವು ಮನನ ಮಾಡಿಕೊಂಡು, ಸತ್ಯಾನ್ವೇಷಣೆಯ ದಾರಿಯಲ್ಲಿ ಮುನ್ನಡೆದು ಸಾಧನೆ ಮಾಡಿದರೆ, ನಾವುಗಳೂ ಸಹ ಅಮರತ್ವವನ್ನು ಪಡೆಯಬಹುದು. ಇದು ಖಂಡಿತಾ ಸಾಧ್ಯ, ಆದರೆ ಕಷ್ಟಸಾಧ್ಯ ಎಂದು ಹೇಳದೆ ವಿಧಿಯಿಲ್ಲ.

* * *

**ಆಕರಗ್ರಂಥಗಳು:**


೧. ಉಪನಿಷತ್ತಿನ ಕಥೆಗಳು – ಪ್ರೊ. ಕೆ. ಎಸ್. ಕೃಷ್ಣಮೂರ್ತಿ. ಕಾವ್ಯಾಲಯ ಪ್ರಕಾಶಕರು, ಜಯನಗರ, ಮೈಸೂರು, ೨೦೧೦.

೨. ಕಠೋಪನಿಷತ್ತು – ಸ್ವಾಮಿ ಚಿನ್ಮಯಾನಂದ, ಸೆಂಟ್ರಲ್ ಚಿನ್ಮಯ ಮಿಷನ್ ಟ್ರಸ್ಟ್, ಇಂದಿರಾ ನಗರ, ಬೆಂಗಳೂರು, ೨೦೦೦.




# ಶ್ರೀ ಪುರಂದರದಾಸರ ಕೃತಿಗಳಲ್ಲಿ ನವವಿಧ ಭಕ್ತಿ

–ಡಾ॥ ಎಂ. ಜಿ. ಪ್ರಸಾದ್

## ಪರಿಚಯ

ವಿಸ್ಮಯಕಾರಿಯಾದ ವಿಶಿಷ್ಟವಾದ ಈ ವಿಶ್ವದ ಸೃಷ್ಟಿಯಲ್ಲಿ ಅತಿ ವಿಶೇಷವಾದ ವರ್ಗವೆಂದರೆ ಮನುಷ್ಯ ವರ್ಗ. ನಾನು ಯಾರು? ಎಲ್ಲಿಂದ ಬಂದೆ? ಈ ವಿಶಾಲ ಸೃಷ್ಟಿಗೆ ಕಾರಣರಾರು? ಎಂಬಂತಹ ನಿಗೂಢ ಪ್ರಶ್ನೆಗಳಿಗೆ ಬಹಳ ಹಿಂದಿನ ಕಾಲದಿಂದಲೂ ವಿಶ್ವದ ಎಲ್ಲೆಡೆಯಲ್ಲಿಯೂ ಸಾಧನೆ ನಡೆಯುತ್ತಿದೆ. ಈ ಸಾಧನೆಯ ಇತಿಹಾಸದಲ್ಲಿ ಈ ಗಹನ ಪ್ರಶ್ನೆಗಳಿಗೆ ಪ್ರಾಚೀನ ಭಾರತದಲ್ಲಿ ಉತ್ತರವನ್ನು ನೀಡಿದ ಮಹಾ ಮನೀಷಿಗಳೇ ಋಷಿಗಳು. ಋಷಿಗಳು ಎಂದರೆ ಪರಮ ಸತ್ಯವನ್ನು ನೇರವಾಗಿ ನೋಡಿದವರು. ಋಷಿಗಳ ಸಾಹಿತ್ಯವೇ ಅಪಾರವಾದ ವೈದಿಕ ಸಾಹಿತ್ಯ. ಈ ವೈದಿಕ ಸಾಹಿತ್ಯವು ವೇದೋಪನಿಷತ್ತುಗಳು, ವೇದಾಂಗಗಳು, ಉಪಾಂಗಗಳು, ಐತಿಹಾಸಿಕವಾದ ರಾಮಾಯಣ, ಮಹಾಭಾರತ, ದರ್ಶನಶಾಸ್ತ್ರಗಳು, ಪುರಾಣಗಳು, ಶರಣರ ಹಾಗೂ ದಾಸ ಸಾಹಿತ್ಯಗಳನ್ನು ಒಳಗೊಂಡಿದೆ. ಇಂತಹ ವಿಶೇಷವಾದ ವೈದಿಕ ಸಾಹಿತ್ಯವು ಮೇಲೆ ಹೇಳಿದ ಗಹನ ಪ್ರಶ್ನೆಗಳಿಗೆ ಸಮಗ್ರವಾದ ಉತ್ತರಗಳನ್ನು ನೀಡಿದೆ. ಅದೇನೆಂದರೆ ಈ ಜಗತ್ತಿನ ಸೃಷ್ಟಿ, ಸ್ಥಿತಿ ಹಾಗೂ ಲಯ ಮತ್ತೆ ಮತ್ತೆ ಪುನರಾವರ್ತನೆಗೊಳ್ಳುತ್ತದೆ. ಈ ಜಗತ್ತಿಗೆ ಮೂಲಕಾರಣನಾದವನನ್ನು ಪರಮಾತ್ಮ, ಭಗವಂತ, ಈಶ್ವರ, ನಾರಾಯಣ ಎಂಬ ನಾಮಾಂಕಿತದಿಂದ ಋಷಿಗಳು ಕರೆದಿದ್ದಾರೆ. ಹಾಗೆಯೇ ಮೂಲ ಕಾರಣನಾದ ಪರಮಾತ್ಮನನ್ನು ಜಗತ್ತಿನ ಯಾರೇ ಮನುಷ್ಯನಾಗಲಿ ಶುದ್ಧ ಸಾಧನೆಯಿಂದ, ಅನೇಕ ಯೋಗ ಮಾರ್ಗಗಳಿಂದ ಅತೀಂದ್ರಿಯ ಸ್ಥಿತಿಯನ್ನು ಸಾಧಿಸಿ ನೇರವಾಗಿ ಅಂತರ್ದರ್ಶನದಲ್ಲಿ ನೋಡಬಹುದು.

ಪ್ರಾಚೀನ ಭಾರತದ ಋಷಿಗಳಿಂದ ರೂಪಿತವಾಗಿ ಅನೇಕಾನೇಕ ಆಚಾರ್ಯರುಗಳು, ಸಂತರು, ಯೋಗಿಗಳು, ಶರಣರು ಹಾಗೂ ದಾಸರುಗಳಿಂದ ಪುಷ್ಟಿಗೊಂಡಿರುವುದೇ ಸನಾತನ ಧರ್ಮ. ಇದೇ ಸಾಮಾನ್ಯವಾಗಿ ಹಿಂದೂ ಧರ್ಮ ಎಂದು ಕರೆಯಲ್ಪಡುತ್ತದೆ. ಸನಾತನ ಧರ್ಮಕ್ಕೆ ಭದ್ರ ಬುನಾದಿಯಾಗಿರುವುದೇ ಪ್ರಸ್ಥಾನತ್ರಯ.

ಅವುಗಳೇ ಉಪನಿಷತ್ತುಗಳು, ಬ್ರಹ್ಮಸೂತ್ರ ಮತ್ತು ಶ್ರೀಮದ್ಭಗವದ್ಗೀತಾ. ವಿಶ್ವದಾದ್ಯಂತ ಪ್ರಚಲಿತವಿರುವ ಶ್ರೀಮದ್ಭಗವದ್ಗೀತೆಯಲ್ಲಿ ಮೂರು ಪ್ರಧಾನ ಮಾರ್ಗಗಳ ವಿಸ್ತೃತ ವರ್ಣನೆಯಿದೆ. ಆ ಮೂರು ಮಾರ್ಗಗಳೇ ಕರ್ಮ, ಜ್ಞಾನ ಮತ್ತು ಭಕ್ತಿ ಯೋಗಗಳು. ಈ ಮೂರು ಯೋಗಗಳು ಪರಸ್ಪರ ಸಂಬಂಧ ಹೊಂದಿವೆ. ಹೇಗೆಂದರೆ ಒಂದು ಪ್ರಧಾನವಾದರೆ ಮಿಕ್ಕೆರಡು ಸಹಕಾರಿಯಾಗುತ್ತವೆ. ಎಲ್ಲರಿಗೂ ಸುಲಭವಾಗಿ ಎಟಕುವಂತಹುದೇ ಭಕ್ತಿ ಮಾರ್ಗ. ಹಾಗೆಯೇ ಭಕ್ತಿ ಮಾರ್ಗವೇ ಸಾಧಕನನ್ನು ಅಧ್ಯಾತ್ಮ ಧ್ಯೇಯಕ್ಕೆ ತಲುಪಿಸುತ್ತದೆ. ಸರ್ವಜ್ಞ ಕವಿಯ ವಚನವೊಂದು ಬಹಳ ಚೆನ್ನಾಗಿದೆ.

**ಭಕ್ತಿ ಎಂಬುದೇ ಬೀಜ ಮುಕ್ತಿಯೆಂಬುದೆ ಫಲವು**
**ಯುಕ್ತಿಯಿಂ ವೃಕ್ಷವೇರಿದವಗೆ ಇಹದಲ್ಲಿ ಮುಕ್ತಿಯಿಹುದೆಂದ ಸರ್ವಜ್ಞ**

ವೈದಿಕ ಸಾಹಿತ್ಯದಲ್ಲಿ ಶ್ರೀ ನಾರದ ಮಹರ್ಷಿ ಮತ್ತು ಶ್ರೀ ಶಾಂಡಿಲ್ಯ ಮಹರ್ಷಿಗಳ ಭಕ್ತಿಸೂತ್ರಗಳು ಪ್ರಮುಖವಾದವು. ಶ್ರೀ ನಾರದರ ಭಕ್ತಿಸೂತ್ರದಲ್ಲಿ ಭಕ್ತಿಯನ್ನು "ಸಾ ತ್ವಸ್ಮಿನ್ ಪರಮ ಪ್ರೇಮ ರೂಪಾ" ಎಂದು ಹೇಳಿದೆ. ಅಂದರೆ ಭಕ್ತಿಯು ಪರಮಾತ್ಮನಲ್ಲಿ ಪರಮ ಪ್ರೇಮದ ಸಂಬಂಧ. ಹಾಗೆಯೇ ಶ್ರೀ ಶಾಂಡಿಲ್ಯರ ಭಕ್ತಿಸೂತ್ರದಲ್ಲಿ ಭಕ್ತಿಯನ್ನು "ಸಾ ಪರಾನುರಕ್ತಿರೀಶ್ವರೇ" ಎಂದು ಹೇಳಿದೆ. ಅಂದರೆ ಭಕ್ತಿಯು ಈಶ್ವರನಲ್ಲಿ ಅತ್ಯಂತ ಅನುರಕ್ತಿಯ ಸಂಬಂಧ. ಆಚಾರ್ಯತ್ರಯರಲ್ಲೊಬ್ಬರಾದ ಶ್ರೀ ರಾಮಾನುಜರು ಭಕ್ತಿಯನ್ನು ಸಾಮಾನ್ಯ ಭಕ್ತಿ ಮತ್ತು ಪರಾಭಕ್ತಿ ಎಂದು ಎರಡು ಸ್ತರದಲ್ಲಿ ಹೇಳಿದ್ದಾರೆ. ಭಕ್ತಿ ಸಾಧನೆಯ ಆರಂಭದಲ್ಲಿ ಸಾಮಾನ್ಯ ಸ್ತರವಿದ್ದು, ಪರಮಾತ್ಮನ ದಿವ್ಯ ಗುಣಗಳ ಅನುಸಂಧಾನ ಹಾಗೂ ಪ್ರೇಮದ ಉತ್ಕಟತೆ ಹೆಚ್ಚುತ್ತಾ ಪರಾಭಕ್ತಿ ಅಥವಾ ಪರಮ ಭಕ್ತಿ ಎಂದಾಗುತ್ತದೆ. ಇಂತಹ ಪರಮ ಭಕ್ತಿಯಿಂದ ತಮ್ಮ ಸರ್ವತೋಮುಖವಾದ ಸಾಧನೆಯಿಂದ ಈಶ್ವರ ಸಾಕ್ಷಾತ್ಕಾರ ಮಾಡಿಕೊಂಡ ಭಕ್ತರು ಅಸಂಖ್ಯಾತ. ಇಂತಹ ಭಕ್ತವರ್ಗದಲ್ಲಿ ಶಿವಶರಣರು ಹಾಗೂ ಹರಿದಾಸರುಗಳು ಭಕ್ತಿಸಾಹಿತ್ಯಕ್ಕೆ ನೀಡಿರುವ ಕೊಡುಗೆ ಅಪಾರ ಮತ್ತು ಅತಿ ಸುಂದರ.

## ನವವಿಧ ಭಕ್ತಿ

ವ್ಯಾಸ ಮಹರ್ಷಿಗಳಿಂದ ರಚಿಸಲ್ಪಟ್ಟ ಶ್ರೀಮದ್ಭಾಗವತ ಮಹಾಪುರಾಣದಲ್ಲಿ ಪರಮ ಭಕ್ತನಾದ ಪ್ರಹ್ಲಾದನನ್ನು ಅವನ ತಂದೆಯೂ, ಹರಿದ್ವೇಷಿಯೂ ಆದ ಹಿರಣ್ಯಕಶಿಪುವು ಏನು ವಿದ್ಯೆಯನ್ನು ಕಲಿತಿದ್ದೀಯೆ ಎಂದು ಕೇಳಿದಾಗ ಆ ಮುಗ್ಧ ಭಕ್ತನಾದ ಪ್ರಹ್ಲಾದನು ಭಕ್ತಿಯ ನವವಿಧ ಅಥವಾ ಒಂಬತ್ತು ವಿಧಗಳನ್ನು ಈ ರೀತಿ ಹೇಳುತ್ತಾನೆ.

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದ ಸೇವನಮ್**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಮ್**

ಪರಮಭಕ್ತಿಯ ಸಿದ್ಧಿಯನ್ನು ಪಡೆದು ಎಲ್ಲೆಡೆಯೂ ಇರುವ ಹರಿಯ ಸಾಕ್ಷಾತ್ಕಾರಕ್ಕೆ ಭಕ್ತನು ತನ್ನ ಸ್ವಭಾವಕ್ಕನುಗುಣವಾಗಿ ನವವಿಧ ಭಕ್ತಿಯಲ್ಲಿ ಒಂದನ್ನು ಪ್ರಧಾನವಾಗಿ ಆಶ್ರಯಿಸಿ ಸಿದ್ಧಿಯನ್ನು ಪಡೆಯಬಹುದು. ಶ್ರೀಮದ್ಭಾಗವತದಲ್ಲಿ ಈ ಒಂಬತ್ತು ವಿಧಗಳ ಮೂಲಕ ಸಿದ್ಧಿಯನ್ನು ಪಡೆದವರು ಯಾರೆಂದರೆ ಶ್ರವಣ ಭಕ್ತಿಯ ಮೂಲಕ ಶ್ರೀ ಪರೀಕ್ಷಿತ್ ಮಹಾರಾಜ, ಕೀರ್ತನ ಭಕ್ತಿಯ ಮೂಲಕ ಶ್ರೀ ಶುಕ ಬ್ರಹ್ಮರ್ಷಿ, ಸ್ಮರಣ ಭಕ್ತಿಯ ಮೂಲಕ ಪ್ರಹ್ಲಾದ, ಪಾದಸೇವನ ಭಕ್ತಿಯ ಮೂಲಕ ಶ್ರೀ ಮಹಾಲಕ್ಷ್ಮೀ, ಅರ್ಚನ ಭಕ್ತಿಯ ಮೂಲಕ ಪೃಥು ಚಕ್ರವರ್ತಿ, ವಂದನ ಭಕ್ತಿಯ ಮೂಲಕ ಅಕ್ರೂರ, ದಾಸ್ಯ ಭಕ್ತಿಯ ಮೂಲಕ ಶ್ರೀ ಆಂಜನೇಯ, ಸಖ್ಯ ಭಕ್ತಿಯ ಮೂಲಕ ಅರ್ಜುನ ಮತ್ತು ಕೊನೆಯದಾಗಿ ಆತ್ಮ ನಿವೇದನ ಭಕ್ತಿಯ ಮೂಲಕ ಬಲಿ ಚಕ್ರವರ್ತಿ.

ನವವಿಧದ ಭಕ್ತಿ ಮಾರ್ಗಗಳು ಪರಸ್ಪರ ಹೊಂದಿಕೊಂಡಿವೆ. ನವವಿಧ ಭಕ್ತಿಯ ಗುರಿಯೇ ಭಗವತ್ಸಾಕ್ಷಾತ್ಕಾರ. ಈ ನವವಿಧ ಭಕ್ತಿಯನ್ನು ಆಧರಿಸಿ ಸಾಧನೆಯನ್ನು ಮಾಡುವಾಗ ವಿವಿಧ ಭಾವಗಳಾದ ಮಧುರ, ವಾತ್ಸಲ್ಯ ಮತ್ತು ರತಿ ಭಾವಗಳು ಭಕ್ತನಲ್ಲಿ ಸ್ವಭಾವಕ್ಕನುಗುಣವಾಗಿ ಮೂಡಬಹುದು. ಭಕ್ತನ ಮನಸ್ಸು ಶುದ್ಧತೆ ಮತ್ತು ಸರಳತೆಯಿಂದ ಕೂಡಿರುತ್ತದೆ. ಭಕ್ತಿಯು ಸಿದ್ಧಿಸಿದಾಗ ಭಕ್ತ ಹಾಗೂ ಭಗವಂತನಲ್ಲಿ ಅವಿಚ್ಛಿನ್ನವಾದ ಹಾಗೂ ಅನ್ಯೋನ್ಯವಾದ ಪರಸ್ಪರ ಸಂಬಂಧ ಫಲಿಸುತ್ತದೆ.

## ಶ್ರೀ ಪುರಂದರದಾಸರ ಕೃತಿಗಳಲ್ಲಿ ನವವಿಧ ಭಕ್ತಿ

ಭಕ್ತಿ ಸಾಹಿತ್ಯಕ್ಕೆ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿದ್ದ ಶ್ರೀ ಪುರಂದರದಾಸರ (೧೪೮೪-೧೫೬೪) ಕೊಡುಗೆ ಅಪಾರವಾದದ್ದು. ಹಾಗೆಯೇ ಶ್ರೀ ತ್ಯಾಗರಾಜರು (೧೭೬೭-೧೮೪೭) ತೆಲುಗು ಭಾಷೆಯಲ್ಲಿ ಭಕ್ತಿ ಸಾಹಿತ್ಯ ಹಾಗೂ ಕರ್ನಾಟಕ ಸಂಗೀತಕ್ಕೆ ಕೀರ್ತನೆಗಳನ್ನು ರಚಿಸಿ ಅಪಾರ ಕೊಡುಗೆ ನೀಡಿದ್ದಾರೆ. ಶ್ರೀ ಪುರಂದರದಾಸರು ಕರ್ನಾಟಕ ಸಂಗೀತ ಪಿತಾಮಹ ಎಂದೆನಿಸಿ ಭಕ್ತಿ ಸಾಹಿತ್ಯದ ಅಪಾರವಾದ ಕೀರ್ತನೆಗಳನ್ನು ನೀಡಿದ್ದಾರೆ. ಶ್ರೀ ಪುರಂದರದಾಸರ ಕೃತಿಗಳಲ್ಲಿ ನವವಿಧ ಭಕ್ತಿಗಳು ಹೇಗೆ ನಿರೂಪಿತವಾಗಿವೆ ಎಂದು ಈ ಲೇಖನದಲ್ಲಿ ವಿಚಾರ ಮಾಡಲಾಗಿದೆ. ಒಂದೊಂದು ವಿಧದ ಭಕ್ತಿಯ ಪ್ರಕಾರಕ್ಕೆ ಶ್ರೀ ಪುರಂದರದಾಸರ ಕೃತಿಗಳಲ್ಲಿ ಅದಕ್ಕೆ ಹೊಂದುವ ಕೃತಿಯ ಜೊತೆಗೆ ಅದರ ವಿವರಣೆ ನೀಡಲಾಗಿದೆ.

## ಶ್ರವಣ ಭಕ್ತಿ

ಶ್ರವಣ ಎಂದರೆ ಕಿವಿಗೊಟ್ಟು ಕೇಳುವುದು. ಎಲ್ಲರಿಗೂ ತಿಳಿದಂತೆ ಕೇಳುವುದು ಸುಲಭವಲ್ಲ. ಏಕೆಂದರೆ ಏಕಾಗ್ರತೆಯಿಂದ ಕೇಳುವುದಕ್ಕೆ ಮನಸ್ಸನ್ನು ಒಂದೆಡೆ ನಿಲ್ಲಿಸಬೇಕು.

ಶ್ರವಣದಿಂದಲೇ ನಮಗೆ ಸುಲಭವಾಗಿ ವಿಷಯ ತಿಳಿಯುವುದು. ಶ್ರವಣ ಕುತೂಹಲ ಸಾಮಾನ್ಯವಾಗಿ ಎಲ್ಲರಿಗೂ ಇರುತ್ತದೆ. ಆದರೆ ಆ 'ಶ್ರವಣ'– ಭಕ್ತಿಯ ಒಂದು ಮಾರ್ಗವಾಗಬೇಕಾದರೆ ಪರಮಾತ್ಮನ ಗುಣ ವರ್ಣನೆಯನ್ನು ಪರಮ ಪ್ರೇಮದಿಂದ, ತನ್ಮಯತೆಯಿಂದ ಕಿವಿಗೊಟ್ಟು ಕೇಳಬೇಕು. ನಮಗೆ ಯಾವ ವಸ್ತುವಿನಲ್ಲಿ ಆಸಕ್ತಿ ಹಾಗೂ ಪ್ರೇಮವಿದೆಯೋ ಆ ವಸ್ತುವಿನ ಬಗ್ಗೆ ಕೇಳುತ್ತಾ ಮೈಮರೆಯುತ್ತೇವೆ. ಆ ವಸ್ತು ಅತ್ಯುನ್ನತವಾದ ಪರಮಾತ್ಮ ವಸ್ತುವೇ ಆದಾಗ ನಾವು 'ಶ್ರವಣ ಭಕ್ತಿ'ಯ ಮೂಲಕ ಆ ಪರಮಾತ್ಮನ ದಿವ್ಯ ಗುಣಗಳಲ್ಲಿ ತಲ್ಲೀನರಾಗಿ ಆನಂದವನ್ನು ಅನುಭವಿಸುತ್ತೇವೆ. ಶ್ರೀ ಪುರಂದರದಾಸರು ತಮ್ಮ ಕೃತಿಯಲ್ಲಿ ಈ ರೀತಿ ಹೇಳುತ್ತಾರೆ.

**ಹರಿಕಥಾ ಶ್ರವಣ ಮಾಡೋ । ಪಾಡೋ**
**ಹರಿಕಥಾ ಶ್ರವಣ ಮಾಡೋ ಪಥ ವೈಕುಂಠಕಿದು ನೋಡೋ**
**ಸರಸಿಜನಾಭನ ಸರ್ವದಾ ಹೊಗಳುತ ದುರಿತ ದೂರಕೀಡ್ಯಾಡೋ**
**ಧ್ಯಾನ ಭಕುತಿ ವೈರಾಗ್ಯವೀವ ನಮ್ಮ ಆನಂದ ತೀರ್ಥರ ಪಾಡೋ**
**ಪರಮಪುರುಷ ಶ್ರೀ ಪುರಂದರ ವಿಠಲನ ಚರಣ ಕಮಲದಲ್ಲಿ ಕೂಡೋ**

ಈ ಕೃತಿಯಲ್ಲಿ ಪುರಂದರದಾಸರು ಶ್ರವಣ ಭಕ್ತಿಯು ಹೇಗೆ ಶ್ರೋತೃವಾದ ಭಕ್ತನನ್ನು ಯಾವ ಕುಂಠಿತವೂ ಇಲ್ಲದ ಆನಂದದ ಧಾಮವಾದ ವೈಕುಂಠಧಾಮಕ್ಕೆ ಪಥವಾಗುತ್ತದೆ ಎಂದು ಹಾಡಿದ್ದಾರೆ. ಗುರುವಿನ ಮೂಲಕ ಗೋವಿಂದನ ಬಳಿ ಹೋಗುವ ರೀತಿಯಂತೆ ಗುರು ಮಧ್ವ ಶ್ರೀ ಆನಂದತೀರ್ಥರ ಮೂಲಕ ಪರಮ ಪುರುಷನಾದ ಶ್ರೀ ಪುರಂದರ ವಿಠಲನ ಚರಣದಲ್ಲಿ ಕೂಡಿಸುತ್ತದೆ ಶ್ರವಣ ಭಕ್ತಿ. ಉಪನಿಷತ್ತಿನ ಋಷಿಗಳು ಭಗವದ್ವಿಷಯವನ್ನು ಶ್ರವಣ ಮಾಡಿ ನಂತರ ಆ ವಿಷಯವನ್ನು ಮನನ ಮಾಡಿ ನಂತರ ಆ ವಿಷಯದ ವಸ್ತುವಿನ ಮೇಲೆ ನಿಧಿಧ್ಯಾಸನ ಮಾಡಬೇಕು ಎಂದು ಆದೇಶ ನೀಡಿದ್ದಾರೆ. ಅಂತಲೇ ಶ್ರವಣ ಭಕ್ತಿ ಮೊದಲನೆಯ ಸ್ಥಾನದಲ್ಲಿದೆ.

### ಕೀರ್ತನ ಭಕ್ತಿ

ಕೀರ್ತನವೆಂದರೆ ಭಗವಂತನ ದಿವ್ಯಗುಣಗಳನ್ನು ಮನಬಿಚ್ಚಿ ಹೃದಯ ಪೂರ್ವಕವಾಗಿ ಹಾಡುವುದು. ಸಾಮಾನ್ಯವಾಗಿ ನಮಗೆ ಯಾರಿಂದ ಸಹಾಯ ಉಂಟಾಗುವುದೋ ಮತ್ತು ಯಾರು ನಮಗೆ ಇಷ್ಟವಾದ ಕ್ಷೇತ್ರದಲ್ಲಿ ನಮಗಿಂತಲೂ ಬಹು ಮುಂದಿರುತ್ತಾರೆಯೋ ಅಂತಹವರನ್ನು ನಾವು ಹೊಗಳುವುದು ಹಾಗೂ ಅವರ ಗುಣಗಳನ್ನು ವರ್ಣಿಸುವುದು ಸಹಜ ಮತ್ತು ಆನಂದದಾಯಕವಾಗಿರುತ್ತದೆ. ಅಂತಲೇ ನಮಗೆ ಯಾವಾಗಲೂ ಎಲ್ಲ ರೀತಿಯ ಸಹಾಯ ನೀಡುತ್ತಿರುವುದಲ್ಲದೆ ಎಲ್ಲರಿಗಿಂತಲೂ

ಮೊದಲಾಗಿರುವ ಭಗವಂತನನ್ನು ನಾವು ಹೊಗಳುವುದು ಮತ್ತು ಭಗವಂತನ ಅಪರಿಮಿತವಾದ ದಿವ್ಯ ಗುಣಗಳನ್ನು ವರ್ಣಿಸುವುದೇ ಕೀರ್ತನೆ.

ಭಗವದ್ ಅನುಭವ ಪಡೆದ ಹಾಗೂ ಪಡೆಯಲು ಹಾತೊರೆಯುತ್ತಿರುವ ಭಕ್ತರು ಭಗವದ್ಗುಣಗಳನ್ನು ವರ್ಣಿಸುವುದೇ 'ಕೀರ್ತನ ಭಕ್ತಿ'. ಶ್ರೀ ಪುರಂದರದಾಸರು ಕೀರ್ತನ ಭಕ್ತಿಯ ಬಗ್ಗೆ ಈ ರೀತಿ ವರ್ಣಿಸಿದ್ದಾರೆ.

**ಹರಿನಾಮ ಕೀರ್ತನೆ ಅನುದಿನ ಮಾಳ್ಪಗೆ ನರಕ ಭಯಗಳುಂಟೆ**
**ಕೇಸರಿಗಂಜದ ಮೃಗವುಂಟೆ ದಿನೇಶನಿಗಂಜದ ತಮವುಂಟೆ**
**ವಾಸುದೇವ ವೈಕುಂಠ ಜಗನ್ಮಯ ಕೇಶವ ಕೃಷ್ಣ ನೀನೆಂದುಚ್ಚರಿಸುವ**
**ಕುಲಿಶವನೆದುರಿಪ ಗಿರಿಯುಂಟೆ ಬಲು ಪ್ರಳಯ ಬಂದಾಗ ಜೀವಿಪರುಂಟೆ**
**ಜಲಜನಾಭ ಗೋವಿಂದ ಜನಾರ್ದನ ಕಲುಷ ಹರಿಣ ಕರಿರಾಜ ರಕ್ಷಕನೆಂಬ**
**ಗರುಡನಿಗಂಜದ ಫಣಿಯುಂಟೆ ದಳ್ಳುರಿಯಲಿ ಬೇಯದ ತೃಣವುಂಟೆ**
**ನರಹರಿ ನಾರಾಯಣ ಕೃಷ್ಣ ಕೇಶವ ಪುರಂದರ ವಿಠ್ಠಲ ನೀನೆಂದುಚ್ಚರಿಸುವ**

ದಾಸರು ಈ ಕೀರ್ತನೆಯಲ್ಲಿ ಬಹಳ ಸುಂದರವಾಗಿ ಕೀರ್ತನ ಭಕ್ತಿಯನ್ನು ಕೇಸರಿಗೆ ಅಂದರೆ ಸಿಂಹಕ್ಕೆ, ದಿನೇಶನಾದ ಸೂರ್ಯನಿಗೆ, ಕುಲೀಶ ಎಂದರೆ ಇಂದ್ರನ ವಜ್ರಾಯುಧಕ್ಕೆ, ಪ್ರಳಯಶಕ್ತಿಗೆ, ಗರುಡನಿಗೆ ಹಾಗೂ ಎಲ್ಲೆಡೆ ಹರಡುವ ಬೆಂಕಿಗೆ ಹೋಲಿಸಿದ್ದಾರೆ. ಹಾಗೆಯೇ ಅನೇಕರನ್ನು ಕಾಡುವ ಸಾವಿನ ನಂತರದ ನರಕದ ಭಯವನ್ನು ಈ ಮೇಲಿನ ಶಕ್ತಿಗಳಿಂದ ಸುಲಭವಾಗಿ ನಾಶವಾಗುವ ಪ್ರಾಣಿಗಳಿಗೆ, ಕತ್ತಲಿಗೆ, ಗುಡ್ಡಗಳಿಗೆ, ಜೀವಿಗಳಿಗೆ, ಹಾವುಗಳಿಗೆ ಹಾಗೂ ಹುಲ್ಲಿಗೆ ಹೋಲಿಸಿದ್ದಾರೆ. ಭಗವದ್ ನಾಮದ ಸಂಕೀರ್ತನವನ್ನು ನಿತ್ಯವೂ ಶ್ರದ್ಧೆಯಿಂದ ಹಾಗೂ ಭಕ್ತಿಯಿಂದ ಮಾಡುವ ಭಕ್ತರಿಗೆ ಯಾವ ರೀತಿಯ ಶಕ್ತಿಯನ್ನು ಭಗವಂತನು ಕರುಣಿಸಿ ಅವರನ್ನು ನರಕದ ಭಯದಿಂದ ದೂರ ಮಾಡುತ್ತಾನೆ ಎಂದು ಶ್ರೀ ಪುರಂದರದಾಸರು ಮನೋಜ್ಞವಾಗಿ ವರ್ಣಿಸಿದ್ದಾರೆ.

## ಸ್ಮರಣ ಭಕ್ತಿ

ಭಕ್ತರು ತಮ್ಮ ಮನಸ್ಸಿನಲ್ಲೇ ಸದಾ ದೇವರ ದಿವ್ಯ ನಾಮಗಳನ್ನು ಉಚ್ಚರಿಸಿದಾಗಲೂ, ಹಾಡುಗಳನ್ನು ಹಾಡಿಕೊಂಡಾಗಲೂ ಹಾಗೂ ಭಗವದ್ಗುಣಗಳನ್ನು ನೆನೆಸಿಕೊಳ್ಳುತ್ತಿದ್ದರೆ ಅದು ಸ್ಮರಣ ಭಕ್ತಿಯಾಗುತ್ತದೆ. ಯಾವುದೇ ಮಂತ್ರವನ್ನು ಅಥವಾ ಹಾಡನ್ನು ಮೂರು ಸ್ತರದಲ್ಲಿ ಅಭ್ಯಾಸ ಮಾಡುವ ಸಾಧನೆ ಮಾಡಬಹುದು. ಮೊದಲನೆಯದಾಗಿ 'ವಾಚಿಕ' ಎಂದರೆ ಗಟ್ಟಿಯಾಗಿ ಕೇಳುವಂತೆ ಹೇಳುವುದು, ಎರಡನೆಯದಾಗಿ 'ಉಪಾಂಶು'

ಎಂದರೆ ಗಟ್ಟಿಯಾಗಿ ಹೇಳದೆ ತನಗೆ ಮಾತ್ರ ಕೇಳುವಂತೆ ಮೆಲ್ಲಗೆ ಹೇಳುವುದು, ಮೂರನೆಯದಾಗಿ ತನ್ನ ಮನಸ್ಸಿನಲ್ಲೇ ಹೇಳುವುದು 'ಮಾನಸಿಕ' ಎಂದಾಗುತ್ತದೆ. ಮುಖ್ಯವಾಗಿ ಚೆನ್ನಾಗಿ ಶ್ರವಣ ಮಾಡಿ ನಂತರ ವಾಚಿಕ ಹಾಗೂ ಉಪಾಂಶು ಮಟ್ಟದಲ್ಲಿ ಚೆನ್ನಾಗಿ ಅಭ್ಯಾಸ ಮಾಡಿದಾಗ ಅದು ಮಾನಸಿಕ ಮಟ್ಟದಲ್ಲಿ ನಿಂತು ಸ್ಮರಣೆಗೆ ಬರುತ್ತಿರುತ್ತದೆ. ಇದರ ಜೊತೆಗೆ ಪರಮಾತ್ಮನ ದಿವ್ಯಗುಣಗಳನ್ನು ಸ್ಮರಣೆ ಮಾಡುತ್ತಿರಬಹುದು. ಸ್ಮರಣ ಭಕ್ತಿಯನ್ನು ಸಾಧಿಸಿದ ಭಕ್ತರು ಯಾವ ಜಾಗದಲ್ಲಿಯಾದರೂ (ಅಂದರೆ ಮನೆ, ಕಛೇರಿ, ಇತ್ಯಾದಿ) ಭಗವತ್ಸ್ಮರಣೆ ಮಾಡಬಹುದು.

ಶ್ರೀ ಪುರಂದರದಾಸರು ಕೆಳಗಿನ ಕೀರ್ತನೆಯಲ್ಲಿ ಸ್ಮರಣ ಭಕ್ತಿಯ ಸಿದ್ಧಿಯನ್ನು ಪಡೆದ ಕೆಲವು ಮಹಾ ಭಕ್ತರನ್ನು ಉಲ್ಲೇಖಿಸಿದ್ದಾರೆ.

**ಹರಿಸ್ಮರಣೆ ಮಾಡೋ ನಿರಂತರ ಪರಗತಿಗೆ ಇದು ನಿರ್ಧಾರ**
**ದುರಿತ ಗಜಕ್ಕೆ ಕಂಠೀರವನೆನಿಸಿದ ಶರಣಾಗತ ರಕ್ಷಕ ಪಾವನ ನೀ**
**ಸ್ಮರಣೆಗೈದ ಪ್ರಹ್ಲಾದನ ರಕ್ಷಿಸಿದ ದುರುಳ ಹಿರಣ್ಯಕನುದರವ ಸೀಳಿದ**
**ತರುಣಿ ದ್ರೌಪದಿ ಮೊರೆಯಿಡಲಾಕ್ಷಣ ಭರದಿಂದಕ್ಷಯವಿತ್ತ ಮಹಾತ್ಮನ**
**ಅಂದು ಅಜಾಮಿಳ ಕಂದನ ಕರೆಯಲು ಬಂದು ಸಲಹಿ ಆನಂದವ ತೋರಿದ**
**ಶ್ರೀಶ ಪುರಂದರ ವಿಠಲರಾಯನ ಮುಟ್ಟಿ ಸೃಷ್ಟಿಗೊಡೆಯನ ಭಜಿಸಿ ನೀ**

ಈ ಕೃತಿಯಲ್ಲಿ ದಾಸರು ಹರಿಸ್ಮರಣೆಯನ್ನು ನಿರಂತರವಾಗಿ ಮಾಡಬೇಕೆಂದಿದ್ದಾರೆ. ಸದಾ ಸ್ಮರಣ ಭಕ್ತಿಯಿಂದ ಸಿದ್ಧಿ, ಎಂದರೆ ಪರಮಾತ್ಮನ ಅನುಗ್ರಹ ಮತ್ತು ರಕ್ಷಣೆ ಸಿಗುತ್ತದೆ. ಗಜೇಂದ್ರನ ಕಾಲನ್ನು ಮೊಸಳೆ ಹಿಡಿದುಕೊಂಡಾಗ ಗಜೇಂದ್ರನು ಆರ್ತತೆಯಿಂದ ಶ್ರದ್ಧಾಪೂರ್ವಕವಾಗಿ ಸ್ಮರಿಸಿದಾಗ ರಕ್ಷಣೆ ದೊರಕಿತು. ಹಾಗೆಯೇ ತುಂಬಿದ ಸಭೆಯಲ್ಲಿ ದ್ರೌಪದಿ ಮಾನಭಂಗವಾಗುವ ಸಮಯದಲ್ಲಿ ಹರಿಯ ಭಕ್ತೆಯಾದ ಅವಳು ಹರಿಯನ್ನು ಸ್ಮರಿಸಿಕೊಂಡು ಕೂಗಿದಾಗ ಅವಳಿಗೆ ಹರಿಯ ರಕ್ಷಣೆ ದೊರಕಿತು. ಹಾಗೆಯೇ ಭಗವತ್ಸಾಧನೆ ಚೆನ್ನಾಗಿ ಮಾಡುತ್ತಿದ್ದ ಭಕ್ತ ಅಜಾಮಿಳ ದಾರಿ ತಪ್ಪಿ ಕೊನೆಗೆ ತನ್ನ ಮಗನ ಮೂಲಕ ಸ್ಮರಿಸಿದಾಗ ಅವನಿಗೆ ಅನುಗ್ರಹ ದೊರಕಿತು.

## ಪಾದಸೇವನ ಭಕ್ತಿ

ಪಾದಸೇವನ ಎಂದರೆ ಒಬ್ಬರು ಮತ್ತೊಬ್ಬರ ಆಯಾಸ ಪರಿಹಾರ ಮಾಡುವುದಕ್ಕೆ ಅವರ ಪಾದಗಳನ್ನು ಮತ್ತು ಕಾಲುಗಳನ್ನು ಒತ್ತುವುದು. ಹಾಗೆಯೇ ಮತ್ತೊಬ್ಬರಿಗೆ ಬಹಳ ಗೌರವವನ್ನು ಸಲ್ಲಿಸುವುದಕ್ಕೆ ಪಾದಗಳನ್ನು ತೊಳೆದು ಅವರ ಪಾದಗಳಿಗೆ ನಮಸ್ಕಾರ ಮಾಡುವುದು. ಇಲ್ಲಿ ಒಂದು ತತ್ವವಿದೆ. ಅದೇನೆಂದರೆ ಈ ವಿಶಾಲ ವಿಶ್ವವು ಪರಮಾತ್ಮನ ಪಾದದಲ್ಲಿ ಪ್ರತಿಷ್ಠಿತವಾಗಿದೆ. ಬಹು ಪ್ರಚಲಿತವಾದ ಪುರುಷ ಸೂಕ್ತದಲ್ಲಿ

"ಪಾದೋಸ್ಯ ವಿಶ್ವಾ ಭೂತಾನಿ" ಎಂದರೆ "ವಿಶ್ವದ ಎಲ್ಲ ಜೀವಿಗಳು" ಆ ಪರಮಾತ್ಮನ ಪಾದ ಎಂದರೆ, ಒಂದು ಅಂಶ ಎಂದಾಗುತ್ತದೆ. ಆದ್ದರಿಂದ ಭಕ್ತನು ತನ್ನ ಎಲ್ಲಾ ಕಾರ್ಯಗಳನ್ನೂ ಸೇವೆಯ ರೂಪಿನಲ್ಲಿ ನೋಡಿ ಎಲ್ಲರಲ್ಲೂ ಪರಮಾತ್ಮನನ್ನು ಕಂಡು ತನ್ನ ಕಾರ್ಯಗಳನ್ನು ಸೇವೆಯ ರೂಪಿನಲ್ಲಿ ಸಮರ್ಪಣೆ ಮಾಡುವುದು. ಪಾದಸೇವನ ಭಕ್ತಿಯನ್ನು ಶ್ರೀ ಪುರಂದರದಾಸರು ಕೆಳಗಿನ ಈ ಕೃತಿಯಲ್ಲಿ ಚೆನ್ನಾಗಿ ವಿವರಿಸಿದ್ದಾರೆ.

**ಬಿಡೆ ನಿನ್ನ ಪಾದವ ಬಿಂಕವಿನ್ನೇಕೋ, ಕೊಡು ಮನದಿಷ್ಟವಾ ಕೋಪವಿದೇಕೋ**
**ನೀರ ಪೊಕ್ಕರು ಬಿಡೆ ಬೆನ್ನಿನೊಳಗೆ ಬಹುಭಾರಪೊತ್ತೆನೆಂದು ಇದ್ದರು ಬಿಡೆನು**
**ಕೋರೆಯ ಮಸೆಯುತ ಕೊಸರಿಕೊಂಡರು ಬಿಡೆ, ಘೋರ ರೂಪವ ತಾಳಿ**
**ಘುರ ಘುರಿಸಲು ನಾನು ತಿರುಕನೆಂದರು ಬಿಡೆ ತಿಳಿದು ತಾಯ ಕೊರಳ**
**ತರಿಕನೆಂದರು ನಿನ್ನ ನಾ ಬಿಡೆನೋ**

**ಪೊರೆಯೆ ಪಿತನ ವಾಕ್ಯ ಕಾಡ ಸೇರಲು ಬಿಡೆ ಗರಳ ಮಡುವಿನಲ್ಲಿ**
**ಧುಮಿಕಿದರೆಯು ನಾನು**
**ಕಡು ಬತ್ತಲಾಗಿ ಎನ್ನ ಕೈಲಿ ಕಾಸಿಲ್ಲೆಂದರು ಬಿಡೆ ಒಡನೆ ಹಯವನೇರಿ**
**ಓಡಿದರು ಬಿಡೆನು**
**ಪೊಡವಿಯೊಳಗೆ ನಮ್ಮ ಪುರಂದರ ವಿಠಲನೆ ಕಡೆ ಹಾಯಿಸುವ**
**ಭಾರ ನಿನ್ನದದಕೆ ನಾನು**

ದಾಸರು ಈ ಕೃತಿಯಲ್ಲಿ ಭಕ್ತನು ಹೇಗೆ ಪರಮಾತ್ಮನ (ವಿಷ್ಣುವಿನ) ಪಾದವನ್ನು ಬಿಡುವುದಿಲ್ಲ ಎಂದು ಘೋಷಿಸಿದ್ದಾರೆ. ಹಾಗೆಯೇ ದಾಸರು ವಿಷ್ಣುವು ಅವತಾರವನ್ನೆತ್ತಿ ರೂಪ ಮರೆಸಿಕೊಂಡಿದ್ದರೂ ಅವನ ಪಾದ ಸೇವನೆಯನ್ನು ಖಂಡಿತವಾಗಿಯೂ ಬಿಡುವುದಿಲ್ಲ ಎಂದಿದ್ದಾರೆ. ಶ್ರೀ ವಿಷ್ಣುವಿನ ಹತ್ತು ಅವತಾರಗಳಾದ ಮತ್ಸ್ಯ (ಮೀನು), ಕೂರ್ಮ (ಆಮೆ), ವರಾಹ (ಹಂದಿ), ನಾರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಶ್ರೀಕೃಷ್ಣ, ಬುದ್ಧ ಹಾಗೂ ಕಲ್ಕಿ ರೂಪಗಳನ್ನು ಸುಂದರವಾಗಿ ವರ್ಣಿಸಿ ಪಾದಸೇವನ ಭಕ್ತಿಯ ಮಹತ್ವವನ್ನು ತೋರಿಸಿದ್ದಾರೆ.

**ಅರ್ಚನ ಭಕ್ತಿ**

ಅರ್ಚನ ಎಂದರೆ ಪೂಜೆ. ಸನಾತನ ಧರ್ಮದ ಸಂಪ್ರದಾಯದಲ್ಲಿ ಪೂಜೆ ಎಂದಾಗ ಒಂದು ಕ್ರಮವಿದೆ. ಭಕ್ತನು ತನ್ನ ಇಷ್ಟದೇವತೆಯ ಮೂರ್ತಿಯನ್ನು ಒಂದು ಶುಭ್ರವಾದ ಸಾನ್ನಿಧ್ಯದಲ್ಲಿ ಪ್ರತಿಷ್ಠಾಪಿಸಿ ನಂತರ ಷೋಡಶೋಪಚಾರಗಳಿಂದ, ಶ್ರದ್ಧಾ-ಭಕ್ತಿಯಿಂದ ಪೂಜಿಸುವುದು. ಷೋಡಶ ಎಂದರೆ ಹದಿನಾರು ಉಪಚಾರಗಳಿಂದ ಮನೆಗೆ ಬಂದ ಅತಿ ಪ್ರಿಯರೂ ಹಾಗೂ ಗೌರವಾನ್ವಿತರೂ ಆದ ಅತಿಥಿಗಳನ್ನು

ಗೌರವಿಸಿದಂತೆ. ಆ ಹದಿನಾರು ಉಪಚಾರಗಳೇ ಧ್ಯಾನಾವಾಹನ, ಆಸನ, ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ವಸನ, ಬ್ರಹ್ಮಸೂತ್ರಂ (ಜನಿವಾರ), ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ನೀರಾಜನ, ಪ್ರದಕ್ಷಿಣ ಹಾಗೂ ನಮಸ್ಕಾರ. ಈ ಹದಿನಾರು ಉಪಚಾರಗಳ ಪೂಜೆಯಲ್ಲಿ ಸಾಮಗ್ರಿಗಳ ಜೊತೆಗೆ ಭಕ್ತನು ಮನಸ್ಸಿನ ನಿರ್ಮಲತೆ ಹಾಗೂ ಏಕಾಗ್ರತೆಯಿಂದ ಪ್ರೇಮಪೂರ್ವಕವಾದ ಸಮರ್ಪಣ ಭಾವದಿಂದಿರಬೇಕು. ಶ್ರೀ ಪುರಂದರದಾಸರು ಕೆಳಗಿನ ಕೃತಿಯಲ್ಲಿ ಭಕ್ತನಿಗೆ ಯಾವ ರೀತಿಯಲ್ಲಿ ಅರ್ಚನೆಯ ಮನೋಭಾವನೆ ಇರಬೇಕು ಎಂದು ಸುಂದರವಾಗಿ ವರ್ಣಿಸಿದ್ದಾರೆ.

**ಹೇಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ ನಾಗಶಯನನೆ ನಾರದ ವಂದ್ಯನೆ ದೇವ**
**ಮಂಗಳಾಭಿಷೇಕಕೆ ಉದಕ ತರುವನೆನೆ ಗಂಗೆಯುಂಗುಷ್ಠದಿ ಪಡೆದಿರುವೆ**
**ಸಂಗೀತ ಕೀರ್ತನೆ ಪಾಡುವೆನೆಂದರೆ ತುಂಬುರು ನಾರದರು ಪಾಡುತಿಹರೋ ದೇವ**
**ಪುಷ್ಪವ ತಂದು ನಿನಗರ್ಪಿಸುವೆನೆಂದರೆ ಪುಷ್ಪ ಪಲ್ಲವಿಸಿದೆ ಹೊಕ್ಕುಳಲಿ**
**ಇಪ್ಪತ್ತೆತ್ತಿಸಕೋಟಿ ದೇವರ್ಕಳದನೊಪ್ಪಿ ನೈವೇದ್ಯ ನೀಡಲು ತೃಪ್ತನಾಗುವೆ**
**ಕೋಟಿ ಸೂರ್ಯರ ಪ್ರಭೆ ಮಿಗಿಲಾದಾತನಿಗೆಂದು ದೀಪವ ಹಚ್ಚಿದರೆ ಬೆಳಕಹುದೆ**
**ಸಾಟಿಗಾಣದೆ ಲಕ್ಷ್ಮಿ ಉರಸ್ಥಳವಾಗಿರೆ ಲೋಷ್ಠ ಕಾಸು ಎಂತು ಕಾಣಿಕೆ ನೀಡೆಲೊ**
**ಹಾಸಿಗೆಯನು ತಂದು ಹಾಸುವೆನೆಂದರೆ ಶೇಷನ ಮೇಲೆ ನೀನು ಪವಡಿಸಿರ್ಪೆ**
**ಬೀಸಣಿಗೆಯ ತಂದು ಬೀಸುವೆನೆಂದರೆ ಬೀಸುತಿಹನು ಖಗ ತನ್ನ ಪಕ್ಕದಲಿ**
**ನಿತ್ಯಗುಣಾರ್ಣವ ನಿಜಗುಣಪರಿಪೂರ್ಣ ಸಚ್ಚಿದಾನಂದ ಸನಕಾದಿ ವಂದ್ಯ**
**ಮುಕ್ತಿದಾಯಕ ನಮ್ಮ ಪುರಂದರವಿಠಲ ಭಕ್ತಿದಾಯಕನೆಂದು**
**ಸ್ತುತಿಸಿ ಕೊಂಡಾಡುವೆನೊ.**

ಈ ಕೃತಿಯಲ್ಲಿ ದಾಸರು ಭಕ್ತನ ಮನೋಭಾವಗಳನ್ನು ಹೇಳಿದ್ದಾರೆ. ಅಭಿಷೇಕ ಮಾಡಹೊರಟರೆ ನಾರಾಯಣನ ಅಂಗುಷ್ಠದಲ್ಲಿಯೇ ಗಂಗೆ ಇರುವಳು. ಸಂಗೀತಕ್ಕೆ ತುಂಬುರು ನಾರದರು ಹಾಡುತ್ತಿದ್ದಾರೆ. ಪುಷ್ಪದ ಅರ್ಚನೆ ಮಾಡಲೆಂದರೆ ನಾರಾಯಣನ ನಾಭಿಯಲ್ಲಿಯೇ ಕಮಲ ಹುಟ್ಟಿದೆ. ಮೂವತ್ಮೂರು ಕೋಟಿ ದೇವತೆಗಳೇ ನೈವೇದ್ಯ ಅರ್ಪಿಸುತ್ತಿದ್ದಾರೆ. ನಾರಾಯಣನ ಪ್ರಭೆಯೇ ಕೋಟಿ ಸೂರ್ಯರನ್ನು ಮೀರಿರುವಾಗ ಭಕ್ತನು ಹಚ್ಚುವ ದೀಪ ಹೇಗೆ ಸಾಕಾದೀತು. ನಾರಾಯಣನಲ್ಲಿಯೇ ಲಕ್ಷ್ಮಿ ವಕ್ಷ ಸ್ಥಳದಲ್ಲಿರಬೇಕಾದರೆ ಭಕ್ತನು ಏನು ಕಾಣಿಕೆ ನೀಡಬಲ್ಲ. ಆದಿಶೇಷನ ಮೇಲೆ ಮಲಗಿರುವ ನಾರಾಯಣನಿಗೆ ಯಾವ ರೀತಿಯ ಹಾಸಿಗೆ ಹಾಕಲು ಸಾಧ್ಯ. ನಂತರ ಗರುಡನು ತನ್ನ ರೆಕ್ಕೆಗಳಿಂದ ಬೀಸಣಿಗೆ ಸೇವೆ ಮಾಡುತ್ತಿರುವಾಗ ಭಕ್ತನು ಅದಕ್ಕೆ ಮಿಗಿಲಾದ ಬೀಸಣಿಗೆ ತರಲು ಸಾಧ್ಯವೇ? ಇಂತಹ ನಾರಾಯಣನಿಗೆ ಭಕ್ತನು ಶ್ರದ್ಧಾ-ಭಕ್ತಿ ಪೂರ್ವಕವಾಗಿ

ಶುದ್ಧ ಮನಸ್ಸಿನಿಂದ ಉಪಚಾರಗಳನ್ನು ಸಲ್ಲಿಸಿದರೆ ಮುಕ್ತಿದಾಯಕನಾದ ನಾರಾಯಣನು ಭಕ್ತನಿಗೆ ಸಿದ್ಧಿಯನ್ನು ನೀಡುತ್ತಾನೆ.

## ವಂದನ ಭಕ್ತಿ

ವಂದನ ಎಂದರೆ ನಮಸ್ಕಾರ ಮಾಡುವುದು. ನಮಸ್ಕಾರ ಎನ್ನುವುದು ಐಕ್ಯತೆಯನ್ನು ಸೂಚಿಸುವ ಕ್ರಿಯೆ. ಅದಕ್ಕೆ "ನಮಃ ಐಕ್ಯಂ ಪ್ರಚಕ್ಷತೇ" ಎನ್ನುತ್ತಾರೆ. ಭಕ್ತನು ತನ್ನನ್ನೇ ತನ್ನ ಇಷ್ಟ ದೇವತೆಯಲ್ಲಿ ಸಮರ್ಪಿಸಿಕೊಂಡು ಸರ್ವಸಮರ್ಪಣ ಭಾವದಿಂದ ಒಪ್ಪಿಸಿಕೊಂಡಾಗ ವಂದನೆ ಎಂದಾಗುತ್ತದೆ. ಆದ್ದರಿಂದಲೇ ಭಕ್ತನು ಭಗವಂತನಿಗೆ ವಂದಿಸಿದಾಗ ತನ್ನ ದೇಹವನ್ನು ಬಗ್ಗಿಸಿ ಶುದ್ಧ ಮನೋಭಾವದಿಂದ ಯಾವ ರೀತಿಯ ಗರ್ವವೂ ಇಲ್ಲದೆ ವಿನಯದಿಂದ ಸಮರ್ಪಿಸಿಕೊಳ್ಳುತ್ತಾನೆ. ಶ್ರೀ ಪುರಂದರದಾಸರು ಕೆಳಗಿನ ಕೃತಿಯಲ್ಲಿ ವಂದನ ಭಕ್ತಿಯನ್ನು ಬಹಳ ಚೆನ್ನಾಗಿ ವರ್ಣಿಸಿದ್ದಾರೆ.

**ವಂದಿಸಿದವರೇ ಧನ್ಯರು ನಮ್ಮ ಇಂದಿರಾಪತಿಗಡ್ಡಬೀಳುತಲೊಮ್ಮೆ**
**ಒಂದೊಂದು ಸ್ತೋತ್ರದಿ ಒಂದೊಂದು ಮಂತ್ರದಿ ಒಂದೊಂದು ನಾಮವ ನೆನೆವುತ್ತ**
**ಮಂದರೋದ್ಧರನ ನೀ ಕುಂದದೆ ಪೂಜಿಸಿ ವಂದಿಸುವ ಆನಂದದಿಂದ**
**ಬಿಟ್ಟು ಲಜ್ಜೆಯ ದೃಷ್ಟಿಸಿ ನೋಡುತ ವಿಠಲ ವಿಠಲ ಎನ್ನುತ ಮನ**
**ಮುಟ್ಟಿ ಮಾಡುವ ಭಕ್ತಿ ಸ್ತುತಿಯಿಂದ ಅಷ್ಟಾಂಗದಲಿ ವಂದನೆಯ ಮಾಡುತ**
**ಸಿರಿ ಲಕ್ಷ್ಮೀಪತಿ ಶರಣಾಗತರನು ಕರುಣಿಸೆಂದು ಕರಮುಗಿದು**
**ಹರುಷ ಪುಳಕದಿಂದ ಮರೆತು ದೇಹವ ಪುರಂದರ ವಿಠಲರಾಯನ ದೇಹಕ್ಕೆ**

ಈ ಕೃತಿಯಲ್ಲಿ ಬಾಯಲ್ಲಿ ಸ್ತೋತ್ರ ಹಾಡುತ್ತ ಹಾಗೆಯೇ ದೇವರನ್ನು ನೆನೆಯುತ್ತ ಆನಂದದಿಂದ ಲಜ್ಜೆಯ ಬಿಟ್ಟು ದೇವರಲ್ಲಿ ತದೇಕ ದೃಷ್ಟಿಯಿಟ್ಟು ವಂದಿಸಬೇಕು. ಇಂತಹ ವಂದನೆಯನ್ನು ಅಷ್ಟಾಂಗ ವಂದನೆಯ ರೀತಿಯಲ್ಲಿ ಮಾಡಬೇಕೆನ್ನುತ್ತಾರೆ ದಾಸರು. ಅಷ್ಟಾಂಗ ಪ್ರಣಾಮ ಎಂದರೆ

**ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ**
**ಪದ್ಭ್ಯಾಂ ಕರಾಭ್ಯಾಂ ಕರ್ಣಾಭ್ಯಾಂ ಪ್ರಣಾಮೋಷ್ಟಾಂಗ ಉಚ್ಯತೇ**

ಇಲ್ಲಿ ಅಷ್ಟಾಂಗ ಎಂದರೆ ಎದೆ, ತಲೆ, ದೃಷ್ಟಿ, ಮನಸ್ಸು, ಮಾತು, ಪಾದಗಳು, ಕೈಗಳು ಮತ್ತು ಕಿವಿಗಳು. ಈ ಎಲ್ಲ ಅಂಗಗಳನ್ನೂ ಸೇರಿಸಿ ಶ್ರದ್ಧೆ ಹಾಗೂ ಪ್ರೇಮದ ಜೊತೆ ವಂದಿಸಿದಾಗ ಅದು ವಂದನ ಭಕ್ತಿ.

## ದಾಸ್ಯ ಭಕ್ತಿ

ಭಕ್ತನು ಭಗವಂತನನ್ನು ತನ್ನ ಪ್ರಭುವನ್ನಾಗಿಸಿ ತಾನು ದಾಸಭಾವದಿಂದ ಸೇವೆ ಮಾಡಿದಾಗ ಅದು ದಾಸ್ಯ ಭಕ್ತಿ ಎಂದಾಗುತ್ತದೆ. ದಾಸ ಎಂದರೆ ತನ್ನತನವಿಲ್ಲದೆ ತನು-ಮನ-ಧನಗಳೆಲ್ಲವೂ ಭಗವಂತನದ್ದು ಎಂಬ ಭಾವದಿಂದ ಜೀವನ ಮಾಡುವುದು. ಭಕ್ತನು ತನ್ನ ಸ್ವಾತಂತ್ರ್ಯವನ್ನು ಭಗವಂತನಿಗೊಪ್ಪಿಸಿ ಸದಾ ಭಗವದ್ ಧ್ಯಾನದಲ್ಲಿದ್ದು ಭಗವಂತನಿಂದ ಪ್ರೇರಿತವಾದ ಕೆಲಸಗಳನ್ನು ಭಗವತ್ಸೇವೆಯೆಂದು ಮಾಡುವುದು. ಭಗವಂತನಲ್ಲಿ ದಾಸತ್ವವನ್ನು ತೋರುವುದು ಸುಲಭವಲ್ಲ. ಏಕೆಂದರೆ ಅದಕ್ಕೆ ಭಗವಂತನ ಸರ್ವಶಕ್ತ ಗುಣವನ್ನು ಅರಿಯಬೇಕು ಮತ್ತು ತನ್ನತನದ ಮಿತಿಯನ್ನು ತಿಳಿಯಬೇಕು. ದಾಸ್ಯ ಭಕ್ತಿಯು ಭಕ್ತನಿಗೆ ಸಿದ್ಧಿಸಬೇಕಾದರೆ ಭಗವಂತನ ಶಕ್ತಿಯಲ್ಲಿ ಅಪರಿಮಿತ ಹಾಗೂ ದೃಢ ವಿಶ್ವಾಸವಿರಬೇಕು. ಹಾಗೆಯೇ ಭಗವಂತನಿಗೂ ಭಕ್ತನ ಮೇಲೆ ಕೃಪೆಯಿರಬೇಕು. ಶ್ರೀ ಪುರಂದರದಾಸರು ಭಕ್ತನು ದಾಸನಾಗುವ ಕೋರಿಕೆಯನ್ನು ಕೆಳಗಿನ ಕೃತಿಯಲ್ಲಿ ಸುಂದರವಾಗಿ ವರ್ಣಿಸಿದ್ದಾರೆ.

**ದಾಸನ ಮಾಡಿಕೊ ಎನ್ನ ಸ್ವಾಮಿ ಸಾಸಿರ ನಾಮದ ವೇಂಕಟರಮಣ**
**ದುರ್ಬುದ್ಧಿಗಳನೆಲ್ಲ ಬಿಡಿಸೊ ನಿನ್ನ ಕರುಣ-ಕವಚವೆನ್ನ ಹರಣಕ್ಕೆ ತೊಡಿಸೊ**
**ಚರಣಸೇವೆ ಎನಗೆ ಕೊಡಿಸೊ ಅಭಯಕರ ಪುಷ್ಪವ ಎನ್ನ ಶಿರದಲ್ಲಿ ಮುಡಿಸೊ**
**ದೃಢಭಕ್ತಿ ನಿನ್ನಲ್ಲಿ ಬೇಡಿ ನಾ ಅಡಿಗೆರಗುವೆನಯ್ಯ ಅನುದಿನ ಪಾಡಿ**
**ಕಡೆಗಣ್ಣಿಲೇಕೆನ್ನ ನೋಡಿ ಬಿಡುವೆ ಕೊಡು ನಿನ್ನ ಧ್ಯಾನವ ಮನಶುಚಿ ಮಾಡಿ**
**ಮೊರೆಹೊಕ್ಕವರ ಕಾಯುವ ಬಿರುದು ಎನ್ನ ಮರೆಯದೆ ರಕ್ಷಣೆ**
**ಮಾಡಯ್ಯ ಪೊರೆದು**
**ದುರಿತಗಳೆಲ್ಲವ ತರಿದು ಸಿರಿ ಪುರಂದರ ವಿಠಲ ಎನ್ನನು ಪೊರೆದು.**

ಈ ಕೃತಿಯಲ್ಲಿ ದಾಸರು ಭಗವಂತನನ್ನು ಭಕ್ತನಾದ ದಾಸನ ದುರ್ಬುದ್ಧಿಗಳನ್ನು ಬಿಡಿಸಿ ದೋಷಗಳನ್ನು ನಿವಾರಿಸಬೇಕೆಂದು ಕಳಕಳಿಯಿಂದ ಕೋರುತ್ತಾರೆ. ಭಗವಂತನು ಭಕ್ತನಿಗೆ ಕರುಣೆಯ ಕವಚವನ್ನು ತೊಡಿಸಿ ಅಭಯ ನೀಡಿ ದಾಸ್ಯಭಕ್ತಿಯನ್ನು ದೃಢವಾಗಿಸಬೇಕೆಂದು ಪ್ರಾರ್ಥಿಸುತ್ತಾರೆ. ಭಕ್ತನಾದ ದಾಸನಿಗೆ ಧ್ಯಾನಿಸುವ ಶಕ್ತಿಯನ್ನು ನೀಡಿ ಮನಸ್ಸನ್ನು ಶುಚಿ ಮಾಡಬೇಕೆಂದು ಕೋರುತ್ತಾರೆ. ದಾಸರನ್ನು ರಕ್ಷಣೆ ಮಾಡುವ ಬಿರುದನ್ನೂ ಹೊಂದಿರುವ ಭಗವಂತನನ್ನು ಭಕ್ತನ ದುರಿತಗಳನ್ನು ತೆಗೆದು ಅನುಗ್ರಹ ಮಾಡಬೇಕೆಂದು ಪ್ರಾರ್ಥಿಸುತ್ತಾರೆ.

## ಸಖ್ಯ ಭಕ್ತಿ

ಸಖನೆಂದರೆ ಸ್ನೇಹಿತ. ಭಕ್ತನು ಭಗವಂತನಲ್ಲಿ ಸ್ನೇಹಭಾವವನ್ನು ಬೆಳೆಸಿಕೊಂಡಾಗ ಸಖ್ಯ ಭಕ್ತಿ. ಸಂಸ್ಕೃತ ಭಾಷೆಯಲ್ಲಿ ಸ್ನೇಹ ಎಂದರೆ ಎಣ್ಣೆ ಎನ್ನುವ ಅರ್ಥವೂ ಇದೆ. ಇಲ್ಲಿ ಅದರ ಔಚಿತ್ಯವೂ ಇದೆ. ಹೇಗೆಂದರೆ ಒಂದು ಬಟ್ಟಲಿನಿಂದ ಮತ್ತೊಂದು ಬಟ್ಟಲಿಗೆ ಎಣ್ಣೆಯನ್ನು ಹಾಕುವಾಗ ಅದು ಅವಿಚ್ಛಿನ್ನವಾಗಿ ಹರಿಯುತ್ತದೆ. ಅಂತೆಯೇ ಸಖ್ಯ ಭಕ್ತಿಯಲ್ಲಿ ಭಕ್ತ ಹಾಗೂ ಭಗವಂತ ಇಬ್ಬರಲ್ಲೂ ಪರಸ್ಪರ ಪ್ರೀತಿ ಅವಿಚ್ಛಿನ್ನವಾಗಿ ಎಣ್ಣೆಯಂತೆ (ಸ್ನೇಹದಂತೆ) ಹರಿಯುತ್ತದೆ. ಸ್ನೇಹಿತರಲ್ಲಿ ಹೃದಯ ಬಿಚ್ಚಿ ಭಾವನೆಗಳನ್ನು ಪ್ರಕಟಿಸುವ ಸಂಬಂಧವಿರುತ್ತದೆ. ಹಾಗೆಯೇ ಕಷ್ಟ ಮತ್ತು ಸುಖದ ಸಂದರ್ಭಗಳಲ್ಲಿ ಭಕ್ತನು ಭಗವಂತನಲ್ಲಿ ಸಖ್ಯ ಭಕ್ತಿಯ ಮೂಲಕ ಆಸರೆಯನ್ನು ಪಡೆಯುತ್ತಾನೆ. ಶ್ರೀ ಪುರಂದರದಾಸರು ಈ ಕೆಳಗಿನ ಕೃತಿಯಲ್ಲಿ ಸಖ್ಯ ಭಕ್ತಿಯನ್ನು ಭಗವಂತನು ಭಕ್ತನಿಗೆ ಹೇಗೆ ಅನುಗ್ರಹಿಸುತ್ತಾನೆ ಎಂದು ವರ್ಣಿಸಿದ್ದಾರೆ.

**ನಾನೇಕೆ ಬಡವನು ನಾನೇಕೆ ಪರದೇಶಿ ಶ್ರೀನಿಧೇ ಹರಿ ಎನಗೆ ನೀನಿರುವ ತನಕ**
**ಹುಟ್ಟಿಸಿದ ತಾಯ್ತಂದೆ ಇಷ್ಟಮಿತ್ರನು ನೀನೆ ಇಷ್ಟಬಂಧುವು ಸರ್ವ ಬಳಗ ನೀನೆ**
**ಪೆಟ್ಟಿಗೆಯೊಳಗಿನ ಅಷ್ಟಾಭರಣ ನೀನೆ**
**ಶ್ರೇಷ್ಠ ಮೂರುತಿ ಕೃಷ್ಣ ನೀನಿರುವ ತನಕ**
**ಒಡಹುಟ್ಟಿದವ ನೀನೆ ಒಡಲಿಗ್ಹಾಕುವ ನೀನೆ**
**ಉಡಲು ಹೊದೆಯಲು ವಸ್ತ್ರ ಕೊಡುವವ ನೀನೆ**
**ಮಡದಿ ಮಕ್ಕಳನೆಲ್ಲ ಕಡೆಹಾಯ್ಸುವವ ನೀನೆ**
**ಬಿಡದೆ ಸಲಹುವ ಒಡೆಯ ನೀನಿರುವ ತನಕ**
**ವಿದ್ಯೆ ಹೇಳುವವ ನೀನೆ**
**ಬುದ್ಧಿ ಕಲಿಸುವವ ನೀನೆ ಉದ್ಧಾರಕರ್ತ ಮಮ ಸ್ವಾಮಿ ನೀನೆ**
**ಮುದ್ದು ಶ್ರೀ ಪುರಂದರ ವಿಠಲ ನಿನ್ನಡಿ ಮೇಲೆ ಬಿದ್ದುಕೊಂಡಿರುವ**
**ಎನಗ್ಯಾತರ ಭಯವೋ**

ಈ ಕೃತಿಯಲ್ಲಿ ಭಕ್ತನು ಭಗವಂತನನ್ನು ಸಂಬೋಧಿಸುತ್ತಾ ಭಗವಂತನಂತಹ ಇಷ್ಟವಾದ ಮಿತ್ರ ಸಿಕ್ಕಿದ ಮೇಲೆ ತಾನು ಹೇಗೆ ಬಡವನಾಗುತ್ತಾನೆ ಎಂದು ಕೇಳುತ್ತಾನೆ. ಭಗವಂತನು ಸಖ್ಯ ಭಕ್ತಿಯಲ್ಲಿ ಭಕ್ತನಿಗೆ ಎಲ್ಲವನ್ನೂ ನೀಡಿ, ವಿದ್ಯೆಯನ್ನು ದಯಪಾಲಿಸಿ, ಬುದ್ಧಿಯನ್ನು ನೀಡುತ್ತಾನೆ. ಆದ್ದರಿಂದ ಭಕ್ತನಿಗೆ ಭಗವಂತನಂತಹ ಸಖ ಸಿಕ್ಕಿದ ಮೇಲೆ ಯಾವ ರೀತಿಯ ಭಯವೂ ಇಲ್ಲ.

## ಆತ್ಮನಿವೇದನ ಭಕ್ತಿ

ಆತ್ಮನಿವೇದನ ಭಕ್ತಿಯಲ್ಲಿ ಭಕ್ತನು ಭಗವಂತನ ಸರ್ವಸ್ವಾಮಿತ್ವ ಅರಿತು ತನ್ನ ಆತ್ಮೋದ್ಧಾರಕ್ಕಾಗಿ ತನ್ನನ್ನು ಸಮರ್ಪಿಸಿಕೊಳ್ಳುತ್ತಾನೆ. ತನ್ನ ದೇಹ, ಮಾತು ಹಾಗೂ ಮನಸ್ಸು ಭಗವಂತನಿಗೆ ಅಧೀನ ಎಂಬ ಅರಿವು ಭಕ್ತನಿಗೆ ಆಗುತ್ತದೆ. ಭಕ್ತನಿಗೆ ತನ್ನದಾದುದು ಏನೂ ಇಲ್ಲವೆಂದು ತಿಳಿಯುತ್ತದೆ. ಭಕ್ತನು ಇಂತಹ ಜ್ಞಾನವನ್ನು ಪಡೆದವನಾಗಿ ಭಗವಂತನ ಮೇಲೆ ಭಾರವನ್ನು ಹಾಕುತ್ತಾನೆ. ಭಕ್ತನು ತನ್ನ ಆತ್ಮ ಅಂದರೆ ಎಲ್ಲವನ್ನೂ ಭಗವಂತನಿಗೆ ಸಮರ್ಪಿಸಿ ಭಗವಂತ ನೀಡಿದುದಕ್ಕೆ ಸಂತೃಪ್ತನಾಗಿ ಭಯವನ್ನು ತೊರೆದು ಆನಂದದಿಂದ ಜೀವನ ನಡೆಸುತ್ತಾನೆ. ಶ್ರೀ ಪುರಂದರದಾಸರು ಕೆಳಗಿನ ಈ ಕೃತಿಯಲ್ಲಿ ಆತ್ಮನಿವೇದನ ಭಕ್ತಿಯು ಹೇಗೆ ಹೊರಬರುತ್ತದೆ ಎಂದು ಸುಂದರವಾಗಿ ಹೇಳಿದ್ದಾರೆ.

**ಮಾತಾಪಿತರು ನಿನಗೆಂದೇ ಮಾರಿದರೆನ್ನ ನೀತವೇ ನೀನೆನ್ನ ಸಲಹದಿದ್ದರೆ ದೇವ**
**ಯಾತಕ್ಕೆ ಭಕ್ತವತ್ಸಲನೆಂದೆನಿಸಿದಿ ನಾ ತಡವುವನಲ್ಲ ನಿನ್ನ ಬಿರುದಿಗಂಜುವವನಲ್ಲ**
**ಸಾತ್ವಿಕ ದೈವವೆಂದೆನಿಸು ನೀ ಸಲಹಬೇಕಯ್ಯ ವಿಖ್ಯಾತ ಮೂರುತಿ ಪುರಂದರವಿಠಲ**

ಈ ಕೃತಿಯಲ್ಲಿ ದಾಸರು ಭಕ್ತನ ಆತ್ಮಸಮರ್ಪಣೆಯನ್ನು ಚೆನ್ನಾಗಿ ಹೇಳಿದ್ದಾರೆ. ಯಾವಾಗ ಭಕ್ತನು ಭಗವಂತನಿಗೆ ಮಾರಲ್ಪಟ್ಟನೋ ಆಗಲೇ ಭಕ್ತನಿಗೆ ಎಲ್ಲವನ್ನೂ ಭಗವಂತನಿಂದಲೇ ಅನುಗ್ರಹವಾಗಿ ಪಡೆಯಬೇಕು ಎಂಬ ಅರಿವು ಉಂಟಾಗುತ್ತದೆ. ಭಕ್ತವತ್ಸಲನೆಂಬ ಬಿರುದನ್ನು ಪಡೆದ ಭಗವಂತನು ಭಕ್ತನನ್ನು ಸಲಹಬೇಕು. ಭಕ್ತನು ಭಗವಂತನನ್ನು ಸಾತ್ವಿಕತೆ ಎಂದರೆ ಕರುಣಾದೃಷ್ಟಿಯ ಮೂಲಕ ಸಲಹಬೇಕೆಂದು ಕಳಕಳಿಯಿಂದ ಕೋರುತ್ತಾನೆ. ಆತ್ಮ ನಿವೇದನ ಮಾಡಿ ಭಕ್ತನು ತನ್ನತನವನ್ನು ಭಗವಂತನಿಗೆ ಅರ್ಪಿಸುತ್ತಾನೆ.

## ಸಾರಾಂಶ

ಭಗವತ್ಸಾಕ್ಷಾತ್ಕಾರಕ್ಕೆ ಅನೇಕ ಮಾರ್ಗಗಳುಂಟು. ಈ ಮಾರ್ಗಗಳಲ್ಲಿ ಭಕ್ತಿ ಮಾರ್ಗವು ಬಹುತೇಕ ಸಾಧಕರಿಂದ ಅನುಸರಿಸಲು ಸಾಧ್ಯ. ಏಕೆಂದರೆ ಮನುಷ್ಯನು ಭಾವಜೀವಿ. ಅಂತೆಯೇ ಭಕ್ತಿಯ ವಿವಿಧ ಪ್ರಕಾರಗಳ ಮೂಲಕ ಸಾಧನೆ ಮಾಡಿ ಭಕ್ತರು ಎಲ್ಲೆಡೆಯಿರುವ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಆ ಆನಂದವನ್ನು ತಮ್ಮ ಕೃತಿಗಳಲ್ಲಿ ಹೊರ ತಂದಿದ್ದಾರೆ. ಅಂತಹ ಭಕ್ತ ವರ್ಗದಲ್ಲಿ ಹರಿದಾಸರ ಕೊಡುಗೆ ಅಪಾರವಾದುದು. ಇದರಿಂದ ನಮಗೆ ತಿಳಿಯುವುದೇನೆಂದರೆ ಅತಿ ಪ್ರಾಚೀನವಾದ ವೇದ ಸಾಹಿತ್ಯದ ಋಷಿಗಳ ಕಾಲದಿಂದ ಹಿಡಿದು ಇತ್ತೀಚಿನ ಶಿವಶರಣರ ಹಾಗೂ ಹರಿದಾಸರ ಕಾಲವನ್ನೂ ಸೇರಿಕೊಂಡು ಸಮಕಾಲೀನ ಸಾಹಿತ್ಯದಲ್ಲಿಯೂ ಭಕ್ತಿ ಸಾಹಿತ್ಯ ಅಪಾರವಾಗಿದೆ.

ಭಾರತೀಯ ಸಂಸ್ಕೃತಿಯ ಬೆನ್ನೆಲುಬಾದ ಹಬ್ಬಗಳನ್ನು ಮತ್ತು ಹರಿದಿನಗಳನ್ನು ಮನೆಗಳಲ್ಲಿ ಹಾಗೂ ದೇವಾಲಯಗಳಲ್ಲಿ ಆಚರಿಸುವಾಗ ಭಕ್ತಿಯು ಹಾಸುಹೊಕ್ಕಾಗಿರುತ್ತದೆ. ಹಾಗೆಯೇ ಸಾಂಸ್ಕೃತಿಕ ಕಾರ್ಯಕ್ರಮಗಳಾದ ಸಂಗೀತ ಮತ್ತು ನೃತ್ಯಗಳಲ್ಲಿಯೂ ಭಕ್ತಿ ಸಾಹಿತ್ಯವು ಹೊರಬರುತ್ತದೆ. ಪ್ರಾತಃಸ್ಮರಣೀಯರಾದ ಶ್ರೀ ಪುರಂದರದಾಸರ ಸುಂದರವಾದ ಕೃತಿಗಳಲ್ಲಿ ನವವಿಧ ಭಕ್ತಿಯನ್ನು ಸಾಧಕ ಭಕ್ತರು ಸದಾ ಕಾಲವೂ ಅರಿತು ಆನಂದವನ್ನು ಅನುಭವಿಸುತ್ತಾರೆ. ಹಾಗೆಯೇ ಹರಿದಾಸರಾಗಿ ಸಿದ್ಧಿ ಪಡೆದ ಶ್ರೀ ಪುರಂದರದಾಸರ ಅನುಗ್ರಹದಿಂದ ಭಕ್ತರೆಲ್ಲರೂ ಅಧ್ಯಾತ್ಮ ಮಾರ್ಗದಲ್ಲಿ ಪರಮ ಭಕ್ತಿಯನ್ನು ಸಾಧಿಸಿ ಪರಮಾತ್ಮ ಸಾಕ್ಷಾತ್ಕಾರ ಸಿದ್ಧಿಯನ್ನು ಪಡೆಯುವಂತಾಗಲಿ ಎಂದು ಪ್ರಾರ್ಥಿಸೋಣ.

## ಗ್ರಂಥಸೂಚಿ


೧. ಭಕ್ತಿರತ್ನಾವಳಿ (ಸಂಸ್ಕೃತದಲ್ಲಿ)–ಲೇಖಕ: ವಿಷ್ಣುಪುರಿ, ಆಂಗ್ಲಾನುವಾದ: ಶ್ರೀ ತಪಸ್ಯಾನಂದ. ಶ್ರೀ ರಾಮಕೃಷ್ಣ ಮಠ, ಮದ್ರಾಸು, ೧೯೭೯.

೨. ಪುರಂದರದಾಸರ ಹಾಗೂ ತ್ಯಾಗರಾಜರ ಕೃತಿಗಳ ಅಧ್ಯಯನ (ಆಂಗ್ಲ ಭಾಷೆಯಲ್ಲಿ) ಶ್ರೀಮತಿ ಸೀತಾಲಕ್ಷ್ಮಿ, ವೇದಶ್ರುತಿ ಪ್ರಕಾಶನ, ಬೆಂಗಳೂರು, ೧೯೯೪.

೩. ಹರಿದಾಸರ ಹತ್ತು ಸಾವಿರ ಹಾಡುಗಳು (ಕನ್ನಡದಲ್ಲಿ)–ಸಂಪಾದಕ: ಅರಳುಮಲ್ಲಿಗೆ ಪಾರ್ಥಸಾರಥಿ ಮತ್ತು ಉಪಸಂಪಾದಕ: ಹ. ವಾ. ನಾಗರಾಜಾಚಾರ್ಯ. ಹರಿದಾಸ ಸಂಘ ಪ್ರಕಾಶನ, ಬೆಂಗಳೂರು, ೨೦೧೩.

೪. ಭಾರತೀಯರ ಹಬ್ಬ ಹರಿದಿನಗಳು (ಕನ್ನಡದಲ್ಲಿ)–ಶ್ರೀ ರಂಗಪ್ರಿಯ ಸ್ವಾಮಿಗಳು, ಅಷ್ಟಾಂಗ ಯೋಗ ವಿಜ್ಞಾನ ಮಂದಿರ, ಬೆಂಗಳೂರು, ೨೦೦೬.

೫. ಪುರಂದರೋಪನಿಷತ್ (ಕನ್ನಡದಲ್ಲಿ)–ಶ್ರೀ ಭದ್ರಗಿರಿ ಕೇಶವದಾಸ, ಸಂಪಾದಕ: ಬಿ. ಕೆ. ನಾಗೇಂದ್ರ, ಕೇಶವದಾಸ ಬುಕ್ ಟ್ರಸ್ಟ್, ಬೆಂಗಳೂರು, ೨೦೧೨.




# ಸಮಾಜ ಸುಧಾರಣೆಗೆ ವಚನ ಸಾಹಿತ್ಯದ ಕೊಡುಗೆ

**–ರವಿ ಗೋಪಾಲ್ ರಾವ್**

"**ಸ**ಮಾಜ ಸುಧಾರಣೆಗೆ ವಚನ ಸಾಹಿತ್ಯದ ಕೊಡುಗೆ" ಎಂದಾಕ್ಷಣ ಮನಸ್ಸಿನಲ್ಲಿ ಬರುವ ಮೂಲಭೂತ ಪ್ರಶ್ನೆ: ಸಾಹಿತ್ಯದಿಂದ ಸಮಾಜ ಸುಧಾರಣೆ ಆಗಲು ಸಾಧ್ಯವೇ ಎಂದು.

ವಚನ ಸಾಹಿತ್ಯವನ್ನು ಉದಾಹರಣೆಯಾಗಿರಿಸಿಕೊಂಡು ಈ ಪ್ರಶ್ನೆಗೆ ಉತ್ತರ ಹುಡುಕಲು ಹೊರಟ ಒಂದು ಲಘು ಲೇಖನ ಇದು. ಈ ಲಘು ಲೇಖನದ ವಸ್ತು ಮೇರೆಯಿಲ್ಲದ ವಿಚಾರವೆನಿಸಿದರೂ, ಪರಿಮಿತಿಯ ಚೌಕಟ್ಟಿನೊಳಗೆ ಕೆಲವು ಮುಖ್ಯವಾದ ವಿಷಯಗಳನ್ನು ಮಾತ್ರ ವಿಂಗಡಿಸಿಕೊಂಡು ನಿಮ್ಮ ಮುಂದಿಡುವ ಪ್ರಯತ್ನ ಮಾಡಿದ್ದೇನೆ.

**೧. ಕನ್ನಡ ಸಾಹಿತ್ಯದಲ್ಲಿ ವಚನದ ಸ್ಥಾನ:** ಕನ್ನಡ ಸಾಹಿತ್ಯ ಚರಿತ್ರೆಯನ್ನು ಶಾಸನಗಳಿಂದ ಪ್ರಾರಂಭಿಸಿ ನವ್ಯದವರೆಗೂ ಕೂಲಂಕಷವಾಗಿ ಗುರುತಿಸಿ ಅದರೊಳಗೆ ವಚನದ ಸ್ಥಾನವನ್ನು ವಿವರಿಸುವ ಉದ್ದೇಶ ನನ್ನದಲ್ಲ. ವಚನ ಒಂದು ಸುವ್ಯಕ್ತ ಮತ್ತು ಅಸಾಧಾರಣ ಸಾಹಿತ್ಯಕ ಶೈಲಿಯಲ್ಲಿ ವಿನ್ಯಾಸಗೊಂಡ ಕಾರಣಗಳನ್ನು ಈಗಾಗಲೇ ಹಲವಾರು ವಿದ್ವಾಂಸರು ವಿವರಿಸಿದ್ದಾರೆ. ಆದರೂ ವಚನ ಸಾಹಿತ್ಯದ ಜನನ, ಅದರ ಪ್ರಭಾವ, ಅದರ ಒಂದು ಪರಿಪೂರ್ಣತೆಯನ್ನು ತಿಳಿದುಕೊಳ್ಳಲು ನಾವು ಹನ್ನೆರಡನೇ ಶತಮಾನದ ಹಿನ್ನೆಲೆಗೆ ಹೋಗಬೇಕು. ಈ ಹಿನ್ನೆಲೆ ಬರಿ ಸಾಹಿತ್ಯಕ ದೃಷ್ಟಿಯಿಂದ ತಿಳಿದುಕೊಂಡರೆ ಸಾಲದು ಎಂದು ನನ್ನ ಅನಿಸಿಕೆ. ಒಂದು ಹೊಸ ಸಾಹಿತ್ಯದ ರೂಪಕ ಜನಿಸಲು ಬೇರೆ ಬೇರೆ ಕಾರಣಗಳಿರುತ್ತವೆ. ಸಾಮಾಜಿಕ, ಆರ್ಥಿಕ, ರಾಜಕೀಯ, ಭೌಗೋಳಿಕ, ಚಾರಿತ್ರಿಕ ಮತ್ತು ಧಾರ್ಮಿಕ ಹಿನ್ನೆಲೆಗಳನ್ನು ಅರ್ಥ ಮಾಡಿಕೊಂಡರೆ ನಮಗೆ ವಚನ ಸಾಹಿತ್ಯದ ಮೂಲವನ್ನು ತಿಳಿದುಕೊಳ್ಳಲು ಸಹಾಯವಾಗುತ್ತದೆ. ನಿಮ್ಮ ಮನಸ್ಸನ್ನು ಆಧುನಿಕತೆಯಿಂದ ದೂರ ಮಾಡಿ ಹನ್ನೆರಡನೇ ಶತಮಾನದ ಒಬ್ಬ ಸಾಮಾನ್ಯ ಪ್ರಜೆಯಂತೆ ಕಲ್ಯಾಣ ಎಂಬ ನಗರಕ್ಕೆ ತಲುಪಿದಾಗ ವಚನಗಳ ಜನನ, ಆಕರ್ಷಣೆ ಮತ್ತು ಮೌಲ್ಯಗಳನ್ನು ಅರಿಯಲು ನೆರವಾಗಬಹುದು.

ಈ ಹಿನ್ನೆಲೆಗೆ ಸಂಬಂಧಪಟ್ಟಂತೆ ಕೆಳಕಂಡ ಕೆಲವು ವಿವರಗಳನ್ನು ಪರಿಶೀಲಿಸೋಣ.

೧.೧. **ಭೌಗೋಳಿಕ ಹಿನ್ನೆಲೆ:** ವಚನ ಸಾಹಿತ್ಯ ರೂಪಗೊಂಡದ್ದು ಕರ್ನಾಟಕದ ಈಗಿನ ಬಿಜಾಪುರ ಜಿಲ್ಲೆಯಲ್ಲಿ. ಇದೊಂದು ಅಷ್ಟೇನೂ ಶ್ರೀಮಂತಿಕೆಯಿಂದ ತುಳುಕುವ ಗಿರಿ ವನಗಳಿಂದ ಕೂಡಿದ ಪ್ರದೇಶವಲ್ಲ. ಆದರೆ ಮಹಾರಾಷ್ಟ್ರ, ಕರ್ನಾಟಕ ಮತ್ತು ತೆಲಂಗಾಣ ಸರಹದ್ದಿನ ವಾಣಿಜ್ಯ ಕೇಂದ್ರವಾಗಿ ಪ್ರಸಿದ್ಧಿ ಪಡೆದ ಜಾಗ. ಈ ಪ್ರದೇಶದಲ್ಲಿ ನೆಲೆಯೂರಿದ ಕಳಚೂರ್ಯ ಮನೆತನದ ರಾಜರು ಮತ್ತು ಸಾಮಂತರಿಗೆ ಸೇರಿದ ಕಲ್ಯಾಣವೆಂಬ ಸಣ್ಣ ಊರು ವಚನ ಸಾಹಿತ್ಯಕ್ಕೆ ಅಡಿಪಾಯ ಹಾಕಲು ಅಣಿಮಾಡಿಕೊಟ್ಟಿತು. ತೆಲಗು, ಕನ್ನಡ ಮತ್ತು ಮರಾಠಿ ಭಾಷೆಗಳ ಪ್ರಭಾವದಿಂದ ಈ ಪ್ರಾಂತ್ಯ ಒಂದು ವಿಭಿನ್ನತೆ ಪಡೆದಿತ್ತು.

೧.೨. **ಚಾರಿತ್ರಿಕ ಹಿನ್ನೆಲೆ:** ಹನ್ನೆರಡನೇ ಶತಮಾನದ ಪ್ರಾರಂಭ ಕಾಲದ ಅತಿಮುಖ್ಯ ಸಂಗತಿಗಳಲ್ಲಿ ಗಮನಿಸಬೇಕಾದ ಒಂದು ಹಿನ್ನೆಲೆಯೆಂದರೆ ಆಗಿನ ಭರತಖಂಡದಲ್ಲಿ ಜೈನ ಧರ್ಮ ಹಲವಾರು ಕಾರಣಗಳಿಂದ ಎಲ್ಲೆಡೆ ಕ್ಷೀಣಿಸುತ್ತಾ ಬಂದಿತ್ತು. ಆದರೆ ಕರ್ನಾಟಕದಲ್ಲಿ ಜೈನ ಮತ ನೂರಾರು ವರ್ಷಗಳಿಂದಲೂ ಅಭಿವೃದ್ಧಿ ಹೊಂದಿ ಕಲೆ ಮತ್ತು ಸಂಸ್ಕೃತಿಯ ಕೇಂದ್ರವಾಗಿತ್ತು. ಜೈನ ರಾಜರ ದಕ್ಷ ಆಡಳಿತದಿಂದ ಅಲ್ಲಲ್ಲಿ ಹಿಂದೂ, ಜೈನ ಹಾಗೂ ಬೌದ್ಧ ಮತಗಳು ಶಾಂತಿಯಿಂದ ಒಟ್ಟಾಗಿದ್ದ ಕಾಲವೆನ್ನಬಹುದು. ಜೈನ ಧರ್ಮ ಎಲ್ಲ ರೀತಿಯಲ್ಲೂ ಜನರ ಮೇಲೆ ಪ್ರಭಾವ ಬೀರಿದ್ದ ಕಾಲವದು. ನಿಕಟದಲ್ಲೇ ಎನ್ನುವಂತೆ ಒಂಬತ್ತು ಮತ್ತು ಹತ್ತನೇ ಶತಮಾನದ ಆದಿಯಲ್ಲಿ ಶಂಕರಾಚಾರ್ಯರು ಸ್ಥಾಪಿಸಿದ ಅದ್ವೈತ ತತ್ವ ಎಲ್ಲೆಡೆ ಮನ್ನಣೆ ಪಡೆದು ಶೈವ ಪಂಗಡದ ಅನುಯಾಯಿಗಳು ಮಠ ಮಂದಿರಗಳನ್ನು ನಿರ್ಮಿಸಿದ್ದರು. ಅದೇ ರೀತಿ ರಾಮಾನುಜರು ತಮಿಳುನಾಡು ಮತ್ತು ಪೂರ್ವ ಕರ್ನಾಟಕದಲ್ಲಿ ಭಕ್ತಿ ಮಾರ್ಗದ ಪ್ರಸಾರಣೆ ಮಾಡಿ ವೈಷ್ಣವ ಪಂಗಡಕ್ಕೆ ಅನುವು ಮಾಡಿಕೊಟ್ಟಿದ್ದ ಕಾಲವದು. ಕಳಚೂರ್ಯರ ಆಳ್ವಿಕೆ ಪ್ರಾರಂಭವಾದದ್ದು ಕ್ರಿ.ಶ. ೧೧೬೨ರಲ್ಲಿ. ಬಿಜ್ಜಳ ರಾಜ ಕಳಚೂರ್ಯರಲ್ಲಿ ಪ್ರಮುಖನಾದರೂ ಅನೇಕ ಸಾಮಂತ ರಾಜರುಗಳು ಸಣ್ಣ ಪುಟ್ಟ ಪ್ರಾಂತ್ಯಗಳಿಗೆ ಒಡೆಯರಾಗಿದ್ದರು. ಬಿಜ್ಜಳನ ಆಳ್ವಿಕೆ ವಿಸ್ತೀರ್ಣದಲ್ಲಿ ಚಿಕ್ಕದಾದರೂ ಅವನೊಬ್ಬ ದಕ್ಷ ಆಡಳಿತಗಾರನಾಗಿದ್ದ. ಕಲ್ಯಾಣ ನಗರವನ್ನು ವಾಣಿಜ್ಯ ಕೇಂದ್ರ ಮಾಡಲು ಬಿಜ್ಜಳ ಶ್ರಮ ಪಟ್ಟನಾದರೂ ಅದೇ ಸಮಯದಲ್ಲಿ ಉತ್ತರದಿಂದ ಮುಸ್ಲಿಂ ಬಾದಷಾಹಿಗಳ ಆಕ್ರಮಣ ಕಡಿಮೆಯಾದ್ದರಿಂದ ಪ್ರಜೆಗಳಿಗೆ ಒಂದು ರೀತಿ ನೆಮ್ಮದಿ ದೊರಕಿತ್ತು.

೧.೩. **ಧಾರ್ಮಿಕ ಹಿನ್ನೆಲೆ:** ಈ ಮೊದಲೇ ವಿವರಿಸಿದಂತೆ ಕರ್ನಾಟಕದಲ್ಲಿ ಹನ್ನೆರಡನೇ ಶತಮಾನದ ಮಧ್ಯದವರೆಗೂ ಜೈನ ಧರ್ಮ ಎಲ್ಲಡೆ ಹರಡಿತ್ತು. ಜೈನಧರ್ಮ ಜಾತಿ ಭೇದವನ್ನಾಗಲಿ, ವಿಗ್ರಹ ಪೂಜೆಯನ್ನಾಗಲಿ ಅಥವಾ ಆಹುತಿಯನ್ನಾಗಲಿ

ಗುರುತಿಸುವುದಿಲ್ಲ. ಅಹಿಂಸೆಯಲ್ಲಿ ದೃಢನಂಬಿಕೆ ಮತ್ತು ಶಾಖಾಹಾರ ಪದ್ಧತಿಯನ್ನು ಪರಿಪಾಲಿಸುವ ಜೈನ ಅನುಯಾಯಿಗಳು ಶಾಂತಿಯಿಂದ ಧರ್ಮ ಪಾಲನೆಯಲ್ಲಿ ತೊಡಗಿದ್ದರು. ಜೈನ ಧರ್ಮ ಸಂಖ್ಯಾಬಲ ಕಳೆದುಕೊಂಡಿತ್ತಾದರೂ ಅಂತರ್ಮತೀಯ ವಿವಾಹಕ್ಕೆ ಮನ್ನಣೆಯಿರಲಿಲ್ಲ. ನಿರಾಶಾವಾದಿ ಮತ್ತು ನಿಷ್ಕೃಷ್ಟವಾದ ಕಟ್ಟುನಿಟ್ಟಿನ ಜೀವನ ಪಥದಲ್ಲಿ ಸಾಕಷ್ಟು ಸ್ವಾತಂತ್ರ್ಯ ಬಳಸಲು ಕೋರಿಕೆ ಕೇಳಿಬರುತ್ತಿತ್ತು. ಅದೇ ಸಮಯದಲ್ಲಿ ವೇದ ಮತ್ತು ವೇದ ನೀತಿ ನಿಯಮಗಳನ್ನು ಪರಿಪಾಲಿಸುವ ಹಿಂದೂ ಧರ್ಮ ಪುನಶ್ಚೇತನಗೊಂಡಿದ್ದರೂ – ಮೂಢನಂಬಿಕೆ, ಕುಲಭೇದ, ಯಜ್ಞಾಹುತಿಯ ನಿಯಮಗಳು, ಅರ್ಥವಾಗದ ಸಂಸ್ಕೃತ ಭಾಷೆಯ ಬಳಕೆ– ಹೀಗೆ ಎಲ್ಲ ಧಾರ್ಮಿಕ ನಿಯಮಗಳನ್ನು ಜನಸಾಮಾನ್ಯರು ಪ್ರಶ್ನಿಸಲು ಪ್ರಾರಂಭ ಮಾಡಿದ ಕಾಲ ಎನ್ನಬಹುದು. ಒಟ್ಟಿನಲ್ಲಿ ಹೇಳುವುದಾದರೆ ಎಲ್ಲ ಧರ್ಮಗಳಿಗೂ ನಿರಂತರ ಪರಿವರ್ತನೆ ಮತ್ತು ತತ್ವಚಿಂತನೆಗೆ ಸದವಕಾಶ ದೊರೆತ ಸಮಯ ಹನ್ನೆರಡನೆಯ ಶತಮಾನ.

**೧.೪. ಸಾಮಾಜಿಕ ಹಿನ್ನೆಲೆ:** ಹಿಂದೂ ಧರ್ಮದ ವರ್ಣಾಶ್ರಮಕ್ಕೆ ವ್ಯತಿರಿಕ್ತವಾಗಿ ಜೈನ ಧರ್ಮ ಸರಿಸಮಾನತೆಯನ್ನು ಬಹಿರಂಗವಾಗಿ ರೂಢಿಸಿಕೊಂಡಿತ್ತು. ಅಕ್ಷರಸ್ಥ ಮತ್ತು ಅನಕ್ಷರಸ್ಥರ ನಂಬಿಕೆಗಳಲ್ಲಿ ವ್ಯತ್ಯಾಸಗಳು ಕಾಣುತ್ತಿದ್ದವು. ಅಮೂರ್ತ ನಂಬಿಕೆ ಒಂದಾದರೆ ಮತ್ತೊಂದು ಒಕ್ಕೂಟದ ಗ್ರಹಿಕೆಯನ್ನು ಆಧರಿಸಿ ಮಾಡಿಕೊಂಡ ನಿಬಂಧನೆ ಎನ್ನಬಹುದು. ಇಂತಹ ನಿಬಂಧನೆಗಳಿಗೆ ಹೆಚ್ಚು ವಿವರಣೆಯ ಅಗತ್ಯವಿರಲಿಲ್ಲ. ದೇವರನ್ನು ಮೂರ್ತಿ ಹಾಗು ಪ್ರತೀಕಗಳ ರೂಪದಲ್ಲಿ ಆರಾಧಿಸುತ್ತಿದ್ದರು. ಹಿಂದೂ, ಮುಸ್ಲಿಂ, ಜೈನ ಮತ್ತು ಬೌದ್ಧ ಮತಗಳ ಸಂಗಮ ಆಗಿನ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯಲ್ಲಿ ಬದಲಾವಣೆಗಳನ್ನು ತರುವ ಮುನ್ಸೂಚನೆ ಕಂಡುಬರುತ್ತಿತ್ತು. ಪ್ರಜೆಗಳಲ್ಲಿ ಇದ್ದವರು ಮತ್ತು ಇಲ್ಲದವರು ಎಂಬ ಎರಡು ಆರ್ಥಿಕ ಗುಂಪುಗಳು ಸ್ಫುಟವಾಗಿದ್ದವು. ಜೊತೆಗೆ ಜೈನರಂತೆ ಕಳಚೂರ್ಯರು ಕೂಡ ತೆರಿಗೆ ಪದ್ಧತಿಯನ್ನು ತಮ್ಮ ಆಡಳಿತದ ಪ್ರಾಧಾನ್ಯ ವ್ಯವಹಾರವಾಗಿ ಮಾಡಿಕೊಂಡಿದ್ದರು.

**೧.೫. ಸಾಹಿತ್ಯಕ ಹಿನ್ನೆಲೆ:** ಜೈನ ಧರ್ಮ ಆಧಾರಿತವಾದ ಸಾಕಷ್ಟು ಗ್ರಂಥಗಳು, ಕಾವ್ಯಗಳು ಮತ್ತು ಆಗಮಗಳು ಸಾಹಿತ್ಯ ರೂಪದಲ್ಲಿ ಪ್ರಚಲಿತದಲ್ಲಿದ್ದವು. ಇವುಗಳಲ್ಲಿ ನಾವು ಅಂದಿನ ಜನರ ಭಾವುಕತೆ, ಧಾರ್ಮಿಕ ಸಂಪ್ರದಾಯ, ನೀತಿನಿಯಮ, ಸಾಂಸ್ಕೃತಿಕ ಸಂಗತಿಗಳನ್ನು ಓದಿ ಒಂದು ನಿರ್ದಿಷ್ಟ ಅಭಿಮತಕ್ಕೆ ಬರಬಹುದು. ಅದೇ ಶತಮಾನದಲ್ಲಿ ಬರೆದ ಕೇಶಿರಾಜನ "ಶಬ್ದಮಣಿದರ್ಪಣಂ" ಕನ್ನಡ ವ್ಯಾಕರಣದ ಗ್ರಂಥ, ನಯನಸೇನ ಬರೆದ "ಧರ್ಮಾಮೃತ" ನೈತಿಕತೆ ಮತ್ತು ಜೈನರ ನಂಬಿಕೆಗಳ ಬಗ್ಗೆ ಗಾದೆಗಳನ್ನು ಉಪಯೋಗಿಸಿಕೊಂಡು ಬರೆದ ಪದ್ಯಗಳು, ಆಂಡಯ್ಯ ಬರೆದ "ಕಬ್ಬಿಗರ ಕಾವ್ಯ" ಮತ್ತು ಬ್ರಹ್ಮಶಿವ ಬರೆದ "ಸಮಯ ಪರೀಕ್ಷೆ" ಮತ್ತಿತರ ಪುಸ್ತಕಗಳನ್ನು ಇಲ್ಲಿ

ಉದಾಹರಿಸಬಹುದು. ಈ "ಸಮಯ ಪರೀಕ್ಷೆ" ಆಗಿನ ಮತಗಳ ಒಂದು ವಿಶ್ಲೇಷಣೆ. ಒಂದು ಮತದ ಹೆಗ್ಗಳಿಕೆಯನ್ನು ಮತ್ತೊಂದು ಮತಕ್ಕೆ ಹೋಲಿಸಿ ಬೇರೆಯವರನ್ನು ಅಲ್ಲಗೆಳೆವ ಮೊದಲ ಪ್ರಯತ್ನ ಇದೆನ್ನಬಹುದು.

ಈ ಸಾಹಿತ್ಯ ಕಿರುಪರಿಚಯದಿಂದ ನಾವು ಗಮನಿಸಬೇಕಾದ ಒಂದು ವಿಷಯವೆಂದರೆ ಈ ಎಲ್ಲ ಸಾಹಿತ್ಯಗಳು ಒಂದು ರೀತಿಯಲ್ಲಿ ಜನಸಾಮಾನ್ಯರಿಗೆ ತಿಳಿ ಹೇಳುವ ಅಥವಾ ಕ್ಲಿಷ್ಟವಾದ ವಿಷಯಗಳನ್ನು ಬಿಡಿಸಿ ಹೇಳುವ ಶೈಲಿ ಆಗಲೇ ಶುರುವಾಗಿದ್ದ ಕಾಲ. ಆದರೆ ಇವೆಲ್ಲ ಸಾಹಿತ್ಯಗಳು ಜೈನರ ಕೊಡುಗೆ. ಅದೇ ರೀತಿ ದ್ವೈತ – ಅದ್ವೈತದಲ್ಲಿ ಬರುವ ತತ್ವಚಿಂತನೆಗಳನ್ನು ಎಲ್ಲ ಪ್ರಾದೇಶಿಕ ಭಾಷೆಗಳು ನಿರಾಡಂಬರ ಮಾಧ್ಯಮದಲ್ಲಿ ಅನುಷ್ಠಾನಗೊಳಿಸಲು ಶುರುಮಾಡಿದ ಕಾಲ. ವೇದ ಮತ್ತು ಉಪನಿಷತ್ತಿನ ಜಟಿಲ ತಾತ್ಪರ್ಯಗಳನ್ನು ಸುಲಭಸಾಧ್ಯವಾದ ಭಾಷೆಯಲ್ಲಿ ವಿವರಿಸಿದ್ದಲ್ಲದೆ ನೃತ್ಯ, ಸಂಗೀತ, ಭೂಮಿಕೆಯ ಮಾಧ್ಯಮದಲ್ಲಿ ಅಳವಡಿಸಿಕೊಂಡ ಉದಾಹರಣೆಗಳು ಸಿಗುತ್ತವೆ. ಆಗಿನ ವಿದ್ವಾಂಸರು ಆತ್ಮಾವಲೋಕನ ಮತ್ತು ಅಧ್ಯಾತ್ಮದ ಬಗ್ಗೆ ಹೆಚ್ಚಾಗಿ ಗಮನ ಕೊಟ್ಟ ಪುರಾವೆಗಳು ಸಿಗುತ್ತವೆ.

ಈ ಮೇಲಿನ ಸಂಕ್ಷೇಪ ಹಿನ್ನೆಲೆಯ ವಿಷಯಗಳನ್ನು ಗಮನಿಸಿದಾಗ ವಚನ ಸಾಹಿತ್ಯ ನಿರ್ವಾತದಲ್ಲಿ ಜನನ ಹೊಂದಲು ಸಾಧ್ಯವಿರಲಿಲ್ಲ ಎಂಬುದು ಅರಿವಾಗುತ್ತದೆ. ಇಂತಹ ಒಂದು ಪ್ರಭಾವಶಾಲಿ ಚಾರಿತ್ರಿಕ ಘಳಿಗೆಯಲ್ಲಿ ಕೆಲವೊಮ್ಮೆ ಜನಸಾಮಾನ್ಯರಲ್ಲೇ ಮುಖಂಡತ್ವವು ಆವಿಷ್ಕರಣ ಹೊಂದಿ ಸಾಹಿತ್ಯದ ಬೆಳವಣಿಗೆ ಆದದ್ದನ್ನು ನಾವು ಕಾಣಬಹುದು. ವಚನ ಸಾಹಿತ್ಯದ ಜನಕರಾದ ಅಲ್ಲಮ ಪ್ರಭು ಮತ್ತು ಬಸವಣ್ಣನವರನ್ನು ನಾವು ಇಲ್ಲಿ ಉದಾಹರಿಸಬಹುದಾದರೂ ಎರಡು ಮುಖ್ಯ ಅಂಶಗಳನ್ನು ಗಮನಿಸಬೇಕು:

೧. ಎಲ್ಲ ಬರಹಗಾರರು, ಸಮಾಜ ಸುಧಾರಕರು, ಚಿಂತಕರೂ ಒಂದಲ್ಲ ಒಂದು ರೀತಿ ಅಧ್ಯಾತ್ಮದ ಮೊರೆ ಹೊಕ್ಕಿದ್ದಾರೆ. ಕೆಲವರು ಮಾತ್ರ ಈ ಸಾಧನೆಯಲ್ಲಿ ಯಶಸ್ಸುಗಳಿಸಿದ್ದಾರೆ.

೨. ಆಧ್ಯಾತ್ಮಿಕ ಸಾಧನೆಯನ್ನು ಬರಿ ಸಾಹಿತ್ಯ ರೂಪದಲ್ಲಿ ಬರೆದು ತೃಪ್ತಿಪಡದೆ, ಅದರ ಫಲವನ್ನು ಜನರಿಗೆ ಹಂಚಿ ಅವರಿಂದಲೇ ಹೊಸ ಸಮಾಜ ಸೃಷ್ಟಿಸುವುದು ಇನ್ನೂ ಕಷ್ಟದ ಕೆಲಸ.

ಹಾಗಾದರೆ ವಚನ ಸಾಹಿತ್ಯ ಈ ಎರಡೂ ದೃಷ್ಟಿಕೋನದಲ್ಲಿ ಸಫಲವಾಯಿತೇ ಇಲ್ಲವೇ ಎಂಬುದನ್ನ ಮುಂದಿನ ಪರಿಚ್ಛೇದದಲ್ಲಿ ಕೂಲಂಕಷವಾಗಿ ಚರ್ಚಿಸುತ್ತೇನೆ.

ಈ ಹಿನ್ನೆಲೆಯ ವಿಷಯಗಳನ್ನು ನಿಮಗೆ ತಿಳಿಸಿದ ಮೇಲೆ ನನ್ನ ಮುಂದಿನ ಕೆಲಸ ಸ್ವಲ್ಪ ಸುಲಭವಾಗುವುದು ಎಂದು ನನ್ನ ನಂಬಿಕೆ. ಹಲವಾರು ವಿದ್ವಾಂಸರು

ಈಗಾಗಲೇ ಮಾಡಿರುವ ವಚನ ಸಾಹಿತ್ಯ ಮತ್ತು ಸಮಾಜ ಸುಧಾರಣೆಯ ವಿಶ್ಲೇಷಣೆಯನ್ನು ನೀವು ಈ ಕೆಳಗಿನ ಒಂದು ಸಾಲಿನಲ್ಲಿ ಅರ್ಥ ಮಾಡಿಕೊಳ್ಳಬಹುದು:

"ಅಂತರಂಗದ ಆಧ್ಯಾತ್ಮಿಕ ಸಾಧನೆಯನ್ನು ಬಹಿರಂಗದ ಸಾಮಾಜಿಕ ಹಿತಕ್ಕಾಗಿ ಅಳವಡಿಸಿಕೊಂಡಂಥ ಒಂದು ಸಾಹಿತ್ಯಕ ರೂಪಕ ವಚನಗಳು."

ವಚನ ಸಾಹಿತ್ಯಕ್ಕೆ ಅಡಿಪಾಯ ಅಂತರಂಗದ ಅಧ್ಯಾತ್ಮ ಅಥವಾ ಅಂತರ್ವಾಣಿ ಎಂದು ವಿದ್ವಾಂಸರ ಅಭಿಮತ. ಸಮಾಜದಲ್ಲಿ ಆಗುತ್ತಿರುವ ವಿಷಮತೆಯನ್ನು ಅನುಭವದಿಂದ ಪರಿಹರಿಸಲು ಪಣತೊಟ್ಟವರೇ ಇರಬಹುದು ಅಥವಾ ಮನ ನೊಂದು ಬೇರೆ ದಾರಿಯನರಸಿದವರಿರಬಹುದು, ದೂರ ದೃಷ್ಟಿಯಿರಬಹುದು ಒಟ್ಟಿನಲ್ಲಿ ಈ ಚಿಂತಕರ ಮಿಡಿತ ವಚನಗಳಿಗೆ ನಾಂದಿ ಆಯಿತು. ಆಧ್ಯಾತ್ಮಿಕ ಸಾಧನೆಗೆ ಕಾರಣಕರ್ತರಾದ ಬಸವಣ್ಣ, ಅಲ್ಲಮ ಪ್ರಭು, ಅಕ್ಕಮಹಾದೇವಿ, ಜೇಡರ ದಾಸಿಮಯ್ಯ ಮತ್ತಿತರ ವಚನಕಾರರನ್ನು ನಾವು ಮುಖ್ಯ ಸೂತ್ರಧಾರಿಗಳೆಂದು ಪರಿಗಣಿಸಿ ಅವರ ತತ್ವ ಸಿದ್ಧಾಂತದ ಬಗ್ಗೆ ಸ್ವಲ್ಪ ಗಮನ ಹರಿಸೋಣ. ಮೊದಲಿಗೆ ಈ ಅಂತರಂಗದ ಆಧ್ಯಾತ್ಮಿಕ ಸಾಧನೆಯ ಗುರಿ ಮುಟ್ಟಲು ವಚನಕಾರರು ಯಾವ ಮಾಧ್ಯಮಗಳನ್ನು ಬಳಸಿದರು ಎಂದು ಪರಿಶೀಲಿಸೋಣ. ಈ ದಿಶೆಯಲ್ಲಿ ನಾವು ನಾಲ್ಕು ಮಾಧ್ಯಮಗಳನ್ನು ಗುರುತಿಸಬಹುದು: ಶೂನ್ಯ ಸಂಪಾದನೆ, ಆಗಮಗಳ ಅಳವಡಿಕೆ, ಅನುಭವ ಮಂಟಪ ಸ್ಥಾಪನೆ ಮತ್ತು ವೀರಶೈವ ಮತ ಸ್ಥಾಪನೆ.

## ೨.೦. ಆಧ್ಯಾತ್ಮಿಕ ಸಾಧನೆಯ ಮಾಧ್ಯಮಗಳು

**೨.೧ ಶೂನ್ಯ ಸಂಪಾದನೆ:** ತತ್ವ ಸಿದ್ಧಾಂತ ಅಥವಾ ಜ್ಞಾನ ರಹಸ್ಯವನ್ನು ಅನ್ವೇಷಿಸಿ ಅಲ್ಲಮ ಪ್ರಭುಗಳು ಬರೆದ "ಮಂತ್ರ ಗೋಪ್ಯ," ಚೆನ್ನ ಬಸವಣ್ಣ ಬರೆದ "ಕರುಣ ಹಸುಗೆ," ಮತ್ತು ಎಲ್ಲ ಶರಣರು ಸೇರಿ ಬರೆದ "ಶೂನ್ಯ ಸಂಪಾದನೆ"ಗಳಲ್ಲಿ ನಾವು ಆತ್ಮಾವಲೋಕನದ ಪರಾಕಾಷ್ಠತೆಯನ್ನು ಕಾಣಬಹುದು. ಈ ಶೂನ್ಯ ಸಂಪಾದನೆಯಲ್ಲಿ ಅಡಕವಾಗಿರುವ ತತ್ವ ವಚನದ ತಳಪಾಯ. ಶೂನ್ಯ ಎಂದರೇನು ಎಂಬುದನ್ನು ಅಲ್ಲಮ ಪ್ರಭು ಬಹಳ ಸುಂದರವಾಗಿ ಈ ರೀತಿ ವರ್ಣಿಸಿದ್ದಾರೆ:

**ಅನಂತಕೋಟಿ ಬ್ರಹ್ಮಾಂಡಗಳ ಮೆಟ್ಟಿ**
**ಕಾಯದ ಕಣ್ಣು ಮುಚ್ಚಿ ಜ್ಞಾನದ ಕಣ್ ತೆರದು ನೋಡಲ್ಕೆ**
**ಅಲ್ಲಿ ಒಂದು ನಿರಾಕಾರವುಂಟು**
**ಆ ನಿರಾಕಾರದಲ್ಲಿ ನಿಂದು ನಿರ್ಣಯಿಸಿ ನೋಡಲ್ಕೆ**

ಅಲ್ಲಿ ಒಂದು ನಿಶ್ಶೂನ್ಯವುಂಟು
ಆ ನಿಶ್ಶೂನ್ಯದಲಿ ನಿಂದು ನಿಶ್ಚೈಸಿ ನೋಡಲ್ಕೆ
ಕತ್ತಲೆಯಲ್ಲ ಬೆಳಗಲ್ಲ, ಬಚ್ಚಬರಿಯ ಬಯಲು ಗುಹೇಶ್ವರಾ!

–ಅಲ್ಲಮಪ್ರಭು

ಇಂತಹ ಒಂದು ಮೂಲಭೂತ ತತ್ತ್ವಚಿಂತನೆಯ ಹಿಂದೆ ವೇದ ಮತ್ತು ಉಪನಿಷತ್ತುಗಳ ಪ್ರಭಾವ ಎದ್ದು ಕಾಣುತ್ತದೆ. ವೇದಗಳಲ್ಲಿ ಬರುವ ಪೂರ್ಣ ಎಂಬುದಕ್ಕೆ ಸಮನಾದ ಪದ ಈ ಶೂನ್ಯ. ಮೊದಲೇ ಹೇಳಿದಂತೆ ಸಂಸ್ಕೃತದ ಕ್ಲಿಷ್ಟ ತತ್ವಗಳನ್ನು ಮತ್ತು ಜ್ಞಾನದ ರಹಸ್ಯವನ್ನು ಬಿಡಿಸಿ ಜನಸಾಮಾನ್ಯರಿಗೆ ಹೇಳಿದ ರೀತಿಯನ್ನು ನಾವು ಈ ಶೂನ್ಯ ಸಂಪಾದನೆಯಲ್ಲಿ ನೋಡಬಹುದು. ಈ ಶೂನ್ಯವನ್ನು ಸಂಪಾದನೆ ಅಥವಾ ಪಡೆಯುವುದೇ ಮನುಷ್ಯನ ಉದ್ದೇಶವಾಗಿರಬೇಕೆಂದು ತಿಳಿ ಹೇಳಿದ ವಚನ ಇದು. ಜ್ಞಾನಾರ್ಜನೆಗೆ ಬೇರೆ ಬೇರೆ ಮಾರ್ಗಗಳು ಇರಲು ಸಾಧ್ಯ ಎನ್ನುವುದನ್ನು ಅಲ್ಲಮ ಪ್ರಭು ಮತ್ತು ಇತರ ವಚನಕಾರರು ತೋರಿಸಿಕೊಟ್ಟದ್ದು ಇಂತಹ ಅರ್ಥಪೂರ್ಣ ದಾರ್ಶನಿಕ ಚಿಂತನೆಗಳಿಂದ ಎಂದರೆ ತಪ್ಪಾಗದು. ಈ ವಿಭಿನ್ನತೆಯೇ ಜನ ಸಾಮಾನ್ಯರಿಗೆ ವಚನಗಳಲ್ಲಿ ಅಭಿರುಚಿ ಬೆಳೆಯಲು ನೆರವಾಯಿತು. ವೇದ ಉಪನಿಷತ್ತಿನ ಪಠಣದಲ್ಲಿ ದೊರೆಯದ ಈ "ಶೂನ್ಯ," "ಸತ್ಯತೆ," "ಸಾರ್ವಕಾಲಿಕ," "ಊಹಾತೀತ," ಹೀಗೇ ವಿವಿಧ ರೀತಿಯಲ್ಲಿ ಪರಬ್ರಹ್ಮನ ಬಗ್ಗೆ ಬೋಧಿಸುವುದನ್ನು ನಾವು ವಚನಗಳಿಗೆ ಮುಂಚಿತವಾಗಿ ಆಗಮಗಳಲ್ಲಿ ಮತ್ತು ಭಕ್ತಿ ಮಾರ್ಗದಲ್ಲಿ ಕಾಣಬಹುದು. ಅದೇ ಕಾರಣದಿಂದಿರಬೇಕು ವಚನಕಾರರು ಆಗಮಗಳನ್ನು ತಮ್ಮ ಅಧ್ಯಾತ್ಮ ಸಾಧನೆಯಲ್ಲಿ ಅಳವಡಿಸಿಕೊಂಡಿದ್ದು.

**೨.೨. ಆಗಮಗಳ ಅಳವಡಿಕೆ:** ದಿನ ನಿತ್ಯ ರೂಢಿಯಲ್ಲಿ ವೇದೋಪನಿಷತ್ತುಗಳ ಪ್ರಭಾವ ಕಡಿಮೆ ಆದದ್ದು ಜೈನ ಮತ್ತು ಬೌದ್ಧ ಧರ್ಮಗಳ ಸ್ಥಾಪನೆಯಾದ ನಂತರವೇ. ಹಿಂದೂ ಧರ್ಮದ ದೇವಪೂಜಾತಂತ್ರ ವಿಧಾನವನ್ನು ತಿಳಿಸುವ ಶಾಸ್ತ್ರಗಳನ್ನು ನಾವು ಆಗಮಗಳಿಂದ ತಿಳಿಯಬಹುದು. ಅದೇ ರೀತಿ ಅಹಿಂಸೆ, ಶಾಕಾಹಾರಿ ನಿಯಮ ಹೀಗೆ ಮೊದಲಾದ ಜೈನ ಆಚರಣೆಗಳಿಗೆ ಸಮರ್ಥನೆ ನೀಡುವುದನ್ನು ಜೈನ ಆಗಮಗಳಲ್ಲಿ ನಾವು ಕಾಣಬಹುದು. ವೇದ ಕಾಲದ ನಿಯಮಗಳಿಗೂ ಆಗಮಗಳಿಗೂ ತಾಳೆ ನೋಡಿದರೆ ಬಹಳಷ್ಟು ವ್ಯತ್ಯಾಸ ಕಂಡುಬರುತ್ತದೆ. ವಚನಕಾರರು ವೇದೋಪನಿಷತ್ತಿನ ಜ್ಞಾನ ಮಾರ್ಗವನ್ನು ವರ್ಣಾಶ್ರಮವನ್ನು ತೊರೆದು ಆಗಮಗಳ ಭಕ್ತಿ ಮಾರ್ಗ, ದೀಕ್ಷೆಯನ್ನು ತಮ್ಮದಾಗಿರಿಸಿಕೊಂಡ ನಿದರ್ಶನಗಳು ಕಂಡುಬರುತ್ತವೆ.

| ವೇದೋಪನಿಷತ್ | ಆಗಮ |
|---|---|
| ಜ್ಞಾನ ಮಾರ್ಗ | ಭಕ್ತಿ ಮಾರ್ಗ |
| ಅಗ್ನಿ ಮಾಧ್ಯಮ | ನೇರವಾಗಿ ದೇವರ ಪೂಜೆ |
| ಬಲಿ ಮತ್ತು ಆಹುತಿ | ಪ್ರಸಾದ ಮತ್ತು ನೈವೇದ್ಯ |
| ನೂರಾರು ದೇವರಿಗೆ ಪೂಜೆ | ಒಂದೇ ದೇವರ ಪೂಜೆ |
| ಮಂತ್ರಕ್ಕೆ ಹೆಚ್ಚು ಸ್ಥಾನ | ಭಜನೆ, ನಮನಕ್ಕೆ ಹೆಚ್ಚು ಸ್ಥಾನ |
| ವಿಗ್ರಹ ಇಲ್ಲ | ಮೂರ್ತಿ ಹಾಗು ಪ್ರತೀಕಗಳು |
| ದೇವಸ್ಥಾನಗಳಿಲ್ಲ | ಸಾಮೂಹಿಕ ಪೂಜೆಗೆ ದೇವಸ್ಥಾನ |
| ೧೬ ಸಂಸ್ಕಾರಗಳು | ದೀಕ್ಷೆ |
| ವರ್ಣಾಶ್ರಮ | ಎಲ್ಲ ಮನುಷ್ಯರು ಒಂದೇ |

ಜೊತೆಗೆ ಜೈನ ಆಗಮಗಳಲ್ಲಿ ಕಂಡುಬರುವ ಅಹಿಂಸೆ, ಶಾಕಾಹಾರಿ, ಧರ್ಮ, ನೀತಿ, ನಡೆ-ನುಡಿ ಮತ್ತು ಹಲವಾರು ಗುಣಾತ್ಮಕ ನೀತಿನಿಯಮಗಳನ್ನು ಅಳವಡಿಸಿಕೊಂಡು ಒಂದು ವೈಶಿಷ್ಟ್ಯಪೂರ್ಣ ಮತವನ್ನು ಸ್ಥಾಪಿಸಲು ಯಶಸ್ವಿಯಾದರು.

**೨.೩. ಅನುಭವ ಮಂಟಪ:** ಆಧ್ಯಾತ್ಮಿಕ ಸಾಧನಗಳಲ್ಲಿ ಅತಿ ಮುಖ್ಯಪಾತ್ರ ವಹಿಸಿದ ಮಾಧ್ಯಮ ಎಂದರೆ ಅನುಭವ ಮಂಟಪ. ಅನುಭವ ಮಂಟಪ ಆಧ್ಯಾತ್ಮಿಕ ಚಿಂತನೆಗೆ ಮತ್ತು ಜ್ಞಾನಾರ್ಜನೆಗೆ ಸ್ಥಾಪಿತವಾದ ಒಂದು ಗೋಷ್ಠಿ. ಎಲ್ಲ ಕಡೆಯಿಂದ ಬಂದ ವಿದ್ವಾಂಸರು, ಕವಿಗಳು, ಜ್ಞಾನಿಗಳು, ಸಾಧಕರು, ಯೋಗಿಗಳು ದಿನನಿತ್ಯವೂ ವಿಚಾರ ವಿನಿಮಯ ಮಾಡುತ್ತಿದ್ದ ಒಂದು ವೇದಿಕೆ ಅನುಭವ ಮಂಟಪ. ಹಳೆಯ ಸಂಪ್ರದಾಯಗಳನ್ನು ಬಿಟ್ಟು ಹೊಸ ಸಮಾಜವನ್ನು ಸೃಷ್ಟಿಸಲು ಅನುವು ಮಾಡಿಕೊಟ್ಟ ವೇದಿಕೆ. ಇದೆ ವೇದಿಕೆಯಲ್ಲಿ ಸುಮಾರು ೪೫೦ ಶರಣ-ಶರಣೆಯರು ತಮ್ಮ ೧೪೫೦೦ಕ್ಕೂ ಹೆಚ್ಚು ವಚನಗಳನ್ನು ವಿವರವಾಗಿ ಚರ್ಚಿಸಲು ಅವಕಾಶ ದೊರಕಿತು. ದೂರದ ಕಲ್ಯಾಣ ನಗರಿಗೆ ಬಂದವರಲ್ಲಿ ಮೇಲು ಕೀಳೆಂಬ ಭೇದವಿಲ್ಲದೆ ಮತ್ತು ಹೆಣ್ಣು ಗಂಡಿನ ಅಂತರವನ್ನು ಕೇವಲ ಕಾಲ್ಪನಿಕ ಎಂದು ಸಾರಿದ ಸ್ತ್ರೀವಾದಿಗಳು ಎಲ್ಲರೂ ಒಂದುಗೂಡಿ ಸಹ ಬಾಳ್ವೆ ನಡೆಸಲು ಅನುವು ಮಾಡಿಕೊಟ್ಟ ಪವಿತ್ರ ಸ್ಥಳ. ಅಕ್ಕಮಹಾದೇವಿಯಂತಹ ಶರಣೆಯರು ಅನುಭವ ಮಂಟಪದಲ್ಲಿ ಹೊಸತೊಂದು ಮಾದರಿಯಲ್ಲಿ ವ್ಯಕ್ತಿಗತವಾದ ಮನವಿ (personal appeal) ಮಾಡಿದ್ದರಿಂದ ಜನ ಸಾಮಾನ್ಯರಿಗೆ ವಚನಗಳು ಮನತಟ್ಟುವಂತಿದ್ದವು. ಅನುಭವ ಮಂಟಪದಲ್ಲಿ ಆಧ್ಯಾತ್ಮಿಕ ಚಿಂತನೆಯನ್ನು ವಿರಳವಾದ ಕಾವ್ಯ ಲಹರಿ ಮತ್ತು ಭಾವನೆಗಳನ್ನು ಬೆರಸಿ ವಚನಗಳನ್ನು ಬರೆದವರಲ್ಲಿ ಅಕ್ಕಮಹಾದೇವಿ ಅಗ್ರಗಣ್ಯಳು. ಈ ಕೆಳಗಿನ ವಚನ ಇಂತಹ ಒಂದು ಸುಂದರ ಮನವಿ:

**ಹಸಿವಾದೊಡೆ ಭಿಕ್ಷಾನ್ನಗಳುಂಟು**
**ತೃಷೆಯಾದೊಡೆ ಕೆರೆಬಾವಿಗಳುಂಟು**
**ಶಯನಕೆ ಹಾಳುದೇಗುಲಗಳುಂಟು**
**ಚೆನ್ನಮಲ್ಲಿಕಾರ್ಜುನ ದೇವ**
**ಆತ್ಮ ಸಂಗಾತಕೆ ನೀನೆನಗುಂಟು**

**–ಅಕ್ಕಮಹಾದೇವಿ**

ಈ ವೇದಿಕೆಯ ಮಹತ್ತರ ಪರಿಣಾಮಗಳಲ್ಲಿ ಒಂದನ್ನು ನಾವು ಗಮನಿಸ ಬೇಕಾಗಿರುವುದೆಂದರೆ ಇಲ್ಲಿ ಸೇರಿದ್ದ ಶರಣ–ಶರಣೆಯರು ತಾವು ಬಂದ ಪ್ರದೇಶಗಳಿಗೆ ಮತ್ತೆ ಹಿಂದಿರುಗಿ ಅನುಭವ ಮಂಟಪದ ಆಧ್ಯಾತ್ಮಿಕ ಪ್ರಯೋಗಗಳನ್ನು ಹಂಚಿಕೊಂಡದ್ದು. ಈ ರೀತಿ ಅದು ನಿರೀಕ್ಷಿಸಿದ್ದಕ್ಕಿಂತ ಎರಡರಷ್ಟು ಫಲಪ್ರದಾಯಕ ಜ್ಞಾನಾರ್ಜನೆಯ ಮಾಧ್ಯಮವಾಯಿತು. ಅವುಗಳಿಗೂ ಹೆಚ್ಚಾಗಿ ವೀರಶೈವ ಮತದ ಸ್ಥಾಪನೆಗೆ ಅಡಿಪಾಯವಾಯಿತು.

**೨.೪. ವೀರಶೈವ ಮತ ಸ್ಥಾಪನೆ:** ಅಧ್ಯಾತ್ಮ ಚಿಂತನೆ ಪರ್ಯವಸಾನಗೊಂಡದ್ದು ಹೊಸ ಸಮಾಜದ ನಿರ್ಮಾಣದಿಂದ. ಮೊದಲೇ ವಿವರಿಸಿದಂತೆ ೩೬ ತತ್ವಗಳನ್ನು ಆಗಮಗಳಿಂದ ಅಳವಡಿಸಿಕೊಂಡು ಹೊಸತೊಂದು ಪ್ರಯೋಗಶೀಲ ಸಮಾಜ ಕಟ್ಟಲು ಪ್ರೇರೇಪಣೆಯಾದದ್ದು ಅನುಭವ ಮಂಟಪದಲ್ಲಿ. ಬಸವಣ್ಣ ಮತ್ತು ಅಲ್ಲಮ ಪ್ರಭುಗಳ ನೇತೃತ್ವದಲ್ಲಿ, ಅನುಭವ ಮಂಟಪದ ನೆರಳಲ್ಲಿ ಹಾಗು ಬಿಜ್ಜಳ ರಾಜನ ಪ್ರೋತ್ಸಾಹದೊಂದಿಗೆ ವೀರಶೈವ ಮತ ಆರಂಭವಾಗಲು ಹೆಚ್ಚು ದಿನಗಳು ಬೇಕಾಗಲಿಲ್ಲ. ಶೂನ್ಯ ಸಂಪಾದನೆ ಜ್ಞಾನದ ಮಾಧ್ಯಮವಾದರೆ ವಚನಗಳು ಜನ ಸಾಮಾನ್ಯರ ಮತಾಚರಣೆಗೆ ನಾಂದಿಯಾದವು. ಇಷ್ಟಲಿಂಗ ಪೂಜೆ, ಜಂಗಮರಿಂದ ದೀಕ್ಷೆ ಮತ್ತು ಪಂಚಾಚಾರಗಳು (ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ ಮತ್ತು ಭೃತ್ಯಾಚಾರ) ಎಲ್ಲ ಸೇರಿ ಜನರು ಈ ಮತವನ್ನು ಸ್ವೀಕಾರ ಮಾಡಲು ಸಹಾಯವಾಯಿತು. ಶಂಕರಾಚಾರ್ಯರ ಅನುಯಾಯಿಗಳು ಅನುಕರಿಸಿದ ರೀತಿಯಲ್ಲಿ ವೀರಶೈವರು ಕೂಡ ತಮ್ಮದೇ ಆದ ಮಠಗಳನ್ನು ಸ್ಥಾಪಿಸಿ ಈ ಮತಾಚರಣೆಯ ಬಗ್ಗೆ ಪಾರುಪತ್ಯ ವಹಿಸಿಕೊಂಡರು. ಶಿವಯೋಗವೇ ಅತಿ ಶ್ರೇಷ್ಠ ಯೋಗಾಚರಣೆ ಮತ್ತು ಇಷ್ಟಲಿಂಗವೇ ಜೀವಾತ್ಮ ಪರಮಾತ್ಮಗಳ ಮಿಲನವೆಂದು ಬೋಧಿಸಿ ನಿಯತ ಕ್ರಮಗಳನ್ನು ಪಾಲಿಸಲು ಆದೇಶ ನೀಡಿದರು. ಒಟ್ಟಿನಲ್ಲಿ ಜೈನ, ಹಿಂದೂ ಮತ್ತು ಬೌದ್ಧ ಮತಗಳ ದಿನ ನಿತ್ಯದ ರೂಢಿಗಳನ್ನೇ ವೀರ ಶೈವರು ಕಲಸುಮೇಲೋಗರ ಮಾಡಿ ತಮ್ಮದಾಗಿರಿಸಿಕೊಂಡರು. ಅಸತ್ಯ, ಅವಿವೇಕ, ನಾಸ್ತಿಕತೆ ಮತ್ತು ಮೂಢ ನಂಬಿಕೆಗಳನ್ನು ವೀರಶೈವರು ಖಂಡಿಸಿದರೇ ಹೊರತು ಬೇರೆ ಮತಗಳನ್ನು ಅಲ್ಲಗಳೆಯುತ್ತಿರಲಿಲ್ಲ.

ಅಂತರಂಗದ ಆಧ್ಯಾತ್ಮಿಕ ಸಾಧನೆಯ ಮಾಧ್ಯಮಗಳನ್ನು ಮೇಲಿನ ಸಾಲುಗಳಲ್ಲಿ ಕೇಂದ್ರಬಿಂದುವಾಗಿ ಇಟ್ಟುಕೊಂಡು ವಿಶ್ಲೇಷಣೆ ಮಾಡಿದೆವು. ಇನ್ನು ಮುಂದೆ ಬಹಿರಂಗ ಸಾಮಾಜಿಕ ಸುಧಾರಣೆಯ ಮಾಧ್ಯಮಗಳ ಬಗ್ಗೆ ಗಮನ ಹರಿಸೋಣ. ಈ ದಿಶೆಯಲ್ಲಿ ಐದು ಮಾಧ್ಯಮಗಳನ್ನು ಗುರುತಿಸಬಹುದು: (ಅ) ಕಾಯಕವೇ ಕೈಲಾಸ ಎನ್ನುವ ತತ್ವಬೋಧನೆ, (ಆ) ಕುಲ ಜಾತಿ ಮೇಲುಕೀಳೆಂಬುದಿಲ್ಲ ಎನ್ನುವ ಅರಿವು, (ಇ) ನಡೆ-ನುಡಿಯಲ್ಲಿ ಭಾಷಾ ಸುಧಾರಣೆ, (ಈ) ಧರ್ಮ ಮತ್ತು ನೀತಿಯ ಬಗ್ಗೆ ಸಾಮಾನ್ಯ ವ್ಯಾಖ್ಯಾನ ಮತ್ತು (ಉ) ಕೊನೆಯದಾಗಿ ಕೆಲವೊಮ್ಮೆ ವಚನಗಳಲ್ಲಿ ಕಂಡುಬರುವ ಅಪಹಾಸ್ಯ, ಅಪನಿಂದನೆ ಮತ್ತು ಹೀಯಾಳಿಕೆ.

## ೩.೦. ಬಹಿರಂಗ ಸಾಮಾಜಿಕ ಸುಧಾರಣೆಯ ಮಾಧ್ಯಮಗಳು.

**೩.೧. ಕಾಯಕವೇ ಕೈಲಾಸ:** ಶೂನ್ಯ ಸಂಪಾದನೆಯೇ ಗುರಿ ಎಂದು ಅರಿತು ಆ ಬ್ರಹ್ಮವನ್ನು ಪಡೆಯಲು ಭಕ್ತಿ ಒಂದು ಮಾರ್ಗವಾದರೆ ಕಾಯಕ ಅಥವಾ ಕೆಲಸದಲ್ಲಿ ಮಗ್ನನಾಗಿಯೂ ಅದನ್ನು ಪಡೆಯುವುದು ಯುಕ್ತವೆಂದು ವಚನಕಾರರು ಬೋಧಿಸಿದ್ದಾರೆ. ಯಾವುದನ್ನು ಶ್ರೀಕೃಷ್ಣ ಕರ್ಮಯೋಗವೆಂದು ಕರೆದನೋ, ಅದನ್ನೇ ವಚನಕಾರರು ಕಾಯಕವೇ ಕೈಲಾಸ ಎಂದರು. ಆಯ್ದಕ್ಕಿ ಮಾರಯ್ಯ ಎಂಬುವನ ಈ ಕೆಳಗಿನ ವಚನದಲ್ಲಿ ಕಾಯಕದಲ್ಲಿ ನಿರತನಾದವನಿಗೆ ಮತ್ತೆಲ್ಲವೂ ವ್ಯರ್ಥ ಎಂದು ಹೇಳಿರುವುದು ಗಮನಾರ್ಹ.

**ಕಾಯಕದಲ್ಲಿ ನಿರತನಾದಡೆ,**
**ಗುರುದರ್ಶನವಾದಡೂ ಮರೆಯಬೇಕು**
**ಲಿಂಗಪೂಜೆಯಾದಡೂ ಮರೆಯಬೇಕು**
**ಜಂಗಮ ಮುಂದೆ ನಿಂದಿದ್ದಡೂ ಹಂಗ ಹರಿಯಬೇಕು**
**ಕಾಯಕವೆ ಕೈಲಾಸವಾದ ಕಾರಣ**
**ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು**

**– ಆಯ್ದಕ್ಕಿ ಮಾರಯ್ಯ**

ಅನುಭವ ಮಂಟಪದಲ್ಲಿ ಸೇರಿದ್ದ ಕಮ್ಮಾರ, ನೇಯ್ಗೆಯವ, ಬಡಗಿ, ಚಮ್ಮಾರ, ರೈತ, ಬಾಣಸಿಗ, ಕುಂಬಾರ, ಕೋಮಟಿಗ ಅಥವಾ ಇನ್ಯಾವುದೇ ಕಸುಬಿನಲ್ಲಿ ತೊಡಗಿದ್ದ ಜನ ಸಾಮಾನ್ಯರ ಮೇಲೆ ಕಾಯಕವೇ ಕೈಲಾಸ ಎನ್ನುವ ಮಂತ್ರ ಬಹಳಷ್ಟು ಪರಿಣಾಮ ಬೀರಿತು. ಜೊತೆಗೆ ವೈದಿಕ ಧರ್ಮದ ವಿರುದ್ಧವಾಗಿ ಶರಣರು ಎಲ್ಲ ಮನುಜರು ಒಂದೇ ಎಂದು ಸಾರಿದ್ದರಿಂದ ಕುಲರಹಿತ ಸಮಾಜ ಕಟ್ಟಲು ಸಾಧ್ಯವಾಯಿತು.

೩.೨. **ಕುಲ, ಜಾತಿ ಮೇಲುಕೀಳೆಂಬುದಿಲ್ಲ:** ಈ ವಿಷಯಕ್ಕೆ ಸಂಬಂಧ ಪಟ್ಟಂತೆ ಬಸವಣ್ಣನವರ ದಾರ್ಶನಿಕ ವಚನವೊಂದು ಇಲ್ಲಿ ಉದಾಹರಿಸುವುದು ಸೂಕ್ತ.

**ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ**
**ತನ್ನ ಬಣ್ಣಿಸಬೇಡ ಇದಿರ ಹಳಿಯಲು ಬೇಡ**
**ಮುನಿಯಬೇಡ ಅನ್ಯರಿಗೆ ಅಸಹ್ಯಪಡಬೇಡ**
**ಇದೆ ಅಂತರಂಗ ಶುದ್ಧಿ ಇದೆ ಬಹಿರಂಗ ಶುದ್ಧಿ**
**ಇದೆ ನಮ್ಮ ಕೂಡಲಸಂಗಮನೊಲಿಸುವ ಪರಿ – ಬಸವಣ್ಣ**

ಮತ್ತೊಂದು ವಚನದಲ್ಲಿ ಬಸವಣ್ಣನವರೇ ಜಾತಿಯೆಂಬ ಮರುಳುತನವನ್ನು ಹೀಗೆ ಖಂಡಿಸಿದ್ದಾರೆ:

**ಜಾತಿವಿಡಿದು ಸೂತಕನರಸುವೆ**
**ಜ್ಯೋತಿವಿಡಿದು ಕತ್ತಲೆಯನರಸುವೆ**
**ಇದೇಕೋ ಮರಳು ಮಾನವ**
**ಜಾತಿಯಲ್ಲಿ ಅಧಿಕನೆಂಬೆ. – ಬಸವಣ್ಣ.**

ಉದ್ದೇಶಪೂರ್ವಕವಾಗಿ ಅಲ್ಲದಿದ್ದರೂ ಬೇರೆ ಮತಾಚರಣೆಗಳನ್ನು ಮಾನದಂಡ ವಾಗಿ ಬಳಸಿಕೊಂಡು ಜಾತಿ ಭೇದ. ಕುಲಭೇದ ಮತ್ತಿತರ ನಕಾರಾತ್ಮಕ ಮಾನವ ಪ್ರವೃತ್ತಿಯನ್ನು ತಿದ್ದಲು ಮಾಡಿದ ಪ್ರಯತ್ನಗಳಿವು. ಇಂತಹ ಪರಿಷ್ಕರಣ ಪ್ರಯೋಗಗಳ ಜೊತೆಗೆ ಭಾಷಾ ಸುಧಾರಣೆಗಳನ್ನು ತರುವುದರಲ್ಲಿ ವಚನಕಾರರು ಸಫಲರಾದರು.

೩.೩. **ನಡೆ–ನುಡಿಯಲ್ಲಿ ಭಾಷಾ ಸುಧಾರಣೆ:** ಅಸಂಸ್ಕೃತ ಮನುಷ್ಯ ಗೆಳೆತನವ ಗಳಿಸಲು ಸಾಧ್ಯವಿಲ್ಲ ಮತ್ತು ಸಮಾಜದಲ್ಲಿ ಗೌರವ ಪಡೆಯಲಾರ ಎಂದು ಬೋಧಿಸಿದ ವಚನಕಾರರು ಜನ ಸಾಮಾನ್ಯರನ್ನು ಸುಸಂಸ್ಕೃತಗೊಳಿಸಲು ಪ್ರಯತ್ನಿಸಿದರು. ಇಂತಹ ಪರಿಷ್ಕಾರಕ ಮತ್ತು ಅನುಕರಣೀಯ ವ್ಯಕ್ತಿತ್ವ ಬಸವಣ್ಣ ಮತ್ತು ಅಕ್ಕಮಹಾದೇವಿಯರಲ್ಲಿ ರಕ್ತಗತವಾಗಿತ್ತು ಎನ್ನುವುದಕ್ಕೆ ಈ ಕೆಳಗಿನ ಎರಡು ವಚನಗಳೇ ಸಾಕ್ಷಿ.

**ನುಡಿದರೆ ಮುತ್ತಿನ ಹಾರದಂತಿರಬೇಕು**
**ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು**
**ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು**
**ನುಡಿದರೆ ಲಿಂಗಮೆಚ್ಚಿ ಅಹುದೆನಬೇಕು**
**ನುಡಿದಂತೆ ನಡೆಯದಿದ್ದರೆ**
**ಕೂಡಲಸಂಗಮದೇವನೆಂತೊಲಿವನಯ್ಯ.**

**– ಬಸವಣ್ಣ**

**ನಡೆಯದ ನುಡಿಗಡಣ, ಮಾಡದ ಕಲಿತನ,**
**ಚಿತ್ರದಸತಿಯ ಶೃಂಗಾರವದೇತಕ್ಕೆ ಪ್ರಯೋಜನ ?**
**ಎಲೆಯಿಲ್ಲದ ಮರನು, ಜಲವಿಲ್ಲದ ನದಿಯು,**
**ಗುಣಿಯಲ್ಲದ ಅವಗುಣಿಯ ಸಂಗವದೇತಕ್ಕೆ ಪ್ರಯೋಜನ ?**
**ದಯವಿಲ್ಲದ ಧರ್ಮ, ಉಭಯವಿಲ್ಲದ ಭಕ್ತಿಯು,**
**ನಯವಿಲ್ಲದ ಶಬ್ದವದೇತಕ್ಕೆ ಪ್ರಯೋಜನ ಎನ್ನ ದೇವ ಚೆನ್ನಮಲ್ಲಿಕಾರ್ಜುನಾ?**
**– ಅಕ್ಕಮಹಾದೇವಿ**

ಇಲ್ಲಿಯವರೆಗೆ ದೊರಕಿರುವ ಹೆಚ್ಚು ಪ್ರಮಾಣದ ವಚನಗಳಲ್ಲಿ ನಡೆ–ನುಡಿಯ ಬಗ್ಗೆ ಪ್ರಾಧಾನ್ಯ ಕೊಡಲಾಗಿದೆ. ಅಂಬಿಗರ ಚೌಡಯ್ಯ, ಗುರುಸಿದ್ಧದೇವರು, ಮೋರಿಗೆ ಮಾಚಯ್ಯ, ದೇಶಿಕೇಂದ್ರ ಸಂಗನಬಸವಯ್ಯ, ಹಡಪದ ಅಪ್ಪಣ್ಣ, ಹೀಗೆ ಹೇಳುತ್ತಾ ಹೋದರೆ ನೂರಾರು ವಚನಕಾರರ ನಿರೂಪಣೆಯಲ್ಲಿ ನಡೆ–ನುಡಿಯೇ ಪ್ರಾಮುಖ್ಯತೆ ಪಡೆದಿದೆ. "ನುಡಿದಂತೆ ನಡೆ" ಎನ್ನುವ ಒಂದು ಸಾಮುದಾಯಿಕ ಭಾವನೆಯನ್ನು ಬೆಳಸುವುದರ ಜೊತೆಗೆ ಸಮಾಜ ಸುಧಾರಣೆಯಲ್ಲಿ ಮುಖ್ಯ ಪಾತ್ರ ವಹಿಸಿದ ಅನುಚ್ಛೇದಗಳಿವು.

ಹಿಂದೂ ಮತ್ತು ಜೈನರ ಧರ್ಮ ಮತ್ತು ನೀತಿಯ ತಿರುಳನ್ನು ತಮ್ಮ ಮಠಗಳಲ್ಲಿ ಅಡಕಿಸಿಕೊಂಡು ಹೊಸ ಬಗೆಯ ಸಾಮಾನ್ಯ ವ್ಯಾಖ್ಯಾನ ಮಾಡುವುದರಲ್ಲೂ ಶರಣರು ಸಫಲರಾದರು.

**೩.೪. ಧರ್ಮ, ನೀತಿಯ ಬಗ್ಗೆ ಸಾಮಾನ್ಯ ವ್ಯಾಖ್ಯಾನ:** ಧರ್ಮ ಎಂದರೇನು ಎನ್ನುವ ಚಿಂತನೆ ಎಲ್ಲ ಕಾಲದಲ್ಲೂ, ಎಲ್ಲ ಮತಗಳಲ್ಲೂ ಕೇಳಿಬರುವ, ಆದರೆ ಉತ್ತರ ದೊರಕದ ಪ್ರಶ್ನೆ. ಬೌದ್ಧ ಭಿಕ್ಷುಗಳು ಮತ್ತು ಜೈನ ದಿಗಂಬರರು ಸಾವಿರಾರು ಪುಟಗಳಲ್ಲಿ ಧರ್ಮದ ಬಗ್ಗೆ ಬರೆದ ಗ್ರಂಥಗಳನ್ನು ಸಮನ್ವಯಗೊಳಿಸಿ ಬಸವಣ್ಣನವರು ಬರೆದ ಈ ಕೆಳಕಂಡ ವಚನ ಎಲ್ಲರಿಗೂ ಅರ್ಥವಾಗುವ ಸಾಮಾನ್ಯ ವ್ಯಾಖ್ಯಾನಕ್ಕೆ ಒಂದು ಉತ್ತಮ ಉದಾಹರಣೆ.

**ದಯವಿಲ್ಲದ ಧರ್ಮವಾವುದಯ್ಯ**
**ದಯವೇ ಧರ್ಮದ ಮೂಲವಯ್ಯ**
**ದಯವಿರಬೇಕು ಸಕಲಪ್ರಾಣಿಗಳೆಲ್ಲರಲ್ಲಿ**
**ಕೂಡಲಸಂಗಮಂತೊಲ್ಲದೊಲ್ಲಯನಯ್ಯ – ಬಸವಣ್ಣ**

ಧರ್ಮ ಎಂದರೇನು ಎಂದು ತರ್ಕಿಸುವ ಬದಲು ಧರ್ಮದ ಸಾರ್ವತ್ರಿಕ ಸತ್ಯವನ್ನು ತೋರಿಸಿಕೊಟ್ಟ ವಚನ ಇದು. ಇದೆ ರೀತಿ ವಚನಕಾರ ಸಿದ್ಧರಾಮೇಶ್ವರ

ಕಾಮ, ಕ್ರೋಧ, ಮದ, ಮತ್ಸರ ಮತ್ತು ಆಸೆಯ ಹಿಂದಿರುವ ಮೂಲ ಕಾರಣಗಳನ್ನು ಸಾಮಾನ್ಯ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾನೆ.

**ಕಾಯವಿಡಿಹನ್ನಕ್ಕರ ಕಾಮವೆ ಮೂಲ;**
**ಜೀವವಿಡಿಹನ್ನಕ್ಕರ ಕ್ರೋಧವೆ ಮೂಲ;**
**ವ್ಯಾಪ್ತಿಯುಳ್ಳನ್ನಕ್ಕರ ಸಕಲ ವಿಷಯಕ್ಕೆ ಆಸೆಯೆ ಮೂಲ.**
**ಎನ್ನ ಆಸೆ ಘಾಸಿಮಾಡುತ್ತಿದೆ,**
**ಶಿವಯೋಗದ ಲೇಸಿನ ಠಾವ ತೋರು,**
**ಕಪಿಲಸಿದ್ಧಮಲ್ಲಿಕಾರ್ಜುನಾ. – ಸಿದ್ಧರಾಮೇಶ್ವರ**

ಅಕ್ಕಮಹಾದೇವಿಯ "ತನು ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯ ನೀನು.." ಚಿಂತನಾಶೀಲ ವಚನ. ಅದೇ ರೀತಿ ಅಲ್ಲಮಪ್ರಭು, ಚೆನ್ನಬಸವಣ್ಣ, ಉರಿಲಿಂಗಪೆದ್ದಿ, ಕಾಡಸಿದ್ದೇಶ್ವರ ಮೊದಲಾದ ವಚನಕಾರರು ತನು–ಮನ–ಧನತ್ರಯದ ಸಮತೋಲನದ ಬಗ್ಗೆ ವ್ಯಾಖ್ಯಾನಿಸುವುದನ್ನು ಕಾಣಬಹುದು.

**೩.೪. ಅಪಹಾಸ್ಯ, ಅಪನಿಂದನೆ ಮತ್ತು ಹೀಯಾಳಿಸುವುದು:** ಸಮಾಜದ ಅಂಕು ಡೊಂಕುಗಳನ್ನು ಬಹಿರಂಗಪಡಿಸುವುದರ ಜೊತೆಗೆ ವಾದವಿವಾದದಲ್ಲಿ ಜನರ ಗಮನ ಸೆಳೆದು ತಮ್ಮ ಪರ ವಹಿಸಲು ಅಥವಾ ಅವರನ್ನು ವಿಚಾರವಂತರನ್ನಾಗಿ ಮಾರ್ಪಡಿಸಲು ಬರೆದ ವಚನಗಳು ಸಾಕಷ್ಟಿವೆ. ಉದಾಹರಣೆಗೆ ೧೬ನೇ ಶತಮಾನದ ಪರಿವ್ರಾಜಕಾಚಾರ್ಯ ಸರ್ವಜ್ಞ ಬರೆದ ವಚನ:

**ಚಿತ್ತವಿಲ್ಲದೆ ಗುಡಿಯ ಸುತ್ತಿದೊಡೆ ಫಲವೇನು**
**ಎತ್ತು ಗಾಣವನು ಹೊತ್ತುತಾ**
**ನಿತ್ಯದಲಿ ಸುತ್ತಿ ಬಂದಂತೆ ಸರ್ವಜ್ಞ – ಸರ್ವಜ್ಞ**

ಕೆಲವೊಂದು ಅಪಹಾಸ್ಯ ಅಥವಾ ಅಪನಿಂದನೆಯ ವೈಪರೀತ್ಯ ದೃಷ್ಟಿಯಿಂದ ಬರೆದಂತಹವೂ ಕೂಡ ಇವೆ. ಉದಾಹರಣೆಗೆ ಬಸವಣ್ಣನವರ ವಚನ:

**ಏನಯ್ಯಾ, ವಿಪ್ರರು ನುಡಿದಂತೆ ನಡೆಯರು, ಇದೆಂತಯ್ಯಾ**
**ತಮಗೊಂದು ಬಟ್ಟೆ, ಶಾಸ್ತ್ರಕೊಂದು ಬಟ್ಟೆ!**
**ಕೂಡಲಸಂಗಮದೇವಯ್ಯಾ, ಹೊಲೆಯರ ಬಸುರಲ್ಲಿ**
**ವಿಪ್ರರು ಹುಟ್ಟಿ ಗೋಮಾಂಸ ತಿಂಬರೆಂಬುದಕ್ಕೆ ಇದೆ ದೃಷ್ಟ. – ಬಸವಣ್ಣ**

ಇಂತಹ ವಚನಗಳಲ್ಲಿ ನಿರ್ದಿಷ್ಟ ಗುರಿ ಕಂಡುಬರದೆ ಅಭಾಸಾತ್ಮಕ ಎನಿಸಿದರೂ ವೈಯಕ್ತಿಕ ಅನುಭವದಲ್ಲಿ ಜಿಗುಪ್ಸೆಗೊಂಡು ಬರೆದ ಒಕ್ಕಣಿಕೆ ಎನ್ನಬಹುದು. ಹಲವಾರು

ವಚನಗಳು ಪ್ರಾಣಿಗಳ ಪ್ರವೃತ್ತಿಯನ್ನು ಉಪಮಾಲಂಕಾರವಾಗಿ ಬಳಸಿಕೊಂಡು ಮತಾಚರಣೆಯ ನಿಯಮಗಳನ್ನು ಖಂಡಿಸಲು ಸಫಲವಾಗಿವೆ.

**ಕತ್ತೆ ಬತ್ತಲೆ ಇದ್ದಡೆ ನೆಟ್ಟನೆ ನಿರ್ವಾಣಿಯೆ?**
**ಹುಚ್ಚ ಹೊಟ್ಟೆಗೆ ಕಾಣದೆ, ಎತ್ತಲೆಂದರಿಯದೆ,**
**ಮತ್ಸ್ಯದೊಳಗಿರ್ದಡೆ ನಿಶ್ಚಟ ವಿರಕ್ತನೆ?**
**ಇಂತಿವರ ತತ್ತುಗೊತ್ತ ಬಲ್ಲವಂಗೆ ಇನ್ನೆತ್ತಣ ಭಕ್ತಿ ವಿರಕ್ತಿಯೊ,**
**ನಿಷ್ಕಕಳಂಕ ಮಲ್ಲಿಕಾರ್ಜುನಾ?** **– ಮೋಳಿಗೆ ಮಾರಯ್ಯ**

**೪.೦. ಮುಕ್ತಾಯ:** ಈ ಲಘುಲೇಖನದ ಮೊದಲಲ್ಲಿ ನಾವು ಉತ್ತರ ಹುಡುಕಲು ಹೋದ ಪ್ರಶ್ನೆ: ಸಾಹಿತ್ಯದಿಂದ ಸಮಾಜ ಸುಧಾರಣೆ ಸಾಧ್ಯವೇ ಎಂದು. ವಚನ ಸಾಹಿತ್ಯದ ಆಧ್ಯಾತ್ಮಿಕ ಮಾಧ್ಯಮಗಳನ್ನು ಮತ್ತು ವಚನಕಾರರು ಬಳಸಿಕೊಂಡ ಸಮಾಜ ಸುಧಾರಣೆಯ ಮಾಧ್ಯಮಗಳನ್ನು ಐತಿಹಾಸಿಕ ದೃಷ್ಟಿಯಿಂದ ನೋಡಿದೆವು. ಹನ್ನೆರಡನೇ ಶತಮಾನದ ಈ ಎಲ್ಲ ಮಾಧ್ಯಮಗಳು ಒಂದು ಹೊಸ ಸಾಹಿತ್ಯ ರೂಪಕ ಮತ್ತು ಹೊಸ ಭರವಸೆಯ ಸಮಾಜ ಸೃಷ್ಟಿಸಲು ಸಾಧ್ಯವಾಯಿತು. ಇದರಲ್ಲಿ ಆಧ್ಯಾತ್ಮಿಕ ಸಾಹಿತ್ಯದ್ದೇ ಮೇಲುಗೈ ಅಂತ ನಿಶ್ಚಯವಾಗಿ ಹೇಳಬಹುದು. ಆದರೆ ಇಂತಹ ಒಂದು ಗುರಿಮುಟ್ಟಿದ ಕಾರ್ಯದಲ್ಲಿ ಮುಂದಾದದ್ದೆಲ್ಲ ಅಹಿತಕರ ಘಟನೆಗಳು. ಕೇವಲ ಒಂಬತ್ತು ವರ್ಷಗಳಲ್ಲಿ ಶೂನ್ಯ ಸಂಪಾದನೆ, ಅನುಭವ ಮಂಟಪ, ವೀರಶೈವ ಮತ ಸ್ಥಾಪನೆ, ವಚನ ಸಾಹಿತ್ಯದ ಜನನ ಎಲ್ಲ ತ್ವರಿತಗತಿಯಲ್ಲಿ ಅಸ್ತಿತ್ವಗೊಂಡವು. ಎಲ್ಲ ಕಾಲದಲ್ಲೂ ಇರುವಂತೆ ಆಗಲೂ ವಿರೋಧ ಪಕ್ಷಗಳು ಹುಟ್ಟಿದ್ದಲ್ಲದೆ, ಹಿಂದೂ ಧರ್ಮದ ವಿಷಸರ್ಪದ ಹೆಡೆ ತಲೆಯೆತ್ತಿತ್ತು. ಜೈನರು ಕೂಡ ಸಾಮಾಜಿಕ ಬದಲಾವಣೆಗಳನ್ನು ವಿರೋಧ ಮಾಡಿದ್ದಲ್ಲದೆ, ಬ್ರಹ್ಮಶಿವ ಬರೆದ "ಸಮಯ ಪರೀಕ್ಷೆ" ಯಲ್ಲಿ ಜೈನ ಹಾಗು ವೀರಶೈವ ಮತದ ವ್ಯತ್ಯಾಸ ತೋರಿಸಿ ಜೈನ ಮತವೇ ಮೇಲೆಂದು ಸಾರಿತು. ಹುಟ್ಟಿನಿಂದ ಎಲ್ಲರೂ ಒಂದೇ ಎಂದು ಸಾಬೀತುಪಡಿಸಲು ಅನುಭವ ಮಂಟಪದಲ್ಲಿ ಒಂದು ಅಂತರ್ಜಾತಿಯ ಮದುವೆಯನ್ನು ಸ್ವತಃ ಬಸವಣ್ಣನವರೇ ನೆರವೇರಿಸಿದರು. ಆದರೆ ಇದನ್ನು ಸಹಿಸದ ಬಿಜ್ಜಳನ ಪ್ರಜೆಗಳು ಆಂದೋಲನ ಹೂಡಿದ್ದಲ್ಲದೆ, ಉಗ್ರಗಾಮಿಗಳು ಬಿಜ್ಜಳನ ಕೊಲೆ ಮಾಡಿದಾಗ ರಾಜಕಾರಣದಲ್ಲಿ ಅನಿರೀಕ್ಷಿತ ಸಂದಿಗ್ಧ ಪರಿಸ್ಥಿತಿ ಉಂಟಾಯಿತು. ಅನುಭವ ಮಂಟಪದಲ್ಲಿ ಆಧ್ಯಾತ್ಮಿಕ ಚಟುವಟಿಕೆ ಕೊನೆಗೊಂಡು ಎಲ್ಲ ವಚನಕಾರರು ಚದುರಿ ಹೋದರು. ಎಷ್ಟೋ ಶಿವಶರಣರ ಕೊಲೆ, ಅದಕ್ಕೆ ಪ್ರತಿಯಾಗಿ ಜೈನ ಹಾಗು ಹಿಂದುಗಳ ಕೊಲೆಗಳು, ಹೀಗೆ ಹಿಂಸಾಚಾರದಲ್ಲಿ ಆಗಬಾರದ್ದು ಆಗಿಹೋಗುತ್ತದೆ. ಈ ಅನಾಹುತದಲ್ಲಿ ವಚನ ಸಾಹಿತ್ಯದ ತಾಳೆ ಪತ್ರಗಳು ನಾಶವಾದರು ವಚನಕಾರರು ಎಲ್ಲ ಕಡೆ ಚದುರಿ ಹೋದದ್ದು ಒಂದು ರೀತಿ ಒಳ್ಳೆಯದಾಗುತ್ತದೆ.

ಏಕೆಂದರೆ ೨೦೦ ವರ್ಷಗಳ ನಂತರ ೧೪ನೇ ಶತಮಾನದ ಅರಸು ಇಮ್ಮಡಿ ದೇವರಾಯನ ಕಾಲದಲ್ಲಿ ವಚನ ಸಂಪುಟವನ್ನು ಮತ್ತೆ ಒಂದುಗೂಡಿಸಲಾಗುತ್ತದೆ. ಅಂತರ್ಗತವಾದ ಅಧ್ಯಾತ್ಮ ಮತ್ತು ಮತಾಚರಣೆಗಳು ಪುನಶ್ಚೇತನಗೊಂಡು, ಅದರ ಪರಿಣಾಮವಾಗಿ ಬಸವಣ್ಣನವರ ತತ್ವಗಳು ಕಲಬೆರಕೆಯಾಗಿ ಮತ್ತೊಂದು ರೀತಿಯ ಸಮಾಜದ ಜನನವಾಗುತ್ತದೆ. ಮತಾಚರಣೆಯಲ್ಲಿ ಯಾವುದನ್ನು ಬಸವಣ್ಣನವರು ತಿದ್ದಲು ಪ್ರಯತ್ನಿಸಿದರೋ ಅದೇ ನಕಾರಾತ್ಮಕ ಪ್ರವೃತ್ತಿಗಳಾದ ಅಸತ್ಯ, ಮೂಢನಂಬಿಕೆ, ಅವಿವೇಕ, ಮತಪರಿವರ್ತನೆ, ಮೇಲು ಕೀಳೆಂಬ ಭಾವನೆ ಎಲ್ಲವೂ ಪ್ರತ್ಯಾಗಮನವಾಗುತ್ತದೆ. ನಿರಂತರ ಪರಿವರ್ತನೆಯಿಂದಲೇ ಸಮಾಜ ಸುಧಾರಣೆಗೆ ಪುಷ್ಟಿಕೊಡಲು ಸಾಧ್ಯವೇ ಹೊರತು ರಭಸದ ಸಾಹಿತ್ಯ ದಾಳಿಯಿಂದ ಅಲ್ಲ ಎಂದು ನಮ್ಮನ್ನು ಎಚ್ಚರಿಸುತ್ತವೆ ಈ ಘಟನೆಗಳು. ವಚನ ಸಾಹಿತ್ಯ ತಾತ್ಕಾಲಿಕ ಸಮಾಜ ಸುಧಾರಣೆಯಲ್ಲಿ ಪ್ರಮುಖ ಪಾತ್ರ ವಹಿಸಿದರೂ ದೀರ್ಘಾವಧಿ ಬದಲಾವಣೆ ತರುವುದರಲ್ಲಿ ವೈಫಲ್ಯಗೊಂಡಿತು.



# ನೊಂದ ಸಮಾಜಕ್ಕೆ ಭಕ್ತಿಯ ಅಮೃತ ಸಿಂಚನ

–ನಳಿನಿ ಮೈಯ

**ಕ**ನ್ನಡ ಸಾಹಿತ್ಯ ಲೋಕದಲ್ಲೂ, ಕರ್ನಾಟಕ ಸಂಗೀತ ಲೋಕದಲ್ಲೂ ಹಿರಿಯ ಸ್ಥಾನ ಗಳಿಸಿದವರು ಪುರಂದರದಾಸರು. ಅಧ್ಯಾತ್ಮವೆಂದರೆ ಸುತ್ತಮುತ್ತಲೂ ಪುಟಿಯುತ್ತಿರುವ ಜೀವನ ಚೈತನ್ಯಕ್ಕೆ ಬೆನ್ನು ಮಾಡಬೇಕು ಎಂದವರಲ್ಲ. "ಮಾನವ ಜನ್ಮ ದೊಡ್ಡದು ಅದ ಹಾನಿ ಮಾಡಲು ಬೇಡ" ಎಂದವರು. ತಾವೇ ಸಂಸಾರದಲ್ಲಿ ಬಾಳಿದವರು. ಬಾಳುತ್ತಲೇ ಬಾಳಿನಲ್ಲಿ ಬೆಳಕು ಕಂಡವರು. ಅದರೂ ಈ ಪ್ರಪಂಚದ ಅಸ್ಥಿರತೆ, ನಶ್ವರತೆಯ ಕುರಿತಾಗಿ ಕಟ್ಟಿದ ಅವರ ಅನೇಕ ಗೀತೆಗಳನ್ನು ನೋಡುವಾಗ ಅದರ ಹಿನ್ನೆಲೆ ಏನಿರಬಹುದು? ಎಂಬ ಕುತೂಹಲ ಉಂಟಾಗುತ್ತದೆ. ಯಾವ ಕಾರಣಕ್ಕಾಗಿ ಅವರು 'ಲೊಳಲೊಟ್ಟೆ ಎಲ್ಲ ಲೊಳಲೊಟ್ಟೆ' ಎಂದರು? 'ಸತ್ಯವಂತರಿಗಿದು ಕಾಲವಲ್ಲ, ದುಷ್ಟ ಜನರಿಗೆ ಸುಭಿಕ್ಷ ಕಾಲ' ಎಂದು ಪರಿತಪಿಸಿದರು?

ಪುರಂದರದಾಸರು ಬಾಳಿ ಬದುಕಿದ ಸಮಯವನ್ನು, ಆಗ ಇತಿಹಾಸದಲ್ಲಿ ಜರುಗಿಹೋದ ಘಟನೆಗಳನ್ನು ನೋಡುವಾಗ ಈ ಪ್ರಶ್ನೆಗಳಿಗೆ ಉತ್ತರಗಳು ಸಿಕ್ಕುತ್ತವೆ. ದಕ್ಷಿಣ ಭಾರತದ ಇತಿಹಾಸದಲ್ಲಿ ವಿಜಯನಗರ ಸಾಮ್ರಾಜ್ಯ ಮೂಡಿದ್ದು, ಅಭ್ಯುದಯವನ್ನು ಕಂಡಿದ್ದು ಕೊನೆಯಲ್ಲಿ ಮುಳುಗಿದ್ದು ಮುಖ್ಯವಾದ ಮೈಲಿಗಲ್ಲುಗಳು. ವಿಜಯನಗರದ ಉನ್ನತಿ ಮತ್ತು ಅವನತಿ ಎರಡೂ ಪುರಂದರದಾಸರ ಜೀವಿತಾವಧಿಯಲ್ಲಿ ಅವರ ಕಣ್ಣೆದುರಿನಲ್ಲೇ ನಡೆದವು. ಈ ಅವಧಿಯಲ್ಲಿ ಬಗೆ ಬಗೆಯ ಏರು ಪೇರು, ಏಳು ಬೀಳುಗಳನ್ನು ಕಂಡು ಕಂಗೆಟ್ಟ ಜನತೆಯ ಮನಃಸ್ಥಿತಿಯನ್ನು ಚಿತ್ರಿಸುವ ಗೀತೆಗಳವು. ಆದರೂ ಕೊನೆಯಲ್ಲಿ ಪುರಂದರ ವಿಠಲನನ್ನು ನಂಬಿದರೆ ಮಾತ್ರ ಮನಶ್ಯಾಂತಿ ಎಂದು ಮುಕ್ತಾಯಗೊಳ್ಳುತ್ತವೆ.

ಪುರಂದರದಾಸರ ಕಾಲಮಾನ ೧೪೮೪ರಿಂದ ೧೫೬೪ರ ನಡುವೆ. ಹಂಪಿಯಲ್ಲೇ ಅವರು ವಾಸವಾಗಿದ್ದದ್ದು. ೧೫೦೯ರಲ್ಲಿ ಕೃಷ್ಣದೇವ ರಾಯನು ಪಟ್ಟಕ್ಕೆ ಬಂದು ವಿಜಯನಗರದ ಕೀರ್ತಿ, ವೈಭವ ತುತ್ತತುದಿಗೇರಿದಾಗ ಪುರಂದರದಾಸರು ಹರಯದ

ಯುವಕ. ಚಿನ್ನದ ವ್ಯಾಪಾರಿಯಾಗಿದ್ದ ಇವರು ತಮ್ಮ ಯೌವನದ ದಿನಗಳಲ್ಲೇ ಎಲ್ಲವನ್ನೂ ತ್ಯಜಿಸಿ ಪಾರಮಾರ್ಥಿಕ ಜೀವನದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ವಿಜಯನಗರದ ಚಕ್ರವರ್ತಿ ಕೃಷ್ಣದೇವರಾಯ ಪುರಂದರದಾಸರ ಸ್ನೇಹಿತ ಎಂಬಂತೆ ಸಲಿಗೆಯಿಂದ ನಡೆದುಕೊಳ್ಳುತ್ತಿದ್ದನಾದರೂ ಅವರು ರಾಜಾಶ್ರಯವನ್ನು ನಿರಾಕರಿಸಿ ಉಂಛ ವೃತ್ತಿಯನ್ನು ಹಿಡಿದು ಬಾಳಿದರು. ಕೃಷ್ಣದೇವರಾಯ ೧೫೩೦ರಲ್ಲಿ ತೀರಿಕೊಂಡಾಗ ದಾಸರ ಜೀವನದಲ್ಲೂ ಮಧ್ಯ ವಯಸ್ಸು. ಮುಂದಿನ ಅರಸರ ಆಳ್ವಿಕೆಯಲ್ಲಿ ಸಾಮ್ರಾಜ್ಯದಲ್ಲಿ ನೆಮ್ಮದಿ ತಪ್ಪಿಹೋಗಿ, ಆತಂಕ ಮನೆ ಮಾಡಿತ್ತು. ರಕ್ಕಸತಂಗಡಿ ಅಥವಾ ತಾಳಿಕೋಟೆ ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯ ಕುಸಿದು ಬಿದ್ದಿತು. ಇಸವಿ ೧೫೬೫. ಅದೇ ವರ್ಷದ ಆದಿಯಲ್ಲಿ ಪುರಂದರದಾಸರು ದೈವಾಧೀನರಾದರು.

## ಪುರಂದರದಾಸರ ಜೀವಿತಾವಧಿಯಲ್ಲಿ ರಾಜಕೀಯ ಆಗುಹೋಗುಗಳು

ವಿಜಯನಗರ ಸಾಮ್ರಾಜ್ಯ (ಕರ್ಣಾಟ ರಾಜ್ಯ ಎಂದೂ ಕರೆಯುತ್ತಾರೆ) ೧೩೩೬ರಲ್ಲಿ ಸಂಗಮ ವಂಶದ ಹಕ್ಕ ಬುಕ್ಕರಿಂದ ವಿದ್ಯಾರಣ್ಯರ ಆಶೀರ್ವಾದದೊಡನೆ ಶುರುವಾಯಿತು. ಪುರಂದರದಾಸರು ಹುಟ್ಟಿದ್ದು ೧೪೮೫ರಲ್ಲಿ. ಆ ವೇಳೆಗೆ ಸಂಗಮ ವಂಶಸ್ಥ ರಾಜರು ದುರ್ಬಲರಾಗಿದ್ದು ಅದೇ ವರ್ಷ ಸಾಳುವ ವಂಶದ ನರಸಿಂಹ ನಾಯಕನು ಪಟ್ಟಕ್ಕೆ ಬಂದನು. ಈತ ಆಳಿದ್ದು ಐದೇ ವರ್ಷವಾದರೂ ಇಡೀ ದಕ್ಷಿಣ ದೇಶವನ್ನು ಒಂದು ಛತ್ರದಡಿ ಕೂಡಿಸಿದ ಹಿರಿಮೆ ಈತನದ್ದು. ಮಹಮ್ಮದೀಯರ ಧಾಳಿಯಿಂದ ಹಿಂದೂ ಸಮಾಜ ಕಂಗೆಟ್ಟಿದ್ದನ್ನು ಕಂಡ ಅವನು ಹಿಂದೂ ಧರ್ಮ ಸಂರಕ್ಷಣೆಗಾಗಿ ಕಂಕಣಬದ್ಧನಾಗಿದ್ದನು. ನರ್ಮದಾ ನದಿಯಿಂದ ಸಿಂಹಳದವರೆಗೆ ವಿಜಯನಗರದ ಲಾಂಛನವಾದ ವರಾಹ ಧ್ವಜ ಹಾರುವಂತೆ ಮಾಡಿದನು. ಬೇರೆಬೇರೆ ಜಾತಿ ಮತಗಳಲ್ಲಿ, ಭಾಷೆಗಳಲ್ಲಿ ಹರಿದು ಹಂಚಿ ಹೋಗಿದ್ದ ಹಿಂದೂ ಸಮಾಜ ಬಾಳಬೇಕಾದರೆ ಅವೆಲ್ಲವನ್ನೂ ಒಳಗೊಂಡ ಒಂದು ಆಡಳಿತ ಮುಖ್ಯವೆಂದು ಮನಗಂಡಿದ್ದವನು ಅವನು. ಆದರೆ ಅವನ ಮರಣಾನಂತರ ಅನೇಕ ಸಾಮಂತರು ಸ್ವತಂತ್ರರಾಗಲು ಹವಣಿಸಿದರು. ಇತ್ತ ಬಹಮನಿಯ ಸುಲ್ತಾನನ ಸರದಾರ ಯುಸುಫ್ ಆದಿಲ್‌ಖಾನ್ ವಿಜಯನಗರವನ್ನು ಕಬಳಿಸಲು ಹೊಂಚು ಹಾಕುತ್ತಿದ್ದ. ಈ ಸಮಯದಲ್ಲಿ ಸೇನಾಪತಿ ತುಳುವ ನರಸಿಂಹ ನಾಯಕನು (ಕೃಷ್ಣದೇವ ರಾಯನ ತಂದೆ) ಸಾಳುವ ನರಸಿಂಹನ ಮರಣ ಶಾಸನದ ಮೇರೆಗೆ ಆಡಳಿತ ಜವಾಬ್ದಾರಿಯನ್ನು ತೆಗೆದುಕೊಂಡು ಸಂಭಾಳಿಸಿದನು. ಹೆಸರಿಗೆ ಸಾಳುವ ನರಸಿಂಹ ನಾಯಕನ ಮಕ್ಕಳು ಅರಸರಾಗಿದ್ದರು. ೧೫೦೩ರಲ್ಲಿ ಈತನೂ ತೀರಿಕೊಂಡಾಗ ಪರಿಸ್ಥಿತಿ ತೀರಾ ಹದಗೆಟ್ಟಿತು. ಪಟ್ಟಕ್ಕೆ ಬಂದಿದ್ದ ಸಾಳುವ ನರಸಿಂಹನ ಮಕ್ಕಳಾದ ಇಮ್ಮಡಿ ನರಸಿಂಹ ಮತ್ತು ವೀರ ನರಸಿಂಹರ ಕಾಲದಲ್ಲಿ ರಾಜ್ಯದಲ್ಲಿ ತುಂಬ ಅನಿಶ್ಚಿತ ಪರಿಸ್ಥಿತಿ ಇತ್ತು. ಸಾಮಂತರೆಲ್ಲ ಸ್ವತಂತ್ರರಾಗಲು ಪ್ರಯತ್ನಿಸಿದರು.

ಕೆಲವರು ಮಹಮ್ಮದೀಯರ ಜೊತೆ ಕೈ ಜೋಡಿಸಿದರು. ಕಡೆಗೆ ಕೃಷ್ಣ ದೇವರಾಯ ೧೫೦೯ರಲ್ಲಿ ಪಟ್ಟಕ್ಕೆ ಬಂದ ಮೇಲೆ ಸುವರ್ಣ ಯುಗ ಪ್ರಾರಂಭವಾಯಿತು. ಪುರಂದರದಾಸರಿಗೆ ಆಗ ೨೩-೨೪ ವರ್ಷ.

ಕೃಷ್ಣದೇವರಾಯನ ಕಾಲದಲ್ಲಿ ಸಾಮ್ರಾಜ್ಯ ಸುಭದ್ರವಾಯಿತು ಅಷ್ಟೇ ಅಲ್ಲ ಪ್ರಬಲವಾಯಿತು. ಅವನು ಕಲಾಭಿಮಾನಿ, ಪಂಡಿತ ಪೋಷಕ, ಸ್ವತಃ ಕವಿ. ಅದು ಒಂದು ಸುಭಿಕ್ಷ ಕಾಲ. ಕೃಷ್ಣದೇವರಾಯನು ೧೫೩೦ರಲ್ಲಿ ತೀರಿಕೊಂಡಾಗ ದಾಸರಿಗೆ ೪೫ ವರ್ಷ ಪ್ರಾಯ. ಅಲ್ಲಿಂದ ಮತ್ತೆ ನೆಮ್ಮದಿ ಎಂಬುದು ಸಮಾಜದಲ್ಲಿ ಇಲ್ಲವಾಯಿತು. ಅಂತಃಕಲಹ, ಆಡಳಿತದಲ್ಲಿ ಅವ್ಯವಸ್ಥೆ ದಿನ ನಿತ್ಯದ ಹಾಡಾಯಿತು. ಅಚ್ಯುತರಾಯ, ಅವನ ಮಗ ವೆಂಕಟಪತಿರಾಯ, ಮಧ್ಯೆ ಆಡಳಿತದ ಜವಾಬ್ದಾರಿ ವಹಿಸಿದ್ದ ದುರುಳ ಸೋದರಮಾವ ಸಲಕ ಚಿನ್ನ ತಿರುಮಲರಾಜ ಇಂಥವರ ಆಳ್ವಿಕೆಯಲ್ಲಿ ದೌರ್ಬಲ್ಯವನ್ನು ಕಂಡು ದಂಡೆತ್ತಿ ಬಂದ ಬಿಜಾಪುರ ಸುಲ್ತಾನ! ಜನರಲ್ಲಿ ಹಾಹಾಕಾರ, ಜೀವನದಲ್ಲಿ ಗೊಂದಲ! ಮುಸ್ಲಿಂ ದಂಡನ್ನು ಹೊಡೆದೋಡಿಸಿದರೂ ಸಲಕ ಚಿನ್ನ ತಿರುಮಲ ರಾಯನ ರಾಜ್ಯಭಾರದಲ್ಲಿ ಕಿರುಕುಳ, ಹಿಂಸೆ ನಿತ್ಯವೂ ತಪ್ಪಿದ್ದಲ್ಲ. ಜನರನ್ನು ಬಗೆಬಗೆಯಾಗಿ ಕಾಡತೊಡಗಿದ. ಇದೇ ಸಮಯದಲ್ಲಿ ದಾಸರು ಅರಸರ ಆಧಾರ ತಪ್ಪಿದ ಸಮಾಜಕ್ಕೆ ಹರಿಭಕ್ತಿ ಎಂಬ ಆಧಾರ ಸ್ತಂಭವನ್ನು ನೀಡಿದರು.

ಇಲ್ಲಿ ನಾವು ಗಮನಿಸಬೇಕಾದದ್ದು ಏನೆಂದರೆ ದಾಸರಿಗೆ ಒಂದು ರಾಜ್ಯದ ಉನ್ನತಿ, ಅವನತಿ ಯಾವುದೂ ಮುಖ್ಯವಾಗಿರಲಿಲ್ಲ. "ಅಲ್ಲಿದೆ ನಮ್ಮ ಮನೆ, ಇಲ್ಲಿ ಬಂದೆ ಈಗ ಸುಮ್ಮನೆ" ಎನ್ನುವ ಅವರು ಇಂಥ ವಿಷಯಗಳಿಗೆ ತಮ್ಮ ಬದುಕಿನಲ್ಲಿ ಯಾವ ಪ್ರಾಮುಖ್ಯತೆಯನ್ನೂ ಕೊಡಲಿಲ್ಲ. ಅವರು ಎಂದೋ ಆರ್ಥಿಕ ದೃಷ್ಟಿಯನ್ನು ಬಿಟ್ಟು ಪಾರಮಾರ್ಥಿಕ ದೃಷ್ಟಿಯನ್ನು ಬೆಳೆಸಿಕೊಂಡಿದ್ದರು. ಆದರೆ ತಮ್ಮ ಸುತ್ತಮುತ್ತಲೂ ಜನ ತಲ್ಲಣಿಸುತ್ತಿರುವುದನ್ನು ಕಂಡ ಅವರು ನೊಂದ ಮನಗಳಿಗೆ 'ಭಕ್ತಿ' ಎಂಬ ಅಮೃತಸಿಂಚನ ಮಾಡಿದರು. ಸುಭದ್ರವಾಗಿ, ವೈಭವದಿಂದ ಬಾಳಿದ ಸಾಮ್ರಾಜ್ಯ ತಳ ಕುಸಿದುಬಿದ್ದಿದ್ದನ್ನು ಕಣ್ಣಾರೆ ಕಂಡ ಅವರು ಅಂಥ ವೈಭವವನ್ನು ನೆಚ್ಚಬೇಡಿರೆಂದು ಸಾರಿದರು.

ಪುರಂದರದಾಸರು "ಒತ್ತಿ ಹಿಡಿದ ಕಂಬ ವ್ಯರ್ಥವಾಯಿತು, ಬಾವಿ ತೋಡಲು ಬೇತಾಳ ಹೊರಟಿತು, ಅರ್ಥಿಯ ಸಂಸಾರ ಅಡವಿ ಪಾಲಾಯಿತು" ಎಂದು ಹಾಡಿದ್ದು, ಇದೇ ಕಾಲದಲ್ಲಿರಬೇಕು. ಅದು ಅಂದಿನ ಸಮಾಜದ ಪರಿಸ್ಥಿತಿಗೆ ಹಿಡಿದ ಕನ್ನಡಿ! ರಾಜನಾಗಲಿ, ಹಣವಾಗಲಿ ಆಶ್ರಯ ಕೊಡುವ ಕಂಬ ಆಗಲಾರದು. ಹರಿಯೊಬ್ಬನೇ ಅಂಥ ಕಂಬ ಎನ್ನುವುದು ಅವರ ಧ್ಯೇಯವಾಗಿತ್ತು.

ಬಿಜಾಪುರದ ಸುಲ್ತಾನ ದಂಡೆತ್ತಿ ಬಂದಾಗ ಸಲಕ ರಾಜನಿಗೆ ಸರ್ವಾಧಿಕಾರ ಕೊಟ್ಟವರು ಜನರೇ. ಅವನು ಮಹಮ್ಮದೀಯರನ್ನು ಸೋಲಿಸಿ ತಮ್ಮ ಹಿತ ರಕ್ಷಣೆ

ಮಾಡುವನೆಂದು ಭಾವಿಸಿದ್ದರು ಅವರು. ಆದರೆ ಆದದ್ದೇ ಬೇರೆ. ಈ ಕೆಳಗಿನ ಸಾಲುಗಳನ್ನು ಗಮನಿಸಿ. ಆದದ್ದಕ್ಕೆ ಮರುಗಿ ಏನು ಪ್ರಯೋಜನ? ಎಂಬಂಥವು.

**"ಮಾಯದ ಸಂಸಾರ ಮಮಕಾರ ಹಿಂಗಿತು ಇನ್ನೇನಿನ್ನೇನು**
**ತೋಯಜಾಕ್ಷನ ದಯ ನಮಗೀಗ ದೊರಕಿತು ಇನ್ನೇನಿನ್ನೇನು**

**ಭಾವಿಸಿದ್ದೆಲ್ಲ ಭೂಮಿ ಪಾಲಾದಮೇಲಿನ್ನೇನಿನ್ನೇನು**
**ಸೇವಿಸಿದ ಗಣಪ ಮಂಗನಾದ ಮೇಲಿನ್ನೇನಿನ್ನೇನು**

........................

**ಬರ ಹೋಗುವವರ ಮುಂದೆ ಮರಿಯಾದೆ ಹೋಯಿತು ಇನ್ನೇನಿನ್ನೇನು**
**ಸರಸ ಸಂಸಾರದ ಸವಿ ಹಾರಿ ಹೋಯಿತು ಇನ್ನೇನಿನ್ನೇನು**

.......

**ಅರ್ತಿಯ ಸಂಸಾರ ಅಡವಿ ಪಾಲಾದ ಮೇಲಿನ್ನೇನಿನ್ನೇನು**
**ಮಿತ್ರರಾದವರೆಲ್ಲ ಶತ್ರುಗಳಾದಮೇಲಿನ್ನೇನಿನ್ನೇನು"**

ಈ ಮೇಲಿನ ಗೀತೆಯಲ್ಲಿ "ತೋಯಜಾಕ್ಷನ ದಯ" ಒಂದಿದ್ದರೆ ಉಳಿದ ಯಾವುದೂ ಲೆಕ್ಕಕ್ಕಿಲ್ಲ- "ಮಿತ್ರರಾದವರೆಲ್ಲ ಶತ್ರುಗಳೇ" ಆಗಲಿ, "ಅರ್ತಿಯ ಸಂಸಾರ ಅಡವಿ ಪಾಲೇ" ಆಗಲಿ ಮನಸ್ಸಿನ ನೆಮ್ಮದಿ ಕದಡುವುದಿಲ್ಲ ಎಂಬ ತಾವು ಕಂಡ ಸತ್ಯವನ್ನು ಜನಸಾಮಾನ್ಯರಿಗೂ ಮನ ಮುಟ್ಟುವಂತೆ ಹೇಳುವ ಉದ್ದೇಶ ವಿದಿತವಾಗಿದೆ. ಸಂಸಾರದಿಂದ ವಿರಕ್ತನಾಗಿ ಸನ್ಯಾಸ ಪಡೆದವನ ಭಾವನೆಗಳು ಇವಾದರೂ ಸಮಾಜದ ಗಾಯಕ್ಕೆ ಮುಲಾಮು ಲೇಪಿಸುವ ಪ್ರಯತ್ನವೂ ಇಲ್ಲಿದೆ. ಇಂಥ ಬೋಧನೆ ಮಾಡುವ ಇನ್ನು ಕೆಲವು ಗೀತೆಗಳ ಸಾಲುಗಳು ಇಲ್ಲಿವೆ ನೋಡಿ-

**"ಆರೇನ ಮಾಡುವರು ಅವನಿಯೊಳಗೆ**
**ಪೂರ್ವಜನ್ಮದ ಕರ್ಮ ಹಣೆಯಲ್ಲಿ ಬರೆದುದಕೆ"**

**"ಪ್ರಾಚೀನ ಕರ್ಮವು ಬಿಡಲರಿಯದು,**
**ಯೋಚನೆಯ ಮಾಡಿ ನೀ ಬಳಲಬೇಡ"**

**"ಯಾರಿಗೆ ಯಾರುಂಟು ಎರವಿನ ಸಂಸಾರ**
**ನೀರ ಮೇಲಣ ಗುಳ್ಳೆ ನಿಜವಲ್ಲ ಹರಿಯೆ"**

**"ಕಲಿಯುಗದ ಮಹಿಮೆಯು ಕಾಣಬಂತೀಗ**
**ಜಲಜಾಕ್ಷ ಮೇಲ್ಗಿರಿಯ ವೆಂಕಟೇಶ"**

ಇದೀಗ ಜನರು ಬೇಸತ್ತು ಕೃಷ್ಣದೇವರಾಯನ ಅಳಿಯ ರಾಮರಾಜನನ್ನು ಪ್ರೋತ್ಸಾಹಿಸಿ ಸಲಕ ರಾಜನನ್ನು ಎದುರಿಸಿ ಕಾದಾಡಲು ಹುರಿದುಂಬಿಸಿದರು. ಸಲಕನನ್ನು ಕೊಂದ ಮೇಲೆ ರಾಮರಾಜನು ಸದಾಶಿವರಾಯನನ್ನು ಗದ್ದುಗೆಯ ಮೇಲೆ ಕೂರಿಸಿ ತಾನು ಅವನ ಪರವಾಗಿ ರಾಜ್ಯಭಾರ ಮಾಡಿದನು. ಕೊನೆಗೊಮ್ಮೆ ರಾಜ್ಯದಲ್ಲಿ ಶಾಂತಿ ನೆಲೆಸಿತು. ರಾಮರಾಜನೂ ಕಲಾಪ್ರೇಮಿ, ಸುಸಂಸ್ಕೃತ. ಆಗ ಜೀವನ ಚೆನ್ನಾಗಿತ್ತು ಪ್ರಜೆಗಳಿಗೆ. ಜನ ನೆಮ್ಮದಿಯಿಂದ ಉಸಿರು ಬಿಟ್ಟರು. "ಸಂಕಟ ಬಂದಾಗ ವೆಂಕಟರಮಣ" ಎಂದಂತೆ ಸುಖದ ಕಾಲದಲ್ಲಿ ಜನರಿಗೆ ದೇವರ ನೆನಪು ಅಷ್ಟಾಗಿ ಬರುವುದಿಲ್ಲ! ಆದರೂ ದಾಸರು ತಮ್ಮ ಉಪದೇಶವನ್ನು ಬಿಡಲಿಲ್ಲ. ಭಕ್ತಿಯೊಂದೇ ಊರುಗೋಲು, ಮತ್ಯಾವುದೂ ಸ್ಥಿರವಲ್ಲ ಎಂದು ಜನರನ್ನು ಎಚ್ಚರಿಸುತ್ತಲೇ ಬಂದರು.

**ಈ ಕೆಳಗಿನ ಸಾಲುಗಳನ್ನು ನೋಡಿ–**

**"ಆರು ಮುನಿದರೇನು? ನಮಗಿನ್ನಾರು ಒಲಿದರೇನು**
**ಕ್ಷೀರಸಾಗರಶಯನ ಮುಕುಂದನ ಕರುಣವುಳ್ಳ ಹರಿದಾಸರಿಗೆ"**

**"ಆವನಾವನು ಕಾಯ್ವ ಅವನಿಯೊಳಗೆ?**
**ಜೀವರಿಗೆ ದಾತ ಶ್ರೀಹರಿಯಲ್ಲವೆ?"**

**"ಆರಿದ್ದರೇನಯ್ಯ, ನೀನಲ್ಲದೆ**
**ಕಾರುಣ್ಯನಿಧಿ ಹರಿಯೆ ಕೈಯ ಬಿಡಬೇಡ"**

**"ಕೊಡುವ ಕರ್ತು ಬೇರೆ ಇರುತಿರೆ**
**ಬಿಡು ಬಿಡು ಚಿಂತೆಯನು**
**ಒಡೆಯನಾಗಿ ಮೂಜಗವನು ಪಾಲಿಪ**
**ಬಡವರುದ್ಧಾರಕ ಭಕ್ತರ ಪ್ರಿಯನು"**

**"ಅಂಜಿಕಿನ್ಯಾತಕಯ್ಯ ಸಜ್ಜನರಿಗೆ**
**ಸಂಜೀವ ರಾಯನ ಸ್ಮರಣೆ ಮಾಡಿದ ಮೇಲೆ"**

**"ನೆಚ್ಚದಿರೀ ಭಾಗ್ಯಂ ಯಾರಿಗೂ ಸ್ಥಿರವಲ್ಲ**
**ನಿಶ್ಚಯವೆಚ್ಚರಿಕೆ**
**ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕ್ಕೆ ಮೆಚ್ಚು**
**ಕೇಳೆಚ್ಚರಿಕೆ"**

ಎನ್ನುತ್ತಾ ಜನರನ್ನು ಎಚ್ಚರಿಸಿದರು.

ಆಗಿನ ಕಾಲದಲ್ಲೂ ಗೆದ್ದೆತ್ತಿನ ಬಾಲ ಹಿಡಿಯುವುದು, ತಮ್ಮ ಕಾರ್ಯ ಸಾಧಿಸಲು ಅಧಿಕಾರಿಗಳಿಗೆ ಬೆಣ್ಣೆ ಹಚ್ಚುವುದು ಎಲ್ಲ ಈಗಿನ ಕಾಲದ ಹಾಗೇ ಇತ್ತು! ಜನರ ಸ್ವಭಾವ ಕಾಲಕಾಲಕ್ಕೆ ಬದಲಾಗುವುದಿಲ್ಲವಲ್ಲ. ಹಾಗಾಗಿ ಜನರ ದೃಷ್ಟಿಕೋನವನ್ನು ತಿದ್ದುವುದೇ ದಾಸರ ಉದ್ದೇಶವಾಗಿತ್ತು- ತಿರುಳು ಆಧ್ಯಾತ್ಮಿಕವೇ ಆದರೂ. ಬದುಕಿನ ಸುಖ ದುಃಖಗಳಿಗೆ, ಕಷ್ಟ ನಿಷ್ಠುರಗಳಿಗೆ ಇಂದು ಜನ ಸರಕಾರವನ್ನು ಹೊಣೆ ಮಾಡುವಂತೆ ಅಂದು ಅರಸರನ್ನು ಹೊಣೆ ಮಾಡುತ್ತಿದ್ದರು. ಅಧಿಕಾರದಲ್ಲಿರುವವರು ಒಲಿದರೆ ಕಷ್ಟಗಳು ಕಳೆದು ಜೀವನ ಸುಗಮವಾದೀತು ಎಂದು ಬಗೆದಿದ್ದರು. ಈ ಮನೋಭಾವದಿಂದ ನೆಮ್ಮದಿಯು ಸಿಕ್ಕದೆಂದು ಜನರಿಗೆ ಮನದಟ್ಟು ಮಾಡಲು ಪ್ರಯತ್ನಿಸಿದರು ದಾಸರು. ಜನರ ಗಮನವನ್ನು ಅಧ್ಯಾತ್ಮದತ್ತ ತಿರುಗಿಸಿ ಅವರ ಆಚಾರವನ್ನು ನೀತಿಯಲ್ಲಿ ನಿಲ್ಲಿಸಬೇಕೆಂದು ಬೋಧನೆ ಮಾಡುತ್ತಾ ಊರೂರು ತಿರುಗಿದರು.

**ಮುನ್ನ ಶತಕೋಟಿ ರಾಯರುಗಳಾಳಿದ ನೆಲವ**
**ತನ್ನದೆಂದೆನುತ ಶಾಸನವ ಬರೆಸಿ**
**ಬಿನ್ನಣದ ಮನೆ ಕಟ್ಟಿ ಕೋಟೆಕೊತ್ತಲವಿಕ್ಕಿ**
**ಚೆನ್ನಿಗನ ಅಸುವಳಿಯೆ ಹೊರಗೆ ಹಾಕುವರೋ**

**ಅಸ್ಥಿರದ ದೇಹವನು ನೆಚ್ಚಿ ನಂಬಿರಬೇಡ**
**ಸ್ವಸ್ಥದಲಿ ನೆನೆ ಕಂಡ್ಯ ಹರಿಪಾದವ**
**ಚಿತ್ತದಲಿ ಶುದ್ಧಿಯಿಂ ಪುರಂದರ ವಿಠಲನ**
**ಉತ್ತಮೋತ್ತಮನೆಂದು ಸ್ತುತಿ ಮಾಡು ಮನುಜ**

ಎಂದರು. ಬದುಕಿನಲ್ಲಿ ಅಧ್ಯಾತ್ಮವೆಂಬುದು ಬುತ್ತಿ, "ತತ್ವವೆಂಬ ಬುತ್ತಿ". ಆ "ಬುತ್ತಿಯನು ಕಟ್ಟಿದರೆ ಎತ್ತಲಾದರೂ ಉಣಬಹುದು". ಅವರ ರಚನೆಗಳಲ್ಲಿ ಬಹು ಪಾಲು ವ್ಯಕ್ತಿ ಜೀವನದಲ್ಲಿರಬೇಕಾದ ಧರ್ಮನಿಷ್ಠೆಯನ್ನು ಒತ್ತಿ ಹೇಳುವಂಥವು.

ಪುರಂದರದಾಸರ ಕಡೆಗಾಲದಲ್ಲಿ ವಿಜಯನಗರದ ರಾಜನಾಗಿದ್ದವನು ಸದಾಶಿವ ರಾಯ. ಹೆಸರಿಗೆ ಮಾತ್ರ ರಾಜ. ಸರ್ವಾಧಿಕಾರವೂ ಅಳಿಯ ರಾಮರಾಜನ ಕೈಯಲ್ಲಿತ್ತು. ಈ ಸಂದರ್ಭದಲ್ಲಿ ಕುಲಗಳ ನಡುವೆ ವೈಷಮ್ಯ, ಜಗಳ, ವರ್ಗಗಳ ನಡುವೆ ವಿರಸ ಹೆಚ್ಚಾಯಿತೆಂದು ಇತಿಹಾಸಕಾರರು ಹೇಳುತ್ತಾರೆ. ಇದರಿಂದ ಸಾಮ್ರಾಜ್ಯ ದುರ್ಬಲ- ವಾಯಿತು. ತಾಳಿಕೋಟೆ ಕದನದಲ್ಲಿ ವಿಜಯನಗರ ಮಹಮ್ಮದೀಯರಿಗೆ ಸೋತು ಶತ್ರುಗಳು ರಾಜಧಾನಿಯಾದ ಹಂಪಿಯನ್ನು ಆರು ತಿಂಗಳ ಕಾಲ ಲೂಟಿ ಮಾಡಿದರಂತೆ. ಆದರೆ ದಾಸರು ಆ ವರ್ಷದ ಆದಿಯಲ್ಲೇ ದೈವಾಧೀನರಾಗಿದ್ದರು! ನಾಡಿನ ಇತಿಹಾಸದ ಒಂದು ಭವ್ಯ ಅಧ್ಯಾಯಕ್ಕೆ ತೆರೆ ಬಿದ್ದಿತ್ತು!!!

## ದಾಸರ ಕಾಲದಲ್ಲಿ ಸಾಮಾಜಿಕ ವ್ಯವಸ್ಥೆ

ಈ ಮೊದಲೇ ಹೇಳಿದಂತೆ ಜಾತೀಯತೆಯ ಅಂತಃಕಲಹದಿಂದ ವಿಜಯನಗರ ದುರ್ಬಲವಾಗಿದ್ದು ಶತ್ರುಗಳಿಗೆ ಅನುಕೂಲವಾಯಿತು. ಕುಲ, ಜಾತಿ, ವೃತ್ತಿ, ಆರ್ಥಿಕ ನೆಲೆ ಮುಂತಾದ ವಿಷಯಗಳ ಬಗ್ಗೆ ಜನರಲ್ಲಿ ವೈಷಮ್ಯ, ವಿರಸ ಹೆಚ್ಚಾಗಿದ್ದ ಕಾಲ ಅದು. ಪುರಂದರದಾಸರು ಮತ್ತು ಕನಕದಾಸರು ಜಾತೀಯತೆಯ ಸೋಂಕನ್ನು, ಮಂಕನ್ನು ಕಳೆಯಲು ಹಲವಾರು ಗೀತೆಗಳನ್ನು ರಚಿಸಿದ್ದಾರೆ. ಕನಕದಾಸರ "ಕುಲಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರು ಬಲ್ಲಿರಾ?" ಒಂದು ಉದಾಹರಣೆ. ಶ್ರೀಪಾದರಾಜರ ಕೃತಿಗಳಲ್ಲೂ, ವ್ಯಾಸತೀರ್ಥರ ಕೃತಿಗಳಲ್ಲೂ ಜಾತೀಯತೆಯ ಪ್ರಸ್ತಾಪವಿದೆ. ಈ ಎಲ್ಲ ದಾಸರುಗಳು ಕಾಲವಾದ ಮೇಲೂ ಪುರಂದರದಾಸರು ಏಕಾಕಿಯಾಗಿ ಧರ್ಮಪ್ರಚಾರ ಮಾಡುತ್ತಾ ಸಮಾಜದ ಕೊಳೆಗಳ ಕಡೆಗೆ ಗಮನ ಹರಿಸಿದರು. ಕುಲವಾಗಲಿ ವಿದ್ಯೆಯಾಗಲಿ ಹಿರಿಮೆಗೆ ಕಾರಣವಲ್ಲವೆಂದು ಸಾರಿದರು. ಈ ಕೆಳಗಿನ ಉಗಾಭೋಗವನ್ನು ನೋಡಿ–

**ಹೊಲೆಯ ಬಂದನೆಂದು ಒಳಗೆ ದೇವರ ಮಾಡಿ**
**ಗಣ ಗಣ ಗಂಟೆ ಬಾರಿಸುವರಯ್ಯ**
**ತನುವಿನ ಕೋಪ ಹೊಲೆಯಲ್ಲವೆ?**
**ಪರಸತಿ ಪರಧನ ಹೊಲೆಯಲ್ಲವೆ?**
**ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟರೆ**
**ಇದಕೇನು ಮದ್ದೊ ಪುರಂದರ ವಿಠಲ**

ಹೊಲೆಯರೆಂದು ಒಂದು ಪಂಗಡದವರನ್ನು ಕೀಳಾಗಿ ನೋಡುತ್ತಿದ್ದ ಮೇಲು ಜಾತಿಯುವರಿಗೆ ದಾಸರು ಹೊಲೆಯನೆಂಬುದು ಜಾತಿಯಿಂದಾಗುವುದಲ್ಲ, ಭ್ರಷ್ಟಾಚಾರದಿಂದ ಎಂದು ಮತ್ತೆ ಮತ್ತೆ ಹೇಳಿದರು. ಜಾತೀಯತೆಯ ವಿಷ ಇಂದಿಗೂ ಸಮಾಜದಿಂದ ತೊಲಗಿಲ್ಲ. ಆದರೆ ದಾಸರು ಆ ಕಾಲದಲ್ಲೇ "ಹೊಲೆಯ ಹೊರಗಿಹನೆ? ಊರೊಳಗಿಲ್ಲವೆ? ಬಲ್ಲವರು ಪೇಳಿ ಹರಿಭಕ್ತರಾದವರು" ಎಂದು ಹಾಡಿದರು. ಆ ಹಾಡಿನಲ್ಲಿ ಹೊಲೆತನದ ಲಕ್ಷಣಗಳನ್ನು ಹೇಳಿದ್ದಾರೆ–

"ಹೇಳಿದ ಶಾಸ್ತ್ರವನು ತಿಳಿಯದವ, ಆಳಾಗಿ ಅರಸಿಗೆ ಮಣಿಯದಾತ, ಇದ್ದು ದಾನ ಧರ್ಮವ ಮಾಡದಿದ್ದವ, ಆಶೆಯಿಂದಲಿ ಬಹಳ ದೋಷ ಮಾಡುವವ, ಹುಸಿಯಾಡುವವ, ಉಂಡ ಮನೆಗೆರಡ ಯೋಚಿಸುವಾತ, ಗಂಡ ಹೆಂಡಿರೊಳು ಭೇದವಿಕ್ಕುವವ, ಅರಿತು ಆಚಾರವನು ಮಾಡದಿದ್ದವ, ಗುರು ಹಿರಿಯರನು ಕಂಡು ಎರಗದಾತ"

ಹೀಗೆ ಪುರಂದರದಾಸರು ಆ ಕಾಲದಲ್ಲೇ ಜಾತೀಯತೆಯ ವಿರುದ್ಧ ಯುದ್ಧವನ್ನು ಸಾರುವ ಧೈರ್ಯ ಮಾಡಿದ್ದರು. ಅವರು ಎಂದೂ ಮಠಗಳ ಅನುಗ್ರಹಕ್ಕಾಗಿ ಕಾದು ಕುಳಿತವರಲ್ಲ. ಹಣವಂತರ ಆದರಕ್ಕಾಗಿ ಕೈ ಕಟ್ಟಿ ನಿಂತವರಲ್ಲ.

ಕುರುಡು ಸಂಪ್ರದಾಯಗಳಿಗೆ ಕಂದಾಚಾರಗಳಿಗೆ ಕಟ್ಟುಬಿದ್ದು ಜನ ಸನ್ಮಾರ್ಗದಲ್ಲಿ ನಡೆಯುವುದನ್ನು ಮರೆತಿದ್ದ ಸಮಯದಲ್ಲಿ ದಾಸರು ತಮ್ಮ ಬೋಧನೆಗಳಿಂದ ಒಂದು ಬಗೆಯ ವಿಚಾರ ಕ್ರಾಂತಿಯನ್ನೇ ಉಂಟುಮಾಡಿದರು. ದೇವರನ್ನು ಮೆಚ್ಚಿಸಲು ಸದ್ಗೃಹಸ್ಥರಾಗಿ ಒಳ್ಳೆಯ ನಡತೆಯನ್ನು ಹೊಂದಿದ್ದು ಭಕ್ತಿ ಇಟ್ಟುಕೊಂಡರೆ ಸಾಕು ಎಂದರು. ಹರಿದಾಸರಾದ ಇವರು ಸಂಸಾರ ತೊರೆದ ಸನ್ಯಾಸಿಯಲ್ಲ. ಮಾನವ ಜನ್ಮ ದೊಡ್ಡದೆಂದೂ, ಸಂಸಾರ ಎಂಬುದು ಭಾಗ್ಯವೆಂದೂ ಹಾಡಿ ಹೊಗಳಿದವರು. ಉಪದೇಶ ಮಾಡುವಾಗ ಜೀವನದ ವಸ್ತುಸ್ಥಿತಿಯನ್ನು ಅವರು ಕಡೆಗಣಿಸಲಿಲ್ಲ. ಚಿನ್ನದ ಗೋಪುರದಲ್ಲಿ ಕುಳಿತು ಅರ್ಥವಾಗದ ಕಗ್ಗವನ್ನು ಹೇಳಿದವರಲ್ಲ. ಜನರಿಗೆ ನೀತಿಬೋಧೆ ಮಾಡುವ ಈ ಗೀತೆಯನ್ನು ನೋಡಿ–

(ಸಂದೇಶ ಸ್ಪಷ್ಟವಾಗಿರುವುದರಿಂದ ಟಿಪ್ಪಣಿಯನ್ನು ಕೈ ಬಿಡಲಾಗಿದೆ.)

**ಬೇವು ಬೆಲ್ಲದೊಳಿಡಲೇನು ಫಲ ರಂಗ ಹಾವಿಗೆ ಹಾಲೆರೆದರೇನು ಫಲ**

**ಕುಟಿಲವ ಬಿಡದಿಹ ಮನುಜರು ಮಂತ್ರವ ಪಠನೆಯ ಮಾಡಿದರೇನು ಫಲ**
**ಸಟೆಯನ್ನಾಡುವ ಮನುಜರು ಸಂತತ ನಟನೆಯ ಮಾಡಿದರೇನು ಫಲ**

............

**ಹೀನ ಗುಣಂಗಳು ಹಿಂಗದೆ ಗಂಗೆಯ ಸ್ನಾನವ ಮಾಡಿದರೇನು ಫಲ**
**ಶ್ರೀ ನಿಧಿ ಪುರಂದರ ವಿಠಲನ ನೆನೆಯದೆ ಮೌನವ ಮಾಡಿದರೇನು ಫಲ**

ಇದೇ ಚಿಂತನೆಯ ಧಾಟಿಯಲ್ಲಿ ಇನ್ನೊಂದು ಹಾಡು–

**ನಗೆಯು ಬರುತಿದೆ ಎನಗೆ ನಗೆಯು ಬರುತಿದೆ**
**ಜಗದೊಳಿರುವ ಮನುಜರೆಲ್ಲ ಹಗರಣವ ಮಾಡುವುದ ಕಂಡು**
**ಪತಿಯ ಸೇವೆ ಬಿಟ್ಟು ಪರರ ಪತಿಯ ಕೂಡೆ ಸರಸವಾಡಿ**
**ಸತತ ಮೈಯ ತೊಳೆದು ಹಲವು ವ್ರತವ ಮಾಳ್ಪ ಸತಿಯ ಕಂಡು**
**ಪರರ ವನಿತೆಯೊಲುಮೆಗೊಲಿದು ಹರುಷದಿಂದ ಅವಳ ಬೆರೆದು**
**ಹರಿವ ನೀರಿನೊಳಗೆ ಮುಳುಗಿ ಬೆರಳ ಎಣಿಸುವವರ ಕಂಡು**
**ಕಾಮ ಕ್ರೋಧ ಮನದೊಳಿಟ್ಟು ತಾನು ವಿಷದ ಪಿಂಡನಾಗಿ**
**ಸ್ವಾಮಿ ಪುರಂದರ ವಿಠಲ ನಾಮವ ನೆನೆವ ಮನುಜರನ್ನು ಕಂಡು**
**ನಗೆಯು ಬರುತಿದೆ**

## ಪುರಂದರದಾಸರ ಸಮಕಾಲೀನರು

ಭಾರತದ ಇತಿಹಾಸದಲ್ಲಿ ಪುರಂದರದಾಸರು ಬಾಳಿ ಬದುಕಿದ ಕಾಲ ಒಂದು ಮನ್ವಂತರದ ಕಾಲ! ವರ್ಣಾಶ್ರಮದ ಕಟ್ಟುಪಾಡು ನಿಧಾನವಾಗಿ ಸಡಿಲವಾಗುತ್ತಿತ್ತು. ವ್ಯಾಪಾರ, ವಾಣಿಜ್ಯ ಉದ್ಯಮಗಳು ಹೆಚ್ಚುತ್ತಿದ್ದವು. ಜನರಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ ಮತ್ತು ಪಾರಸಿ ಪಂಗಡಗಳು ಕಾಣಿಸಿಕೊಳ್ಳುತ್ತಿದ್ದವು. ನಾಡಿನ ಧಾರ್ಮಿಕ ನಿಲುವು, ಸಾಮಾಜಿಕ ವ್ಯವಸ್ಥೆ ಮತ್ತೊಂದು ಹೊಸ ಘಟ್ಟಕ್ಕೆ ತಲುಪುವ ಲಕ್ಷಣಗಳು ಕಂಡು ಬರುತ್ತಿದ್ದವು.

ಇಂತಹ ಪರ್ವ ಕಾಲದಲ್ಲಿ ದೇಶದ ಹಲವಾರು ಕಡೆ ಹಿರಿಯ ಚೇತನಗಳು ಜನ್ಮ ತಳೆದವು. ಕರ್ನಾಟಕದಲ್ಲಿ ಶ್ರೀಪಾದರಾಜರು, ವ್ಯಾಸರಾಯ ಸ್ವಾಮಿಗಳು, ಪುರಂದರದಾಸರು, ಕನಕದಾಸರು, ವಾದಿರಾಜರು ಮಿಂಚಿದರು. ಉತ್ತರ ಭಾರತದಲ್ಲಿ ರಾಮಾನಂದರು (೧೪೦೦-೧೪೭೦), ಕಬೀರದಾಸರು (೧೪೪೦-೧೫೧೮), ರಾಜಸ್ಥಾನದಲ್ಲಿ ಮೀರಾಬಾಯಿ (ಜನನ ೧೪೭೦), ಪಂಜಾಬಿನಲ್ಲಿ ಗುರುನಾನಕ್ (೧೪೬೯-೧೫೩೯), ಬಂಗಾಳದಲ್ಲಿ ಕೃಷ್ಣಚೈತನ್ಯರು (೧೪೮೫-೧೫೩೩), ಮಹಾರಾಷ್ಟ್ರದಲ್ಲಿ ನಾಮದೇವ-ಸಿಂಪಿಗಳು (೧೪೦೦ರ ಸುಮಾರು), ಗುರು ಅಮರ ದಾಸರು (೧೫೭೪ರ ಸುಮಾರು), ಬ್ರಜ ಭೂಮಿಯಲ್ಲಿ ಸೂರದಾಸರು (೧೫೯೦ರ ಸುಮಾರು) ಮೊದಲಾದ ಸಂತರು ಮೈದಾಳಿದರು.

ಅಣ್ಣಮಾಚಾರ್ಯರು (೧೪೦೮-೧೫೦೩) ಕೂಡಾ ಪುರಂದರದಾಸರ ಸಮಕಾಲೀನರು. ತಮ್ಮ ಹದಿನಾರನೆಯ ವಯಸ್ಸಿನಲ್ಲೇ ದೇವರ ಸಾಕ್ಷಾತ್ಕಾರವಾಗಿ ಮುಂದೆ ಎಂಭತ್ತು ವರ್ಷಗಳ ಕಾಲ ತಿರುಮಲೆಯ ವೆಂಕಟೇಶ್ವರನ ಸನ್ನಿಧಿಯಲ್ಲೇ ಸಂಕೀರ್ತನ ಸೇವೆ ನಡೆಸಿದವರು. ಅಣ್ಣಮಾಚಾರ್ಯರು ಮತ್ತು ಅವರ ವಂಶದವರು ದೇವಾಲಯದ ಊಳಿಗದಲ್ಲೇ ನೆಲೆಸಿದ್ದರು. ಅವರಿಗಾಗಿ ಸಂಕೀರ್ತನ ಭಂಡಾರವೇ ಇದ್ದಿತಂತೆ. ಹಾಗಾಗಿ ಅವರ ರಚನೆಗಳೆಲ್ಲ ಉಳಿದುಕೊಂಡವು. ಆದರೆ ಪುರಂದರದಾಸರು ಹಂಪಿಯಲ್ಲಿ ನೆಲೆಸಿದವರು. ಕಡೆಯಲ್ಲಿ ಹಂಪಿ ತಾಳಿಕೋಟೆ ಕದನದಲ್ಲಿ ನಿರ್ನಾಮವಾದಾಗ ದಾಸರ ಕೃತಿಗಳಲ್ಲಿ ಬಹುಪಾಲು ನಾಶವಾದುವೆಂದು ಚರಿತ್ರಕಾರರ ಊಹೆ. ಬರವಣಿಗೆ-ಯಲ್ಲಿದ್ದ ಕೃತಿಗಳು ನಾಶವಾದರೂ ಮೌಖಿಕವಾಗಿ ಆ ಸಂಪತ್ತು ತಲೆಮಾರುಗಳವರೆಗೆ ಮುಂದುವರೆಯಿತು. ಮುಂದೆ ತ್ಯಾಗರಾಜರು (೧೭೬೭-೧೮೪೭) ತಮ್ಮ ತಂದೆಯಿಂದ ಪುರಂದರ ದಾಸ ಕೀರ್ತನೆಗಳನ್ನು ಕಲಿತರು. ಅದರಿಂದ ಸ್ಫೂರ್ತಿಯನ್ನು, ಮಾರ್ಗದರ್ಶನವನ್ನು ಪಡೆದರು! ತ್ಯಾಗರಾಜರ ತಂದೆಯವರು ತಂಜಾವೂರಿನ ಇಮ್ಮಡಿ ತುಳಜಾಜಿಯ ಆಸ್ಥಾನದಲ್ಲಿ ರಾಮಾಯಣ ಕಥಾ ಕಾಲಕ್ಷೇಪವನ್ನು ಮಾಡುತ್ತಿದ್ದರಂತೆ. ಪುರಂದರದಾಸರಿಗೆ "ಕರ್ನಾಟಕ ಸಂಗೀತ ಪಿತಾಮಹ" ಎಂಬ ಬಿರುದು ಕೊಟ್ಟದ್ದು ತುಳಜಾಜಿಯೇ.

**ಪುರಂದರದಾಸ ಸಾಹಿತ್ಯದ ಪುನರುತ್ಥಾನ**

ಪುರಂದರದಾಸರು ತೀರಿಕೊಂಡ ಮೇಲೆ ಹಂಪಿಯೇ ಹಾಳಾಗಿ ಹೋಗಿರುವಾಗ, ಆರು ತಿಂಗಳ ಕಾಲ ಅದರ ಲೂಟಿ ನಡೆದಿರುವಾಗ ಅಲ್ಲಿದ್ದ ಹರಿದಾಸರೆಲ್ಲ ಎಲ್ಲೆಲ್ಲಿ ಹೋದರೊ? ದಾಸಕೂಟ ಏನಾಯಿತೋ ಯಾರಿಗೂ ತಿಳಿಯದು. ದಾಸಕೂಟದಲ್ಲಿ ಅಗ್ರರಾಗಿದ್ದ ಪುರಂದರದಾಸರ ಹಾಡುಗಳು ಎಲ್ಲ ದಾಸರ ಕಂಠದಲ್ಲೂ ಹೊಮ್ಮಿ ಮೌಖಿಕವಾಗಿ ಅದು ಮುಂದುವರೆದಿತ್ತು. ಆದರೂ ದಾಸರ ಕೃತಿಗಳು ಕ್ರಮೇಣ ಬಳಕೆಯಿಂದ ಜಾರಿ ಕಾಲ ಗರ್ಭದಲ್ಲಿ ಇಲ್ಲವಾಗುತ್ತಿತ್ತೋ ಏನೋ. ಹಾಗಾಗದಂತೆ ಇರಲು ಮುಖ್ಯ ಕಾರಣ ವಿಜಯದಾಸರು.

ಪುರಂದರದಾಸರು ಕಾಲವಾಗಿ ಸುಮಾರು ನೂರಿಪ್ಪತ್ತು ವರ್ಷಗಳಿಗೂ ನಂತರ ೧೬೮೭ರಲ್ಲಿ ಹುಟ್ಟಿದವರು ವಿಜಯದಾಸರು. ಆದರೂ ಪುರಂದರದಾಸರ ಹೆಸರು ಉಳಿದದ್ದು ಬೆಳೆದಿದ್ದು ವಿಜಯದಾಸರಿಂದ. ದಾಸಪ್ಪ ಎಂಬ ಹೆಸರಿನ ಗೃಹಸ್ಥನಾಗಿದ್ದ ಈತ ಯಾತ್ರೆಗಾಗಿ ಕಾಶಿಗೆ ಬಂದು ಗಂಗೆಯನ್ನು ದಾಟಿ ವ್ಯಾಸಕಾಶಿಯಲ್ಲಿ ತಂಗಿದ್ದರಂತೆ. ಅಲ್ಲಿ ರಾತ್ರಿ ಕನಸಿನಲ್ಲಿ ಅವರಿಗೆ ಪುರಂದರದಾಸರು ಕಾಣಿಸಿಕೊಂಡು ಹರಿದಾಸ ದೀಕ್ಷೆಯನ್ನು ನೀಡಿದರಂತೆ. ಅವರೇ ವಿಜಯ ವಿಠಲ ಎಂಬ ಅಂಕಿತವನ್ನೂ ಕೊಟ್ಟರಂತೆ. ಮುಂದೆ ವಿಜಯದಾಸರು ಶ್ರೇಷ್ಠ ಹರಿದಾಸರಾಗಿ ಕನ್ನಡನಾಡಿನಲ್ಲಿ ಪ್ರಸಿದ್ಧರಾದರು. ಸ್ವತಃ ಇಪ್ಪತ್ತೈದು ಸಾವಿರ ಕೃತಿಗಳನ್ನು ರಚಿಸಿದರು ಎಂದು ಪ್ರತೀತಿ. ವಿಜಯದಾಸರ ಕಾಲಕ್ಕೆ ಹರಿದಾಸರೆಲ್ಲ ದೂರ ದೂರದಲ್ಲಿ ಚದುರಿಹೋಗಿದ್ದರೂ ಇದ್ದಲ್ಲೇ ಹರಿದಾಸ ಪಂಥವನ್ನೂ ತಮ್ಮ ದೀಕ್ಷೆಯನ್ನೂ ನಡೆಸಿಕೊಂಡು ಹೋಗುತ್ತಿದ್ದರು. ಇದರ ಫಲವಾಗಿ ಪುರಂದರ ಸಾಹಿತ್ಯವೂ ಅಷ್ಟಿಷ್ಟು ಉಳಿದುಕೊಂಡಿತ್ತು. ವಿಜಯದಾಸರು ಶ್ರಮವಹಿಸಿ ಹರಿದು ಹಂಚಿಹೋಗಿದ್ದ ಪುರಂದರ ಕೃತಿಗಳನ್ನು ಒಂದುಗೂಡಿಸಿ ತಮ್ಮ ಶಿಷ್ಯವೃಂದದಲ್ಲಿ ಅದಕ್ಕೆ ಪ್ರಚಾರ ನೀಡಿ ಮತ್ತೆ ಬಳಕೆಗೆ ತಂದರು. ಹೀಗಾಗಿ ಪುರಂದರ ಸಾಹಿತ್ಯದ ಮೊದಲ ಸಂಗ್ರಹ ನಡೆದಿದ್ದು ವಿಜಯದಾಸರಿಂದ.

ಪುರಂದರದಾಸರು ಹರಿದೀಕ್ಷೆಯನ್ನು ಪಡೆದ ಮೇಲೆ ೧೫೬೫ರಲ್ಲಿ ತೀರಿಕೊಳ್ಳುವವರೆಗೂ ಎಡಬಿಡದೆ ಗೀತೆಗಳನ್ನು ರಚಿಸಿ ಹಾಡಿದರು. ಅವುಗಳ ಸಂಖ್ಯೆ ನಾಲ್ಕು ಲಕ್ಷದ ಎಪ್ಪತ್ತೈದು (ಅಥವಾ ಇಪ್ಪತ್ತೈದು) ಸಾವಿರವೆಂದು ಪುರಂದರದಾಸರೇ ಒಂದು ಕಡೆ ಹೇಳಿದ್ದಾರೆ. "ವಾಸುದೇವನ ನಾಮಾವಳಿಯ ಕ್ಲುಪ್ತಿಯನು ವ್ಯಾಸರಾಯರ ದಯದಿಂದ ಬಿನ್ನೈಸುವೆನು" ಎಂದು ಶುರು ಮಾಡಿ

**"ನಾಲ್ಕು ಲಕ್ಷಯಿ(ಯೆ)ಪ್ಪತ್ತೈದು ಸಾವಿರ ಕೃತಿಯು**
**ಕಂತುಜನಕನ ನಾಮ ಘನಮಹಿಮೆ**

**ಸಂತಸದಿ ಶ್ರುತಿಸ್ಮೃತಿ ಸಮ್ಮತದಿಂದ**
**ಪುರಂದರವಿಠ್ಠಲ ವ್ಯಾಸಮುನಿಗಳು ಪೇಳಿಸಿದರು"**

ಎಂದು ಹೇಳಿದ್ದಾರೆ.

ವಿಜಯದಾಸರ ಸುಳಾದಿಯೊಂದರಲ್ಲಿ

**"ಸೃಷ್ಟಿಯೊಳಗೆ ಎಲ್ಲ ಗಣಿತ ಮಾಡಲಾಗಿ**
**ಮೆಟ್ಟಿಗೆ ತ್ರಿಪಾದ ಕಡಿಮೆ ಐದುಲಕ್ಷ**
**ಇಷ್ಟಾದವು ದಾಸರು ಪೇಳಿದ ಪದ**
**ಇಷ್ಟದೈವನಾದ ವಿಜಯವಿಠ್ಠಲ ಹರಿಯ**
**ಗುಟ್ಟಿನಿಂದಲಿ ಸಲಿಸಿ ಕುಣಿಕುಣಿಸುತಲಿ"**

ಎಂದಿದೆ. ಐದು ಲಕ್ಷಕ್ಕೆ ತ್ರಿಪಾದ ಕಡಿಮೆ ಎಂದರೆ ನಾಲ್ಕುಲಕ್ಷ ಇಪ್ಪತ್ತೈದು ಸಾವಿರ. ಇಲ್ಲಿ ಕೃತಿ ಎಂದರೇನು ಎಂಬುದು ಸ್ಪಷ್ಟವಾಗಿ ಗೊತ್ತಿಲ್ಲ. ಚರಣ, ನುಡಿ ಮುಂತಾದುವನ್ನು ಕೂಡ "ಕೃತಿ" ಎಂದು ಪರಿಗಣಿಸಲ್ಪಟ್ಟಿದೆಯೆ? ಇಷ್ಟು ದೊಡ್ಡ ಗಾತ್ರದ ಸಾಹಿತ್ಯ ಒಬ್ಬ ವ್ಯಕ್ತಿಯಿಂದ ಸಾಧ್ಯವೆ? ಎಂಬ ಪ್ರಶ್ನೆಯೂ ಬರುತ್ತದೆ. ಹಾಗೆ ಯೋಚಿಸುವಾಗ ನಾಲ್ಕು ಲಕ್ಷಕ್ಕೂ ಮೇಲ್ಪಟ್ಟ ಕೃತಿ ರಚನೆ ಉತ್ಪ್ರೇಕ್ಷೆ ಎನ್ನಿಸುತ್ತದೆ. ಆದರೆ ಖೇದದ ಸಂಗತಿ ಎಂದರೆ ಈಗ ನಮಗೆ ಪುರಂದರದಾಸರ ಹೆಸರಿನಲ್ಲಿ ದೊರಕುವ ಕೃತಿಗಳನ್ನೆಲ್ಲ ಒಂದುಗೂಡಿಸಿದರೆ ಒಂದೂವರೆ ಸಾವಿರವನ್ನೂ ಮುಟ್ಟುವುದಿಲ್ಲ. ಅವುಗಳ ವಸ್ತು, ಭಾಷೆ, ಶೈಲಿ ಮುಂತಾದ ವಿವರಗಳನ್ನು ಪರಿಶೀಲಿಸಿದಾಗ ನಿಜವಾಗಿಯೂ ಪುರಂದರದಾಸರದ್ದೇ ಎಂದು ಹೇಳಬಹುದಾದ ಕೃತಿಗಳು ಒಂದು ಸಾವಿರವೂ ಇಲ್ಲ. ಮೌಖಿಕವಾಗಿ ಬಂದಂತಹ ಪದಗಳಲ್ಲಿ ಕಲಬೆರಕೆಯಾಗುವ ಸಾಧ್ಯತೆ ಬಹಳಷ್ಟಿದೆ!

## ಸಮಾರೋಪ

ಸಂಗೀತ, ಸಾಹಿತ್ಯ, ಧರ್ಮ ಬೋಧನೆ ಈ ಎಲ್ಲ ಕ್ಷೇತ್ರಗಳಲ್ಲೂ ಭಾರತ ಸಂಸ್ಕೃತಿಗೆ ಕನ್ನಡ ನಾಡಿನ ಅಮೂಲ್ಯ ಉಡುಗೊರೆ ಎಂಬಂತೆ ಮೆರೆದವರು ಪುರಂದರದಾಸರು. ಅವರ ರಚನೆಗಳಲ್ಲಿ ಗೇಯ ಗುಣವೂ ಇದೆ. ಕಾವ್ಯ ಧರ್ಮವೂ ಇದೆ. ದಾಸರು ಹಲವಾರು ಕ್ಷೇತ್ರಗಳಿಗೆ ಹೋಗಿ ತೀರ್ಥಯಾತ್ರೆ ಮಾಡಿ ಆಯಾ ಕ್ಷೇತ್ರಗಳಲ್ಲಿನ ದೇವರ ಮೇಲೂ ಹಾಡುಗಳನ್ನು ರಚಿಸಿ ಹಾಡಿದರು. ಆಗಿನ ಕಾಲದಲ್ಲಿ ಭಾಷಾವಾರು ಪ್ರಾಂತ್ಯ ವಿಂಗಡಣೆ ಇರಲಿಲ್ಲವಾದ್ದರಿಂದ ಆಂಧ್ರ, ತಮಿಳುನಾಡು, ಮಹಾರಾಷ್ಟ್ರ ಮುಂತಾದ ಕಡೆಗಳಲ್ಲೂ ಪುರಂದರದಾಸರು ಪ್ರಭಾವ ಬೀರಿದ್ದರು. ಪುರಂದರದಾಸರ ಪದಗಳ

ಸಂಗ್ರಹ ಮೊದಲು ಕಲ್ಲಚ್ಚು ಕಂಡಿದ್ದು ಮರಾಠಿ ಲಿಪಿಯಲ್ಲಿ! ಅಬಾಜಿ ರಾಮಚಂದ್ರ ಸಾವಂತರು ಬೆಳಗಾವಿಯಲ್ಲಿ ೧೮೮೦ರಲ್ಲಿ ಈ ಸಂಗ್ರಹವನ್ನು ಪ್ರಕಟಿಸಿದರು! ಈಗ ಲಭ್ಯವಿರುವ ಪುರಂದರ ಸಾಹಿತ್ಯದ ಅತಿ ಹಳೆಯ ಹಸ್ತ ಪ್ರತಿಗಳು ಇರುವುದು ದೇವನಾಗರಿ ಲಿಪಿಯಲ್ಲಿ.

ಹೀಗೆ ಕನ್ನಡ ನಾಡಿನಲ್ಲಿ ಐನೂರು ವರ್ಷಗಳಿಗಿಂತಲೂ ಹಿಂದೆ ಮಿಂಚಿ ಮೊಳಗಿದವರಾದರೂ 'ಪುರಂದರದಾಸ' ಎಂಬ ಆ ಮಿಂಚಿನ ಪ್ರಭೆ ಕನ್ನಡಿಗರ ಮತ್ತು ಕನ್ನಡೇತರರ ಹೃದಯದಲ್ಲಿ ಅಂದಿನಿಂದ ಇಂದಿನವರೆಗೂ ಮನೆ ಮಾಡಿದೆ. ಕವಿಯಾಗಿ, ಸಂಗೀತಗಾರರಾಗಿ, ಧರ್ಮಬೋಧಕರಾಗಿ ಜನರಿಗೆ ಮಾರ್ಗದರ್ಶಿಯಾಗಿ ಬೆಳಗುತ್ತಿರುವ ಮಹಾ ಪ್ರತಿಭೆ ಪುರಂದರದಾಸರು. ಆ ಪ್ರತಿಭೆ ಕನ್ನಡದ ಮಣ್ಣಲ್ಲಿ ಹುಟ್ಟಿತಲ್ಲ! ಅದು ನಮ್ಮ ಪುಣ್ಯ. ವ್ಯಾಸತೀರ್ಥರು ಅಂದಂತೆ– "ದಾಸರೆಂದರೆ ಪುರಂದರದಾಸರಯ್ಯ!!!"

## ಆಕರ ಗ್ರಂಥ

ಪುರಂದರ ಸಾಹಿತ್ಯ ದರ್ಶನ, ಸಂಪುಟ ೧– ಜೀವನ ದರ್ಶನ, ಸಂಪುಟ ೩– ಸಮಾಜ ದರ್ಶನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೮೫.

■

# ಪುರಂದರದಾಸರ ಸಾಹಿತ್ಯದಲ್ಲಿ ಹಾಸ್ಯ

–ಶ್ರೀನಾಥ್ ಭಲ್ಲೆ

**ಕ**ನ್ನಡ ಸಾಹಿತ್ಯದ ಇತಿಹಾಸದಲ್ಲಿ ಭಕ್ತಿ ಜಾಗೃತಿಯನ್ನು ಉಂಟುಮಾಡುವ ಹಲವಾರು ಭಕ್ತಿ ಪಂಥಗಳು ಬಂದು ಹೋಗಿವೆ. ೧೫ನೆಯ ಶತಮಾನದ ದಾಸ ಸಾಹಿತ್ಯ ಇಂಥ ಜಾಗೃತಿಗಳಲ್ಲಿ ಅಗ್ರ ಸ್ಥಾನದಲ್ಲಿ ರಾರಾಜಿಸುತ್ತಿರುವ ಭಕ್ತಿ ಪಂಥ. ಹರಿದಾಸರುಗಳು ಮುಖ್ಯವಾಗಿ ಸಂತರಾಗಿದ್ದುಕೊಂಡೇ ಯಾಯಿವಾರ ನಡೆಸುತ್ತ ಆಹಾರ ಪದಾರ್ಥಗಳನ್ನು ಯಾಚಿಸಿ ಪಡೆದು, ಅಡುಗೆ ಮಾಡಿಕೊಂಡು ಮತ್ತೊಬ್ಬರಿಗೂ ನೀಡಿ ತಾವುಣ್ಣುವ ಪದ್ಧತಿಯಲ್ಲಿ ತೊಡಗಿದ್ದವರು.

ಮನೆ ಮಠ ತೊರೆದು ಚಳಿ, ಮಳೆ, ಬಿಸಿಲಿಗೆ ಮೈ ಒಡ್ಡಿಕೊಂಡು ಊರೂರು ತಿರುಗುತ್ತ ದಾಸ ಸಾಹಿತ್ಯ ಪ್ರಚಾರ ಮಾಡುವ ಮೂಲಕ ಧರ್ಮಬೋಧನೆ, ಅಧ್ಯಯನ, ಇತರ ದೈನಂದಿನ ಚಟುವಟಿಕೆಗಳು ಮುಂತಾದ ಕೆಲಸಗಳಲ್ಲಿ ನಿರತರಾಗಿರುವ ದಾಸರಿಗೆ ಹಾಸ್ಯಕ್ಕೆ ಸಮಯವಾದರೂ ಎಲ್ಲಿ? 'ಎಲ್ಲಾ ಅವನ ಕೃಪೆ' ಎಂದು ದೈವಕ್ಕೆ ಶರಣು ಹೋಗುವ ಚಿಂತನೆ ನಮಗೆ ಅಂದಿನ ದಾಸವರೇಣ್ಯರಾದ ಶ್ರೀಪಾದರಾಯರು, ವ್ಯಾಸತೀರ್ಥರು, ವಾದಿರಾಜರು, ಕನಕದಾಸರೇ ಮೊದಲಾದವರ ಸಾಹಿತ್ಯದಲ್ಲಿ ಗಾಢವಾಗಿ ಕಂಡುಬರುತ್ತದೆ. ಇವರುಗಳ ರಚನೆಗಳಲ್ಲಿ ಹಾಸ್ಯಕ್ಕೆ ಒತ್ತು ಇರಲಿಲ್ಲ.

ಹಾಸ್ಯ ಎಂದ ಮಾತ್ರಕ್ಕೆ ಹೊಟ್ಟೆ ಹಿಡಿದುಕೊಂಡು ನಕ್ಕು ಪಕ್ಕೆಲೆಬು ಮುರಿದುಕೊಳ್ಳುವಂತಾಗಬೇಕು ಎಂದೇನಿಲ್ಲ. ಕೇಳಿದೊಡನೆ ಅಥವಾ ಓದಿದೊಡನೆ ತುಟಿ ಬಿರಿಯುವಂತಿರಬೇಕು. ಮುಖದಲ್ಲಿ ಆನಂದ ತೇಲುವಂತಾಗಬೇಕು. ಇಂತಹ ಕೃತಿಗಳನ್ನು ರಚಿಸಿದ ಏಕಮಾತ್ರ ದಾಸರು, ಪುರಂದರದಾಸರು. ನನಗೆ ತಿಳಿದಮಟ್ಟಿಗೆ ಭಾರತದಾದ್ಯಂತ ಮಿಂಚಿದ ಹಲವಾರು ಸಂತರ ಪೈಕಿ ಹಾಸ್ಯಮಯವಾದ ರಚನೆಗಳನ್ನು ರಚಿಸಿದವರು ಪುರಂದರದಾಸರು ಮಾತ್ರ. ಪುರಂದರದಾಸರ ಸಾಹಿತ್ಯದಲ್ಲಿ ಹಾಸ್ಯ ಎಂಬುವುದು ಅಲ್ಲಲ್ಲಿ ಚಿನಕುರಳಿಯಂತೆ ಸಿಡಿದು ಮಾಯವಾಗುತ್ತದೆ!

ಜನರ ನಡವಳಿಕೆಯನ್ನು ವ್ಯಂಗ್ಯದ ಮೂಲಕ ತಿದ್ದುವ ಪರಿಯಲ್ಲಿ ಹಾಸ್ಯ ಹಾಸುಹೊಕ್ಕಾಗಿದೆ. ಇಂಥಾ ಕೆಲವು ಕೃತಿಗಳತ್ತ ಒಂದಷ್ಟು ಗಮನ ಹರಿಸಿ ಹಾಸ್ಯ ರಸವನ್ನು ಆಸ್ವಾದಿಸೋಣ ಬನ್ನಿ.

ಪತಿಯು ಪತ್ನಿಯನ್ನೋ ಅಥವಾ ಪತ್ನಿಯು ಪತಿಯನ್ನೋ ವಂಚಿಸಿ ನಂತರ ಸ್ನಾನ ಮಾಡಿ ಜಪವ ಮಾಡಿದೊಡನೆ ಪಾಪ ಕಳೆದುಹೋಗುವುದು ಎಂಬ ಭ್ರಮೆಯಲ್ಲಿರುವವರನ್ನು ಕಂಡು ಹೀಗೆ ನಗೆಯಾಡುತ್ತಾರೆ.

ನಗೆಯು ಬರುತಿದೆ ಎನಗೆ
ನಗೆಯು ಬರುತಿದೆ

ಜಗದೊಳಿರುವ ಮನುಜರೆಲ್ಲ
ಹಗರಣವ ಮಾಡುವುದ ಕಂಡು

ಪರಸತಿಯ ಒಲುಮೆಗೊಲಿದು
ಹರುಷದಿಂದ ಅವಳ ಬೆರೆದು
ಹರಿವ ನೀರಿನೊಳಗೆ ಮುಳುಗಿ
ಬೆರಳನೆಣಿಸುವರ ಕಂಡು

ಪತಿಯ ಸೇವೆ ಬಿಟ್ಟು ಪರರ
ಪತಿಯ ಕೂಡೆ ಸರಸವಾಡೆ
ಸತತ ಮೈಯ ತೊಳೆದು ಹಲವು
ವ್ರತವ ಮಾಳ್ಪ ಸತಿಯ ಕಂಡು

ಕಾಮ ಕ್ರೋಧ ಮನದೊಳಿಟ್ಟು
ತಾನು ವಿಷಯ ಪುಂಜನಾಗಿ
ಸ್ವಾಮಿ ಪುರಂದರವಿಠಲನ
ನಾಮ ನೆನೆಯುವವರ ಕಂಡು

ದಾಸರ ದಿನನಿತ್ಯದ ಜೀವನದ ಒಂದು ಕಟುಸತ್ಯ ಏನೆಂದರೆ, ಅವರು ಭಿಕ್ಷಕ್ಕೆಂದು ಬಾಗಿಲಿಗೆ ಹೋದೊಡನೆ ಥಟ್ಟನೆ ಬಂದು ಯಾರೂ ಪಂಚಭಕ್ಷ್ಯ ಪರಮಾನ್ನ ಬಡಿಸುತ್ತಿರಲಿಲ್ಲ ಅಥವಾ ಮೊರದ ತುಂಬಾ ಅಕ್ಕಿ-ಬೇಳೆ ನೀಡುತ್ತಿರಲಿಲ್ಲ. ಮನೆಗೆಲಸವೆಂದೋ, ಮಕ್ಕಳನ್ನು ನೋಡಿಕೊಳ್ಳುವುದೆಂದೋ, ಅನಾರೋಗ್ಯವೆಂದೋ ಹೀಗೆ ಏನೋ ಕಾರಣದಿಂದ ಭಿಕ್ಷ ನೀಡಲು ಆಗದೆಂದು ಸೋಗು ಹಾಕಿ ಮುಂದಕ್ಕೆ ಹೋಗೆಂದು ಹೇಳುವವರೂ ಇದ್ದರು. ಅದನ್ನು ಹಾಸ್ಯಮಯವಾಗಿ ಚಿತ್ರಿಸಿದ ಪರಿ ಇಲ್ಲಿದೆ–

ಇಕ್ಕಲಾರೆ ಕೈ ಎಂಜಲು, ಚಿಕ್ಕ ॥ಪ॥
ಮಕ್ಕಳು ಅಳುತಾರೆ ಹೋಗೋ ದಾಸಯ್ಯ ॥ಅನು॥

ಮನೆಯ ಸಾರಿಸುತೇನೆ ಮಡಿಕೆ ತೊಳೆಯುತೇನೆ
ಮನೆಯೊಳಗಾರಿಲ್ಲ ಹೋಗೋ ದಾಸಯ್ಯಾ
ತನಯರು ಅಳುತಾರೆ ನಿನದೇನು ಕಾಟವೋ
ಕ್ಷಣಹೊತ್ತೂ ನಿಲ್ಲದೇ ಹೋಗೋ ದಾಸಯ್ಯ ॥೦೧॥

ಅಟ್ಟದ ಮೇಲಿನ ಅಕ್ಕಿ ತೆಗೆಯಬೇಕು
ಹೊಟ್ಟೆ ನೋಯುತಲಿದೆ ಹೋಗೋ ದಾಸಯ್ಯಾ
ಮುಟ್ಟಾಗಿ ಇದ್ದೇನೆ ಮನೆಯೊಳಗಾರಿಲ್ಲ
ನಿಷ್ಠೂರ ಮಾಡದೇ ಹೋಗೋ ದಾಸಯ್ಯಾ ॥೦೨॥

ವೀಸದ ಕಾಸಿಗೆ ದವಸವ ನಾ ತಂದೆ
ಕೂಸಿಗೇ ಸಾಲದು ಹೋಗೋ ದಾಸಯ್ಯಾ
ಆಸೆಕಾರ ನೀನು ದೋಷಕಾರಿ ನಾನು
ಶೇಷಾಚಲವಾಸ ಪುರಂದರವಿಠಲ ॥೦೩॥

* ವೀಸ – 'ಹಣ'ವೆಂಬ ನಾಣ್ಯದ ಹದಿನಾಲ್ಕನೇ ಒಂದು ಭಾಗ
* ಕಾಸು – ಸಣ್ಣ ನಾಣ್ಯ

ಒಂದು ನಾಯಿಯನ್ನು "ಊಟವಾಯಿತೆ?" ಎಂದು ವಿಚಾರಿಸುವ ಈ ಕೆಳಗಿನ ಪದದಲ್ಲಿ ಒಂದು ಗೂಢಾರ್ಥವೂ ಅಡಕವಾಗಿದೆ–

ಡೊಂಕು ಬಾಲದ ನಾಯಕರೇ
ನೀವೇನೂಟವ ಮಾಡಿದಿರಿ

ಕಣಕ ಕುಟ್ಟುವಲ್ಲಿಗೆ ಹೋಗಿ
ಹಣಿಕಿ ಇಣಿಕಿ ನೋಡುವಿರಿ
ಕಣಕ ಕುಟ್ಟುವ ಒನಕೇಲಿ ಬಡಿದರೆ
ಕುಂಯಿ ಕುಂಯಿ ರಾಗವ ಹಾಡುವಿರಿ ॥೦೧॥

ಹುಗ್ಗಿ ಮಾಡುವಲ್ಲಿಗೆ ಹೋಗಿ
ತಗ್ಗಿಬಗ್ಗಿ ನೋಡುವಿರಿ
ಹುಗ್ಗಿ ಮಾಡೋ ಸೌಟಲಿ ಬಡಿದರೆ
ಕುಂಯಿ ಕುಂಯಿ ರಾಗವ ಪಾಡುವಿರಿ ॥೦೨॥

ಹಿರೇ ಬೀದಿಯಲಿ ಓಡುವಿರಿ
ಕರೇ ಬೂದಿಯಲಿ ಹೊರಳುವಿರಿ

**ಪುರಂದರವಿಠಲನ ಈ ಪರಿ**
**ಮರೆತು ಸದಾ ನೀವ್ ಚರಿಸುವಿರಿ ॥೦೩॥**

* ಕಣಕ – ಹಿಟ್ಟು (ಗೋಧಿಹಿಟ್ಟು)
* ಹಣುಕಿ – ಕಳ್ಳತನದಲ್ಲಿ ನೋಡುವುದು

ಮೇಲ್ನೋಟಕ್ಕೆ ಶ್ವಾನವೊಂದನ್ನು ಕುರಿತು ಊಟವನ್ನೇನು ಮಾಡಿದಿರಿ ಎಂದು ಕೇಳುವಂತೆ ಇದ್ದರೂ ಒಳಾರ್ಥವೇ ಬೇರೆ ಇದೆ. ತಮಗೆ ಸಲ್ಲದ ಕೆಲಸವ ಮಾಡಿದಲ್ಲಿ, ತಮಗೆ ಸಂಬಂಧವಿಲ್ಲದ ಜಾಗಕ್ಕೆ ಮೂಗು ತೂರಿಸಿಕೊಂಡು ಹೋದಾಗ ಪರಿಣಾಮ ನೆಟ್ಟಗಿರುವುದಿಲ್ಲ ಎಂದು.

ದಾಸರ ನಿತ್ಯ ಯಾತ್ರೆಯ ಮತ್ತೊಂದು ಅನುಭವ ಎಂದರೆ ಕಾವಿ ಉಟ್ಟವರ ಕಂಡ ಕೂಡಲೇ ಬಾಗಿಲು ಬಡಿಯುವ ಮಂದಿ!

**ಕದವ ಮುಚ್ಚಿದಳಿದೆಕೋ ಗಯ್ಯಾಳಿ ಮೂಳಿ ॥ಪ॥**

**ಕದವ ಮುಚ್ಚಿದಳಿದೆಕೋ ಚಿಲಕ ಅಲ್ಲಾಡುತಿದೆ**
**ಒಳಗಿದ್ದ ಪಾಪವು ಹೋದೀತು ಹೊರಗೆಂದು ॥ಅನು॥**

**ಭಾರತ ರಾಮಾಯಣ ಪುಣ್ಯ ಕಾವ್ಯಂಗಳ**
**ಸಾರತ್ವದ ಬಿಂದು ಸೇರೀತು ಒಳಗೆಂದು ॥೦೧॥**

**ನಂದನ ಕಂದ ಗೋವಿಂದ ಮುಕುಂದನ**
**ಚಂದದ ಧ್ವನಿ ಹೋದೀತು ಕರ್ಣಕೆಂದು ॥೦೨॥**

**ಹರಿಶರಣರ ಪಾದ ಸರಸಿಜ ಯುಗಳದ**
**ಪರಮ ಪಾವನವಾದ ರಜವು ಬಿದ್ದೀತೆಂದು ॥೦೪॥**

**ಮಂಗಳ ಮೂರುತಿ ಪುರಂದರ ವಿಠಲನ**
**ತುಂಗವಿಕ್ರಮ ಪದದಂಗುಳಿ ಸೋಕೀತೆಂದು ॥೦೫॥**

* ತುಂಗವಿಕ್ರಮಪದ – "ತ್ರೀಣಿ ಪದಾ ವಿಚಕ್ರಮೇ ವಿಷ್ಣುಃ"
ಭುವಿ, ಅಂತರಿಕ್ಷ, ವ್ಯೋಮ – ಮೂರನ್ನು ಆಕ್ರಮಿಸಿಕೊಂಡ ವಿಷಯ

ದಾಸರು ಬರುವುದ ಕಂಡು ಧಡಕ್ಕನೆ ಬಾಗಿಲು ಬಡಿದವಳನ್ನು 'ಗಯ್ಯಾಳಿ ಮೂಳಿ' ಎಂದು ಹಂಗಿಸುತ ಒಳಗಿದ್ದ ಕೂಸು ಹೊರಗೆ ಹೋಗದಿರಲಿ ಎಂದು ಮುಚ್ಚಿರಬಹುದು ಎನ್ನುತ್ತಾ 'ಕೂಸು' ಎಂಬುದರ ಬದಲು 'ಪಾಪ' ಎಂದು ನುಡಿದು ಅನೇಕಾರ್ಥ ನೀಡಿದ್ದಾರೆ.

ಇಷ್ಟಕ್ಕೂ ಕದವ ಮುಚ್ಚಿದ್ದೇಕೆ ಎಂದು ಯೋಚಿಸಿದರೆ ಕೆಲವೊಂದು ವಿಚಾರಗಳು ಹೀಗಿರಬಹುದು ಎನಿಸುತ್ತದೆ. ದಿನ ಬೆಳಗಾದರೆ ಭಿಕ್ಷಕ್ಕೆ ಬರುವ ಈತನದ್ದೊಂದು ಕಾಟ ಎಂಬ ಕಾರಣ ಇರಬಹುದು. 'ಭಿಕ್ಷೆ ನೀಡುವುದಿಲ್ಲ ಮುಂದಕ್ಕೆ ಹೋಗು' ಎಂದು ನುಡಿದಾಗ ಎಲ್ಲಿ ಪಾಪ ಸುತ್ತಿಸಿಕೊಳ್ಳುವುದೋ ಎಂದು ಹೆದರಿ, ಬಾಗಿಲು ಬಡಿದುಬಿಡುವುದೇ ಕ್ಷೇಮ ಎಂದು ಇರಬಹುದು. ಇದಾವುದೂ ಅಲ್ಲದೇ ಆ ಮನೆಯವರು ಎಂಜಲು ಕೈಯಲ್ಲಿ ಕಾಗೆಯನ್ನೂ ಓಡಿಸದಂತಹ ಜಿಪುಣರಿರಬಹುದು.

ಮತ್ತೆ ಕೆಲವರಿಗೆ ಬೇರೊಂದು ಭೀತಿ ಇರುತ್ತದೆ. ಸನ್ಯಾಸಿಯ ನೆರಳು ಮನೆಯೊಳಗೆ ಬಿದ್ದರೆ ಮನೆಯಾತನಿಗೂ ಅದೇ ಬುದ್ಧಿ ಬಂದು, ಕಾವಿ ಉಟ್ಟು ಮನೆಯ ಜನರನ್ನು ತೊರೆದು ಹೊರಟೇ ಹೋದಾನು ಎಂಬ ಭೀತಿ! "ಅಯ್ಯೋ! ಸದ್ಯ ! ವೈರಾಗ್ಯ ಬಂದುಬಿಟ್ಟರೆ ಏನ್ ಮಾಡೋದು? ಇನ್ನೂ ತಲೆಯ ಮೇಲೆ ಜವಾಬ್ದಾರಿ ಇದೆ" ಅಂತ.

ಇಂಥಾ ಸಂದರ್ಭ ದಾಸರಿಗೂ ಅರಿವಿದ್ದು, ಐಹಿಕ ಸುಖವನ್ನು ಯಾವ ಕಾರಣಕ್ಕೂ ತ್ಯಜಿಸಲಿಚ್ಛಿಸದವರ ಮೇಲೆ ಸನ್ಯಾಸಿಯ ನೆರಳು ಬಿದ್ದರೆ ಏನಾಗಬಹುದು ಎನ್ನುವುದರ ಬಗ್ಗೆ ಸ್ಥೂಲವಾಗಿ ಇನ್ನೊಂದು ಪದದಲ್ಲಿ ಹೇಳಿದ್ದಾರೆ:

**ಮಂಡೆ ಬೋಳಾದ ಸನ್ಯಾಸಿ ಮನೆಬಂದು ಹೊಕ್ಕನಮ್ಮ ಎನ್ನ ॥ಪ॥**

**ಗಂಡನ ಕಿವಿಯೂದಿ ಮರುಳು ಮಾಡಿ ಮನಗೊಂಡನಮ್ಮ ॥ಅನು॥**

**ಮಡಿಯ ಮಾಡಿ ಮೈತೊಳೆದು ನಾವುಣ್ಣಲಾರೆವಮ್ಮ**
**ನಡತೆ ತಪ್ಪಿತೆಂದೊಬ್ಬರು ನಮ್ಮನ್ನು ದಂಡಿಸಿಲ್ಲವಮ್ಮ**
**ನುಡಿಯಲೆಷ್ಟೆಂದ ವೈಷ್ಣವತನ ಬೇಸರವಿಟ್ಟಿತಮ್ಮ**
**ಕಡು ಮೂರ್ಖ ಸನ್ಯಾಸಿ ಬಂದಿವ ಬಿಡಿಸಿದ ನೋಡಿರಮ್ಮ ॥೧॥**

**ಮುತ್ತೈದೇರು ನಾವು ಹಣೆತುಂಬ ಕುಂಕುಮ ಇಡುವೆವಮ್ಮ ನಾವು**
**ಎತ್ತ ಹೋದರು ತುತ್ತು ಬುತ್ತಿಯ ಕೊಂಡೊಯ್ದುವುಂಬೇವಮ್ಮ**
**ತೊತ್ತು ಬಂಟರ ನೀರಲ್ಲದೆ ಮತ್ತೊಂದು ಅರಿಯೇವಮ್ಮ ಈ**
**ಮೃತ್ಯು ಸನ್ಯಾಸಿ ಬಂದಿವನೆಲ್ಲ ಬಿಡಿಸಿದ ನೋಡಿರಮ್ಮ ॥೨॥**

**ಬೆಳ್ಳುಳ್ಳಿ ನುಗ್ಗೆಕಾಯಿ ಕವಡಿಕಾಯಿಗಳು ತಿಂಬೆವಮ್ಮ**
**ಮುಲ್ಲಂಗಿಪಲ್ಲೆ ಗಜ್ಜರಿ ಪುಂಡೆಪಲ್ಲೆವು ಸಾಲದಮ್ಮ**
**ಸುಳ್ಳು ಯಾಕಾಡಲಿ ಗಂಡಸರು ತಂಗಳುಂಬೋರಮ್ಮ**
**ಇಲ್ಲಿಗೆ ಆಯಿತೆಮ್ಮಾಚಾರವೆನಬೇಡಿ ಕೇಳಿರಮ್ಮ ॥೩॥**

ಏಕಾದಶಿದಿನ ಅವರೆಗುಗ್ಗರಿಗಳು ತಿಂಬೆವಮ್ಮ ಮೇಲೆ
ಬೇಕಾದರೆ ನಾಲ್ಕು ದೋಸೆಯ ಮಾಡಿ ತಿಂಬೇವಮ್ಮ
ಸಾಕಾಗದಿದ್ದರೆ ಮೊಸರು ಮಜ್ಜಿಗೆಗಳ ಕುಡಿವೆವಮ್ಮ ಈ
ಕಾಕು ಸನ್ಯಾಸಿ ಬಂದವನೆಲ್ಲ ಬಿಡಿಸಿದ ನೋಡಿರಮ್ಮ ॥೦೪॥

ಅನ್ಯದೇವರಿಗೆ ನೈವೇದ್ಯವಿಟ್ಟುಂಬೋದು ಅರಿಯೆನಮ್ಮ
ಹನ್ನೊಂದು ಕಾಸಾಗಿ ತಾಗೀಗ ಕಾಸು ಹೊನ್ನಾಯಿತಮ್ಮ
ನಿನ್ನಾಣೆಲೇ ಸಖಿವೊಗತನ ಕೆಟ್ಟುಹೋಯಿತಮ್ಮ
ಚೆನ್ನ ಪುರಂದರವಿಠಲನ ಭಜಿಸಿದ ಧರ್ಮಮ್ಮ ॥೦೫॥

{ಈ ಕೀರ್ತನೆ ದಾಸರ ಪೂರ್ವಜೀವನ ಕುರಿತು ಎಂದು ಪ್ರತೀತಿ}

* ಮಂಡೆ ಬೋಳಾದ ಸನ್ಯಾಸಿ – ವ್ಯಾಸರಾಯಸ್ವಾಮಿಗಳು
* ತಾಗೀಗ – ಕೂಡಿಕೊಂಡು
* ತೊತ್ತು ಬಂಟರು – ಮನೆಗೆಲಸ ಮಾಡಲು ಇಟ್ಟುಕೊಂಡಿರುವವರು

ದಿನನಿತ್ಯದ ಐಷಾರಾಮಿ ಜೀವನಕ್ಕೆ ಎಲ್ಲಿ ಧಕ್ಕೆ ಬರುವುದೋ ಎಂದಂಜಿ ಕದವ ಮುಚ್ಚಿರಬಹುದು ಆ ಗಯ್ಯಾಳಿ. ಸನ್ಯಾಸಿ ಜೀವನವೆಂದರೆ ಹೀಗೆಲ್ಲ ಇರುತ್ತದೆ ಎಂಬ ಕಲ್ಪನೆಯ ಜೊತೆಜೊತೆಗೆ ದಾಸರ ವೇಷದ ಬಗ್ಗೆಯೇ ಒಂದು ಕಲ್ಪನೆ ಅವರ ಹೃದಯದಲ್ಲಿ ಮನೆ ಮಾಡಿರುತ್ತದೆ. ಎಷ್ಟರಮಟ್ಟಿಗೆ ಎಂದರೆ ಕಾವಿ ತೊಟ್ಟವರೆಲ್ಲ ಸನ್ಯಾಸಿಗಳು ಎಂಬಷ್ಟು. ಪರಿಸ್ಥಿತಿ ಇಂದಿಗೂ ಹಾಗೇ ಇದೆ ಬಿಡಿ. ಈ ಕಲ್ಪನೆಯನ್ನೇ ಕುರಿತು ಲೇವಡಿ ಮಾಡುತ್ತ ದಾಸರು ಹೇಳುತ್ತಾರೆ:

**ದಾಸನೆಂತಾಗುವೆನು ಧರೆಯೊಳಗೆ ನಾನು ॥ಪ॥**
**ವಾಸುದೇವನಲ್ಲಿ ಲೇಶ ಭಕುತಿಯ ಕಾಣೆ । ॥ಅನು॥**

**ಗೂಟ ನಾಮವ ಹೊಡೆದು ಗುಂಡು ತಂಬಿಗೆ ಹಿಡಿದು**
**ಗೋಟಂಚು ಧೋತರ ಮಡಿಯನುಟ್ಟು**
**ದಾಟುಗಾಲಿಡುತ ನಾ ಧರೆಯೊಳಗೆ ಬರಲೆನ್ನ**
**ಬೂಟಕತನ ನೋಡಿ ಭ್ರಮಿಸದಿರಿ ಜನರೆ । ॥೦೧॥**

**ಅರ್ಥದಲ್ಲೆ ಮನಸು ಆಸಕ್ತವಾಗಿದ್ದು ವ್ಯರ್ಥವಾಯಿತು**
**ಜನ್ಮ ವಸುಧೆಯೊಳಗೆ**
**ಅರ್ತಿಯಿಂದಲಿ ಹರಿಯ ಅರ್ಚಿಸಿದ್ದಿಲ್ಲ ನಾ**
**ಸತ್ಯಶೌಚಗಳರಿಯೆ ಸಜ್ಜನರು ಕೇಳಿ ॥೦೨॥**

ಇಂದಿರೇಶನ ಪೂಜೆ ಎಂದು ಮಾಡಿದ್ದಿಲ್ಲ
ಸಂಧ್ಯಾನ ಜಪ ತಪಗಳೊಂದನರಿಯೆ
ಒಂದು ಸಾಧನ ಕಾಣೆ ಪುರಂದರವಿಠಲನ
ದ್ವಂದ್ವವ ಪಾದವ ನಂಬಿ ಅರಿದು ಭಜಿಸದಲೆ ॥೦೩॥

* ಅರ್ಥ – ಹಣ
* ಅರ್ತಿಯಿಂದಲಿ – ಹರಿಪ್ರಸಾದವಾಗಬೇಕೆಂಬ ಪ್ರೀತಿಯಿಂದ
* ಸಂಧ್ಯಾನ – ಸಂಧ್ಯಾವಂದನ, ಸಮ್ಯಕ್ ಧ್ಯಾನ

ದಾಸರು ತಮ್ಮ ವೇಷ-ಭೂಷಣದ ಬಗ್ಗೆ ಹೇಳುತ್ತ, ಅವರುಡುವ ವಸ್ತ್ರದ ಬಗ್ಗೆಯೇ ಒಂದು ಪದವನ್ನು ಹೇಳಿದ್ದಾರೆ.

ಲಂಗೋಟಿ ಬಲು ಒಳ್ಳೇದಣ್ಣ, ಒಬ್ಬರ
ಹಂಗಿಲ್ಲದೆ ಆಚಾರಕ್ಕೆ ಒದಗುವ ॥ಪ॥

ಬಡವರಿಗಾಧಾರವಣ್ಣ ಈ ಲಂಗೋಟಿ
ಬೈರಾಗಿಗಳ ಭಾಗ್ಯವಣ್ಣ
ಕಡುಗಳ್ಳರಿಗೆ ಗಂಡ, ಮಡಿ ಧೋತ್ರಗಳ ಮಿಂಡ
ನಡುಗುವ ಸಮಯಕ್ಕೆ ಮುಡಿಗೆ ಒದಗುವಂಥ ॥೦೧॥

ದುಡ್ಡು ಮುಟ್ಟದಂತೆ ದೊರಕುವ ವಸ್ತುವು
ದೊಡ್ಡ ಅರಣ್ಯದಿ ಭಯವಿಲ್ಲವು
ಹೆಡ್ಡರೆಂಬುವರೇನೋ ಲಂಗೋಟಿ ಜನರನ್ನು
ದೊಡ್ಡವರೆಂದು ವಂದಿಸುವರು ಯತಿಗಳ ॥೦೨॥

ಮಡಿವಾಳರಿಗೆ ಶತ್ರು ಮಠದಯ್ಯಗಳ ಮಿತ್ರ
ಪೊಡವಿಯೊಳ್ ಯಾಚಕರಿಗೆ ನೆರವು
ದೃಢಭಕ್ತ ಬಲಿಚಕ್ರವರ್ತಿಗೋಸ್ಕರ ನಮ್ಮ
ಒಡೆಯ ಶ್ರೀ ಪುರಂದರವಿಠಲ ಧರಿಸಿದಂಥ ॥೦೩॥

ಬಹು ಉಪಯೋಗಿ ಎಂದು ಲಂಗೋಟಿಯ ಮಹತ್ವ ಸಾರುತ್ತ "ಮಡಿವಾಳರ ಶತ್ರು" ಈ ಲಂಗೋಟಿ ಎನ್ನುತ್ತಾರೆ. ಇಂದಿಗೂ ಹಾಸ್ಟಲ್ಲಿನಲ್ಲಿ ವಾಸ ಮಾಡುವ ವಿದ್ಯಾರ್ಥಿ ಸಮೂಹಕ್ಕೆ ಪ್ರಸ್ತುತವಾದ ಮಾತು.

ಹಾಸ್ಯ ಎಂದ ಮೇಲೆ ಗಂಡ-ಹೆಂಡತಿ ಕುರಿತಾದ ಒಂದು ಸನ್ನಿವೇಶ ಇಲ್ಲದಿದ್ದರೆ ಹೇಗೆ? ದಾಸರ ಪದಗಳಲ್ಲಿ ಹೀಗೊಂದು ವಿನೋದದ ಪದವಿದೆ.

ಹೆಂಡತಿ ಪ್ರಾಣ ಹಿಂದುತಿ ದೊಡ್ಡ
ಕೊಂಡ ಕೋತಿಯಂತೆ ಕುಣಿಕುಣಿಸುತಿ

ಹೊತ್ತಾರೆ ಏಳುತ್ತಿ ಹೊರಗೆ ತಿರುಗಾಡುತ್ತಿ
ಹೊತ್ತು ಹೋಯಿತು ಭತ್ಯ ತಾ ಎನ್ನುತ್ತಿ
ಉತ್ತಮ ಗುರುಹಿರಿಯರ ಮಾತು ಮೀರುತ್ತಿ
ಮೃತ್ಯ ದೇವತೆಯಂತೆ ಮನೆಯೊಳಗಿರುತಿ

ಇಲ್ಲದ್ದು ಬೇಡುತ್ತಿ ಸುಳ್ಳು ಮಾತಾಡುತ್ತಿ
ಒಳ್ಳೆ ಊಟವನುಂಡು ಕುಳಿತಿರ್ಪೆನಂತಿ
ಎಳ್ಳಿನಷ್ಟು ಕೆಲಸ ಮಾಡಲಾರೆನಂತಿ
ಎಲ್ಲೆಲ್ಲಿ ತಲೆಯೆತ್ತದ ಹಾಗೆ ಮಾಡುತ್ತಿ

ಹಿರಿಯತನಕೆ ಹೋಗುತ್ತಿ ಗರುವಿಕೆ ಮಾಡುತ್ತಿ
ನೆರೆಹೊರೆಯರ ಕೂಡ ಬಡಿದಾಡುತ್ತಿ
ದೊರೆ ಸಿರಿ ಪುರಂದರವಿಠಲನ ಸ್ಮರಿಸಿದೆ
ದುರಿತಕ್ಕೆ ಗುರಿಯಾಗಿ ನೀ ನಿಲ್ಲುತ್ತಿ

* ಕೊಂಡ ಕೋತಿ – ಬೆಟ್ಟದ ಕೋತಿ
* ಭತ್ಯ – ಮಾಡಿದ ಕೆಲಸಕ್ಕೆ ಸಿಗುವ ಹಣ

ಮಾಡಬೇಕಾದ ಕೆಲಸವ ಬಿಟ್ಟು ಮಿಕ್ಕೆಲ್ಲ ಕೆಲಸಕ್ಕೂ ಸಮಯವಿರುವ ಸಮಾಜದ ಕುರಿತಾದ ಈ ಪದ ಇಂದಿಗೂ ಅಕ್ಷರಶಃ ಸತ್ಯ. ನಾಲ್ಕು ಜನ ಸೇರಿರುವಲ್ಲಿ ಈ ಪದ ಹಾಡಿದರೆ ನಗೆಹೊನಲು ಹರಿಯುವುದರಲ್ಲಿ ಸಂದೇಹವೇ ಇಲ್ಲ.

ನಾಲ್ಕು ಜನರ ಸೇರಿರುವ ಸಮಾರಂಭ ನಡೆವ ಸಮಯದಲ್ಲಿ ಒಂದು ಹಾಡು ಹೇಳಿ ಎಂದಾಗ ದಾಸರ ಪದವನ್ನು ಆಯ್ದುಕೊಂಡು ಹಾಡಿದ ಮೇಲೆ ಕೆಲವರಿಗೆ ಅರಿವಾಗುತ್ತದೆ 'ಏನೋ ಎಡವಟ್ಟಾಯಿತು' ಎಂದು. ಕೆಲವೊಂದು ರಚನೆಗಳು ದಾಸರು ತಮಗಾದ ಬವಣೆಯನ್ನು ವಿವರಿಸಿದ್ದರೆ ಸಂದರ್ಭವಲ್ಲದ ಸಂದರ್ಭದಲ್ಲಿ ನಾವು ಅದನ್ನು ಹಾಡಿದಾಗ ನಗೆ ಉಕ್ಕಬಹುದು. ಊಟಕ್ಕೆ ಎಲೆ ಹಾಕಲು ಇನ್ನೂ ಸಮಯವಿದೆ ಎಂದಾಗಲೋ ಅಥವಾ ಅಡುಗೆ ಕೆಲಸ ಇನ್ನೂ ಪೂರ್ತಿ ಆಗದೇ ಇದ್ದ ಕಾರಣಕ್ಕೋ ಸುಮ್ಮನೆ ಕೂಡುವ ಬದಲು, ಭಗವದ್–ನಾಮ ಸ್ಮರಣೆ ಆಗಲಿ ಎಂಬ ಉದ್ದೇಶಕ್ಕೆ ಹಾಡು ಹೇಳಿ ಎಂದು ಕೇಳಿದಾಗ ಈ ಪದ ಹಾಡಿದರೆ ಹೇಗೆ?

ಊಟಕ್ಕೆ ಬಂದೇವು ನಾವು, ನಿಮ್ಮ
ಆಟ ಪಾಟವ ಬಿಟ್ಟು ಅಡುಗೆ ಮಾಡಮ್ಮ ॥ಪ॥

ಕತ್ತಲಿಟ್ಟಾವಮ್ಮ ಕಣ್ಣುಬಾಯಿ
ಬತ್ತಿ ಬರುತಲಿದೆ ಕೈಕಾಲು ಝುಮ್ಮ
ಹೊತ್ತು ಹೋಗಿಸಬೇಡವಮ್ಮ
ಒಂದು ತುತ್ತಾದರು ಇತ್ತು ಸಲಹು ನಮ್ಮಮ್ಮ ॥೦೧॥

ಒಡಲೊಳಗೆ ಉಸುರಿಲ್ಲ ಒಂದು
ಕ್ಷಣವಾದರೆ ಜೀವ ನಿಲ್ಲುವುದಿಲ್ಲ
ಮಡಿದರೆ ದೋಷ ತಟ್ಟುವುದು ಒಂದು
ಹಿಡಿ ಅಕ್ಕಿಯಿಂದಲೆ ಕೀರ್ತಿ ಬಾಹೋದು ॥೦೨॥

ಹೊನ್ನರಾಶಿಯ ತಂದು ಸುರಿಯೆ ಕೋಟಿ
ಕನ್ನಿಕೆಯರ ಧರೆಯನೆರೆಯೆ
ಅನ್ನದಾನಕ್ಕಿನ್ನು ಸರಿಯೆ
ಪ್ರಸನ್ನ ಪುರಂದರವಿಠಲ ದೊರೆಯೆ ॥೦೩॥

ಪುರಂದರದಾಸರ ರಚನೆಗಳಲ್ಲಿ ವೈವಿಧ್ಯಮಯವಾದ ಶೈಲಿಗಳಿವೆ. ಗಹನವಾದ ಅರ್ಥವನ್ನು, ಅಮೂರ್ತ ಕಲ್ಪನೆಗಳನ್ನು ಹೊಂದಿದ ಗೀತೆಗಳ ಜೊತೆಗೇ ನವಿರಾದ ಹಾಸ್ಯವನ್ನು ಹೊಮ್ಮಿಸುವ ಗೀತೆಗಳೂ ಶೋಭಿಸುತ್ತವೆ.

ಒಟ್ಟಾರೆ ಹೇಳಬಹುದು ಎಂದರೆ ದಾಸರ ರಚನೆಗಳೇ ಒಂದು ವಿಶ್ವವಿದ್ಯಾಲಯ ಇದ್ದಂತೆ. ಅಂದಿನಿಂದ ಇಂದಿನವರೆಗೂ ಮತ್ತು ಮುಂದಿನ ಬಹಳ ಕಾಲದವರೆಗೂ ಈ ವಿಶ್ವವಿದ್ಯಾಲಯದಲ್ಲಿ ಶಿಷ್ಯ/ಶಿಷ್ಯೆಯರು ಸದಾ ಕಲಿಯುತ್ತಲೇ ಇರುತ್ತಾರೆ. ದಾಸರ ಪದಗಳ ಮೂಲಕ ರಾಮನಾಮ, ಕೃಷ್ಣನಾಮಗಳನ್ನು ಸವಿಯುತ್ತಾರೆ ಮತ್ತೊಬ್ಬರಿಗೂ ಆ ಸವಿಯನ್ನು ಹಂಚುತ್ತಾರೆ. ಇಂಥಾ 'ಸಂಗೀತ ಪಿತಾಮಹ'ರನ್ನು ಪಡೆದ ಕನ್ನಡ ನಾಡೇ ಧನ್ಯ.

'ದಾಸರೆಂದರೆ ದಾಸರಯ್ಯ ಪುರಂದರದಾಸರಯ್ಯ' ಎಂಬ ಮಾತು ನೂರಕ್ಕೆ ನೂರು ಸತ್ಯ.

---

* ದಾಸರ ರಚನೆಗಳನ್ನು, ಕರ್ನಾಟಕ ಸರ್ಕಾರದ ಕೊಡುಗೆಯಾದ 'ಪುರಂದರ ಸಾಹಿತ್ಯ ದರ್ಶನ'ದ ನಾಲ್ಕು ಸಂಪುಟಗಳಿಂದ ಆಯ್ದುಕೊಳ್ಳಲಾಗಿದೆ.

■

# ಕನ್ನಡ ಭಕ್ತಿ ಸಾಹಿತ್ಯದ ಗಣಿಯಲ್ಲಿ ಮೂರು ಅನರ್ಘ್ಯ ರತ್ನಗಳು

–ಸಿಮ್ ಮೂರ್ತಿ

**ಕ**ನ್ನಡಕ್ಕೆ ಉಜ್ವಲ ಭಕ್ತಿ ಸಾಹಿತ್ಯದ ಪರಂಪರೆ ಇದೆ. ಅದರಲ್ಲಿ ನನ್ನ ಗಮನವನ್ನು ಸೆಳೆದ, ನನ್ನನ್ನು ಕಾಡಿದ ಮೂವರು ಸಾಧಕರ ಭಕ್ತಿ ಸಾಹಿತ್ಯದ ಬಗ್ಗೆ ನನ್ನ ಈ ಲೇಖನ. ದೇವರ ದಾಸಿಮಯ್ಯ ಎಂಬ ವಚನಕಾರರು, ದಾಸವರೇಣ್ಯ ಪುರಂದರ ದಾಸರು ಮತ್ತು ಹೆಳವನ ಕಟ್ಟೆ ಗಿರಿಯಮ್ಮ ಈ ಮೂರು ರತ್ನಗಳು.

## ದೇವರ ದಾಸಿಮಯ್ಯ (ಕ್ರಿಸ್ತಶಕ ೯೮೦–೧೦೪೦)

ಕನ್ನಡದಲ್ಲಿ ಇದುವರೆಗೂ ಸಿಕ್ಕಿರುವ ವಚನಕಾರರಲ್ಲಿ ಇವರೇ ಮೊಟ್ಟ ಮೊದಲಿಗರು. ಬಸವಣ್ಣನವರು ಇವರನ್ನು ಆದ್ಯ ಗುರುಗಳೆಂದು ಕರೆದಿದ್ದಾರೆ. 'ಜಗದೇಕಮಲ್ಲ' ಎಂಬ ಬಿರುದಾಂಕಿತ ಚಾಲುಕ್ಯ ದೊರೆ ಇಮ್ಮಡಿ ಜಯಸಿಂಹನ ಆಳ್ವಿಕೆಯಲ್ಲಿ (ಕ್ರಿಸ್ತಶಕ ೧೦೧೫–೧೦೪೨) ಇದ್ದವರು. ಕಲ್ಬುರ್ಗಿ ಜಿಲ್ಲೆಯ ಮುದನೂರು ಎಂಬ ಗ್ರಾಮದಲ್ಲಿ ಜನಿಸಿದರು. ಇವರ ತಂದೆ ಕಾಮಯ್ಯ, ತಾಯಿ ಶಂಕರೀದೇವಿ. ದಾಸಿಮಯ್ಯ ವೃತ್ತಿಯಲ್ಲಿ ನೇಯ್ಗೆಯವರು. ಇವರನ್ನು ಜೇಡರ ದಾಸಿಮಯ್ಯ ಎಂದೂ ಕರೆಯುವುದು ಉಂಟು. ಇದುವರೆಗೂ ಇವರ ೧೫೦ ವಚನಗಳು ಸಿಕ್ಕಿವೆ. ಮುದನೂರು ಗ್ರಾಮದಲ್ಲಿ ರಾಮನಾಥ ದೇವಾಲಯವಿದ್ದಿತು. ದಾಸಿಮಯ್ಯನವರ ಅಂಕಿತ ನಾಮವು ರಾಮನಾಥ. ಇವರ ಭಾರ್ಯೆ ದುಗ್ಗಳೆಯೂ ಶಿವಶರಣೆ.

ದುಗ್ಗಳೆ ೬ ವರ್ಷ ನೂತಿದ್ದ ದಾರವನ್ನು ಗಂಡನಿಗೆ ಕೊಟ್ಟು ವಸ್ತ್ರವನ್ನು ನೇಯುವಂತೆ ಹೇಳುತ್ತಾಳೆ. ದಾಸಿಮಯ್ಯ ಸುಂದರವಾದ ವಸ್ತ್ರವನ್ನು ನೇಯ್ದು, ಮಾರಲೆಂದು ಅದನ್ನು ಸಂತೆಗೆ ಕೊಂಡುಹೋಗುತ್ತಾರೆ. ಬೆಲೆ ಹೆಚ್ಚಾದ್ದರಿಂದ ಮಾರಾಟವಾಗಲಿಲ್ಲ. ಸಂಜೆಯಾಗುತ್ತಾ ಬಂತು. ಒಬ್ಬ ಜಂಗಮ ಬಂದು ತನಗೆ ಕೊಟ್ಟು ಪುಣ್ಯ ಕಟ್ಟಿಕೋ ಎಂದು ಕೇಳುತ್ತಾನೆ.

ದಾಸಿಮಯ್ಯ ಆ ಸುಂದರ ವಸ್ತ್ರವನ್ನು ಜಂಗಮನಿಗೆ ಕೊಡುತ್ತಾರೆ. ಕೊಟ್ಟರೆ ಜಂಗಮನು ಆ ಸುಂದರವಾದ ವಸ್ತ್ರವನ್ನು ಛಿದ್ರ ಛಿದ್ರವಾಗಿ ಹರಿದು ಆ ತುಂಡುಗಳನ್ನು ಸುತ್ತಿಕೊಂಡು, ದಾಸಿಮಯ್ಯನಿಗೆ ಸ್ವಲ್ಪ ದವಸ ಧಾನ್ಯ ಕೊಟ್ಟು ಹೋಗುತ್ತಾನೆ. ಅದನ್ನು ಕೇಳಿ ದುಗ್ಗಳೆ ದುಗುಡ ಮನಸ್ಸಿನಿಂದ ಏನಾಯಿತು ಎಂದು ಕೇಳಿದಾಗ ದಾಸಿಮಯ್ಯ 'ಅವರಿಚ್ಛಾ ಪದಾರ್ಥವ ತಮ್ಮಿಚ್ಛೆ ಬಂದಂತೆ ಮಾಡಿದರು' ಎಂದು ಸಮಾಧಾನ ಹೇಳುತ್ತಾರೆ. ಇತ್ತ ಜಂಗಮ ಕೊಟ್ಟ ದವಸ ಧಾನ್ಯ ಅಕ್ಷಯವಾಗಿರುತ್ತವೆ. ಶಿವನೇ ಜಂಗಮನ ರೂಪದಲ್ಲಿ ಬಂದಿದ್ದನು ಎಂಬ ನಂಬಿಕೆ ಉಂಟಾಗುತ್ತದೆ. ವೀರಶೈವ ಸಾಹಿತ್ಯದಲ್ಲಿ ಈ ಪವಾಡ ಅನೇಕ ಕಡೆ ಬರುತ್ತದೆ. ಬಸವಣ್ಣನವರೂ ಒಂದು ವಚನದಲ್ಲಿ ಈ ಪ್ರಸಂಗವನ್ನು ಹೇಳಿದ್ದಾರೆ. ದಾಸಿಮಯ್ಯನವರ ಪ್ರತಿಭೆಯನ್ನು ಕಂಡು ರಾಜ ಜಯಸಿಂಹನೂ, ರಾಣಿ ಸುಗ್ಗಲಾದೇವಿಯೂ ವೀರಶೈವ ಮತವನ್ನು ಅವಲಂಬಿಸಿದರು ಎಂದು ತಿಳಿದುಬರುತ್ತದೆ.

ಶಂಕರ ದಾಸಿಮಯ್ಯ ಎಂಬ ಇನ್ನೊಬ್ಬ ವಚನಕಾರರು ಇವರ ಸಮಕಾಲೀನರು. ಅವರ ವಚನಗಳು ಕೆಲವೇ ಸಿಕ್ಕಿವೆ.

ದೇವರ ದಾಸಿಮಯ್ಯನವರ ಕೆಲವು ವಚನಗಳನ್ನು ನೋಡೋಣ.

(ಅರ್ಥ ಸ್ಫುಟವಾಗಿರುವುದರಿಂದ ಟಿಪ್ಪಣಿಯನ್ನು ಕೈಬಿಡಲಾಗಿದೆ.)

(೧) ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ
ಸುಳಿದು ಬೀಸುವ ವಾಯು ನಿಮ್ಮ ದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ರಾಮನಾಥಾ.

(೨) ಕರಿಯನಿತ್ತೊಡೊಲ್ಲೆ, ಸಿರಿಯನಿತ್ತೊಡೊಲ್ಲೆ
ಹಿರಿದಪ್ಪ ರಾಜ್ಯವನಿತ್ತೊಡೊಲ್ಲೆ
ನಿಮ್ಮ ಶರಣರ ಸೂಳು ನುಡಿಯ ಒಂದರಗಳಿಗೆ ಇತ್ತಡೆ
ನಿನ್ನನಿತ್ತೆ ಕಾಣಾ ರಾಮನಾಥಾ.

(೩) ನಿಷ್ಠೆಯುಳ್ಳ ಭಕ್ತ ನಟ್ಟಡವಿಯಲ್ಲಿರ್ದೊಡೇನು
ಅದು ಪಟ್ಟಣವೆಂದೆನಿಸುವುದು.
ನಿಷ್ಠೆಯಿಲ್ಲದ ಭಕ್ತ ಪಟ್ಟಣದಲ್ಲಿದ್ದರೂ
ಅದು ನಟ್ಟಡವಿ ಕಾಣಾ ರಾಮನಾಥಾ.

(೪) ಹರ ತನ್ನ ಭಕ್ತರ ತಿರಿವಂತೆ ಮಾಡುವ
ಒರೆದು ನೋಡುವ ಸುವರ್ಣದ ಚಿನ್ನದಂತೆ
ಅರೆದು ನೋಡುವ ಕಬ್ಬಿನ ಕೋಲಿನಂತೆ
ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದು ಎತ್ತಿಕೊಂಬ ನಮ್ಮ ರಾಮನಾಥನು.

ಮುಂದೆ ಬರುವ ಹಲವು ಕವಿಗಳು ದೇವರ ದಾಸಿಮಯ್ಯ ಅವರ ವಚನಗಳಿಂದ ಪ್ರಭಾವಿತರಾದಂತಿದೆ. ಒಂದು ಆಶ್ಚರ್ಯಕರವಾದ ವಿಷಯವೆಂದರೆ ಸರ್ವಜ್ಞನ ಕೆಲವು ತ್ರಿಪದಿಗಳು ದಾಸಿಮಯ್ಯರ ವಚನಗಳನ್ನೇ ಸ್ವಲ್ಪ ಬದಲಾವಣೆಯೊಂದಿಗೆ ಮಂಡಿಸಿದಂತಿದೆ! ಸರ್ವಜ್ಞನು ೧೬/೧೭ನೆಯ ಶತಮಾನದ ಕವಿ. ದೇವರ ದಾಸಿಮಯ್ಯನವರ ವಚನಗಳನ್ನು ಸರ್ವಜ್ಞ ತ್ರಿಪದಿಗಳಲ್ಲಿ ಬರೆದಿದ್ದನ್ನು ನೋಡಿ–.

(೧) ದೇವರ ದಾಸಿಮಯ್ಯನವರ ವಚನ:

ಅಡವಿಯಾರಣ್ಯದಲಿ ಮಡಿವನಕ ತಪವಿದ್ದು
ಮಡಿವಾಗ ಮೃಡನ ಮರೆದಡೆ ತುಂಬಿದ ಸಕ್ಕರೆಯ
ಮಡುವಿನೊಳಗೊಕ್ಕಂತೆ ರಾಮನಾಥಾ.

ಸರ್ವಜ್ಞನ ಪದ

ಅಡವಿಯಲಿ ತಪದಲ್ಲಿ ದೃಢತನದೊಳಿದ್ದರೂ
ನುಡಿಯಲ್ಲಿ ಶಿವನ ಮರೆದಡೆ ಗುಡವಿಲ್ಲ
ದಡಿಗೆಯುಂಡಂತೆ ಸರ್ವಜ್ಞ

(೨) ದೇವರ ದಾಸಿಮಯ್ಯನವರ ವಚನ:
ಜ್ವರಬಡಿದ ಬಾಯಿಗೆ ನೊರೆವಾಲು ಉರಿಸುವಿದೆ
ನರಕದಲಿ ಬೀಳ್ವ ಮನುಜರಿಗೆ ಶಿವಭಕ್ತಿ
ಕರಗಹಿ ಕಾಣಾ ರಾಮನಾಥಾ.

ಸರ್ವಜ್ಞನ ಪದ

ಜ್ವರವಾದ ಮನುಜಂಗೆ ನೊರೆವಾಲು ಸಿಹಿಯಕ್ಕು
ನರಕದಲಿ ಬೀಳ್ವ ಅಧಮಂಗೆ ಶಿವಭಕ್ತಿ
ಹಿರಿದು ಕಹಿಯಕ್ಕು ಸರ್ವಜ್ಞ

ವಚನಕಾರರು ತಮ್ಮ ಸ್ವಂತ ಅನುಭವದಿಂದ ಜೀವನದ ಪಾಠಗಳನ್ನು ಬೋಧಿಸುತ್ತಾರೆ ಎಂಬುದನ್ನು ದೇವರ ದಾಸಿಮಯ್ಯನವರ ಜೀವನದಲ್ಲಿ ನೋಡುತ್ತೇವೆ.

ಸಮಾಜದಲ್ಲಿ ಮೇಲು, ಕೀಳು ಎಂಬ ಭಾವನೆಗಳು ಬಲವಾಗಿ ತಳ ಊರಿತ್ತು ಆ ಕಾಲದಲ್ಲಿ. ಆದರೆ ದಾಸಿಮಯ್ಯನವರು ಅಂತಹ ಭೇದಗಳನ್ನು ನಿರಾಕರಿಸಿ ಆದರ್ಶಮಯ ಜೀವನವನ್ನೂ, ನಡತೆಯನ್ನೂ ತೋರಿಸಿದರು.

## (೨) ಪುರಂದರದಾಸರು (೧೪೮೫–೧೫೬೫)

ಪುರಂದರದಾಸರು ಹುಟ್ಟಿದ್ದು ಕ್ರಿಸ್ತಶಕ ೧೪೮೫ರಲ್ಲಿ. ಶಿವಮೊಗ್ಗ ಜಿಲ್ಲೆಯ ಆರಗದ ಬಳಿ ಇರುವ ಪುರಂದರ ಎಂಬ ಹಳ್ಳಿಯೇ ಅವರು ಜನಿಸಿದ ಊರು ಎಂದು ಸಂಶೋಧಕರು ನಿರ್ಣಯಿಸಿದ್ದಾರೆ. ಪುರಂದರದಾಸರ ಹೆಸರು ಮೊಟ್ಟ ಮೊದಲು ಸಿಗುವುದು ಬಳ್ಳಾರಿ ಜಿಲ್ಲೆಯ ಕಮಲಾಪುರದ ಶಾಸನದಲ್ಲಿ. ಆ ಶಾಸನ ೧೫೨೬ ಫೆಬ್ರುವರಿ ೨೪ನೆಯ ತಾರೀಕು ವಿಜಯನಗರದ ದೊರೆ ಕೃಷ್ಣದೇವರಾಯನು ಹೊರಡಿಸಿದ್ದು. ತನ್ನ ಗುರುಗಳಾದ ವ್ಯಾಸರಾಯರಿಗೆ ಹಂಪೆಯ ವಿಜಯವಿಠ್ಠಲ ದೇವಾಲಯದಲ್ಲಿ ಒಂದು ಗ್ರಾಮವನ್ನು ದತ್ತಿಯಾಗಿ ಕೊಡುವುದೇ ಆ ಶಾಸನದ ಪ್ರಕಟಣೆ. ವ್ಯಾಸರಾಯರು ಆ ಗ್ರಾಮವನ್ನು ೩೦೮ ಮಂದಿ ವಿದ್ವಾಂಸರಿಗೆ ಹಂಚಿದರು. ಆ ೩೦೮ ಮಂದಿಯಲ್ಲಿ ಪುರಂದರ ದಾಸಜರಾದ ಲಕ್ಷ್ಮಣದಾಸ, ಹೇಬಣ ದಾಸ ಮತ್ತು ಮಧ್ವಪ ದಾಸ ಎಂಬ ೩ ಹೆಸರುಗಳಿವೆ. ಪುರಂದರದಾಸಜರು ಎಂದರೆ ಪುರಂದರದಾಸರ ಮಕ್ಕಳು ಎಂದು. ಈ ಶಾಸನದಿಂದ ನಮಗೆ ತಿಳಿದುಬರುವುದು ಏನು ಎಂದರೆ ಪುರಂದರ ದಾಸರ ಮೂವರು ಮಕ್ಕಳು ಹಂಪೆಯಲ್ಲಿ ವಾಸಿಸುತ್ತಿದ್ದರು ಎಂದು.

ಎರಡನೆಯ ರುಜುವಾತು ಸಿಗುವುದು ತಾಳ್ಳಪಾಕಮ್ ಚಿನ್ನನ್ನ ಅವರು ಬರೆದಿರುವ ಪ್ರಬಂಧದಲ್ಲಿ. ಚಿನ್ನನ್ನ ಪುರಂದರದಾಸರ ಸಮಕಾಲೀನ. ಚಿನ್ನನ್ನ ಅವರ ಸರಿಯಾದ ಹೆಸರು ಚಿನ್ನ ತಿರುವೇಂಕಟನಾಥ ಎಂದು. ಆ ಪ್ರಬಂಧ ಚಿನ್ನನ್ನನ ಅಜ್ಜ ತಾಳ್ಳಪಾಕಮ್ ಅಣ್ಣಮಾಚಾರ್ಯ ಅವರನ್ನು ಕುರಿತು ಬರೆದದ್ದು. ಅಣ್ಣಮಾಚಾರ್ಯರು ತಿರುಮಲೆ ವೆಂಕಟೇಶ್ವರ ದೇವಾಲಯದಲ್ಲಿ ಅನೇಕ ವರ್ಷಗಳು ಸಂಕೀರ್ತನ ಸೇವೆಯನ್ನು ಮಾಡುತ್ತಿದ್ದರು. ಪುರಂದರದಾಸರು ಆಗಾಗ್ಗೆ ತಿರುಮಲೆಗೆ ಹೋಗುತ್ತಿದ್ದರು. ಚಿನ್ನನ್ನನ ಒಂದು ಪ್ರಬಂಧದಲ್ಲಿ ಅಣ್ಣಮಾಚಾರ್ಯರು ತಿರುಮಲೆ ದೇವರ ಎದುರು ಹಾಡಿದಾಗ ಪುರಂದರದಾಸರು ಅವರ ಸಂಕೀರ್ತನೆಯನ್ನು ಕೇಳಿ ಮೆಚ್ಚಿಕೊಂಡು, "ಸಾಕ್ಷಾತ್ ವೇಂಕಟೇಶ್ವರನನ್ನೇ ಕಂಡಂತಾಯಿತು," ಎಂದರಂತೆ. ಅಣ್ಣಮಾಚಾರ್ಯರ ಅಪೇಕ್ಷೆಯಂತೆ ಪುರಂದರದಾಸರು ಕನ್ನಡ ದೇವರ ನಾಮ ಹಾಡಿದಾಗ ಅಣ್ಣಮಾಚಾರ್ಯರು "ದಿವ್ಯವಾದ ಗಾನ, ಪಾಂಡುರಂಗ ವಿಠ್ಠಲನೇ ಎದುರಿಗೆ ನಿಂತಂತಿದೆ" ಎಂದು ಹೇಳಿದರಂತೆ. ಇವೆರಡು ಘಟನೆಗಳನ್ನು ಬಿಟ್ಟರೆ ವಿಜಯನಗರ ಕಾಲದ ಇನ್ನು ಯಾವ ರುಜುವಾತೂ ನಮಗೆ ಸಿಕ್ಕಿಲ್ಲ.

ಮತ್ತೆ ನಮಗೆ ಪುರಂದರರ ಹೆಸರು ಸಿಗುವುದು ೧೭ನೆಯ ಶತಮಾನದ ವಿಜಯದಾಸ (೧೬೮೭-೧೭೫೫) ಎಂಬುವರ ರಚನೆಗಳಿಂದ. ಮೂಗುತಿಯ ಪ್ರಸಂಗವು ಅವರ ಬರಹದಿಂದಲೇ ಸಿಕ್ಕಿರುವುದು. ಪುರಂದರದಾಸರು ಹೆಚ್ಚು ಕಾಲ ವಿಜಯನಗರ ರಾಜ್ಯದಲ್ಲಿ ಇದ್ದವರು. ಆದ್ದರಿಂದ ವಿಜಯನಗರ ರಾಜ್ಯದ ಪರಿಸ್ಥಿತಿಯನ್ನು ಪರಿಶೀಲಿಸೋಣ.

ದೆಹಲಿಯಿಂದ ಮುಸಲ್ಮಾನ ದೊರೆಗಳು ಅನೇಕ ಬಾರಿ ದಕ್ಷಿಣದೇಶಕ್ಕೆ ದಂಡೆತ್ತಿ ಬಂದು ೧೩೧೩ರಲ್ಲಿ ದೇವಗಿರಿ ರಾಜ್ಯವನ್ನು ವಶಪಡಿಸಿಕೊಂಡಿದ್ದರು. ಅಂತಹ ಪರಿಸ್ಥಿತಿಯನ್ನು ಎದುರಿಸಲು ೧೩೩೬ರಲ್ಲಿ ಸಂಗಮ ವಂಶದ ಹರಿಹರ ಮತ್ತು ಬುಕ್ಕರಾಯ ಎಂಬ ಸಹೋದರರು ತಮ್ಮ ಗುರು ವಿದ್ಯಾರಣ್ಯರೊಡನೆ ವಿಜಯನಗರ ರಾಜ್ಯವನ್ನು ಸ್ಥಾಪಿಸಿದ್ದರು. ಪುರಂದರದಾಸರ ಕಾಲಕ್ಕೆ ವಿಜಯನಗರ ಸಾಮ್ರಾಜ್ಯವು ಸ್ಥಾಪಿತವಾಗಿ ೧೫೦ ವರ್ಷಗಳ ಮೇಲೆಯೇ ಆಗಿದ್ದರೂ ರಾಜ್ಯದಲ್ಲಿ ಭದ್ರತೆ ಇರಲಿಲ್ಲ. ವಿಜಯನಗರ ರಾಜ್ಯವನ್ನು ಸುತ್ತುವರೆದಿದ್ದ ಬಹಮನಿ, ಬೀದರ್, ಬಿಜಾಪುರ, ಗೋಲ್ಕೊಂಡ ಮುಂತಾದ ಮುಸಲ್ಮಾನ ರಾಜರುಗಳು ವಿಜಯನಗರದೊಡನೆ ಪೈಪೋಟಿ ಮಾಡುತ್ತಲೇ ಇದ್ದರು. ಈ ಮಧ್ಯೆ ಪಾಶ್ಚಾತ್ಯರು, ಅದರಲ್ಲೂ ಪೋರ್ಚುಗೀಸರು ಪಶ್ಚಿಮತೀರದಲ್ಲಿ ಗೋವೆ ಮುಂತಾದ ಸ್ಥಳಗಳಲ್ಲಿ ವ್ಯಾಪಾರದ ಕೋಠಿಗಳನ್ನು ಕಟ್ಟಿ ತಮ್ಮ ಪ್ರಭಾವಗಳನ್ನು ಹರಡುತ್ತಿದ್ದರು. ಚಂದ್ರಗಿರಿಯಲ್ಲಿ ಆಳುತ್ತಿದ್ದ ಸಾಳುವ ನರಸಿಂಹ ಎಂಬ ಸಾಮಂತರಾಜನು ತಾನೇ ವಿಜಯನಗರ ರಾಜನಾದನು. ಅವನು ಪಟ್ಟಕ್ಕೆ ಬಂದದ್ದು ೧೪೮೫ರಲ್ಲಿ. ಪುರಂದರದಾಸರು ಹುಟ್ಟಿದ್ದು ಅದೇ ವರ್ಷ. ಅವನ ನಂತರ ಪಟ್ಟಕ್ಕೆ ಬಂದ ಇಮ್ಮಡಿ ನರಸಿಂಹ ಮತ್ತು ವೀರ ನರಸಿಂಹರಾಯ ಅವರ ಹಿಡಿತ ಸಡಿಲವಾಗಿ ಶ್ರೀರಂಗಪಟ್ಟಣದ ಸಾಮಂತರಾಜರು ಸ್ವತಂತ್ರರಾಗಲು ಪ್ರಯತ್ನಿಸುತ್ತಿದ್ದರು. ಆದೋನಿಯ ದುರ್ಗಾಧೀಶ ಕಾಚಪ್ಪ ಒಡೆಯನು ಬಿಜಾಪುರದ ಸುಲ್ತಾನ ಯೂಸುಫ್ ಆದಿಲ್ ಖಾನನೊಂದಿಗೆ ಸಂಚು ಮಾಡಿ ವಿಜಯನಗರವನ್ನು ನಿರ್ನಾಮ ಮಾಡುವ ಹಂಚಿಕೆಯಲ್ಲಿದ್ದನು. ಇಂತಹ ಅನಿಶ್ಚಿತ ಪರಿಸ್ಥಿತಿಯಲ್ಲಿ ಬೆಳೆದವರು ಪುರಂದರದಾಸರು. ಕ್ರಿಸ್ತಶಕ ೧೫೦೯ರಲ್ಲಿ ತುಳುವ ನರಸನಾಯಕನ ಮಗ ಕೃಷ್ಣದೇವರಾಯನು ವಿಜಯನಗರದ ಪಟ್ಟಕ್ಕೆ ಬಂದನು. ರಾಜಕೀಯದಲ್ಲಿ ನಿಸ್ಸೀಮನೂ, ಧೈರ್ಯಶಾಲಿಯೂ ಆದ ಕೃಷ್ಣದೇವರಾಯನು ಆಳಿದ ಕಾಲವನ್ನು ವಿಜಯನಗರದ ಸುವರ್ಣಯುಗ ಎಂದು ಹೇಳಬಹುದು. ಪರ್ಷಿಯ, ಅರೇಬಿಯ, ಪೋರ್ಚುಗಲ್ ಮತ್ತು ಇತರ ದೇಶಗಳಿಂದ ವ್ಯಾಪಾರಕ್ಕೆ ಜನ ಬರುತ್ತಿದ್ದರು. ಕುದುರೆ ವ್ಯಾಪಾರ, ಸೇನೆಗೆ ಬೇಕಾಗುವ ಸಾಮಾನುಗಳ ಸರಬರಾಜು ಪರದೇಶೀಯರ ಕೆಲಸ. ವಿಜಯನಗರದ ವರ್ತಕರು ಅವರ ಜೊತೆ ಸೇರಿ ವ್ಯಾಪಾರದಿಂದ ತಮ್ಮ ಹಣವನ್ನು ಗಳಿಸಿಕೊಳ್ಳುತ್ತಿದ್ದರು.

ಮಧ್ವಾಚಾರ್ಯರು (೧೨೩೮-೧೩೧೭) ದ್ವೈತಮತವನ್ನು ಸ್ಥಾಪಿಸಿದ ತರುವಾಯ ಅವರ ಅನುಯಾಯಿಯಾದ ಶ್ರೀಪಾದರಾಯರು ಮುಳಬಾಗಿಲಿನಲ್ಲಿ ತಮ್ಮ ಮಠವನ್ನು ಸ್ಥಾಪಿಸಿ ಕನ್ನಡದಲ್ಲಿ ಹಾಡು, ನರ್ತನಗಳಿಂದ ಶ್ರೀಹರಿಯ ಪೂಜೆಯನ್ನು ನಡೆಸುತ್ತಿದ್ದರು. ಅವರ ನಂತರ ಅವರ ಶಿಷ್ಯ ವ್ಯಾಸರಾಯರು (೧೪೪೭-೧೫೩೯) ನ್ಯಾಯಶಾಸ್ತ್ರದಲ್ಲಿ ಪರಿಣತಿ ಹೊಂದಿ ಮುಳಬಾಗಿಲಿನಲ್ಲೇ ನಿಂತರು. ಸಾಳುವ ನರಸಿಂಹನ ಕರೆಯ ಮೇಲೆ ಕೆಲವುಕಾಲ ಚಂದ್ರಗಿರಿಯಲ್ಲಿ ವಾಸವಾಗಿದ್ದರು. ಆ ತರುವಾಯ ಕೃಷ್ಣದೇವರಾಯನ ಕಾಲದಲ್ಲಿ ವ್ಯಾಸರಾಯರು ಹಂಪೆಯಲ್ಲಿ ನೆಲಸಿದ್ದರು. ರಾಜಾಶ್ರಯದಿಂದಲೂ ಮತ್ತು ತಮ್ಮ ವಿದ್ವತ್ತಿನಿಂದಲೂ ವ್ಯಾಸರಾಯರು ತುಂಬಾ ಪ್ರಭಾವಶಾಲಿಯಾಗಿ ಇದ್ದರು. ವ್ಯಾಸರಾಯರು ಕಾಲಕ್ರಮೇಣ ಅನೇಕ ಶಿಷ್ಯರನ್ನು ಸೇರಿಸಿ ದಾಸಸಾಹಿತ್ಯವನ್ನು ಪ್ರಚಾರಮಾಡಿದರು. ಇವರ ಶಿಷ್ಯರು ಅನೇಕರು, ಅನೇಕ ಮತಗಳವರು. ವೈಕುಂಠದಾಸ, ಕನಕದಾಸ, ಪುರಂದರದಾಸ ಮುಂತಾದವರು. ಪುರಂದರದಾಸರು ವಿಜಯನಗರಕ್ಕೆ ಪ್ರಾಯಶಃ ತಮ್ಮ ೩೫ನೆಯ ವಯಸ್ಸಿನಲ್ಲಿ ಎಂದರೆ ೧೫೨೦ರ ವೇಳೆಗೆ ಬಂದಿರಬಹುದು.

೧೫೨೯ರಲ್ಲಿ ಕೃಷ್ಣದೇವರಾಯನ ಮರಣವಾದ ನಂತರ ರಾಜ್ಯದ ಬಿಗಿ ಸಡಿಲವಾಗಿ ಜನರಲ್ಲಿ ಜಾತಿ, ಕುಲ, ವೃತ್ತಿಗಳ ಬಗ್ಗೆ ಹಗರಣಗಳು ಆಗುತ್ತಲೇ ಇದ್ದವು. ಕಾಲಕ್ರಮೇಣ ಅವನ ಅಳಿಯ ರಾಮರಾಯನ ಕೈವಾಡ ಹೆಚ್ಚಾಯಿತು. ರಾಜ್ಯದ ಕ್ಷೇಮ ರಕ್ಷಣೆಗಳ ಬಗ್ಗೆ ಅಷ್ಟು ಯೋಚನೆ ಇರಲಿಲ್ಲ. ೧೫೬೫ರಲ್ಲಿ ನಡೆದ ಯುದ್ಧದಲ್ಲಿ ಅಳಿಯ ರಾಮರಾಯನ ಕೊಲೆಯಾಯಿತು. ಆ ನಂತರ ರಾಜ ತಿರುಮಲನು ಅವಸರದಿಂದ ರಾಜಧಾನಿಯನ್ನು ಪರಿತ್ಯಜಿಸಿ ಪೆನುಕೊಂಡ ಪ್ರದೇಶದಲ್ಲಿ ತನ್ನ ರಾಜ್ಯವನ್ನು ಸ್ಥಾಪಿಸಿದನು. ರಕ್ಷಣೆ ಇಲ್ಲದ ರಾಜಧಾನಿಯನ್ನು ಬಿಟ್ಟಿದ್ದು ಶತ್ರುಸೇನೆಗೆ ವಿಜಯನಗರ ರಾಜ್ಯವನ್ನು ಲೂಟಿ ಮಾಡಲು ಯಾವ ಅಡ್ಡಿಯೂ ಇರಲಿಲ್ಲ. ಪುರಂದರದಾಸರ ನಿಧನವೂ ೧೫೬೫ರಲ್ಲೇ ಆಯಿತೆಂದು ಮಾಹಿತಿಯಿದೆ.

ವಿಜಯನಗರದ ಪತನವಾದ ನಂತರ ದಾಸರ ರಚನೆಗಳು ಜನದ ಬಾಯಲ್ಲಿ, ಜೀವನದಲ್ಲಿ, ಸಂಗೀತದಲ್ಲಿ, ಸಾಹಿತ್ಯದಲ್ಲಿ ಇದ್ದುಕೊಂಡು ಜೀವಂತವಾಗಿತ್ತು. ಅನೇಕ ವರ್ಷಗಳ ನಂತರವೂ ವಿಜಯದಾಸರಂತಹ ದೈವಭಕ್ತರಿಗೆ ಸ್ಫೂರ್ತಿಯಾಯಿತು. ಪುರಂದರದಾಸರು ೪,೭೫,೦೦೦ ಕೃತಿಗಳನ್ನು ರಚಿಸಿದ್ದರು ಎಂಬ ನಂಬಿಕೆ ಇದೆ. ಇದರಲ್ಲಿ ಉತ್ಪ್ರೇಕ್ಷೆ ಇರಬಹುದು. ಈಗ ನಮಗೆ ಸಿಕ್ಕಿರುವುದು ಕೇವಲ ೧೫೦೦. ಪುರಂದರದಾಸರವೇ ಎಂದು ಖಚಿತವಾಗಿ ಹೇಳುವುದಕ್ಕೆ ೧೦೦೦ ಕೃತಿಗಳು ಮಾತ್ರ ಸಿಕ್ಕಿವೆ. ಅದರಲ್ಲಿ ಒಂದು ಕೃತಿಯನ್ನು ನೋಡೋಣ.

**ಆದದ್ದೆಲ್ಲಾ ಒಳಿತೇ ಆಯಿತು, ನಮ್ಮ**
**ಶ್ರೀಧರನ ಸೇವೆಗೆ ಸಾಧನ ಸಂಪತ್ತಾಯಿತು**

ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ಬಾಗಿ ನಾಚುತ್ತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ
ಗೋಪಾಳ ಬುಟ್ಟಿ ಹಿಡಿಯುವುದಕ್ಕೆ
ಭೂಪತಿಯೆಂದು ಗರ್ವಿಸುತ್ತಿದ್ದೆ
ಆ ಪತ್ನೀಕುಲ ಸಾವಿರವಾಗಲಿ
ಗೋಪಾಳ ಬುಟ್ಟಿ ಹಿಡಿಸಿದಳಯ್ಯ
ತುಳಸೀ ಮಾಲೆ ಹಾಕುವುದಕ್ಕೆ
ಅರಸನೆಂದು ತಿರುಗುತಲಿದ್ದೆ
ಸರಸಿಜಾಕ್ಷ ಪುರಂದರ ವಿಠಲನು
ತುಳಸೀ ಮಾಲೆ ಹಾಕಿಸಿದನಯ್ಯ.

ಇಲ್ಲಿ ಅವರ ಹಿಂದಿನ ಜೀವನದಲ್ಲಿ ಯಾವುದೋ ಒಂದು ಘಟನೆಯಾಗಿ ಅವರ ಪತ್ನಿಯ ನೆರವಿನಿಂದ ಹರಿದಾಸರಾಗಲು ಸಾಧ್ಯವಾಯಿತು ಎಂಬುದನ್ನು ಕಾಣುತ್ತೇವೆ. ದಾಸರಾಗುವ ಮುನ್ನ ಪುರಂದರರು ಶ್ರೀಮಂತರಾಗಿ ಬಾಳಿದವರು ಎಂಬುದು ವ್ಯಕ್ತವಾಗುತ್ತದೆ. ವಿಜಯದಾಸರು ಬರೆದಿರುವ ಮೂಗುತಿ ಪ್ರಸಂಗವನ್ನು ಇಲ್ಲಿ ನೆನೆಸಿಕೊಳ್ಳಬಹುದು.

ದಾಸ ಸಾಹಿತ್ಯದಲ್ಲಿ ವಿಠ್ಠಲ ಭಜನೆ ಹೆಚ್ಚು. ಪಂಡರಾಪುರದ ಪಾಂಡುರಂಗ ವಿಠ್ಠಲ ಮಂದಿರವು ಹಲವಾರು ಶತಮಾನಗಳಿಂದಲೂ ಪ್ರಭಾವಶಾಲಿಯಾಗಿತ್ತು. ಈ ಮಂದಿರವನ್ನು ಹೊಯ್ಸಳ ರಾಜರು ಕಟ್ಟಿಸಿದ್ದು ಎಂಬ ನಂಬಿಕೆ ಇದೆ. ವಿಠ್ಠಲ ಭಜನೆ ಉತ್ತರ ಕರ್ನಾಟಕ, ಮಹಾರಾಷ್ಟ್ರ ದೇಶಗಳಲ್ಲಿ ಹೆಚ್ಚು ಪ್ರಚಾರದಲ್ಲಿದೆ. ಪುರಂದರ ದಾಸರ ಅನೇಕ ಕೃತಿಗಳು ಮರಾಠೀ ಲಿಪಿಯಲ್ಲಿ ಪ್ರಚಾರಗೊಂಡಿವೆ. ದೇವನಾಗರಿ ಲಿಪಿಯನ್ನು ದೇಶಭಾಷೆಗೆ ಬಳಸುವುದು ವಿಶೇಷವೇನಲ್ಲ. ತಂಜಾವೂರಿನ ಭೋಸಲೆ ವಂಶದ ತುಳಜಾಜಿ ಎಂಬ ರಾಜನು ೧೭೨೮ರಿಂದ ೧೭೩೬ರ ವರೆಗೂ ಆಳುತ್ತಿದ್ದನು. ಅವನು 'ಸಂಗೀತ ಸಾರಾಮೃತ' ಎಂಬ ಸಂಸ್ಕೃತ ಗ್ರಂಥವನ್ನು ರಚಿಸಿದ್ದಾನೆ. ಆ ಗ್ರಂಥದಲ್ಲಿ ಪುರಂದರದಾಸರ ಕೆಲವು ರಚನೆಗಳನ್ನು ಉಲ್ಲೇಖಿಸಿದ್ದಾನೆ. ತುಳಜಾಜಿಗೆ ತನ್ನ ಮಹಾರಾಷ್ಟ್ರ ಸಂಪರ್ಕದಿಂದ ಪುರಂದರದಾಸರ ರಚನೆಗಳ ಪರಿಚಯವಿದ್ದಿತು.

ಪುರಂದರ ದಾಸರು ಕ್ಷೇತ್ರಪರ್ಯಟನೆ ಮಾಡಿ ಆಯಾಯ ಕ್ಷೇತ್ರಮಹಿಮೆ, ಆ ದೇವರ ವೈಭವ ಕುರಿತು ರಚಿಸಿರುವ ಕವನಗಳು ಅಮೂಲ್ಯವಾದವುಗಳು.

ಕರ್ನಾಟಕ ಸಂಗೀತ ಕಲಿಯುವವರಿಗೆ ಸಹಾಯವಾಗುವ ಮಾಯಾಮಾಳವಗೌಳ ರಾಗದ ಆರೋಹಣ ಮತ್ತು ಅವರೋಹಣ ಕ್ರಮಪಾಠದ ಮಹತ್ವವನ್ನು ಪುರಂದರ ದಾಸರು ಚೆನ್ನಾಗಿ ಅರಿತಿದ್ದರು ಎಂದು ಮದರಾಸಿನ ಪ್ರಸಿದ್ಧ ಸಂಗೀತ ವಿದ್ವಾಂಸ ಪ್ರೊಫೆಸರ್ ಪಿ. ಸಾಂಬಮೂರ್ತಿಯವರು ಹೇಳಿದ್ದಾರೆ. ಪುರಂದರದಾಸರು ಕರ್ನಾಟಕ ಸಂಗೀತಸಾಧನೆಗೆ ಸಹಾಯವಾಗುವಂತೆ ಪಿಳ್ಳಾರೀ ಗೀತೆಗಳನ್ನು ರಚಿಸಿದರು. ಪುರಂದರ ದಾಸರನ್ನು ಕರ್ನಾಟಕ ಸಂಗೀತ ಪಿತಾಮಹ ಎಂದು ಕರೆಯುತ್ತಾರೆ.

## (೩) ಹೆಳವನಕಟ್ಟೆ ಗಿರಿಯಮ್ಮ, ಕ್ರಿಸ್ತಶಕ ಸುಮಾರು ೧೭೫೦

ಇವರು ರಾಣಿಬೆನ್ನೂರಿನಲ್ಲಿ ಜನಿಸಿದವರು. ಇವರ ತಂದೆ ಬಿಷ್ಟಪ್ಪ ಜೋಯಿಸ್ ಎಂಬುವರು. ಹರಿಹರದ ಬಳಿ ಇರುವ ಮಲೆಬೆನ್ನೂರಿನ ಶ್ಯಾನುಭೋಗ ತಿಪ್ಪರಸನನ್ನು ಮದುವೆಯಾಗಿದ್ದರು. ಕೈಹಿಡಿದ ಗಂಡನೊಡನೆ ದಾಂಪತ್ಯ ಜೀವನವನ್ನು ನಡೆಸಲಿಲ್ಲ. ಆದರೂ ತನ್ನ ಗಂಡನ ಮನೆಯಲ್ಲೇ ತನ್ನ ಜೀವಿತದ ಕೊನೆಯವರೆಗೂ ನೆಲಸಿದ್ದರು. ತನ್ನ ಸ್ವಂತ ಇಷ್ಟದಿಂದಲೇ ಗಂಡನಿಗೆ ಇನ್ನೊಬ್ಬ ಹೆಣ್ಣನ್ನು ತಂದು ಮದುವೆ ಮಾಡಿಸಿದ್ದರು. ಮಲೆಬೆನ್ನೂರಿನ ಹತ್ತಿರವೇ ಇದ್ದ ಕೊಮರನ ಹಳ್ಳಿಯಲ್ಲಿ ಅಂಗವಿಕಲನಾದ ಮುಂದಾಳು ಒಬ್ಬನು ವಾಸಿಸುತ್ತಿದ್ದನು. ಅವನು ಆ ಹಳ್ಳಿಯವರ ನೆರವಿನಿಂದ ಊರ ದನಕರುಗಳಿಗೆ ಮೇವು ಉಣಿಸಲು ಅನುಕೂಲವಾಗುವಂತೆ ಒಂದು ಎತ್ತರವಾದ ಕಟ್ಟೆಯನ್ನು ಕಟ್ಟಿದ್ದನು. ಅದನ್ನು ಹೆಳವನ ಕಟ್ಟೆ ಎಂದು ಕರೆಯುತ್ತಿದ್ದರು. ಅದರ ಬಳಿ ಒಂದು ರಂಗನಾಥಸ್ವಾಮಿಯ ದೇವಾಲಯವು ಇದ್ದಿತು. ಗಿರಿಯಮ್ಮ ಆ ದೇವಾಲಯದಲ್ಲೇ ಹೆಚ್ಚು ಕಾಲವನ್ನು ಕಳೆಯುತ್ತಿದ್ದರು. ಅದು ಅವರ ಮನೆ ದೇವರು. ಅವರ ಮಾವ ತನ್ನ ಸೊಸೆಯ ಸಚ್ಚಾರಿತ್ರ್ಯವನ್ನು ಪರೀಕ್ಷಿಸಲು ಅಲ್ಲೇ ಒಂದು ಮರದ ಮೇಲೆ ಹತ್ತಿ ಕುಳಿತು ನೋಡುತ್ತಿದ್ದನು. ತನ್ನ ಸೊಸೆಯ ಸಚ್ಚಾರಿತ್ರ್ಯವನ್ನು ಪರೀಕ್ಷಿಸಿದ ಮೇಲೆ ಅವರ ಮೇಲೆ ಗೌರವ ಹೆಚ್ಚಾಯಿತು.

ಗಿರಿಯಮ್ಮನ ಮೈದುನ, ವೆಂಕಟರಾಯನು ಶ್ಯಾನುಭೋಗಗಿರಿಯನ್ನು ನಡೆಸುತ್ತಿದ್ದನು. ಅವನು ಹಣವನ್ನು ಗಿರಿಯಮ್ಮನ ಧಾರ್ಮಿಕ ಸಂತರ್ಪಣೆಗಳಿಗೆ ಖರ್ಚು ಮಾಡುತ್ತಿದ್ದಾನೆಂದು ಅವರಿಗೆ ಆಗದವರು ಆರೋಪಣೆ ಮಾಡಿದ್ದರು. ಜಿಲ್ಲಾಧಿಕಾರಿ ಬಂದು ವಿಚಾರಿಸಿದಾಗ ಗಿರಿಯಮ್ಮನ ಮೇಲೆ ಜನರಿಗೆ ಇದ್ದ ಗೌರವ ವಿಶ್ವಾಸಗಳನ್ನು ಕಂಡು ವೆಂಕಟರಾಯನನ್ನು ಆಪಾದನೆಯಿಂದ ಬಿಡುಗಡೆ ಮಾಡಿದನು.

ಹೆಳವನಕಟ್ಟೆ ಗಿರಿಯಮ್ಮನ ಕಾವ್ಯ ರಚನೆಗಳು:

(೧) ಹೆಳವನಕಟ್ಟೆ ರಂಗನಾಥ

(೨) ಚಂದ್ರಹಾಸನ ಕಥೆ

(೩) ಉದ್ದಾಳೀಕನ ಕಥೆ

(೪) ಸೀತಾಕಲ್ಯಾಣ

(೫) ಲವಕುಶರ ಕಾಳಗ

(೬) ಶಂಕರಗಂಡನ ಹಾಡು

**(೧) ಹೆಳವನಕಟ್ಟೆ ರಂಗನಾಥ:** ಈ ಕಾವ್ಯದಲ್ಲಿ ರಂಗನಾಥ ಎಂಬ ವಿಷ್ಣುದೇವರೂ, ಲಿಂಗ ಎಂಬ ಶಿವದೇವರೂ ಒಂದೇ ಎಂಬ ಭಾವವನ್ನು ಹರಡಿದ್ದಾರೆ. ಗಿರಿಯಮ್ಮನ ತೌರು ಮನೇದೇವರು ಮೈಲಾರ ಲಿಂಗ. ಹರಿಹರ ಪ್ರಾಂತ್ಯದ ಪ್ರಭಾವವೋ ಎನ್ನುವ ಹಾಗೆ, ಗಿರಿಯಮ್ಮ ಮೈಲಾರ ಲಿಂಗ, ಕೊಕ್ಕನೂರು ಆಂಜನೇಯ, ಗೋಕರ್ಣೇಶ್ವರ, ಪಿಳ್ಳಂಗಿರಿಯ ರಂಗನಾಥ, ದಾಗಿನ ಕಟ್ಟೆ ನರಸಿಂಹ, ತಿರುಪತಿ ವೆಂಕಟೇಶ್ವರ, ಎಲ್ಲಾ ದೇವರೂ ಒಂದೇ ಎನ್ನುವ ಭಾವದಿಂದ ಸ್ತುತಿಸಿದ್ದಾರೆ.

**(೨) ಚಂದ್ರಹಾಸನ ಕಥೆ:** ಚಂದ್ರಹಾಸನ ಕಥೆಯಲ್ಲಿ ಕವಿ ಲಕ್ಷ್ಮೀಶನ ಪ್ರಶಂಸೆ ಮಾಡಿರುವುದರಿಂದ ಇವರು ಲಕ್ಷ್ಮೀಶನ ನಂತರ ಇದ್ದವರು ಎಂದು ವ್ಯಕ್ತವಾಗುತ್ತದೆ. ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಬರುವ ಚಂದ್ರಹಾಸನ ಕಥೆಯ ಆಧಾರದ ಮೇಲೆ ಇವರು ೩೮೭ ಪದ್ಯಗಳಿಂದ ಕೂಡಿದ ೪ ಸಂಧಿಗಳ ಸಂಗೀತ ಕಾವ್ಯವನ್ನು ರಚಿಸಿದ್ದಾರೆ.

**(೩) ಉದ್ದಾಳೀಕನ ಕಥೆ:** ಉದ್ದಾಳೀಕನ ಕಥೆಯು ಮಹಾಭಾರತದಲ್ಲಿ ಬರುವ ಆಯೋಧ ಧೌಮ್ಯನ ಶಿಷ್ಯ ಉದ್ದಾಲಕ ಮತ್ತು ಜೈಮಿನಿ ಭಾರತದಲ್ಲಿ ಉಲ್ಲೇಖವಾಗಿರುವ ಚಂಡಿಯ ಗಂಡ ಉದ್ದಾಲಕ ಇವೆರಡಕ್ಕೂ ಭಿನ್ನವಾದ ಕಥೆ. ಇದು ಗಿರಿಯಮ್ಮನವರ ಸ್ವಂತ ರಚನೆ.

**(೪) ಸೀತಾಕಲ್ಯಾಣ:** ಸೀತಾಕಲ್ಯಾಣ ಶ್ರೀರಾಮ, ಸೀತೆಯರ ವಿವಾಹ ಸಂದರ್ಭದ ಕಾವ್ಯಕಥೆ. ಮದುವೆಯ ಸಮಾರಂಭಗಳಲ್ಲಿ ಹಾಡುವ ಉರುಟಣೆ ಹಾಡುಗಳ ಸಂಗ್ರಹವಿದೆ. ಇದರಲ್ಲಿ ಅರಿಶಿನೆಣ್ಣೆ ಮುಂತಾದ ಶಾಸ್ತ್ರಗಳ ವರ್ಣನೆಯೇ ಹೆಚ್ಚು ಭಾಗ.

**(೫) ಲವಕುಶರ ಕಾಳಗ:** ಲವಕುಶರ ಕಾಳಗದ ಕಥಾವಸ್ತು ಉತ್ತರರಾಮಚರಿತೆಯಿಂದ ಬಂದಿದ್ದರೂ, ಗಿರಿಯಮ್ಮ ಕಥೆಯನ್ನು ತನ್ನದೇ ಆದ ರೀತಿಯಲ್ಲಿ ಬದಲಾಯಿಸಿದ್ದಾರೆ. ಸೀತಾಪರಿತ್ಯಾಗಕ್ಕೆ ಅಗಸನ ಕಥೆಯೇ ಆಧಾರ. ಆದರೆ ಗಿರಿಯಮ್ಮ ಒಬ್ಬ ಕೊರವಿಯ ಪಾತ್ರವನ್ನು ಸೃಷ್ಟಿಸಿದ್ದಾರೆ. ಕೊರವಿಯು ಸೀತೆಯ ಕೈಯಲ್ಲಿ ರಾವಣನ ಪಟವನ್ನು ಬರೆಯಬೇಕೆಂದು ಕೋರುತ್ತಾಳೆ. ಅದು ಅಳಿಯದ ಹಾಗೆ ವರ ಬೇಡುತ್ತಾಳೆ. ಸೀತೆ ಪಟವನ್ನು ಬರೆಯುತ್ತಾಳೆ. ಆ ಪಟವನ್ನು ನೋಡಿ ರಾಮನು ಕುಪಿತನಾಗುತ್ತಾನೆ. ಕೊನೆಗೆ ಲಕ್ಷ್ಮಣನು ಆ ಪಟವನ್ನು ಹರಿದುಹಾಕುತ್ತಾನೆ. ಆದರೂ ರಾಮನ ಕೋಪ

ತಗ್ಗಲಿಲ್ಲ. ಸೀತೆಯನ್ನು ಪರಿತ್ಯಜಿಸುತ್ತಾನೆ. ಮುಂದಕ್ಕೆ ಕಥೆಯು ಉತ್ತರರಾಮ ಚರಿತೆಯನ್ನು ಅನುಸರಿಸುತ್ತದೆ.

(೬) **ಶಂಕರಗಂಡನ ಹಾಡು:** ಶಂಕರಗಂಡನ ಹಾಡು ಶಿವ, ರತಿ, ಕಾಮರನ್ನು ಕುರಿತದ್ದು. ಇಲ್ಲಿ ಶಿವನ ತಂಗಿ ರತಿ. ಅವಳಿಗೆ ಗಂಡು ಹುಡುಕಿ, ಮನ್ಮಥನೇ ಸರಿಯಾದ ವರ ಎಂದು ಶಿವನು ರತಿ ಮನ್ಮಥರಿಗೆ ವಿವಾಹ ಮಾಡುತ್ತಾನೆ. ಒಮ್ಮೆ ಶಿವನು ತಂಗಿಯ ಮನೆಗೆ ಬಂದಾಗ ಮನ್ಮಥನು ಅವನನ್ನು ವ್ಯಂಗ್ಯವಾಗಿ ನೋಡಿ ಹಾಸ್ಯ ಮಾಡುತ್ತಾನೆ. ಶಿವನು ಕೋಪಗೊಂಡು ಮನ್ಮಥನಿಗೆ ದಾರಿದ್ರ್ಯ ಬರುವ ಹಾಗೆ ಶಪಿಸುತ್ತಾನೆ. ಕಾಮನು ದಾರಿದ್ರ್ಯದಿಂದ ನರಳುತ್ತಿರಲು ರತಿಯು ಅಣ್ಣನನ್ನು ಬೇಡಿಕೊಂಡ ಮೇಲೆ ಶಾಪವಿಮೋಚನೆ ಆಗುತ್ತದೆ.

ಗಿರಿಯಮ್ಮ ಗಜೇಂದ್ರ ಮೋಕ್ಷ, ಕಾಳೀಯ ಮರ್ದನ, ಗಿಳಿ ಪಾರಿಜಾತ, ಎಂದು ಮುಂತಾದ ಇನ್ನೂ ಹಲವು ಕಾವ್ಯಗಳನ್ನು ರಚಿಸಿದ್ದಾರೆ ಎಂದು ಪ್ರತೀತಿ. ಅವು ಇನ್ನೂ ಬೆಳಕಿಗೆ ಬಂದಿಲ್ಲ.

**ಮುಕ್ತಾಯದ ಮಾತುಗಳು:**

ಭಕ್ತಿ ಸಾಹಿತ್ಯದ ಕೆಲವು ನಿದರ್ಶನಗಳನ್ನು ಕಂಡೆವು. ಆ ಮಹಾನುಭಾವರ ಸಾಧನೆಗಳು ಅವರ ಭಕ್ತಿಯಿಂದ ಎಂದು ನೋಡಿದೆವು. ಭಕ್ತಿ ಎಂದರೆ ಪ್ರೀತಿ, ವಿಶ್ವಾಸ, ಪ್ರೇಮ, ಸೇವೆ ಅಷ್ಟೇ ಅಲ್ಲ, ಆ ರೀತಿ ನಡೆದು ತಮ್ಮ ಕರ್ತವ್ಯವನ್ನು ನೆರವೇರಿಸುವುದೂ ಅದಕ್ಕೆ ಸೇರಿದೆ. ಅಂತಹ ಆದರ್ಶವನ್ನು ದೇವರ ದಾಸಿಮಯ್ಯನವರು ತೋರಿಸಿದ್ದಾರೆ. ಅವರು ತಮ್ಮ ಇಷ್ಟದೈವವನ್ನು ಸಂಬೋಧಿಸಿ ತಮ್ಮ ಭಾವನೆಗಳನ್ನು ತಮ್ಮ ವಚನಗಳಲ್ಲಿ ವ್ಯಕ್ತಪಡಿಸಿದ್ದಾರೆ. ಆ ರೀತಿ ನಡೆದುಕೊಂಡಿದ್ದಾರೆ. ಪುರಂದರದಾಸರು ಅದೇ ರೀತಿ ತಾಳ್ಮೆಯಿಂದ ತಮ್ಮ ಇಷ್ಟದೈವ ಪಾಂಡುರಂಗವಿಠ್ಠಲನನ್ನು ತಮ್ಮ ಮಾರ್ಗದರ್ಶಿಯಂತೆ ಪರಿಗಣಿಸಿ ತಮ್ಮ ಜೀವನವನ್ನು ಸಾರ್ಥಕ್ಯಗೊಳಿಸಿದ್ದಾರೆ. ಹೆಳವನಕಟ್ಟೆ ಗಿರಿಯಮ್ಮನವರು ದಾಂಪತ್ಯ ಸುಖವನ್ನು ತ್ಯಜಿಸಿ ರಂಗನಾಥಸ್ವಾಮಿಯ ಸೇವೆಯೇ ತನ್ನ ಬದುಕು ಎಂದು ಹಾಡು, ಕಥೆ, ಸಂಗೀತಗಳಿಂದ ಸಾಹಿತ್ಯ ಮತ್ತು ಸಮಾಜದ ಸೇವೆಯಲ್ಲಿ ಫಲ ಕಂಡಿದ್ದಾರೆ. ಭಕ್ತಿಮಾರ್ಗದಲ್ಲಿ ಶಕ್ತಿಯನ್ನು ಕಂಡುಕೊಂಡಿದ್ದಾರೆ. ಇವರೆಲ್ಲರದ್ದು ಆಧ್ಯಾತ್ಮಿಕ ಶಕ್ತಿ. ಮನಸ್ಸಿನ ದೌರ್ಬಲ್ಯಗಳನ್ನು ಜಯಿಸಿ ದೃಢ ಮನಸ್ಸಿನಿಂದ ಪುರುಷಾರ್ಥಗಳನ್ನು ಸಾಧಿಸುವುದಕ್ಕೆ ಆಧ್ಯಾತ್ಮಿಕ ಶಕ್ತಿ ಬೇಕು. ಆಧ್ಯಾತ್ಮಿಕ ಶಕ್ತಿ ಎಲ್ಲರಿಗೂ ಬೇಕು.

ಸಾಹಿತ್ಯವು ನಮ್ಮ ಬಿಂಬ. ಅದರಲ್ಲೂ ಚಾರಿತ್ರಕ ಸಾಹಿತ್ಯವು ನಮ್ಮ ಹಿಂದಿನ ಪೀಳಿಗೆಗಳು ಮತ್ತು ನಾಯಕರು ಅಂದಿನ ಸಮಸ್ಯೆಗಳನ್ನು ಯಾವ ರೀತಿ ಬಗೆಹರಿಸಿದರು

ಎಂಬುದನ್ನು ತೋರಿಸುತ್ತದೆ. ಪುರಂದರದಾಸರ ಸೇವಾ ಮನೋಭಾವ, ಹೆಳವನ ಕಟ್ಟೆ ಗಿರಿಯಮ್ಮನವರ ಪ್ರಾಮಾಣಿಕತೆ, ಎಲ್ಲವೂ ಬೇಕು. ಅಂತಹ ಭಕ್ತಿ ಮನೋಭಾವದಿಂದ ಸಮಸ್ಯೆಗಳನ್ನು ಬಗೆಹರಿಸುವುದು ನಮ್ಮ ಧ್ಯೇಯವಾಗಬೇಕು.

**ಆಕರ ಗ್ರಂಥಗಳು:**

(೧) ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಡಾ. ಸೂರ್ಯನಾಥ್ ಕಾಮತ್.

(೨) ಕನ್ನಡ ಸಾಹಿತ್ಯ ಚರಿತ್ರೆ, ತ. ಸು. ಶ್ಯಾಮರಾಯ.

(೩) ಪುರಂದರ ಸಾಹಿತ್ಯ ದರ್ಶನ (ಸಂಪುಟ ೧–೪)

(೪) ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ (ಸಂಪುಟ ೫, ಪುಟ ೧೭೪–೧೮೦)

(೫) ದೇವರ ದಾಸಿಮಯ್ಯ, ಕೆ. ಅನಂತರಾಮು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೭೨

(೬) ಕರ್ನಾಟಕದ ಪರಂಪರೆ (ಸಂಪುಟ ೧ ಮತ್ತು ೨)

■

# ಬಸವಣ್ಣ – ಒಂದು ಬೆರಗು

–ಎಚ್. ವೈ. ರಾಜಗೋಪಾಲ್

ಮಹಾಚೇತನರ ಜೀವನಗಳೇ ಹಾಗೆ – ನಮ್ಮನ್ನು ಒಂದು ಅಸಾಧಾರಣ ಬೆರಗಿನಲ್ಲಿ ಸೆರೆಹಿಡಿಯುತ್ತವೆ. ಇಂಥ ಬೆರಗು ತಟ್ಟುವುದು ಕೇವಲ ಸಾಮಾನ್ಯ ಜನಕ್ಕೆ ಮಾತ್ರವೇ ಅಲ್ಲ. ಈ ಜಗತ್ತು ಕಂಡ ಅತ್ಯಂತ ಪ್ರತಿಭಾವಂತರಲ್ಲೊಬ್ಬನೆನಿಸಿದ ಐನ್‌ಸ್ಟೈನನಿಗೂ ಇದು ತಪ್ಪಲಿಲ್ಲ. ಮಹಾತ್ಮ ಗಾಂಧಿಯ ಕೊಲೆಯಾದಾಗ ಇಂಥ ಒಬ್ಬ ಮನುಷ್ಯ, ರಕ್ತಮಾಂಸ ತುಂಬಿದವನು, ಈ ಭೂಮಿಯ ಮೇಲೆ ನಡೆದಾಡಿದ್ದ ಎಂದು ಮುಂದಿನ ಹಲವಾರು ಶತಮಾನಗಳ ಜನ ನಂಬಲಾರರು ಎಂದು ಹೇಳಿದ್ದ. ಇದು ಇತರ ಅನೇಕ ಮಹಾಪುರುಷರ ಬಾಳಿಗೂ ಅನ್ವಯಿಸುತ್ತದೆ. ಮಹಾಪುರುಷರ ಜೀವನ ನಮ್ಮ ಕಣ್ಣಿಗೆ ವಿಚಿತ್ರ. ಮಹಾಪುರುಷನೆನಿಸಿಕೊಂಡವನು ಯಾವುದೋ ಒಂದು ಸಂದರ್ಭದಲ್ಲಿ ಹೀಗೇಕೆ ಮಾಡಿದ ಎಂಬ ಪ್ರಶ್ನೆ ಏಳುವುದು ಕೂಡ ಸಹಜ. ಇದಕ್ಕೆ ವಿಷ್ಣುವಿನ ಅವತಾರಗಳೆಂದೇ ಅನಿಸಿದ ರಾಮ ಕೃಷ್ಣರೂ ಹೊರತಲ್ಲ. ರಾಮ ವಾಲಿಯನ್ನು ಕೊಂದದ್ದು, ಸೀತೆಯನ್ನು ಅಗ್ನಿಪರೀಕ್ಷೆಗೆ ಒಳಪಡಿಸಿದ್ದು, ಕರ್ಣನ ರಥಚಕ್ರ ಕೆಸರಲ್ಲಿ ಹೂತುಹೋಗಿದ್ದಾಗ ಅದನ್ನು ಮೇಲೆತ್ತುವವರೆಗೂ ತಾಳು ಎಂದು ಕರ್ಣ ಕೇಳಿಕೊಂಡರೂ ಕೃಷ್ಣ ಅರ್ಜುನನಿಗೆ ಈ ಸಂದರ್ಭ ಕೈಬಿಡಬೇಡ, ಈಗಲೇ ಕರ್ಣನನ್ನು ವಧಿಸು ಎಂದದ್ದು – ಇವನ್ನು ಕುರಿತು ನಾವು ಈಗಲೂ ಮಾತಾಡಿಕೊಳ್ಳುವುದಿಲ್ಲವೆ? ತೀರ ಮುಗ್ಧರಿಗೆ, ಯಾವುದನ್ನೂ ಯಾರನ್ನೂ ಪ್ರಶ್ನಿಸದೆ ಒಪ್ಪಿಕೊಳ್ಳುವವರಿಗೆ ಇದೆಲ್ಲ ಸಮಸ್ಯೆಗಳಲ್ಲ, ಆದರೆ, ಸ್ವಲ್ಪ ಸ್ವಂತ ಆಲೋಚನೆ ಉಳ್ಳವರಿಗೆ ಹಾಗಲ್ಲ, ಮಹಾತ್ಮರ ಜೀವನ ಅವರಿಗೆ ಹಲವು ಆಯಾಮಗಳಲ್ಲಿ ಸಮಸ್ಯೆಯಾಗಿ ಒಗಟಾಗಿ ಕಾಣುತ್ತವೆ. ಅವರ ನಿರ್ಧಾರಗಳು, ಅವರ ಕಾರ್ಯಗಳು ಲೋಕನೀತಿಗೆ, ಜನ ಒಪ್ಪಿದ ವ್ಯವಹಾರಕ್ಕೆ ವಿರುದ್ಧವಾಗಿ ತೋರುತ್ತವೆ.

ಅಷ್ಟೇ ಅಲ್ಲ, ಈ ಮಹಾಚೇತನರಲ್ಲಿ ನಾವು ಕಾಣುವ ಒಂದು ಮುಖ್ಯ ಗುಣ – ಮಾನವಕುಲದ ಬಗ್ಗೆ ಅಪಾರ ಕರುಣೆ. ಅವರ ಒಳಿತಿಗಾಗಿ ತಾವು ಎಷ್ಟು ಕಷ್ಟ ಸಂಕಟಗಳನ್ನು ಅನುಭವಿಸಲೂ ಸಿದ್ಧ, ಶಿಲುಬೆಗೇರಲೂ ಸಿದ್ಧ, ತಮ್ಮ ಸುತ್ತಮುತ್ತಲಿನ

ಜನರನ್ನು ತಿದ್ದುವ, ಸಮಾಜದಲ್ಲಿ ತುಂಬಿಕೊಂಡಿರುವ ಭ್ರಷ್ಟಾಚಾರ, ಧಾರ್ಮಿಕ ಕಪಟತನ, ಡಂಭಾಚಾರ ಮುಂತಾದ ಕಲ್ಮಷಗಳನ್ನೆಲ್ಲ ತೊಡೆದು ಸಮಾಜವನ್ನು ಶುದ್ಧಗೊಳಿಸುವ ಒಂದು ಮಹದಾಶಯ. ಈ ಪ್ರಯತ್ನದಲ್ಲಿ ಅವರು ಸೋತವರೆ. ಇಡೀ ಮಾನವ ಕುಲದ ಮಾತು ಹಾಗಿರಲಿ, ತಮ್ಮ ಸುತ್ತಮುತ್ತಲಿನ ಸಮಾಜವನ್ನೂ ಸಂಪೂರ್ಣವಾಗಿ ಸುಧಾರಿಸಲಾಗಲಿಲ್ಲ. ಅಹಿಂಸೆಯನ್ನು ಪ್ರತಿಪಾದಿಸಿದ ಮಹಾವೀರ, ದುರಾಸೆ ತ್ಯಜಿಸಬೇಕೆಂದ ಭಗವಾನ್ ಬುದ್ಧ, ದಯೆ ಕರುಣೆಗಳನ್ನು ಜಗತ್ತಿಗೆ ನೀಡಿದ ಯೇಸು, ಶಾಂತಿ ಮಂತ್ರ, ಮತಸಹಿಷ್ಣುತೆಗಳನ್ನು ಸಾರಿದ ಮಹಾತ್ಮ ಗಾಂಧಿ – ಇವರೆಲ್ಲರೂ ಒಂದು ವಿಧದಲ್ಲಿ ಸೋತವರೆ. ಆದರೆ ಎಂಥ ಸೋಲು! ಆ ಸೋಲಿನಲ್ಲೇ ಅವರು ಪಡೆದ ಗೆಲುವು ಎಂಥದು! ಹಾಗೆ ಸೋತವರನ್ನು ಜನ ಇಂದಿಗೂ ನೆನಸಿಕೊಳ್ಳುತ್ತಾರಲ್ಲ, ಏಕೆ? ಇಂಥವರ ವಿಚಾರದಲ್ಲಿ ನಾವು ಲೋಕರೂಢಿಯಲ್ಲಿ ಬಳಸುವ ಸೋಲು ಗೆಲುವು ಪದಗಳಿಗೆ ಬೇರೆಯೇ ಅರ್ಥವೇನೋ!

ಹನ್ನೆರಡನೆಯ ಶತಮಾನದಲ್ಲಿ ಉತ್ತರ ಕರ್ನಾಟಕದಲ್ಲಿ ಹುಟ್ಟಿ ಬೆಳೆದ ಬಸವಣ್ಣನವರು ಇಂಥ ಒಬ್ಬ ಮಹೋಜ್ವಲ ವ್ಯಕ್ತಿ. ಮೂಲತಃ ಆಧ್ಯಾತ್ಮಿಕ ವ್ಯಕ್ತಿಯಾಗಿದ್ದು, ಕಾರಣಾಂತರಗಳಿಂದ ಲೌಕಿಕ ಪ್ರಪಂಚದಲ್ಲಿ ರಾಜಕೀಯ, ಆಡಳಿತಗಳಲ್ಲಿ ಕಾಯಕ ಮಾಡಿದವರು. ಅಂಥ ವ್ಯಕ್ತಿಗಳೇ ಅಪರೂಪ! ಅವರು ನಡೆಸಿದಂಥ ಧಾರ್ಮಿಕ-ಸಾಮಾಜಿಕ-ಸಾಹಿತ್ಯ ಕ್ರಾಂತಿ ಬಹುಶಃ ಭಾರತದಲ್ಲಿ ಇನ್ನೆಲ್ಲೂ ಆಗಿದ್ದಿಲ್ಲ. ಒಂದು ಪ್ರತಿಷ್ಠಿತ ಬ್ರಾಹ್ಮಣ ಕುಲದಲ್ಲಿ ಹುಟ್ಟಿ, ತಂದೆತಾಯಿಯರ ಕಣ್ಮಣಿಯಾಗಿ ಬೆಳೆದ ಅಸಾಧಾರಣ ಮೇಧಾವಿ ಬಾಲಕ ಬಸವಣ್ಣ ತನ್ನ ಎಂಟನೆಯ ವಯಸ್ಸಿನಲ್ಲಿ ತಂದೆ ತನಗೆ ಉಪನಯನ ಮಾಡಿ ವೇದಾಧ್ಯಯನದಲ್ಲಿ ತೊಡಗಿಸಬೇಕೆಂದು ಶಾಸ್ತ್ರವಿಧಿಗಳನ್ನು ಆಚರಿಸಲು ಸಿದ್ಧವಾದಾಗ ಈ ಬಾಲಕ ಆ ಎಲ್ಲ ಆಚರಣೆಗಳ ಮಹತ್ವವನ್ನೇ ಪ್ರಶ್ನಿಸಿ, ಅದರಲ್ಲಿ ತನಗೆ ಏನೇನೂ ನಂಬಿಕೆಯಿಲ್ಲವೆಂದು ಅವನ್ನು ತಿರಸ್ಕರಿಸಿ, ಜನಿವಾರವನ್ನು ಕಿತ್ತೊಗೆದು ಮನೆಯಿಂದ ಓಡಿಹೋದ. ಮುಂದೆ ಹನ್ನೆರಡು ವರ್ಷ ಗುರುಗಳೊಬ್ಬರಲ್ಲಿ ಅಭ್ಯಾಸ, ಚಿಂತನೆ, ಆತ್ಮಾವಲೋಕನ ನಡೆಸಿ, ಕಾಯಕದ ಮಹತ್ವವನ್ನು ಮನಗಂಡು, ಬಿಜ್ಜಳನ ಭಂಡಾರದಲ್ಲಿ ಕೆಲಸಕ್ಕೆ ಸೇರಿದ ಯುವಕ ಬಹು ಶೀಘ್ರವಾಗಿ ತನ್ನ ಸಾಮರ್ಥ್ಯ, ನಿಷ್ಠೆಗಳಿಂದ ರಾಜನ ವಿಶ್ವಾಸ ಗಳಿಸಿಕೊಂಡು ಅವನ ಭಂಡಾರದ ಮುಖ್ಯಸ್ಥನಾದ.

ಬಸವಣ್ಣನವರು ಮಹಾಶಿವಭಕ್ತರು. ಒಂದು ಕಡೆ ರಾಜನ ಪ್ರತಿನಿಧಿಯಾಗಿ ರಾಜ್ಯಾಡಳಿತ ನೋಡಿಕೊಳ್ಳಬೇಕು. ಆದರೆ ಶಿವಭಕ್ತನಾಗಿ ತಮ್ಮ ಜವಾಬ್ದಾರಿ ಇನ್ನೂ ದೊಡ್ಡದೆಂದು ಅರಿತರು. ಶಿವಶರಣರಿಗೆ ಅಗ್ರಸ್ಥಾನ ಕೊಟ್ಟರು. ತಾವು ಶಿವಶರಣರ ಸೇವಕ ಎಂಬ ಭಾವದಲ್ಲಿ ಅವರ ಸೇವೆ ಮಾಡಿದರು. ರಾಜನ ಬೊಕ್ಕಸದ ಹಣವನ್ನೇನೂ ಅವರು ದುರುಪಯೋಗಪಡಿಸಲಿಲ್ಲವಾದರೂ, ತಮ್ಮ ಸ್ವಂತ ಗಳಿಕೆಯನ್ನೆಲ್ಲ ಅದಕ್ಕಾಗಿ

ಮುಡುಪಿಟ್ಟರು. ಸನಾತನವಾಗಿ ಬಂದಿದ್ದ ವೈದಿಕಧರ್ಮವನ್ನು ನಿರಾಕರಿಸಿ, ಅದರ ಸ್ಥಾನದಲ್ಲಿ ವೀರಶೈವಧರ್ಮವನ್ನು ಬೆಳಸಿದರು. ಜಾತಿಗಳು ಎರಡೇ: ಶಿವಶರಣರು, ಶಿವಶರಣರಲ್ಲದವರು ಎಂದು ಘೋಷಿಸಿ ಸಮಾಜದಲ್ಲಿ ಶತಮಾನಗಳಿಂದ ನಡೆದು ಬಂದಿದ್ದ ಜಾತಿ ಪದ್ಧತಿಯನ್ನು ಉಚ್ಚಾಟನೆ ಮಾಡಲು ತೊಡಗಿದರು. ದೇಶದ ಎಲ್ಲ ಕಡೆಗಳಿಂದಲೂ ಶಿವಶರಣರು ಬಸವಣ್ಣನವರಿದ್ದ ಕಲ್ಯಾಣಕ್ಕೆ ಬಂದು ಸೇರಿದರು. ಆ ಶರಣರಲ್ಲಿ ಪರಮ ಭಕ್ತರೂ, ಜ್ಞಾನಿಗಳೂ ಆದವರ ಜೊತೆಜೊತೆಗೇ ನಾನಾ ವೃತ್ತಿಗಳನ್ನು ಅರಸುತ್ತಿದ್ದ ಸಾಮಾನ್ಯರೂ ಇದ್ದರು. ಅವರನ್ನೆಲ್ಲ ಸೇರಿಸಿ ಬಸವಣ್ಣನವರು ಒಂದು ಶಿವಾನುಭವ ಮಂಟಪ (ಮುಂದೆ ಅನುಭವ ಮಂಟಪ) ಕಟ್ಟಿದರು. ಇದರಲ್ಲಿ ಗುರುಸ್ಥಾನದಲ್ಲಿದ್ದವರು ಪರಮ ಜ್ಞಾನಿ, ಅನುಭಾವಿ ಕವಿ ಅಲ್ಲಮಪ್ರಭು. ವೀರಶೈವ ಮತಕ್ಕೆ ಸಂಬಂಧಿಸಿದ ಎಲ್ಲ ಧಾರ್ಮಿಕ, ಆಧ್ಯಾತ್ಮಿಕ ತತ್ವಪರಿಶೀಲನೆಗೆ ಇದೊಂದು ಅಗ್ರಸ್ಥಾನವಾಯಿತು. ಜನರ ಬದುಕಿನಲ್ಲಿ ಮಾನವೀಯ ಮೌಲ್ಯಗಳನ್ನು ಸ್ಥಾಪಿಸಿ, ನ್ಯಾಯ ನೀತಿಗಳನ್ನು ಬೆಳಸಲು ಈ ಮಂಟಪ ಅನುವಾಯಿತು. ಅಲ್ಲಿನ ಚರ್ಚೆಗಳೆಲ್ಲ ಎಲ್ಲರಿಗೂ ಅರ್ಥವಾಗುವ ಜನರ ಆಡುಮಾತಿನಲ್ಲಿ – ಕನ್ನಡದಲ್ಲಿ – ನಡೆದವು.

ಅನುಭವ ಮಂಟಪದಿಂದ ಆದ ಮತ್ತೊಂದು ಅದ್ಭುತವಾದ ಪರಿಣಾಮ ಎಂದರೆ ವಚನ ಸಾಹಿತ್ಯದ ಬೆಳವಣಿಗೆ. ವಚನ ಸಾಹಿತ್ಯ ಬಸವಣ್ಣನವರ ಕಾಲಕ್ಕೆ ಮೊದಲೇ ಸ್ಥಾಪಿತವಾಗಿದ್ದರೂ ಅದಕ್ಕೆ ವಿಪುಲವಾದ ಉತ್ತೇಜನ ದೊರಕಿದ್ದು ಅನುಭವ ಮಂಟಪದ ಪ್ರಭಾವದಿಂದಲೇ. ವಚನ ಸಾಹಿತ್ಯ ಅಪ್ಪಟ ಕನ್ನಡದ್ದು. ಭಾರತದ ಇನ್ನಾವ ಭಾಷೆಯಲ್ಲೂ, ಏಕೆ, ಪ್ರಪಂಚದ ಇನ್ನಾವ ಭಾಷೆಯಲ್ಲೂ ಈ ಪ್ರಕಾರ ಇಲ್ಲವೆನ್ನುತ್ತಾರೆ, ಅನುಭವ ಮಂಟಪದ ಅನುಭಾವಿ ಕವಿಗಳು, ಅವರ ನಂತರ ಬಂದವರು—ಇವರೆಲ್ಲ ರಚಿಸಿರುವ ವಚನಗಳು ಕನ್ನಡದ ಅತ್ಯಂತ ಪ್ರಭಾವಯುತವಾದ, ಭಾವಶುದ್ಧತೆಯಿಂದ ಕೂಡಿದ ನುಡಿಗಳು. ಅವುಗಳಲ್ಲಿ ಬಳಕೆಯಾಗಿರುವ ಕನ್ನಡದ ಸೊಗಸು ಅನನ್ಯ. ವಚನಕಾರರು ಕೇವಲ ವಿದ್ವಾಂಸರೂ ಪಂಡಿತರೂ ಮಾತ್ರವಲ್ಲ. ಸಮಾಜದ ನಿತ್ಯಜೀವನಕ್ಕೆ ಬೇಕಾದ ನಾನಾ ವೃತ್ತಿಗಳಲ್ಲಿನ ಜನರೂ ಅವನ್ನು ರಚಿಸಿದ್ದಾರೆ.

ಡಿವಿಜಿ ಒಂದು ಕಡೆ ಹೇಳುತ್ತಾರೆ: "ಸಾಹಿತ್ಯವೆಂಬುದು ಜನಜೀವನವನ್ನು ಉನ್ನತಿಗೆತ್ತುವುದಕ್ಕೆ ಅವಶ್ಯವಾಗಿರುವ ಆಯುಧ. ದೇಶದಲ್ಲಿಯ ಎಲ್ಲ ಮತಗಳ, ಎಲ್ಲ ವರ್ಗಗಳ ಮತ್ತು ಎಲ್ಲ ಕಸುಬುಗಳ ಜನರಲ್ಲಿಯೂ ಜ್ಞಾನವನ್ನೂ ವಿವೇಕವನ್ನೂ ಬೆಳಸಿ, ಅವರ ಧ್ಯೇಯಗಳನ್ನು ಉನ್ನತಗೊಳಿಸಿ, ಅವರ ಲೌಕಿಕ ಯೋಗ್ಯತೆಯನ್ನು ಅಭಿವೃದ್ಧಿಪಡಿಸುವುದು ಸಾಹಿತ್ಯದ ಕೆಲಸ." ಪ್ರಸ್ತುತ ಸಂದರ್ಭದಲ್ಲಿ ಲೌಕಿಕ ಯೋಗ್ಯತೆಯ ಜೊತೆಗೆ ಆಧ್ಯಾತ್ಮಿಕ ಯೋಗ್ಯತೆಯನ್ನೂ ಸೇರಿಸಬಹುದು. ವಚನಕಾರರು, ವಚನಗಳು ಸಾಧಿಸಿದ ಒಂದು ದೊಡ್ಡ ಕೆಲಸ ಇದು.

ಬಸವಣ್ಣನವರು ಕಾಯಕಕ್ಕೆ ಪ್ರಾಧಾನ್ಯ ಕೊಟ್ಟರು. ನಿಜಜೀವನದಿಂದ ವಿಮುಖರಾಗಿ, ವಿರಕ್ತರಾಗಿ, ಭಿಕ್ಷಾಟನೆಯಿಂದ ಬದುಕುವುದನ್ನು ವಿರೋಧಿಸಿ ಅವರು ಕಾಯಕದ ಮಹತ್ವವನ್ನು ಎತ್ತಿಹಿಡಿದರು. ಅವರ ವಚನವೊಂದರಲ್ಲಿ ಬರುವ 'ಕಾಯಕವೇ ಕೈಲಾಸ' ಎಂಬ ಮಾತು ಪ್ರಸಿದ್ಧವಾಗಿದೆ. ಹೀಗೆ ಕಾಯಕದ ಹಿರಿಮೆಯನ್ನು ಪ್ರತಿಪಾದಿಸಿದ ಬಸವಣ್ಣನವರು ಅದರ ಜೊತೆಗೆ ಎಲ್ಲ ಕಾಯಕಗಳೂ ಸಮಾನವಾದವೇ, ಒಂದು ಹೆಚ್ಚು, ಒಂದು ಕಡಿಮೆ ಅಲ್ಲ, ಒಂದು ಪ್ರತಿಷ್ಠಿತ, ಒಂದು ಕ್ಷುದ್ರ ಎಂದು ಗಣಿಸಲಿಲ್ಲ. ಅದರಿಂದಾಗಿಯೇ ಅನುಭವ ಮಂಟಪದಲ್ಲಿ ಎಲ್ಲ ವೃತ್ತಿಗಳ ಜನಕ್ಕೂ ಪ್ರವೇಶವಿತ್ತು, ಎಲ್ಲರಿಗೂ ಆದರದ ಸ್ಥಾನವಿತ್ತು.

ಬಸವಣ್ಣನವರ ತೀವ್ರಗಾಮಿ ಸಮಾಜ ಸುಧಾರಣೆಯ ಕಾರ್ಯಕ್ರಮದಲ್ಲಿ ನಡೆದ ಒಂದು ಘಟನೆ ಆ ಇಡೀ ಕ್ರಾಂತಿಗೇ ಮುಳುವಾಯಿತು, ಬ್ರಾಹ್ಮಣ-ಶೂದ್ರ, ಮಡಿ-ಮೈಲಿಗೆ, ಸ್ಪೃಶ್ಯ-ಅಸ್ಪೃಶ್ಯ - ಇವುಗಳನ್ನು ತೊಡೆದುಹಾಕುವ ಭರದಲ್ಲಿ ಅವರು ಒಂದು ಬ್ರಾಹ್ಮಣ-ಅಸ್ಪೃಶ್ಯರ ಮದುವೆಗೆ ತಮ್ಮ ಬೆಂಬಲ ಕೊಟ್ಟರು. ಬ್ರಾಹ್ಮಣ ಮಧುವಯ್ಯನ ಮಗಳಿಗೆ ಅಸ್ಪೃಶ್ಯ ಹರಳಯ್ಯನ ಮಗನೊಡನೆ ಮದುವೆಯಾಗುವ ಮಾತು ಸಾಗಿತ್ತು. ಆದರೆ ಇದು ಜನಕ್ಕೆ- ಬ್ರಾಹ್ಮಣರಿಗಷ್ಟೇ ಅಲ್ಲ, ಯಾವ ಮತದವರಿಗೂ ಸರಿದೋರಲಿಲ್ಲ. ಕಡೆಗೆ ಬಸವಣ್ಣನವರನ್ನು ಅಪಾರ ಗೌರವದಿಂದ ಕಾಣುತ್ತಿದ್ದ ಅರಸ ಬಿಜ್ಜಳನಿಗೂ ಸರಿದೋರಲಿಲ್ಲ. ವರ್ಣಸಂಕರದ ಪ್ರಮಾದವನ್ನು ಮನಸ್ಸಿನಲ್ಲಿಟ್ಟುಕೊಂಡು ಅದು ಆಗದಂತೆ ತಡೆಯಬೇಕೆಂದು ಬಿಜ್ಜಳ ಮಧುವಯ್ಯ ಹರಳಯ್ಯನವರ ಕಣ್ಣು ಕೀಳಿಸಿದನು. ರಾಜ್ಯದಲ್ಲಿ ಮಹಾ ಗೊಂದಲವಾಯಿತು, ವಿಪ್ಲವವೇ ಆಯಿತು. ರಾಜ ಬಿಜ್ಜಳನ ಕೊಲೆಯಾಯಿತು. ರಾಜ್ಯದಲ್ಲಿ ಕ್ಷೋಭೆ ತುಂಬಿತು. ಇದೆಲ್ಲವನ್ನೂ ಕಂಡು ರೋಸಿದ ಬಸವಣ್ಣನವರು ಕಲ್ಯಾಣದಿಂದ ಕೂಡಲ ಸಂಗಮಕ್ಕೆ ತೆರಳಿದರು. ಒಂದು ವರ್ಷ ಅಲ್ಲಿದ್ದು ಶಿವೈಕ್ಯರಾದರು.

ಬಸವಣ್ಣನವರ ಸುಧಾರಿತ ಸಮಾಜ ಒಂದು ಅದ್ಭುತ ಕಲ್ಪನೆ. ಅದರ ಮುಖ್ಯ ಲಕ್ಷಣಗಳನ್ನು ಈ ರೀತಿ ಗುರುತಿಸಬಹುದು:

- ಆ ಸಮಾಜದಲ್ಲಿ ಶತಮಾನಗಳಿಂದ ತಳವೂರಿರುವ ಜಾತಿಪದ್ಧತಿ ಇಲ್ಲ. ಅಲ್ಲಿರುವುದು ಎರಡೇ ಜಾತಿಗಳು: ಶಿವಶರಣರು, ಶಿವಶರಣರಲ್ಲದವರು.
- ಈ ಸಮಾಜದಲ್ಲಿ ಅಸ್ಪೃಶ್ಯತೆಗೆ ಸ್ಥಾನವಿಲ್ಲ.
- ಅದುವರೆಗಿನ ಸನಾತನ ಸಮಾಜದಲ್ಲಿ ಭೇದವೇ ಮುಖ್ಯವಾದರೆ, ಈ ಸಮಾಜದಲ್ಲಿ ಭೇದಗಳಿಲ್ಲ, ಮೇಲುಕೀಳುಗಳಿಲ್ಲ. ಒಂದು ವೃತ್ತಿ ಹೆಚ್ಚು, ಇನ್ನೊಂದು ಕೀಳು ಎಂಬುದಿಲ್ಲ.
- ಹೆಣ್ಣುಗಂಡುಗಳು ಸಮಾನರೇ. ಗಂಡಸರಿಗಿರುವ ಹಕ್ಕುಗಳು ಹೆಂಗಸರಿಗೂ ಸಲ್ಲುತ್ತವೆ.

- ಹೆಂಗಸರು ತಮಗೆ ಇಷ್ಟವಾದ ವೃತ್ತಿಗಳಲ್ಲಿ ತೊಡಗಬಹುದು.
- ಪ್ರತಿಯೊಬ್ಬರೂ ಏನಾದರೊಂದು ಕಾಯಕ ಮಾಡಬೇಕು. ಎಲ್ಲ ಕಾಯಕಕ್ಕೂ ಒಂದೇ ಮಟ್ಟದ ಗೌರವ ಸಲ್ಲುತ್ತದೆ. ಕೆಲಸ ಮಾಡದವನಿಗೆ ಊಟದ ಹಕ್ಕಿಲ್ಲ.
- ಪ್ರತಿಯೊಬ್ಬರಿಗೂ ಸಮಾಜದ ಬಗ್ಗೆ, ಆಧ್ಯಾತ್ಮಿಕ ವಿಚಾರಗಳ ಬಗ್ಗೆ ಸ್ವತಂತ್ರವಾಗಿ ಯೋಚಿಸುವ ಹಕ್ಕಿದೆ. ಜನರ ಆಧ್ಯಾತ್ಮಿಕ ಉನ್ನತಿಗೆ ವಿವೇಕ ಮತ್ತು ಅನುಭವಗಳೇ ದಾರಿದೀಪ.
- ಆಧ್ಯಾತ್ಮಿಕ ಚಿಂತನೆಯಲ್ಲಿ ಪಾಲುಗೊಳ್ಳುವ ಹಕ್ಕು ಪ್ರತಿಯೊಬ್ಬರಿಗೂ ಇದೆ.
- ಎಲ್ಲರೂ ತಮ್ಮತಮ್ಮ ಆಧ್ಯಾತ್ಮಿಕ ಅನುಭವಗಳನ್ನು ದಾಖಲಿಸಲು, ಅವನ್ನು ಕುರಿತು ಮಂಡಿಸಲು, ಚರ್ಚಿಸಲು ಯೋಗ್ಯರೇ.
- ಜನರ ಆಧ್ಯಾತ್ಮಿಕ ಹಾಗೂ ವ್ಯಾವಹಾರಿಕ ವಿದ್ಯಾಭ್ಯಾಸಕ್ಕೆ ಜನರ ಆಡುಭಾಷೆಯನ್ನೇ ಶಿಕ್ಷಣ ಮಾಧ್ಯಮವಾಗಿ ಬಳಸಬೇಕು.

ಇದು ಎಂಥ ಉಜ್ವಲದ ಕಲ್ಪನೆಯಲ್ಲವೆ? ಬಹುಶಃ ಯಾವ ಸಮಾಜವೂ ಯಾವ ಕಾಲದಲ್ಲೂ ಈ ಮಟ್ಟಕ್ಕೆ ಏರಲಾರದೇನೋ, ಆದರೂ ಅಂಥ ಒಂದು ಸಮಾಜದ ಕಲ್ಪನೆ ಅವರಿಗೆ ಅಷ್ಟು ಹಿಂದೆಯೇ ಹೊಳೆದದ್ದು ಒಂದು ವಿಶೇಷ. ಕಾಯಕವನ್ನು ಎತ್ತಿಹಿಡಿಯುವುದು, ಎಲ್ಲ ವೃತ್ತಿಗಳಲ್ಲೂ ಕೆಲಸಗಳಲ್ಲೂ ಸಮಾನತೆ ಕಾಣುವುದು ಮುಂತಾದ ಕೆಲವು ಲಕ್ಷಣಗಳಲ್ಲಿ ಬಸವಣ್ಣನವರ ಸಮಾಜ ಅವರ ಕಾಲಕ್ಕಿಂತ ಸುಮಾರು ಏಳು ಶತಮಾನಗಳ ನಂತರ ಬಂದ ಕಮ್ಯೂನಿಸಂ ಅನ್ನು ಹೋಲುವುದಾದರೂ, ಬಸವಣ್ಣನವರ ಸಮಾಜ ಶಿವಭಕ್ತಿಯ ಪಾರಮ್ಯವನ್ನು, ಆಧ್ಯಾತ್ಮಿಕತೆಯನ್ನು ಎತ್ತಿಹಿಡಿಯುವಂಥದ್ದು. ಬಸವಣ್ಣನವರ ಕಲ್ಪನೆ ಎಷ್ಟುಮಟ್ಟಿಗೆ ಕೈಗೂಡಿತು? ಆದರ್ಶದ ಉನ್ನತಿ ಹೆಚ್ಚಿದಷ್ಟೂ ಅದರ ಸಾಧನೆ ಅಷ್ಟೂ ಕಷ್ಟ. ಅವರ ಸಮಾಜ ಕಲ್ಪನೆಗೂ ಈ ಗತಿ ತಪ್ಪಲಿಲ್ಲ.

ಇಂಥ ಒಬ್ಬ ಬಂಡಾಯಗಾರ, ಮಹಾಸಾಹಸಿ ಸಮಾಜ–ದೇಶವನ್ನೆಲ್ಲ ತಲೆಕೆಳಗು ಮಾಡುತ್ತಿದ್ದರೆ, ಅದು ಎಲ್ಲರಿಗೂ ಒಪ್ಪಿಗೆಯಾದೀತೆಂಬ ಭರವಸೆ ಇಲ್ಲ. ಕೆಲಮಂದಿಗೆ ಅದು ಒಪ್ಪಿಗೆಯಾಗಬಹುದು, ಕೆಲವರಿಗೆ ಆಗದಿರಬಹುದು. ದಯಾಮಯ ಯೇಸುವಿನ ಪಾಡು ನೆನಸಿಕೊಳ್ಳಿ. ಅದಕ್ಕಿಂತ ಬೇರೆ ನಿದರ್ಶನ ಬೇಕೆ? ಅಂಥ ಮಹಾನುಭಾವನ ಬಗ್ಗೆ ಆಗಿನ ಜನಕ್ಕೆ, ಅವನ ಸುತ್ತಮುತ್ತ ಇದ್ದವರಿಗೆ, ಶಿಷ್ಯರಿಗೆ, ಅಧಿಕಾರಿಗಳಿಗೆ ಏನು ಅನ್ನಿಸಿರಬಹುದು? ಇದೊಂದು ಅತ್ಯಂತ ಕುತೂಹಲಕಾರಕ ವಿಷಯ. ಇಂಥ ಒಂದು ಕಲ್ಪನೆಯನ್ನು ಖ್ಯಾತ ಲೆಬನಾನ್–ಅಮೇರಿಕನ್ ಕವಿ ಖಲಿಲ್ ಜಿಬ್ರಾನ್ ಹೃದಯ–

ಸ್ಪರ್ಶಿಯಾಗಿ ತಮ್ಮ Jesus, the Son of Man ಕೃತಿಯಲ್ಲಿ ಹೆಣೆದಿದ್ದಾರೆ. ಯೇಸು son of God, ದೇವಪುತ್ರ, ಅವನು ಲೋಕಾತೀತ, ದೇವರೇ ತನ್ನ ಪ್ರೀತಿಪಾತ್ರನಾದ ಆ ಮಗನನ್ನು ಇಳೆಗೆ ಕಳಿಸಿದ ಎಂಬುದು ಕ್ರಿಶ್ಚಿಯನ್ನರ ನಂಬಿಕೆ. ಆದರೆ ಅವನ ಕಾಲದಲ್ಲಿ ರೋಮನ್ ಅಧಿಕಾರಿಗಳ ಕಣ್ಣಲ್ಲಿ ಅವನೊಬ್ಬ ರಾಜದ್ರೋಹಿ. ಯೆಹೂದೀ ಮತದವನಾಗಿ ಅಲ್ಲಿನ ದೇವಾಲಯಗಳಲ್ಲಿ ನಡೆಯುತ್ತಿದ್ದ ವ್ಯಾಪಾರ, ವ್ಯವಹಾರ, ಆ ಮೂಲಕ ರೋಮನ್ನರಿಗೆ ಸಂದಾಯವಾಗುತ್ತಿದ್ದ ತೆರಿಗೆಯ ಆದಾಯ, ಅಲ್ಲಿ ನಡೆಯುತ್ತಿದ್ದ ಅನಾಚಾರ ಇವನ್ನೆಲ್ಲ ಯೇಸು ತೀವ್ರವಾಗಿ ಖಂಡಿಸಿದ. ಇದು ದೇವಾಲಯ, ಮಾರುಕಟ್ಟೆಯಲ್ಲ; ಇದು ಪರಮ ಪವಿತ್ರನಾದ ದೇವರ ಸ್ಥಾನ, ಅವನಿಗೆ ಅಪಚಾರವಾಗುವಂಥ ಕಾರ್ಯಗಳನ್ನು ಇಲ್ಲಿ ಎಸಗಬಾರದು ಎಂದು ಜನರನ್ನು ಎಚ್ಚರಗೊಳಿಸಿದ. ಇದರಿಂದ ರೋಮನ್ನರಿಗಷ್ಟೇ ಅಲ್ಲದೆ ಯೆಹೂದ್ಯರಿಗೂ ಅವನ ಬಗ್ಗೆ ಸೈರಣೆ ತಪ್ಪಿತು. ಯೇಸುವಿನ ಶಿಷ್ಯನೇ ಒಬ್ಬ ಅವನನ್ನು ರೋಮನ್ ಅಧಿಕಾರಿಗಳ ಕೈಗಿತ್ತ. ಮೂವತ್ತು-ಮೂರು ವಯಸ್ಸಿನ ಯೇಸುವನ್ನು ವಿಚಾರಣೆಗೆ ಗುರಿಮಾಡಿ ಶಿಲುಬೆಗೇರಿಸಿದರು. ಅವನ ಅಕ್ಕಪಕ್ಕದಲ್ಲಿ ಇನ್ನಿಬ್ಬರು – ಕಳ್ಳತನ, ದರೋಡೆ ಮಾಡಿದವರು – ಶಿಲುಬೆಗೇರಿದ್ದರು. ತನಗೆ ಒದಗಿದ ಅಂಥ ದಾರುಣ ಪರಿಸ್ಥಿತಿಯಲ್ಲೂ, ಅವನ ಕರುಣೆ ಜನರ ಕಡೆಗೆ ಹರಿಯಿತೇ ವಿನಃ ತನ್ನ ಕಡೆಗಲ್ಲ. ಓ ತಂದೆ, ನನ್ನನ್ನೇಕೆ ಕೈಬಿಟ್ಟೆ ಎಂದು ಒಂದು ಸಲ ಅಂದರೂ, ಒಟ್ಟಿನಲ್ಲಿ ಅವನ ಪ್ರಾರ್ಥನೆ ತಂದೆ, ಇವರನ್ನು ಕ್ಷಮಿಸು, ತಾವೇನು ಮಾಡುತ್ತಿರುವೆವೆಂದು ಅವರು ಅರಿಯರು ಎಂದು. ಈ ಮಹಾತ್ಮನ ಬಗ್ಗೆ ಜಿಬ್ರಾನ್ ಬರೆದ ಕಥಾನಕ ೧೯೨೮ರಲ್ಲಿ ಪ್ರಕಟವಾಯಿತು, ಈಗಲೂ ಜನಪ್ರಿಯವಾಗಿದೆ. ಇದರಲ್ಲಿ ಯೇಸುವಿನ ಸಮಕಾಲೀನ ವ್ಯಕ್ತಿಗಳಲ್ಲಿ ಒಟ್ಟು ೭೭ ಜನರ ಕಥಾನಕಗಳಿವೆ. ಅವನ ತಾಯಿ ಮೇರಿ, ಅವಳ ಅಕ್ಕ, ಅವನನ್ನು ರೋಮನ್ ಅಧಿಕಾರಿಗಳಿಗೆ ಒಪ್ಪಿಸಿ ಆಮೇಲೆ ಆತ್ಮಹತ್ಯೆಮಾಡಿಕೊಂಡ ಜೂಡಸ್ ಇಸ್ಕಾರಿಯೆಟ್, ಯೇಸುವನ್ನು ವಿಚಾರಣೆ ಮಾಡಿದ ರೋಮನ್ ಅಧಿಕಾರಿ ಪೈಲೇಟ್ ಮುಂತಾದವವರೆಲ್ಲರ ಮಾತುಗಳಿವೆ.

ಈ ಕಥಾನಕವನ್ನು ಓದಿದಾಗ ವಚನ ಸಾಹಿತ್ಯದಲ್ಲಿ ವಿಶೇಷವಾದ ಕೆಲಸ ಮಾಡಿರುವ ಕನ್ನಡ ಕವಿ, ವಿದ್ವಾಂಸರಾದ ಪ್ರಭುಶಂಕರರಿಗೆ ಬಸವಣ್ಣನವರನ್ನು ಕುರಿತೂ ಇದೇ ರೀತಿ ಒಂದು ಕಥಾನಕವನ್ನು ರಚಿಸಬಹುದಲ್ಲವೆ ಎಂದು ಎನ್ನಿಸಿತಂತೆ. ಅದರ ಫಲವೇ ಈಗ ನಾನು ಇಲ್ಲಿ ನಿಮ್ಮೊಂದಿಗೆ ಆಸ್ವಾದಿಸುತ್ತಿರುವ ಪುಸ್ತಕ – 'ಬೆರಗು'. ಇದೊಂದು ಚಿಕ್ಕ ಪುಸ್ತಕ, ಕೇವಲ ನೂರು ಪುಟಗಳದ್ದು, ಆದರೆ ಅದೊಂದು ಅತ್ಯಂತ ಮನೋಜ್ಞವಾದ, ಪ್ರಭಾವಶಾಲಿಯಾದ ಕಲಾಕೃತಿ, ಇಪ್ಪತ್ತೈದು ಜನರ ಮಾತುಗಳಲ್ಲಿ ಬಸವಣ್ಣನವರ ಉಜ್ವಲವಾದ ಬಾಳಿನ ವಿವಿಧ ನೋಟಗಳನ್ನು ಚಿತ್ರಿಸಿದ್ದಾರೆ. ಕನ್ನಡದಲ್ಲಿ ಬಹುಶಃ

ಇಂಥ ಕೃತಿ ಇದೊಂದೇ ಎನ್ನಿಸುತ್ತದೆ. ಇದು ಇನ್ನೊಂದು ಭಾಷೆಯಲ್ಲಿರುವ ಸಾಹಿತ್ಯ ಕೃತಿಯಿಂದ ಸ್ಫೂರ್ತಿಗೊಂಡು ರಚಿತವಾದದ್ದಾದರೂ, ಅದರ ಸ್ವಂತ ಪ್ರತಿಭೆಯಿಂದಲೇ ಮಾನ್ಯವಾಗುತ್ತದೆ.

ಇಲ್ಲಿನ ಕಥಾನಕಗಳು ಏಕೋಕ್ತಿಗಳ, ಅಂದರೆ monologue ರೂಪದಲ್ಲಿವೆ. ಪ್ರತಿ ಪಾತ್ರದವರೂ ತಮ್ಮ ಅನಿಸಿಕೆಗಳನ್ನು ಒಬ್ಬ ಅವ್ಯಕ್ತ ಕೇಳುಗನಿಗೆ ಹೇಳಿಕೊಳ್ಳುತ್ತಾರೆ. ಕೇಳುಗನೊಡನೆ ಸಂಭಾಷಣೆಯಲ್ಲಿ ತೊಡಗುವುದಿಲ್ಲ. ಅವರ ಮಾತುಗಳ ಚಾರಿತ್ರಿಕ ಸತ್ಯತೆಯನ್ನು ಕುರಿತು ಪ್ರಭುಶಂಕರರು ಹೀಗೆ ಹೇಳುತ್ತಾರೆ: "ಇತಿಹಾಸ ಒದಗಿಸುವ ಎಳೆಗಳು ತುಂಬ ಕಡಿಮೆ. ಆದ್ದರಿಂದ ಕಲ್ಪನೆಯ ಹಾಸುಹೊಕ್ಕುಗಳೇ ಹೆಚ್ಚಾಗಿವೆ. ವಚನಗಳ ಆಧಾರದಿಂದ ಕೆಲವು ಘಟನೆಗಳನ್ನು ರಚಿಸುವ ಕೆಲಸವೂ ನಡೆದಿದೆ. ಆದುದರಿಂದ ಇದನ್ನು ಒಂದು ಸೃಜನಶೀಲ ಕೃತಿ ಎಂದು ನೋಡುವುದು ಅನಿವಾರ್ಯವಾಗುತ್ತದೆ." ಖಲಿಲ್ ಜಿಬ್ರಾನರೂ ಈ ಸಮಸ್ಯೆಯನ್ನು ಎದುರಿಸಿರಬೇಕು. ಆದರೆ, ಯೇಸು ಬಸವಣ್ಣನವರಿಗಿಂತ ಹನ್ನೆರಡು ಶತಮಾನಗಳು ಹಿಂದಿನವನಾದರೂ ಅವನ ಬಗ್ಗೆ ಬಹುಶಃ ಹೆಚ್ಚಿನ ಪುರಾವೆಗಳು ಲಭ್ಯವಿರಬೇಕು ಎಂದು ನನ್ನ ಅನಿಸಿಕೆ, ಪ್ರಪಂಚಾದ್ಯಂತ ಸಾವಿರಾರು ಮಂದಿ ವಿದ್ವಾಂಸರು, ಸಂಶೋಧಕರು ಅವನ ಬಗ್ಗೆ, ಅವನ ಕಾಲದ ಇತಿಹಾಸದ ಬಗ್ಗೆ ಅನ್ವೇಷಣೆ ನಡೆಸಿರುವುದರಿಂದ.

ಈ ಮನತುಂಬುವ ಕಥಾನಕವನ್ನು ಓದಿದಾಗ ಮತ್ತೆ ಮತ್ತೆ ಮನಸ್ಸಿನಲ್ಲಿ ಎದ್ದ ಒಂದು ಭಾವನೆ ಇದನ್ನೇಕೆ ರಂಗದ ಮೇಲೆ ತರಬಾರದು ಎಂಬುದು. ಅದು ಇರುವಂತೆಯೇ ರೇಡಿಯೋ ನಾಟಕ ತಂತ್ರಕ್ಕೆ ಬಹಳ ಚೆನ್ನಾಗಿ ಅಳವಡುತ್ತದೆ. ಅದನ್ನು ರಂಗಕ್ಕೂ ಚೆನ್ನಾಗಿ ಅಳವಡಿಸಬಹುದು ಎನ್ನಿಸುತ್ತದೆ. ವಸ್ತು ಅಷ್ಟು ಪ್ರಭಾವಯುತವಾಗಿದೆ. ಏಕೋಕ್ತಿಗಳನ್ನು ಸೂಕ್ತವಾಗಿ ಹ್ರಸ್ವಗೊಳಿಸಿ, ಪಾತ್ರಗಳು ರಂಗದ ಮೇಲೆ ಬರುವ ಕ್ರಮವನ್ನು ಸ್ವಲ್ಪ ನಿಯಂತ್ರಿಸಿ, ಒಂದು ಅದ್ಭುತವಾದ ನಾಟಕವನ್ನು ನಿರ್ಮಿಸಬಹುದು ಎನ್ನಿಸುತ್ತದೆ. ಆದರೆ ಅದಕ್ಕೆ ಕಲಾಕೌಶಲ್ಯ ಮಾತ್ರವಲ್ಲ, ಎದೆಗಾರಿಕೆಯೂ ಬೇಕು. ಈಗಲೀಗ ಮತದ ವಿಚಾರ ಎತ್ತಿದೊಡನೆ ಮನೆಗೆ ಬೆಂಕಿಯನ್ನೇ ಇಡುವ ಪರಿಸ್ಥಿತಿ ಬಂದಿದೆ. ಬಸವಣ್ಣನವರಂಥ ಪರಿಶುದ್ಧ ಚೇತನರ ದಿವ್ಯ ಜೀವನವನ್ನು ಕುರಿತು ನೆಮ್ಮದಿಯಿಂದ ವೀಕ್ಷಿಸುವ, ಮನನ ಮಾಡುವ ಕಾಲ ಬರಬೇಕು.

*

"ಓ, ಅವನ ವಿಷಯವೇ? ಅದನ್ನೇನು ಕೇಳುತ್ತೀರಿ, ಬಿಡಿ" ಎಂದು ಮೊದಲಾಗುತ್ತದೆ ಬಸವಣ್ಣನವರ ತಂದೆ ಮಂಡಗೆಯ ಮಾದಿರಾಜನ ಮಾತು. ಆ ಉದ್ಗಾರದ ದನಿಯಲ್ಲೇ ಆ ತಂದೆಯ ವರ್ಷಗಳಾದರೂ ಹೋಗದ ಆಕ್ರೋಶ, ಆಶಾಭಂಗ, ಸಮಾಜದಲ್ಲಿ

ತನಗಾದ ಅವಮಾನದ ನೋವು ಎಲ್ಲವೂ ಅಡಗಿವೆ. ಮಾದಿರಾಜ ಮತ್ತು ಅವನ ಪತ್ನಿ ಮಾದಾಂಬೆಗೆ ಮದುವೆಯಾಗಿ ಎಷ್ಟೋ ವರ್ಷಗಳಾದರೂ ಮಕ್ಕಳಾಗಿಲ್ಲ. ಅವರಿಗೆ ಅದೊಂದು ದೊಡ್ಡ ಕೊರಗು. ಒಂದು ದಿನ ಎಲ್ಲಿಂದಲೋ ಅವರನ್ನು ಹುಡುಕಿಕೊಂಡು ಬಂದ ವೃದ್ಧರೊಬ್ಬರು ತಾವು ಸ್ವಲ್ಪ ಕಾಲ ಅಲ್ಲಿ ಉಳಿಯಬಹುದೇ ಎಂದು ಕೇಳುತ್ತಾರೆ. ಕೂಡಲೆ ದಂಪತಿಗಳು ಒಪ್ಪಿಕೊಳ್ಳುತ್ತಾರೆ. ಆ ವೃದ್ಧರು ಮಹಾಜ್ಞಾನಿಗಳು. ತಾವು ಓದುತ್ತಿದ್ದ ಗ್ರಂಥದಲ್ಲಿರುವ ಒಂದು ವ್ರತವನ್ನು ಪಾಲಿಸಿದರೆ ತಪ್ಪದೆ ಈ ದಂಪತಿಗಳಿಗೆ ಮಕ್ಕಳಾಗುವುದೆಂದು ಹೇಳುತ್ತಾರೆ, ದಂಪತಿಗಳು ಸಂಪೂರ್ಣ ಶ್ರದ್ಧೆಯಿಂದ ಅದನ್ನು ಆಚರಿಸುತ್ತಾರೆ. ವೃದ್ಧರು ಅಲ್ಲಿಂದ ಮುಂದಕ್ಕೆ ತೆರಳುತ್ತಾರೆ. ಆದರೆ ಮಾದಾಂಬೆಗೆ ಇನ್ನೂ ಗರ್ಭಕಟ್ಟಿದ ಸೂಚನೆಯೇ ಇಲ್ಲ. ನಿರಾಸೆಯ ಕಣ್ಣೀರಿನಿಂದ ತುಂಬಿದ್ದ ಆಕೆಯ ಮುಖ ಕಡೆಗೂ ಒಂದು ದಿನ ನಲಿವಿನಿಂದ ಹೊಳೆಯುತ್ತದೆ. ಬಸವಣ್ಣ ಹುಟ್ಟುತ್ತಾನೆ. "ಅದು ಮಗುವೇ? ಮಾಣಿಕ್ಯ. ನಮ್ಮ ಮನೆಯಲ್ಲಿ ಎಂಟು ವರ್ಷ ಬೆಳಕಿನ ಹೊಳೆ ಹರಿಯಿತು. ನಿತ್ಯೋತ್ಸವ." ಆದರೆ ಈ ಹಿಗ್ಗು ಮಗನಿಗೆ ಉಪನಯನ ಮಾಡುವ ಸಂದರ್ಭದಲ್ಲಿ ಸಂಪೂರ್ಣವಾಗಿ ನಾಶವಾಗುತ್ತದೆ – ವೇದಾಧ್ಯಯನ ಸಂಪನ್ನ ಕುಲದಲ್ಲಿ ಹುಟ್ಟಿದ ಬ್ರಾಹ್ಮಣ ಬಾಲಕ ತನ್ನ ಜನಿವಾರ ಕಿತ್ತೆಸೆದು ಮನೆ ಬಿಟ್ಟು ಓಡಿಹೋದಾಗ.

ಈ ಘಟನೆಯಿಂದ ಆ ಗಂಡಹೆಂಡಿರ ಜೀವನಕ್ಕೆ ಸಿಡಿಲು ಬಡಿದಂತಾಗಿದೆ. ಏನೋ, ಎಂಟು ವರ್ಷದ ಮಗು ತಪ್ಪು ಮಾಡಿತು, ಅದನ್ನು ಕ್ಷಮಿಸಿ ಅವನನ್ನು ಮತ್ತೆ ಮನೆಗೆ ತರಬೇಡವೇ ಎಂದು ಆ ತಾಯಿ ಮಾದಾಂಬೆ ಎಷ್ಟು ಗೋಗರೆದರೂ ತಂದೆ ತನ್ನ ನಿಷ್ಠುರ ನಿಲುವನ್ನು ಬದಲಾಯಿಸಲಾರ. "ನಮ್ಮ ವಂಶಕ್ಕೇ ಕೆಟ್ಟ ಹೆಸರು ತಂದ ಆ ಅಯೋಗ್ಯ. ಅವನ್ನ ನಾನು ಹುಡುಕಿಕೊಂಡು ಹೋಗೋದೇ? ಅವನಾಗೇ ಬರಲಿ – ಬಂದರೂ ಮನೆ ಹೊಸಿಲು ಹತ್ತೋಕೂ ಬಿಡೋಲ್ಲ..." ಇದನ್ನು ಕಂಡ ತಾಯಿ "ಇದು ಇವರ ಬ್ರಾಹ್ಮಣ್ಯ ಕಲಿಸಿದ ಅಂತಃಕರಣ" ಎಂದು ನೋವಿನಿಂದ ಬಿಸುಸುಯ್ಯುತ್ತಾಳೆ. ಅವಳನ್ನುತ್ತಾಳೆ: "ಅವನದ್ದು ಒಂದೇ ತಪ್ಪು. ಮಾತೆತ್ತಿದರೆ ಇದು ಏಕೆ? ಅದು ಏಕೆ? ಅಂತ ಕೇಳೋದು. ವೇದ ಓದು, ಏಕೆ? ವ್ಯಾಕರಣ ಕಲಿ, ಏಕೆ? ಹೋಮ ಹವನ ಮಾಡೋದು ಏಕೆ? ಇಲ್ಲಿ ಹವಿಸ್ಸು ಕೊಟ್ಟರೆ ಮೇಲಿರೋ ದೇವರಿಗೆ ಸೇರುತ್ತದೋ? ನಾವು ಮೇಲು, ಹೊಲಗೇರಿಯವರು ಕೀಳು, ಏಕೆ? ಶೂದ್ರರ ಮನೆಯಲ್ಲಿ ಊಟಮಾಡಬಾರದು, ಏಕೆ? ಹೊಲಗೇರಿಯವರು ಮನೆಗೆ ಬರಬಾರದು, ಏಕೆ?" ಇಂಥ ಅಸಾಧಾರಣ ಪ್ರೌಢಿಮೆಯಿದ್ದ ಮಗುವಿನ ಬಾಳು ಮುಂದೆ ಪಡೆದ ತಿರುವುಗಳು ಅನಿವಾರ್ಯವೆ ಆಗಿತ್ತೇನೋ! ಗಂಡಹೆಂಡಿರ ಮಧ್ಯೆ ಈಗೊಂದು ಕರಾಳ ಮೌನ ಆವರಿಸಿದೆ. ಗಂಡ ಹುಡುಕದೆ ಹೋದರೂ ಚಿಂತೆಯಿಲ್ಲ, ನಾನೇ ಒಂದು ದಿನ ಹೋಗಿ ಮಗನನ್ನು ಹುಡುಕಿ ತರುತ್ತೇನೆ ಎನ್ನುತಾಳೆ ಆಕೆ.

ಮನೆ ತೊರೆದು ಹೋದ ಬಾಲಕ ಬಸವಣ್ಣ ಹೋದದ್ದು ಒಂದು ಶಿವ ದೇವಾಲಯಕ್ಕೆ. ಅದೇನು ಅದನ್ನೇ ಅರಸಿ ಹೋದನೋ, ಅರಿವಿಲ್ಲದೆಯೇ ಹೋದನೋ ಗೊತ್ತಿಲ್ಲ. ಅಲ್ಲಿ ವಾಸವಾಗಿದ್ದುದು – ಈಶಾನ್ಯ ಮೂರ್ತಿ ಎಂಬ ಒಬ್ಬ ಅವಧೂತರು. ಕಂಬದ ಮರೆಯಲ್ಲಿ ಹುದುಗಿದ್ದ ಆ ಬಾಲಕನ ಮುಖದಲ್ಲಿ ಕಳವಳ, ಕಣ್ಣೀರು ಕಂಡು ಅವನನ್ನು ಯಾರೆಂದು ವಿಚಾರಿಸಿ ಮೈದಡವಿದರೆ ಜ್ವರ ಕುದಿಯುತ್ತಿದೆ. ಅವಧೂತರು ಅವನ ಶುಶ್ರೂಷೆ ಮಾಡಿ ಅವನು ಗುಣವಾದ ಮೇಲೆ ಏನೂ ಕೇಳಿದರೂ ಮಾತಿಲ್ಲ. ಅವನನ್ನು ವ್ಯಾಸಂಗದಲ್ಲಿ ತೊಡಗಿಸೋಣವೆಂದು ನೋಡಿದರೆ, ಏನು ಹೇಳಿದರೂ ಬೇಡವೆನ್ನುತ್ತಾನೆ. ಕಡೆಯಲ್ಲಿ ಏನು ಬೇಕು ಅಂದರೆ, ಶಿವಲಿಂಗದ ಕಡೆ ಕೈತೋರಿಸಿ ಅದು ಬೇಕು ಎನ್ನುತ್ತಾನೆ. ಹೋಗಿ ತೆಗೆದುಕೋ ಅಂದಾಗ ಪ್ರೀತಿಯಿಂದ ಅದನ್ನು ಕೈಗೆತ್ತಿಕೊಂಡು ಅದಕ್ಕೆ ಅಭಿಷೇಕ ಮಾಡಿ ಭಕ್ತಿಯಿಂದ ಪೂಜಿಸುತ್ತಾನೆ, ಯಾವಾಗ ನೋಡಿದರೂ ಅವನಿಗೆ ಶಿವ ಧ್ಯಾನವೇ, ರಾತ್ರಿ ಅವಧೂತರು ಒಮ್ಮೊಮ್ಮೆ ಎಚ್ಚರಗೊಂಡು ನೋಡಿದರೆ ಈ ಯುವಕ ಶಿವಧ್ಯಾನದಲ್ಲಿ ಕುಳಿತಿರುತ್ತಾನೆ. ಹೀಗೆ ಹತ್ತಾರು ವರ್ಷ ಕಳೆಯುತ್ತವೆ. ಒಂದು ದಿನ ಆವನು ಬಂದು ಅವಧೂತರ ಎದುರು ತಲೆತಗ್ಗಿಸಿ ನಿಲ್ಲುತ್ತಾನೆ. ಏನು ಎಂದು ಕೇಳಿದಾಗ "ನಾನು ಇಲ್ಲಿಂದ ಹೋಗುತ್ತೇನೆ" ಎನ್ನುತ್ತಾನೆ. "ಅವನ ಉತ್ತರದಿಂದ ನನಗೆ ದಿಗ್ಭ್ರಮೆಯಾಯಿತು. ಅವಧೂತನಾದ ನನಗೂ ಮೋಹ ಹುಟ್ಟುವ ಮಟ್ಟಿಗೆ ಅವನು ನನ್ನ ಹೃದಯಕ್ಕೆ ಹತ್ತಿರವಾಗಿದ್ದ, ಮುದ್ದಿನ ಮಗನಾಗಿದ್ದ. ಯಾಕೆ ಮಗೂ, ನನ್ನಿಂದ ಏನಾದರೂ ಅಪಚಾರವಾಯಿತೆ?" "ನೀವು ನನ್ನ ತಂದೆ ತಾಯಿ ಎಲ್ಲಾ ಆಗಿ ನೋಡಿಕೊಂಡಿರಿ. ನಿಮ್ಮಿಂದ ಅಪಚಾರವೆ?... ನನಗೆ ಅನ್ನಿಸುತ್ತಿದೆ. ಯಾರೂ ಸುಮ್ಮನೆ ಕೂತು ಊಟ ಮಾಡಬಾರದು. ನಾನೋ ಇಲ್ಲಿ ಬಿಟ್ಟಿ ಕೂಳು ತಿನ್ನುತ್ತಿದ್ದೇನೆ... ಎಲ್ಲಿಗಾದರೂ ಹೋಗುತ್ತೀನಿ. ..ಮೈ ಬಗ್ಗಿಸಿ ದುಡಿದು ಅನ್ನ ಬಟ್ಟೆ ಸಂಪಾದಿಸಿಕೋತೀನಿ..." ಎಂದು ಹೇಳಿ ಯುವಕ ತಾನಿದ್ದ ಮಲಪ್ರಭ ನದಿಯ ದಂಡೆಯಿಂದ ಬಿಜ್ಜಳನ ಮಂಗಳವೇಡೆಯ ಕಡೆಗೆ ಹೊರಟುಬಿಡುತ್ತಾನೆ. ಕಾಯಕದ ಮಹತ್ವ ಅರಿವಾಗಿತ್ತು ಬಸವಣ್ಣನವರಿಗೆ. ಅದನ್ನು ಅವರು ಮುಂದೆ ಎಂದೂ ಕೈಬಿಡಲಿಲ್ಲ.

ಇತ್ತ ಮಂಗಳವೇಡೆಯಲ್ಲಿ ಬಿಜ್ಜಳನ ಬೊಕ್ಕಸದ ಅಧಿಕಾರಿ ಸಿದ್ಧ ದಂಡನಾಥ ಬೊಕ್ಕಸಕ್ಕೆ ಹೋದಾಗ ಅಲ್ಲಿ ಅವನ ಕೆಳಗಿನ ಗಣಕರೆಲ್ಲ ಒಂದು ದೊಡ್ಡ ಪೇಚಿನಲ್ಲಿ ಸಿಕ್ಕಿಬಿದ್ದಿದ್ದಾರೆ. ಲೆಕ್ಕಪತ್ರಗಳ ದಾಖಲೆಗಳನ್ನು ಎಷ್ಟು ಪರೀಕ್ಷಿಸಿ ನೋಡಿದರೂ ಅವರಿಗೆ ಐದು ಲಕ್ಷ ವರಹಗಳ ಲೆಕ್ಕ ಸಿಕ್ಕುತ್ತಿಲ್ಲ. ಆಗ ಇದ್ದಕ್ಕಿದ್ದಂತೆ ಅವರು ಕುಳಿತಿದ್ದ ಖಜಾನೆಯ ಬಾಗಿಲ ಬಳಿ ಒಬ್ಬ ಯುವಕ ಬಂದು ನಿಲ್ಲುತ್ತಾನೆ. "ಬಂದು ಬಾಗಿಲಲ್ಲಿ ನಿಂತವನು ನನ್ನ ಕಣ್ಣುಗಳನ್ನು ತುಂಬಿಬಿಟ್ಟಿದ್ದ. ಬಟ್ಟೆ, ಮುಖ, ತಲೆಯ ಕೂದಲು ಎಲ್ಲವನ್ನೂ ಧೂಳು ಮುಚ್ಚಿತ್ತು. ಉಟ್ಟಿದ್ದ ಬಟ್ಟೆಯಾದರೂ ಎಷ್ಟು? – ಒಂದು ಧೋತ್ರ, ಒಂದು

ಉತ್ತರೀಯ. ಮುಚ್ಚಿದ್ದ ಧೂಳನ್ನೂ ತೊಟ್ಟಿದ್ದ ಬಟ್ಟೆಯನ್ನೂ ಭೇದಿಸಿಕೊಂಡು ಯೌವ್ವನದ ಕಾಂತಿ ಹೊರಚಿಮ್ಮುತ್ತಿತ್ತು. ಮುಖದಲ್ಲಿ ಅಪಾರ ಶಾಂತಿ. ಅಂಥ ತಾರುಣ್ಯ ಅಷ್ಟು ಶಾಂತಿಯನ್ನು ಮುಡಿದಿದ್ದುದನ್ನು ನಾನು ಹಿಂದೆಂದೂ ಕಂಡಿರಲಿಲ್ಲ." ಆಗಂತುಕ ಗಣಕರ ಬಳಿಗೆ ಹೋಗಿ ಅವರ ದಾಖಲೆಗಳನ್ನು ತೆಗೆದುಕೊಂಡು ಅವನ್ನು ಪರೀಕ್ಷಿಸಿ ಕೆಲ ಹೊತ್ತಿನಲ್ಲೇ ಅವರ ಸಮಸ್ಯೆ ಬಗೆಹರಿಸಿದ. ಎಲರಿಗೂ ಅಪಾರವಾದ ನೆಮ್ಮದಿಯಾಯಿತು. ದಂಡನಾಥ ಆ ಯುವಕನನ್ನು ಕರೆದು ಅವನನ್ನು ವಿಚಾರಿಸಲಾಗಿ ಅವನು ತನ್ನ ಹೆಸರು ಬಸವ ಎಂದ. "ಅದೇ ಅವನಾಡಿದ ಮೊದಲ ಮಾತು. ಮಾತು ಎಂದೆನೇ? ಗೀತ. ಅಷ್ಟು ಮಧುರ." ಈ ಪ್ರಚಂಡ ಬುದ್ಧಿಶಾಲಿಯನ್ನು ದಂಡನಾಥ ಅಲ್ಲಿಯೇ ಕೆಲಸಕ್ಕೆ ಇರಲು ಕೇಳಿದರೆ, ಕೈತುಂಬ ಕೆಲಸ ಕೊಟ್ಟರೆ ಇರುತ್ತೇನೆಂದ. "ಸಂಬಳ?" "ಎರಡು ಹೊತ್ತು ಊಟಕ್ಕಾಗುವಷ್ಟು." ಆಶ್ಚರ್ಯಗೊಂಡ ದಂಡನಾಥ ಅವನನ್ನು ಕೆಲಸಕ್ಕೆ ನೇಮಿಸಿ ತನ್ನ ಮನೆಯಲ್ಲೇ ಇರಿಸಿಕೊಂಡ.

ಮುಂದೆ ಕೆಲಕಾಲದಲ್ಲೇ ಬಸವಣ್ಣನವರು ಕೆಲಸದಲ್ಲಿ ಮೇಲೇರಿ ಬೊಕ್ಕಸದ ಗಣಾಧಿಪತಿಯಾಗುತ್ತಾರೆ. ಇದು ಗಣಕ ಪಶುಪತಿ ಶಾಸ್ತ್ರಿಯಂಥವರಿಗೆ ಸಹಿಸದು. ಅಸೂಯೆಯಿಂದ ಅವರನ್ನು ತೆಗಳುತ್ತಾರೆ, ಆದರೆ ಚಂದ್ರಚೂಡ ಶಾಸ್ತ್ರಿಗಳಂಥವರು – ಅವರೂ ಗಣಕರೆ – ಅವರ ಬಗ್ಗೆ ಅಪಾರ ಮರ್ಯಾದೆ ಹೊತ್ತಿದ್ದಾರೆ.

ದಂಡನಾಥನಿಗೆ ಇಬ್ಬರು ಹೆಣ್ಣುಮಕ್ಕಳು. ಹಿರಿಯವಳು ಗಂಗಾದೇವಿ, ಕಿರಿಯವಳು ನೀಲಲೋಚನೆ. ಹಿರಿಯವಳನ್ನು ಬಸವಣ್ಣನಿಗೆ ಕೊಡಬೇಕೆಂದು ತಂದೆ ಮಗಳನ್ನು ಕೇಳಿದಾಗ ಅವಳು ಹಿಗ್ಗಿನಿಂದ ಕೂಡಲೆ ಒಪ್ಪುತ್ತಾಳೆ. ಆ ತನ್ನ ಸಂತೋಷವನ್ನು ತಾಯಿಗೆ ತಿಳಿಸಬೇಕೆಂದು ಹೋದರೆ ಅಲ್ಲಿ ಕಿರಿಯವಳು ತಾಯಿಯ ಮಡಿಲಲ್ಲಿ ಮುಖ ಹುದುಗಿಸಿ ಕಣ್ಣೀರು ಕರೆಯುತ್ತಿದ್ದಾಳೆ. ಅಕ್ಕನಿಗೆ ಅರ್ಥವಾಗುತ್ತದೆ ತನ್ನ ಮುದ್ದಿನ ತಂಗಿಯ ಮನಸ್ಸು. "ನಾನು ಗಂಗೆ, ನೀನು ಗೌರಿ" ಆಗಿರೋಣ ಎಂದು ಹೇಳಿ ಇಬ್ಬರೂ ಬಸವಣ್ಣನ ಕೈಹಿಡಿಯುತ್ತಾರೆ. ಗಂಗೆ ಅನ್ನುತ್ತಾಳೆ: "ಇವರು ನಮ್ಮನ್ನು ಎರಡು ಕಣ್ಣುಗಳಂತೆ ನೋಡಿಕೊಂಡಿದ್ದಾರೆ. ನಾವೂ ಇವರಿಗೆ ಹಾಲು ಸಕ್ಕರೆ ಆಗಿದ್ದೇವೆ. ಇವರ ಗುಣವೇ? ಚೊಕ್ಕ ಚಿನ್ನ ...ಅರಮನೆಯ ಕೆಲಸ, ಶಿವಪೂಜೆ, ಭಕ್ತರ ಪೂಜೆ ಅಷ್ಟೇ ಅವರಿಗೆ ಗೊತ್ತಿರುವುದು, ಹೊಲಗೇರಿಗೆ ಹೋಗುತ್ತಾರೆ, ಹೊಲೆಯರನ್ನು ಮನೆಗೆ ಬಿಟ್ಟುಕೊಳ್ಳುತ್ತಾರೆ. ಮಡಿ ಇಲ್ಲ, ಮೈಲಿಗೆ ಇಲ್ಲ ಎಂದು ಜನ ಅನ್ನುತ್ತಾರಂತೆ. ಊರು ಹೊಲಗೇರಿ ಒಂದು ಮಾಡಿಬಿಟ್ಟ ಅನ್ನುತ್ತಾರಂತೆ. ಇವೆಲ್ಲ ಸರಿಯೋ ತಪ್ಪೋ? ಇವರು ಮಾಡಿರುವುದರಿಂದ ಸರಿಯೇ ಇರಬೇಕು. ತಪ್ಪು ಹೆಜ್ಜೆ ಇಡುವ ಮನುಷ್ಯ ಅಲ್ಲ ಇವರು...ನನಗೆ ಒಂದು ಕೊರತೆ ಕಾಣುತ್ತದೆ. ಬೆಳ್ಳಿ, ಬಂಗಾರ, ನೆಲ, ಮನೆ, ನಾಲ್ಕು ನಾಣ್ಯ – ಏನೇನೂ ಇಲ್ಲ ನಮಗೆ. ಇವರಿಗೆ ನಾಳೆಗೇನು, ನಾಳಿದ್ದಿಗೇನು

ಎಂಬ ಚಿಂತೆ ಇಲ್ಲ. ಕೇಳಿದರೆ ನಾಳೆ ನಮ್ಮದಲ್ಲ ಎನ್ನುತ್ತಾರೆ. ಈವತ್ತು ಊಟ ನೀಡಿದ ದೇವರು ನಾಳೆ ನೀಡಲಾರನೆ ಎಂದು ಮರುಪ್ರಶ್ನೆ ಹಾಕುತ್ತಾರೆ. ನಮಗೆ ಮಕ್ಕಳಾಗುವುದು ಶಿವನ ಮನಸ್ಸಿಗೆ ಬರಲಿಲ್ಲ. ನಾಳೆಗೆ ನಮಗೆ ಯಾರಾಗುತ್ತಾರೆ ಎಂದು ಕೇಳಿದರೆ ಇಂದಿನವರೆಗೂ ನಮಗಾದ ಶಿವ ನಾಳೆ ತಪ್ಪಿಸಿಕೊಂಡು ಓಡಿಹೋಗುತ್ತಾನೆಯೇ ಎಂದು ಕೇಳಿ ನಗುತ್ತಾರೆ. ಇಷ್ಟಕ್ಕೂ ಇವರು ನಮ್ಮ ಜೊತೆ ಇರುವಾಗ ನಾಳಿನ ಚಿಂತೆ ನಮಗೇಕೆ?"

*

ಮೂರನೆ ತೈಲಪನ ಆಳ್ವಿಕೆಯಲ್ಲಿ ಚಾಲುಕ್ಯ ರಾಜ್ಯ ಒಡೆಯತೊಡಗಿತು. ಅದರ ಸಾಮಂತರಾಗಿದ್ದ ಓರುಗಲ್ಲಿನ ಕಾಕತೀಯರು ಅವನನ್ನು ಸೋಲಿಸಿ ಸೆರೆಹಿಡಿದರು. ಹೊಯ್ಸಳರೂ ಚಾಲುಕ್ಯರ ಹಲವಾರು ಪ್ರಾಂತಗಳನ್ನು ವಶಪಡಿಸಿಕೊಂಡರು. ಆ ಸಮಯದಲ್ಲಿ ಮಂಗಳವೇಡೆಯ ಎರಡನೆಯ ಬಿಜ್ಜಳ ಚಾಲುಕ್ಯರ ರಾಜಧಾನಿ ಕಲ್ಯಾಣಿಯನ್ನು ವಶಪಡಿಸಿಕೊಂಡನು (ಕ್ರಿ.ಶ. ೧೧೫೭). ಅಲ್ಲಿಂದ ಮುಂದೆ ಬಿಜ್ಜಳನ ಭಂಡಾರಿಯಾಗಿದ್ದ ಬಸವಣ್ಣನವರ ಕಾರ್ಯಕ್ಷೇತ್ರ ಕಲ್ಯಾಣವೇ ಆಯಿತು.

*

ಸಿದ್ಧರಾಮರು ಸೊನ್ನಲಗಿಯಲ್ಲಿದ್ದ (ಈಗಿನ ಸೊಲ್ಲಾಪುರ ಅಥವಾ ಸೋಲಾಪುರ) ಒಬ್ಬ ಶಿವಯೋಗಿ. ಆ ರಾಜ್ಯ ಪದೇಪದೇ ಬರಗಾಲಕ್ಕೆ ಸಿಲುಕಿ ತೊಂದರೆಗೆ ಒಳಗಾಗುತ್ತಿದ್ದುದರಿಂದ ಅವರು ಇತರ ಭಕ್ತರೊಡಗೂಡಿ ಜನರಿಗೆ ನೀರಿನ ವ್ಯವಸ್ಥೆ ಮಾಡುವುದರಲ್ಲಿ ತುಂಬಾ ಶ್ರದ್ಧೆ ವಹಿಸಿ ಹಲವಾರು ಕೆರೆಕಟ್ಟೆಗಳನ್ನೂ, ದೇವಾಲಯಗಳನ್ನೂ ಕಟ್ಟಿಸಿ ಕರ್ಮಯೋಗಿ ಎನ್ನಿಸಿಕೊಂಡಿದ್ದರು. ಅಲ್ಲಮಪ್ರಭು ಒಮ್ಮೆ ಸೊನ್ನಲಿಗೆಗೆ ಬರುತ್ತಾರೆ. ಸಿದ್ಧರಾಮರ ಕರ್ಮಮಾರ್ಗ ಪ್ರಭುವಿನ ಮನಸ್ಸಿಗೆ ಸರಿತೋರಲಿಲ್ಲ. ಅದರಿಂದ ಅವರನ್ನು ವಿಮುಖರಾಗಿಸುತ್ತಾರೆ. ಸಿದ್ಧರಾಮರು ಅವರೊಡನೆ ಇಷ್ಟಲಿಂಗದ ಬಗ್ಗೆ ತಿಳಿಸಿ ಎಂದು ಕೇಳುತ್ತಾರೆ. "ಇಷ್ಟಲಿಂಗದ ಸೂಕ್ಷ್ಮಗಳನ್ನು ತಿಳಿದವರು ಬಸವಣ್ಣನವರು, ಅವರಲ್ಲಿಗೆ ಹೋಗೋಣ, ಅವರು ನಿನಗೆ ತಿಳಿಸಿಕೊಡುತ್ತಾರೆ" ಎಂದರು. ನನಗೆ ಆಶ್ಚರ್ಯವಾಯಿತು. ಅಲ್ಲಮಪ್ರಭು ನಮ್ಮಲ್ಲಿಗೆ ಬರುವವರೆಗೆ ನಾನು ಅಲ್ಪಸ್ವಲ್ಪ ಸಾಧನೆ ಮಾಡಿದವನು; ಅಲ್ಪಸ್ವಲ್ಪ ತಿಳಿದುಕೊಂಡವನು ಎಂಬ ಭಾವನೆ ನನಗಿತ್ತು. ಅವರು ಬಂದ ಮೇಲೆ ಅವರೊಡನೆ ಜಿಜ್ಞಾಸೆ ನಡೆದ ಮೇಲೆ ಅವರು ಜ್ಞಾನದ ಸೂರ್ಯ, ನಾವೆಲ್ಲ ಹಣತೆಗಳೂ ಅಲ್ಲ ಎಂಬ ಭಾವನೆ ಬೇರೂರಿತು. ಕೊನೆಗೆ ಅಂಥ ಸೂರ್ಯ ತನಗೂ ಸೂರ್ಯರಾದವರು ಇದ್ದಾರೆ ಎನ್ನುತ್ತಿದ್ದಾರೆ! ಅಂಥ ವ್ಯಕ್ತಿಯನ್ನು ನೋಡಲೇಬೇಕು ಎನ್ನಿಸಿತು. ಪ್ರಭುವಿನ ಜೊತೆಯಲ್ಲಿ ಹೊರಟೆ. ನಡೆದ ದಾರಿಯಲ್ಲಿ ಅವರು ಹೇಳುತ್ತಾರೆ ಬಸವಣ್ಣ ದಾಸೋಹದಲ್ಲಿ ತನ್ನನ್ನು ಮರೆತು ನಿಶ್ಚಿಂತ ನಿವಾಸಿಯಾಗಿದ್ದಾನೆ ಎಂದು.

"ಆತ (ಬಸವಣ್ಣ) ನಿಜವಾದ ಭಕ್ತ. ಅವರ ವಿನಯ ವಿಶಿಷ್ಟ ರೀತಿಯದು. ಅವರ ಮನಸ್ಸೆಲ್ಲ ದೇವರಲ್ಲಿ. ಆದರೆ ಕೆಲಸ ಮಾಡದೆ ಊಟ ಮಾಡುವ ಹಕ್ಕು ಯಾರಿಗೂ ಇಲ್ಲ ಎಂಬುದು ಅವರ ಸಿದ್ಧಾಂತ. ಅದರಲ್ಲಿ ಹೇಳತೀರದ ನಿಷ್ಠೆ. ಜೊತೆಗೆ ಭಕ್ತರನ್ನು ತೃಪ್ತಿಪಡಿಸಬೇಕು ಎಂಬ ಗುಣಪಡಿಸಲಾರದ ಹುಚ್ಚು. ಮಾತಾಡಿ, ವಾದಮಾಡಿ ನನ್ನ ಕರ್ಮವನ್ನು ನಿಲ್ಲಿಸಿ ನನ್ನ ಬಾಯಿ ಮುಚ್ಚಿಸಿದ ಪ್ರಭುದೇವರು ಕೂಡ ಬಸವಣ್ಣನವರ ಈ ಹುಚ್ಚಿಗೆ ಮದ್ದು ಕಂಡುಹಿಡಿಯಲಾರದೆ ಹೋದರು. ಮಾಡುವ ಕೆಲಸಕ್ಕೆ ಇತಿ ಮಿತಿ, ರೂಪು ರೇಷೆ ಉಂಟು. ಹುಚ್ಚು ಹೊನಲಾಗಿ ಹರಿಯುವ ಭಕ್ತಿಗೆ ಅಂಥ ಅಂಕೆ ಎಲ್ಲಿದೆ?

"ಮಿಂದು ವಿಭೂತಿ ಧರಿಸಿ ಲಿಂಗಪೂಜೆ ಮಾಡಿದರೆ ಎರಡು ಹೊತ್ತು ಪುಷ್ಕಳವಾಗಿ ಊಟ ಸಿಕ್ಕುತ್ತದೆ ಎಂದರೆ ಯಾರುತಾನೆ ಭಕ್ತರಾಗುವುದಿಲ್ಲ? ಹೀಗೆ ತಾಳ ಮೇಳಗಳಿಲ್ಲದ ಒಂದು ಹುಚ್ಚುಹೊಳೆಗೆ ಒಂದು ದಿನ ಮಹಾಪೂರ ಬಂತು. ಕಲ್ಯಾಣದಲ್ಲಿ ಸೇರಿದ್ದ ಸಾವಿರಾರು ಜನ ಭಕ್ತರನ್ನು ಅದು ಕೊಚ್ಚಿಕೊಂಡು ಹೋಯಿತು – ಅದಕ್ಕೆ ದಂಡೆ ಕಟ್ಟಿದ್ದ ಬಸವಣ್ಣನವರನ್ನೂ."

ಎಂಥ ಸದ್ಗುಣವಾದರೂ ಅದು ಅತಿರೇಕಕ್ಕೆ ಹೋದರೆ– ಅಂದರೆ obsession ಮಟ್ಟಕ್ಕೆ ಹೋದರೆ – ಅದರಿಂದ ಆಗುವುದು ಅನಾಹುತವೆ. ಕೆಲಸ ಮಾಡದವನಿಗೆ ಊಟದ ಹಕ್ಕಿಲ್ಲ ಎಂದ ಬಸವಣ್ಣನವರು ಜಂಗಮರಿಗೆ ಮಾತ್ರ ಆ ನಿಷ್ಠೆಯಿಂದ ವಿನಾಯಿತಿ ಕೊಟ್ಟರೆ? ಭಕ್ತರನ್ನು ಮೆಚ್ಚಿಸುವ ಕೆಲಸದಲ್ಲಿ ಅವರು ಎಷ್ಟು ಕಣ್ಮುಚ್ಚಿಕೊಂಡು ನಡೆಯುತ್ತಿದ್ದರು ಎಂಬುದಕ್ಕೆ ಅವರು ತಮ್ಮ ಪತ್ನಿ ನೀಲಲೋಚನೆಯನ್ನು ಗುರಿಮಾಡಿದ ಈ ಸಂದರ್ಭ ಸಾಕ್ಷಿ. ನೀಲವ್ವ ಹೇಳುತ್ತಾಳೆ: "ಇಲ್ಲಿಗೆ ಎಂಥೆಂಥ ಜನ ಬರ್ತಾರೇಂತ ಹೇಳಿದರೆ ನೀವು ನಂಬೋದೇ ಇಲ್ಲ. ಕಳ್ಳರು, ಸುಳ್ಳರು, ದರೋಡೆ ಮಾಡೋರು ಎಲ್ಲಾ ಬರ್ತಾರೆ. ಜಂಗಮರ ವೇಷ ಹಾಕೋದು ಮಹಾ ಕಷ್ಟಾನೆ? ಹಾಕ್ಕೊಂಡ್ರು, ಬಂದ್ರು. ಇವರಿಗೆ ಅದೆಲ್ಲಾ ಗೊತ್ತಾದ್ರೆ ತಾನೆ? ಹೋಗಲಿ, ಹೇಳಿದೆವು ಅಂತ ಇಟ್ಕೊಳ್ಳಿ. ಕಿವಿ ಮೇಲೂ ಹಾಕ್ಕೊಳಲ್ಲ, ನಂಬೋದೂ ಇಲ್ಲ.

"ತಿಂಗಳ ಹಿಂದೆ ಒಬ್ಬ ಬಂದ. ..ರಾತ್ರಿ ಪೂಜೆ ಆಯಿತು, ಊಟ ಆಯಿತು. ಕಾಮಣ್ಣನ ಹಾಗೆ ಇದ್ದವನು ಇವರ ಮುಂದೆ ಪಿಸುಗುಟ್ಟಿದನಂತೆ 'ನಾನು ರಾತ್ರಿ ಒಬ್ಬನೇ ಮಲಗಿ ರೂಢಿಯಿಲ್ಲ' ಅಂತ. ಇವರು ಅವನಿಗೆ ಏನು ಮಾತು ಕೊಟ್ಟರೋ ನನಗೆ ಗೊತ್ತಿಲ್ಲ. ನನ್ನ ಮುಂದೆ ಬಂದು, ಕುರಿಯಾಗಿ ನಿಂತು, ಕೈಕೈ ಹಿಸುಕಿಕೊಳ್ಳುತ್ತ, ಹೀಗಂತೆ ಅಂತ ಅವನು ಹೇಳಿದ್ದನ್ನ ತೊದಲಿದರು. ನನಗೆ ಮೈಮೇಲೆ ಪ್ರಜ್ಞೆಯೇ ಹೋಯಿತು... 'ಈ ನಿಮ್ಮ ನಟರಾಜನನ್ನು ಒದ್ದು ಹೊರಕ್ಕೆ ಹಾಕುತ್ತೀರೋ, ಇಲ್ಲ ನಾನೇ ಆ ಕೆಲಸ ಮಾಡಲೋ?' ಹೇಳಿದೆನಲ್ಲ, ಕೋಪ ಇದ್ದ ಕಡೆ ವಿವೇಕಕ್ಕೆ ಎಲ್ಲಿ

ಎಡೆ? ನನ್ನನ್ನು ಎಂದೂ ಸ್ವಲ್ಪವೂ ನೋಯಿಸದಿದ್ದ ಆ ಮೃದುಹೃದಯಿ ಮೈಮೆಟ್ಟಿದ ಆವೇಶದಲ್ಲಿ ನನ್ನನ್ನು ಹೊಡೆಯಲು ಕೈ ಎತ್ತಿದರು. 'ನನ್ನ ಮೈ ಮುಟ್ಟಿದರೆ ಶಿವನಾಣೆ' ಎಂದೆ. ಅವರ ಕೈ ಅಲ್ಲೇ ಆಕಾಶಕ್ಕೆ ಅಂಟಿಕೊಂಡಂತೆ ನಿಂತುಬಿಟ್ಟಿತು. ನನಗೇ ಪಾಪ ಎನ್ನಿಸಿತು. ಆದರೆ ಅವರ ಜಂಗಮ ಸೇವೆಯ ಕಾವನ್ನು ಇಳಿಸದೇಹೋದರೆ ಅದರಲ್ಲೇ ಸುಟ್ಟುಹೋದಾರು ಎನ್ನಿಸಿತು...

"ನಮ್ಮ ಸಂಸಾರ ಜೀವನದಲ್ಲಿ ನಾಲ್ಕು ಸಲವೋ ಐದು ಸಲವೋ ಅವರಿಗೆ ಎದುರಾಡಿದ್ದುಂಟು. ಆದರೆ ಅಷ್ಟು ಸಲವೂ ಹಾಗೆ ಆಡಿದ್ದು ಅವರ ಹಿತಕ್ಕಾಗೇ. ಅವರನ್ನು ನೋಡಿದಾಗೆಲ್ಲ ನನ್ನಲ್ಲಿ ತಾಯ್ತನ ಅರಳುತ್ತದೆ."

ನೀಲವ್ವ ಮತ್ತೂ ಒಂದು ಮಾತು ಹೇಳುತ್ತಾಳೆ: "ಲೋಕದ ಚಿಂತೆ ನಮಗೇಕೆ ಅನ್ನುತ್ತಾರೆ. ಆದರೆ ಇವರಿಗಿರೋ ಚಿಂತೆ ಎಲ್ಲಾ ಲೋಕದ್ದೇ. ಜಾತಿಪದ್ಧತಿ ಹೋಗಬೇಕು ಅಂತಾರೆ. ಅದೇ ಬಾಯಲ್ಲಿ ಶಿವನ ಭಕ್ತರೆಲ್ಲ ಒಂದು ಜಾತಿ ಅಂತಾರೆ. ಇದೂ ಒಂದು ಜಾತಿ ಆಗಲಿಲ್ಲವೆ?"

"ಇವರು ಒಳ್ಳೆಯವರು. ಇಂಥ ಮಮತೆಯ ಮೂರ್ತಿಯನ್ನು ಕಾಣುವುದು ಕಷ್ಟ. ಇಂಥವರು ತಮ್ಮನ್ನು ತಾವು ನೋಡಿಕೊಳ್ಳಲಾರರು ಎಂಬುದೂ ಸತ್ಯ. ತುಂಬಾ ದಯಾಳು. ಕೈಯಲ್ಲಿರುವುದೆಲ್ಲ ಕೇಳಿದವರ ಪಾಲು. ಅದಕ್ಕೆ ನಮ್ಮ ಆಕ್ಷೇಪಣೆ ಇಲ್ಲ. ಆದರೆ ಇದು ಸಂಸಾರಸ್ಥರ ಮನೆ. ಇಲ್ಲಿಗೆ ಬಂದುಹೋಗುವವರು ಯೋಗ್ಯರಾಗಿರಬೇಕು ಅಂತ ನಮ್ಮ ಮನಸ್ಸು. ಹಾಗೆ ಆಸೆಪಡುವುದರಲ್ಲಿ ತಪ್ಪೇನು ಹೇಳಿ?"

ದೊರೆ ಬಿಜ್ಜಳನ ಅಭಿಪ್ರಾಯವೂ ಹೀಗೇ. ಅವನಿಗೆ ಬಸವಣ್ಣನವರಲ್ಲಿ ಅಪಾರ ಗೌರವ. ಆ ಭಾವನೆ ಅವರ ಮೊದಲ ಭೇಟಿಯಲ್ಲೇ ಉಂಟಾಗುತ್ತದೆ. "ಮೊದಲ ಸಲ ದರ್ಶನಕ್ಕೆ ಬಂದಿದ್ದಾನೆ. ಆದರೂ ನಮಗೆ ಬಾಗಿ ಕೈಮುಗಿಯಲಿಲ್ಲ... ಕಿನ್ನರ ಲೋಕದಿಂದ ಈ ಲೋಕಕ್ಕೆ ಇಲ್ಲಿ ಏನು ನಡೆಯುತ್ತಿದೆಯೋ ನೋಡಿ ಹೋಗಲು ಬಂದ ಕುತೂಹಲಿಯಂತಿದ್ದ ಅವನು.

"ನಮ್ಮ ಮನಸ್ಸಿಗೆ ಬಂದ ಮೊದಲ ಭಾವನೆ ನಮ್ಮ ಕಿರೀಟವನ್ನು ತೆಗೆದು ಅವನ ತಲೆಗೆ ತೊಡಿಸಿದರೆ ಹೇಗೆ ಎಂದು. ಆದರೆ ನಮ್ಮ ಸ್ಥಾನ, ಈ ಆಸ್ಥಾನಗಳು ಎಲ್ಲ ಸಹಜ ಭಾವನೆಗಳ ಕುಡಿಗಳನ್ನೂ ಅವು ಕೊನರಿದ ಕ್ಷಣವೇ ಚಿವುಟಿಹಾಕುವಂಥವು. ಎಲ್ಲ ಒಲವುಗಳ ನಡುವೆಯೂ ಗೋಡೆ ಕಟ್ಟುವಂಥವು. ಸುಳ್ಳು ಸುಳ್ಳೆ ಭಟ್ಟಂಗಿತನ, ಬೆನ್ನ ಹಿಂದೆ ಚೂರಿ – ಇವು ರಾಜರಾದವರಿಗೆ ಕಾಣುವಷ್ಟು ಸ್ಪಷ್ಟವಾಗಿ ಬೇರೆ ಯಾರಿಗೆ ಕಾಣುತ್ತದೆ?"

(ಜಿಬ್ರಾನ್ ಕಥಾನಕದಲ್ಲಿ ಯೇಸುವನ್ನು ರೋಮನ್ ಅಧಿಕಾರಿ ಪಿಲಾತನ ಬಳಿಗೆ ತಂದಾಗ ಪಿಲಾತನಿಗೆ ಒಂದು ಕ್ಷಣ ತಾನೆದ್ದು ಹೋಗಿ ಯೇಸುವಿನ ಪಾದದ ಬಳಿ ತಲೆಯಿಡಬೇಕು ಎಂದು ಅನ್ನಿಸಿತಂತೆ. ಆ ಸಂದರ್ಭ ಇಲ್ಲಿ ನೆನಪಾಗುತ್ತದೆ.)

ಬೊಕ್ಕಸದ ಭಂಡಾರಿ ಬಸವಣ್ಣನವರಿಗೆ ದಿನಕ್ಕೆ ಹತ್ತು ಹೊನ್ನು ಪಗಾರ. ಆದರೆ ಆ ಹಣ ಮನೆ ತಲಪುತ್ತಲೇ ಇರಲಿಲ್ಲ. ದಾರಿಯಲ್ಲೇ ಪೂಜಾಸಾಮಗ್ರಿಗೆ, ಶರಣರ ಊಟೋಪಚಾರಗಳ ವ್ಯವಸ್ಥೆಗೆ ಖರ್ಚಾಗುತ್ತಿತ್ತು. ವಿಶೇಷ ಸಂದರ್ಭಗಳಲ್ಲಿ ದೊರೆ ಹೆಚ್ಚು ಹಣ ಕೊಟ್ಟರೆ, ಅದರ ಗತಿಯೂ ಅಷ್ಟೇ. ಬಸವಣ್ಣನವರು ಭಂಡಾರದ ಹಣವನ್ನು ಈ ರೀತಿ ಭಕ್ತರನ್ನು ಮೆಚ್ಚಿಸಲು ದುರುಪಯೋಗ ಮಾಡುತ್ತಿದ್ದಾರೆ ಎಂದು ಕುಹಕಿಗಳ ಅಪವಾದ. ಆದರೆ ಬಿಜ್ಜಳನಿಗೆ ಗೊತ್ತು, ಬಸವಣ್ಣನವರು ಘಟಸರ್ಪದಂತೆ ತನ್ನ ಭಂಡಾರ ಕಾಯುತ್ತಿದ್ದಾರೆ ಎಂದು. ಶಿವನೇ ಬಂದು ಬಸವಣ್ಣನವರು ಮೋಸ ಮಾಡುತ್ತಿದ್ದಾರೆ ಎಂದು ಹೇಳಿದರೂ ನಂಬುವುದಿಲ್ಲ ಎನ್ನುವವನು ಅವನು. ಒಮ್ಮೆ ಬಸವಣ್ಣನವರು ಸಾವಿರ ಭಕ್ತರಿಗೆ ಊಟ ಹಾಕಿಸಿದ್ದಾರೆ. ಒಬ್ಬೊಬ್ಬರಿಗೂ ಒಂದೊಂದು ಚಿನ್ನದ ನಾಣ್ಯ ಕೊಟ್ಟಿದ್ದಾರೆ. ಇಷ್ಟು ಜನಕ್ಕೆ ಸಂತರ್ಪಣೆ, ದಕ್ಷಿಣೆ ಮಾಡಬೇಕಾದರೆ ಬಸವಣ್ಣ ಭಂಡಾರದ ಹಣವನ್ನೇ ಬಳಸಿಕೊಂಡಿರಬೇಕು, ಕೂಡಲೇ ದೊರೆಗೆ ಹೇಳಿ ಭಂಡಾರದ ಹಣ ಲೆಕ್ಕ ಮಾಡಿದರೆ ಬಸವಣ್ಣ ಸಿಕ್ಕಿಬೀಳುತ್ತಾರೆ ಎಂದು ಅವರ ದ್ವೇಷಿಗಳು ರಾಜನ ಬಳಿಗೋಡುತ್ತಾರೆ. ದೊರೆ ಸಮಾಧಾನವಾಗಿಯೇ ಎಲ್ಲವನ್ನೂ ('ಒಳಗೊಳಗೆ ನಗುತ್ತ') ಪರಿಶೀಲಿಸುತ್ತಾನೆ. ಭಂಡಾರದ ಹಣದಲ್ಲಿ ಒಂದು ಕಾಸೂ ಮೋಸವಾಗಿಲ್ಲ. ದೊರೆ ಈ ಮಿಥ್ಯಾಪವಾದ ತಂದವರನ್ನು ಕುರಿತು ಅಣ್ಣನವರ ಬಗ್ಗೆ ಮತ್ತೆ ಹೀಗೆ ಮಾಡಿದರೆ ನಿಮಗೆ ಶಿಕ್ಷೆ ತಪ್ಪಿದ್ದಲ್ಲ ಎಂದು ಎಚ್ಚರಕೊಟ್ಟು ಕಳಿಸುತ್ತಾನೆ.

ಬಿಜ್ಜಳ ಹೇಳುತ್ತಾನೆ: "ನಮಗೆ ಅವನ ಮೇಲೂ ಆ ಸಲ ತುಂಬಾ ಕೋಪ ಬಂತು. ಮೂರೇ ದಿನಗಳ ಹಿಂದೆ ನಾನು ಎರಡು ಸಾವಿರ ಹೊನ್ನು ಕೊಟ್ಟಿದ್ದೆ. 'ಒಂದು ನೆಲೆ ಮಾಡಿಕೋ. ತಲೆಯ ಮೇಲೆ ಒಂದು ಸೂರು ಬೇಡವೇ? ಮನೆಯಲ್ಲಿ ಒಬ್ಬರಲ್ಲ ಅಂತ ಇಬ್ಬರು ಹೆಣ್ಣುಮಕ್ಕಳಿದ್ದಾರೆ. ಅವರಿಗೆ ನಗನಾಣ್ಯ ಏನೂ ಬೇಡವೆ? ನೀನೇನೋ ಬೋಳು ಬಸವ. ನಿನ್ನನ್ನು ಕಟ್ಟಿಕೊಂಡದ್ದಕ್ಕೆ ಅವರಿಗೂ ಈ ವಿರಾಗಿಣಿಯರ ಬಾಳೆ?' ಅವನು ಮಧ್ಯೆ ಬಾಯಿಹಾಕಿ 'ಇವತ್ತಿಗೆ ಹೇಗೆ, ನಾಳೆಗೆ ಹೇಗೆ? ಎಂದು ಚಿಂತೆ ಮಾಡಿದರೆ, ನಾಳೆಗೆ ಎಂದು ಕೂಡಿಟ್ಟರೆ ಶಿವನು ರಕ್ಷಿಸುತ್ತಾನೆ ಎಂಬ ಶಕ್ತಿಯಲ್ಲೇ ನಂಬಿಕೆ ಕಳೆದುಕೊಂಡಹಾಗಲ್ಲವೇ' ಎಂದ."

"ಈಗ ನಮಗೆ ಗೊತ್ತಾಗುತ್ತಿದೆ. ಇವನ ಶತ್ರುಗಳು ಶಾಸ್ತ್ರಿಗಳೂ ಅಲ್ಲ, ಭಟ್ಟರೂ ಅಲ್ಲ (ಬಸವಣ್ಣನವರ ಮೇಲೆ ಅಪವಾದ ತಂದಿದ್ದವರು). ಇವನ ಶತ್ರುಗಳು ಈ ವೇಷಧಾರಿ ಜಂಗಮರೇ. ಈ ಮಿಂಡರು, ಕಳ್ಳರು, ನೋಡುತ್ತಿರಿ, ಇವನನ್ನು ಮುಗಿಸುತ್ತಾರೆ. ನಮ್ಮನ್ನೂ ಮುಗಿಸುತ್ತಾರೆ. ಕೊನೆಗೆ ಕಲ್ಯಾಣವನ್ನೂ."

*

ಸಂಬೊಳಿ ನಾಗಿದೇವ ಅಸ್ಪೃಶ್ಯ. ಜನ್ಮಜನ್ಮಾಂತರಗಳಿಂದಲೂ ಅವನ ಜನ ಮೇಲುಜಾತಿಯವರಿಂದ, ದೊಡ್ಡವರು ಎನ್ನಿಸಿಕೊಂಡವರಿಂದ ದೂರವಿರಿಸಲ್ಪಟ್ಟಿದಾರೆ. ಅಂಥ ಜನ ಕಂಡಾಗ ಇವನು 'ಸಂಬೊಳಿ – ದೂರ ನಿಲ್ಲಿ' – ಎಂದು ಕೂಗಬೇಕು. ಯಾವ ಕಾರಣದಿಂದಲೂ ಇವನು ಅವರ ಕಣ್ಣಿಗೆ ಬೀಳಬಾರದು. ಅಂಥವನನ್ನು ಬಸವಣ್ಣನವರು ಒಮ್ಮೆ ಹತ್ತಿರ ಬನ್ನಿ ಎನ್ನುತ್ತಾರೆ. ಎಂದೂ ದೂರವಿರು ಎನ್ನಿಸಿಕೊಂಡವನನ್ನು ಈ ಮಹಾನುಭಾವ ಹತ್ತಿರ ಬನ್ನಿ ಎನ್ನುತ್ತಿದ್ದಾರೆ, ಅವನ ಬೆನ್ನು ತಡವುತ್ತಾರೆ. ಒಂದು ಕ್ಷಣ ಅವನ ಮೈಮೇಲೆ ಹಾವು ಸರಿದಂತಾದರು ಮರು ಕ್ಷಣ ಬಿಸಲಲ್ಲಿ ಬೆಂದವನ ಮೇಲೆ ತಣ್ಣೀರು ಸುರಿದಂತಾಗುತ್ತದೆ. ಮನೆಗೆ ಬನ್ನಿ ಎನ್ನುತ್ತಾರೆ, ಆಸನ ಕೊಟ್ಟು ಕೂರಿಸಿ ಇತರರಿಗೆ ಅವರ ಪರಿಚಯ ಮಾಡಿಕೊಡುತ್ತಾರೆ. ನಾಳೆ ಮಧ್ಯಾಹ್ನ ನಿಮ್ಮ ಮನೆಯಲ್ಲೇ ನಮಗೆ ಪ್ರಸಾದ ಎನ್ನುತ್ತಾರೆ. ಪ್ರಸಾದ ಎಂಬಂಥ ಪದಗಳೇ ತಿಳಿಯದ ನಾಗಿದೇವ ಅದನ್ನು ತನ್ನ ತಾಯಿ ದುರ್ಗವ್ವನಿಗೆ ತಿಳಿಸುತ್ತಾನೆ.

ಮಾರನೆಯ ದಿನ ಬಸವಣ್ಣನವರು ನಾಗಿದೇವನ ಮನೆಗೆ ಹೋದಾಗ ದುರ್ಗವ್ವನೊಂದಿಗೆ ಸಂತೋಷವಾಗಿ ಮಾತಾಡುತ್ತಾರೆ. "ಉಣ್ಣಕ್ಕಿಕ್ತೀಯಾ?" ಎಂದು ತಾವೇ ಕೇಳಿ ಅವಳು ಕೊಟ್ಟ ರೊಟ್ಟಿ ಪಲ್ಲೆಗಳನ್ನು ತಿಂದು ತೃಪ್ತಿಪಡುತ್ತಾರೆ. ಎಷ್ಟು ಬೇಡವೆಂದರೂ ತಮ್ಮ ಗಂಗಾಳ ತಾವೇ ತೊಳೆದಿಡುತ್ತಾರೆ,. ಆಮೇಲೆ "ನೀನೇನ್ ಬೇಯಿಸ್ಕೊಂಡೇ ಸಾಯೋ ಆಕೆಯೋ, ಇಲ್ಲ ಸೊಸೆ ಗಿಸೆ ತರ್ತೀಯೋ?" ಎಂದು ವಿಚಾರಿಸುತ್ತಾರೆ. ಮುದುಕಿ ಹೇಳುತ್ತಾಳೆ: "ಅಣ್ಣಾವ್ರೆ, ನಾವು ಬಡವ್ರು, ನಿಲ್ಲೋಕೆ ನೆರಳೇ ಇಲ್ಲ. ಹೆಣ್ಣು ಯಾರು ಕೊಡ್ತಾರೆ?" ಅವರು ನಕ್ಕು ಹೇಳುತ್ತಾರೆ: "ಶಿವಾ ಮನೇ ನೋಡಲ್ಲ, ಮನಸ್ಸು ನೋಡ್ತಾನೆ. ನೀವು ದೊಡ್ಡವರು. ಹೆಣ್ಣಿನ ಬಗ್ಗೆ ಚಿಂತೆ ಬಿಡಿ. ನಮ್ಮ ಕೇರಿಯಿಂದಲೇ ಹೆಣ್ಣು ಕೊಡಿಸ್ತೀನಿ. ಬ್ಯಾಡ ಬ್ರಾಂಬ್ರ ಜಾತಿ ಹೆಣ್ಣು ಬೇಕಾದರೂ ಹೇಳಿ, ಬ್ಯಾರೆ ಜಾತಿ ಹೆಣ್ಣಾದರೂ ಸೈ. ಈಗೆಲ್ಲಾ ಜಾತಿ ಹೋಯಿತು. ಭಕ್ತರದೆಲ್ಲ ಒಂದೇ ಜಾತಿ. ಹೆಣ್ಣು ಕೊಡಿಸ್ತೀನಿ, ನಾನೇ ನಿಂತು ಮದುವೇನೂ ಮಾಡಿಸ್ತೀನಿ" ಅದೀಗ ಎದೆ ಎನ್ನುತ್ತ ಮುದುಕಿ ಆಗಲೆನ್ನುತ್ತಾಳೆ.

ಆದರೂ ಮುದುಕಿಗೆ ಸಂಶಯ ಇದೆ. "ಈ ಜಾತಿ ಮತ ಹೋಗೋದು ಹೌದಾ? ಇವ್ರೇನೋ ಅಂತಾರೆ, ನಿಜ, ಆದ್ರೆ ಇವ್ರ ಜಾತ್ಯೋರೇ ಒಪ್ಪಬೇಕಲ್ಲ, ಬ್ರಾಂಬ್ರೂ ಒಪ್ಪಬೇಕಲ್ಲ, ನಾವು ಹೊಲೇರೂ ಒಪ್ಪಬೇಕಲ್ಲ. ಜಾತಿ ಹೋದ್ರೆ ಪ್ರಪಂಚವೇ ನಾಶ ಆಗುತ್ತಂತೆ ಹೌದಾ?...ಆ ನಮ್ಮಪ್ಪನ ಮಾತು ನಿಜ ಆದ್ರೆ – ನಾಯಿ ಬಾಳಿಗಿಂತ ಕೀಳು ಈ ನಮ್ಮ ಬಾಳು, ಅದು ವೈನ ಆಗ್ಬೋದು."

ಮಹಾತಾಯಿ ಸಂತ ಟೆರೇಸಾ ಕಲ್ಕತ್ತೆಯ ಗಟಾರದಲ್ಲಿ ಬಿದ್ದು ನರಳುತ್ತಿದ್ದ ಕುಷ್ಠರೋಗಿಯನ್ನು ತನ್ನ ಆಶ್ರಮಕ್ಕೆ ತಂದು ಸಂತೈಸಿದಾಗ ಅವನೆಂದನಂತೆ: "ಇಷ್ಟು

ದಿನ ನನ್ನ ಬಾಳು ನಾಯಿಯ ಬಾಳಿಗಿಂತ ಕೀಳಾಗಿತ್ತು, ಈವತ್ತು ನಾನೊಬ್ಬ ರಾಜ ಎನ್ನಿಸುತ್ತಿದೆ" ಎಂದು.

ನಾಗಿದೇವನಿಗೆ ಬಸವಣ್ಣನವರು ಮದುವೆ ಮಾಡಿಸಿದರೋ ಇಲ್ಲವೋ ಈ ಕಥಾನಕಕ್ಕೆ ಅಪ್ರಸ್ತುತ. ಆದರೆ ನಿಜವಾದ ಸುಧಾರಣೆ ಆಗಬೇಕಾದರೆ ಬ್ರಾಹ್ಮಣ-ಅಸ್ಪೃಶ್ಯರ ನಡುವೆ ಮದುವೆಯ ಸಂಬಂಧ ಆಗಬೇಕಾದ್ದು ಎಂಬ ಯೋಚನೆ ಅವರ ತಲೆಹೊಕ್ಕಿರಬೇಕು. ಇದು ಮಧುವರಸ ಎಂಬ ಬ್ರಾಹ್ಮಣನ ಮಗಳನ್ನು ಹರಳಯ್ಯ ಎಂಬ ಅಸ್ಪೃಶ್ಯನ ಮಗನಿಗೆ ಕೊಟ್ಟು ಮದುವೆ ಮಾಡಿಸುವ ಪ್ರಯತ್ನದಲ್ಲಿ ಕೊನೆಗೊಂಡಿತು. ಈ ಮದುವೆಯ ಪ್ರಯತ್ನ ಭೂಕಂಪದಂಥ ಒಂದು ಮಹಾವಿಪತ್ತಿಗೆ ಎಡೆ ಕೊಟ್ಟಿತು.

ಮಧುವಯ್ಯ ಕೇಳುಗನೊಂದಿಗೆ ಮಾತನಾಡುವ ಹೊತ್ತಿಗೆ ಒಂದು ಮಹಾಪ್ರಳಯವೇ ಆಗಿದೆ. ರಾಜ ಬಿಜ್ಜಳ ಮಧುವರಸ ಹರಳಯ್ಯ ಇಬ್ಬರ ಕಣ್ಣೂ ಕೀಳಿಸಿದ್ದಾನೆ.

ಮಧುವರಸ, ಬ್ರಾಹ್ಮಣ, ಚೆನ್ನಾಗಿ ಓದಿ ತಿಳಿದವನು. ಅಣ್ಣನವರ ಧರ್ಮದಲ್ಲಿ ನಂಬಿಕೆ ಇದ್ದರೂ ಅವರ ತರ್ಕ ಒಪ್ಪುವುದಿಲ್ಲ. ಜಾತಿಗಳೆಂಬವೇ ಸುಳ್ಳು ಎಂದಾದರೆ, ತಾನೊಬ್ಬ ಸೃಷ್ಟಿಸಿದ ಜಾತಿ ಮಾತ್ರ ಹೇಗೆ ನಿಜವಾದೀತು? ಎಂದು ಬಸವಣ್ಣನವರ ನಿಲುವನ್ನು ಪ್ರಶ್ನಿಸುವಂಥವನು. ಈತನ ಮಗಳು ಬ್ರಹ್ಮಾಣಿ, ತುಂಬಾ ಚೆಲುವೆ. ಅಣ್ಣನವರ ಮನೆಗೆ ಹೋಗಿಬರುತ್ತಿರುತ್ತಾಳೆ. ಅಲ್ಲಿಗೆ ಬರುತ್ತಿದ್ದ ಇನ್ನೊಬ್ಬ ಯುವಕ ಬೀರಯ್ಯ, ಅಸ್ಪೃಶ್ಯ ಮೋಚಿ ಹರಳಯ್ಯನ ಮಗ. ಅವರಿಬ್ಬರಲ್ಲಿ ಸ್ನೇಹ ಬೆಳೆಯಿತು. ಮದುವೆಯ ಮಾತಾಡಿಕೊಂಡರು. ಹುಡುಗಿ ತನ್ನ ತಂದೆಯನ್ನು ಕೇಳಿದಳು. ತಂದೆ ಮುಕ್ತವಾಗಿ ಒಪ್ಪಿಗೆ ಕೊಟ್ಟರೂ ತಾಯಿಯನ್ನೂ ಒಂದು ಮಾತು ಕೇಳು ಎಂದ. ಆದರೆ ಆ ತಾಯಿಗೆ ಈ ಮಾತು ಕೇಳಿ ಬರಸಿಡಿಲು ಎರಗಿದಂತಾಯಿತು. ಅವಳದ್ದು ಒಂದೇ ಗೋಳು, ಈ ಮನೆಗೆ ಇನ್ನು ಮುಂದೆ ಯಾವ ಮುತ್ತೈದೆಯೂ ಅರಿಶಿನ ಕುಂಕುಮಕ್ಕೆ ಬರುವುದಿಲ್ಲ, ನಾವು ಸತ್ತಮೇಲೆ ನಮಗೆ ಶ್ರಾದ್ಧ ಮಾಡುವವರು ಯಾರು? – ಎಂದು. ಆ ಗೋಳಿನಲ್ಲಿ ಅವಳು ಬಾವಿಗೆ ಬಿದ್ದು ಸಾಯುತ್ತಾಳೆ. ಅಲ್ಲಿಂದ ಮುಂದೆ ಆ ಮಗಳು ಎಲ್ಲಿ ಹೋಗುತ್ತಾಳೋ ತಂದೆಗೆ ಗೊತ್ತಿಲ್ಲ.

ಇತ್ತ ಬ್ರಾಹ್ಮಣ ಕನ್ಯೆಯನ್ನು ಮದುವೆಯಾಗುವೆನೆಂದ ಬೀರಯ್ಯನನ್ನು ತಂದೆ ಹರಳಯ್ಯ ಉಗ್ರಶಿಕ್ಷೆಗೆ ಒಳಪಡಿಸಿದ್ದಾನೆ. ಮಗನನ್ನು ಹೊಡೆದು ಬಡಿದು ಅವನಿಗೆ ಮೈಯೆಲ್ಲಾ ಬಾಸುಂಡೆ ಬರುವಂತೆ ಮಾಡಿದ್ದಾನೆ. ಈ ವಿಷಯ ಇಷ್ಟು ಪ್ರಕೋಪಕ್ಕೆ ಬಂದಿದೆ ಎಂದು ತಿಳಿದು ಅಣ್ಣನವರೇ ಅಲ್ಲಿಗೆ ಓಡಿಹೋಗಿ ಅವರಿಗೆ ಎಷ್ಟು ಸಮಾಧಾನ ಹೇಳಿದರೂ ಹರಳಯ್ಯ ಅವರ ಮಾತು ಕೇಳ.

ಈ ವಿಷಯ ದೊರೆಯ ಕಿವಿಗೆ ತಲುಪಿದಾಗ ಅವನು ರೊಚ್ಚಿಗೆದ್ದಿದ್ದಾನೆ. ವರ್ಣಸಂಕರದ ಭಯ ಅವನನ್ನು ಮೆಟ್ಟಿದೆ. ಪ್ರಜೆಗಳ ಹಾಹಾಕಾರ ತೀರಿಸಲು ಅವನು ಏನಾದರೂ ಕ್ರಮ ತಕ್ಷಣ ಕೈಗೊಳ್ಳಬೇಕು. ಆ ಸಮಯದಲ್ಲಿ ಈ ಸಂಬಂಧವನ್ನು ಉತ್ತೇಜಿಸಿದ ಬಸವಣ್ಣನವರ ಮೇಲೂ ಅವನಿಗೆ ತೀವ್ರ ಅಸಮಾಧಾನವಿದ್ದಿರಬೇಕು. ಆದರೆ ಅವರಿಬ್ಬರ ನಡುವೆ ಏನು ಚರ್ಚೆ ನಡೆಯಿತು ನಮಗೆ ಇಲ್ಲಿ ತಿಳಿಯುವುದಿಲ್ಲ. ಸಮಾಜದ ಹಿತರಕ್ಷಣೆಗಾಗಿ ಬಿಜ್ಜಳ ಈ ಮದುವೆಯನ್ನು ತಪ್ಪಿಸಿದ್ದೇ ಅಲ್ಲದೆ, ಇಂಥ ಯತ್ನಗಳು ಮುಂದೆ ನಡೆಯದಂತೆ ಅಧರ್ಮಿಗಳಿಗೆ ಎಚ್ಚರಿಕೆ ಕೊಡಲೆಂದು ಮಧುವರಸ ಹರಳಯ್ಯ ಇಬ್ಬರಿಗೂ ಕಣ್ಣು ಕೀಳಿಸುತ್ತಾನೆ. ಮಧುವರಸ ಒಂದು ಬಗೆಯ ಧೀರ ಉನ್ಮಾದದಿಂದ ಗಹಗಹಿಸಿ ನಗುತ್ತಾ ದೊರೆಯನ್ನು ಹೀಯಾಳಿಸುತ್ತಾನೆ: "ಈಗಲೀಗ ನೀವೂ ನಾವೂ ಒಂದಾದೆವು, ನಿಮಗೂ ಕಣ್ಣಿಲ್ಲ, ನನಗೂ ಕಣ್ಣಿಲ್ಲ. ವೇದ ಶಾಸ್ತ್ರಗಳು ಇಲ್ಲ ಎನ್ನುವ ಜಾತಿಗಳು ನಿಮಗೆ ಕಾಣುತ್ತಿವೆ. ಜನ ಇದೆ ಎನ್ನುವ ಜಾತಿಗಳು ನನಗೆ ಕಾಣುತ್ತಿಲ್ಲ. ಕುರುಡ ರಾಜ, ಕುರುಡ ಪ್ರಜೆ... ನಾನು ಇನ್ನು ನೋಡಬೇಕಾದ್ದು ಏನೂ ಉಳಿದಿಲ್ಲ. ನಿಮಗೋ ಇನ್ನು ಮುಂದೆ ಏನೂ ಕಾಣುವುದಿಲ್ಲ."

ಬಸವಣ್ಣನವರ ದಾಸೋಹದ ಹುಚ್ಚು ಇನ್ನೂ ಒಂದು ವಿಧದಲ್ಲಿ ರಾಜ್ಯದ ಸುಭದ್ರತೆಗೆ ವಿಪತ್ತು ತಂದಿತು. ಇದನ್ನು ನಾವು ಬಿಜ್ಜಳನ ಕೈಕೆಳಗಿನ ಬನವಾಸಿ ಪ್ರಾಂತದ ಮಾಂಡಲಿಕ ಕಸವಿ ಮಂತ್ರಿಯ ಮಾತುಗಳಿಂದ ತಿಳಿಯುತ್ತೇವೆ. ಬಿಜ್ಜಳ ಮೂರನೆಯ ತೈಲಪನ ಕಲ್ಯಾಣವನ್ನು ವಶಪಡಿಸಿಕೊಂಡು ಚಕ್ರವರ್ತಿಗಳಾದರಷ್ಟೆ. ಆದರೆ ತೈಲಪನ ಕಡೆಯವರನ್ನು ಪೂರ್ತಿ ನಾಶಗೊಳಿಸಿರಲಿಲ್ಲ. ಅವರಲ್ಲಿ ಹಲವರು ಅಲ್ಲಲ್ಲೇ ಇದ್ದು ಮತ್ತೆ ತಮ್ಮ ರಾಜ್ಯವನ್ನು ಪಡೆಯಲು ಹೊಂಚುಹಾಕುತ್ತಿದ್ದರು. 'ಅದಕ್ಕೆ ಬಸವಣ್ಣನರ ಜಂಗಮ ದಾಸೋಹ ಹೆಬ್ಬಾಗಿಲು ತೆರೆದುಹಾಕಿದೆ...ಯಾವನೇ ಬೇಕಾದರೂ ಲಿಂಗ ಧರಿಸಿ ವಿಭೂತಿ ಹಚ್ಚಿಕೊಂಡು ರುದ್ರಾಕ್ಷಿಮಾಲೆ ಇಳಿಬಿಟ್ಟು ಕಲ್ಯಾಣಕ್ಕೆ ನುಗ್ಗಬಹುದು. ಅವರನ್ನು ಗುರುತು ಕೇಳುವ ಹಕ್ಕು, ಶೋಧಿಸುವ ಹಕ್ಕು ಯಾರಿಗೂ ಇಲ್ಲ. ಹಾಗೆಂದು ಬಸವಣ್ಣನ ಆಜ್ಞೆ, ಎಂದರೆ ರಾಜಾಜ್ಞೆ, ಈ ಅವಕಾಶವನ್ನು ಬಳಸಿಕೊಂಡು ಶತ್ರುಗಳ ಗೂಢಚಾರರು, ಕೊನೆಗೆ ಸಾಕ್ಷಾತ್ ಶತ್ರುಗಳೂ ತಂಡತಂಡವಾಗಿ ಕಲ್ಯಾಣದಲ್ಲಿ ಕಲೆಯುತ್ತಿರುವುದು ನಿಮಗೂ ತಿಳಿದಿರಬಹುದು." "ಬಸವಣ್ಣನವರು ತಮಗೇ ತಿಳಿಯದಂತೆ ಸಿಂಹಾಸನವನ್ನು ಅಲುಗಿಸುತ್ತಿದ್ದಾರೆ" ಎಂದೂ ಕಸವಿ ಮಂತ್ರಿ ಹೇಳುತ್ತಾನೆ. ಈ ಸಂದರ್ಭದಲ್ಲಿ ಬಿಜ್ಜಳನ ಕೊಲೆಯಾಯಿತು. ಅವನ ಸಾಮ್ರಾಜ್ಯ ನಾಶವಾಯಿತು. ಯಾವ ಸಾಮ್ರಾಜ್ಯ ತಾನೆ ಶಾಶ್ವತ?

*

ಬಸವಣ್ಣನವರೂ ಹೋದರು. ಆದರೆ ಅವರು ನಡೆಸಿದ ಅನುಭವ ಮಂಟಪದ ನೆನಪು, ಅದರ ಸ್ಫೂರ್ತಿ ಬತ್ತದೆ ಇದೆ. ಅವರು ಕನ್ನಡ ಸಾಹಿತ್ಯದ ಬೆಳವಣಿಗೆಗೆ ಆ ಮೂಲಕ ಭಾರತೀಯ ಸಾಹಿತ್ಯದ ಉನ್ನತಿಗೆ ಮಾಡಿದ ಸೇವೆ ಎಂದಿಗೂ ಮಾಸದು. ನಾವು ಎಷ್ಟೋ ಸಾಹಿತ್ಯ ಸಭೆಗಳಿಗೆ, ಕವಿಸಮ್ಮೇಳನಗಳಿಗೆ ಹೋಗುತ್ತೇವೆ. ಆದರೆ ಅನುಭವ ಮಂಟಪದಂಥ ಗೋಷ್ಠಿಯಲ್ಲಿ ಒಂದು ಗಳಿಗೆ ಕಳೆದಿದ್ದರೂ ನಮ್ಮ ಜೀವನ ಪಾವನವಾಗುತ್ತಿತ್ತು! ಕನ್ನಡದ ಸೌಭಾಗ್ಯ ಎನ್ನಿಸಿದ ಎಂತೆಂಥ ವಚನಕಾರರು, ಕವಿಗಳು ಅಲ್ಲಿದ್ದರು! 'ಉರಿಯೊಳಗಿನ ಕರ್ಪೂರಕೆ ಕರಿ ಉಂಟೆ ಅಯ್ಯಾ' ಎಂದ ಬಸವಣ್ಣನವರು, 'ಅಕ್ಕ ಕೇಳವ್ವ, ನಾನೊಂದು ಕನಸ ಕಂಡೆ...' ಎಂದು ಹಾಡಿದ ಅಕ್ಕಮಹಾದೇವಿ, 'ಶಬ್ದದೊಳಗಿನ ಮೌನ'ವನ್ನು ಕುರಿತು ಚಿಂತಿಸಿದ ಅಲ್ಲಮ ಎಲ್ಲರೂ ಅಲ್ಲಿ ನೆರೆದಿದ್ದಾರೆ ಪ್ರಭುದೇವರ ಅಧ್ಯಕ್ಷತೆಯಲ್ಲಿ. ಅಲ್ಲದೆ ಸಿದ್ಧರಾಮ, ಚೆನ್ನಬಸವಣ್ಣ ಇದ್ದಾರೆ, ಇದು ಕಲ್ಯಾಣದಲ್ಲಿ ನಡೆದ ಸಭೆಯೋ ಅಥವಾ ಶಿವನ ಕೈಲಾಸದಲ್ಲಿ ನಡೆದದ್ದೋ ಎಂದು ಆಶ್ಚರ್ಯಪಡುವಂತಾಗುತ್ತದೆ!

ಅನುಭವಮಂಟಪದಲ್ಲಿ ನಾವು ಕಾಣುವುದು ಕನ್ನಡದ ಅತ್ಯಂತ ಜಾಜ್ವಲ್ಯಮಾನರಾದ ಅಕ್ಕ ಮಹಾದೇವಿ, ಬಸವಣ್ಣ, ಅಲ್ಲಮಪ್ರಭುಗಳು ಮಾತ್ರವೇ ಅಲ್ಲ. ಅಲ್ಲಿ ಜೀವನದ ನಾನಾಕ್ಷೇತ್ರಗಳಿಂದ, ವೃತ್ತಿಗಳಿಂದ ಬಂದ ಜನ ಇದ್ದರು. ಜಾತಿ, ಮತ, ಮೇಲು, ಕೀಳು, ಗಂಡು ಹೆಣ್ಣು, ಸ್ಪೃಶ್ಯರು, ಅಸ್ಪೃಶ್ಯರು–ಎಂಬ ಭೇದವಿಲ್ಲ ಅಲ್ಲಿ. ಎಲ್ಲರಿಗೂ ಅಲ್ಲಿ ಸ್ಥಾನವುಂಟು. ವಚನಕಾರ್ತಿ ಸಂಕವ್ವೆ ಕಲ್ಯಾಣದ ಒಬ್ಬ ಸೂಳೆ. ಅವಳೆನ್ನುತ್ತಾಳೆ: "(ಬಸವಣ್ಣನವರು) ಕಲ್ಯಾಣಕ್ಕೆ ಬಂದ ಮೇಲೆ ಈ ಊರಲ್ಲಿ ಹಾಡು ಚಿಗುರಿತು. ಹೂ ಬಿತ್ತಿತು, ಫಲ ಕೊಟ್ಟಿತು. ಎಷ್ಟು ರೀತಿ ಹಾಡುಗಳು, ಎಷ್ಟು ಸುಲಭ, ಎಷ್ಟು ಮಧುರ. ಹೆಣ್ಣುಮಕ್ಕಳೂ ಹಾಡು ಕಟ್ಟಿದರು – ಧೈರ್ಯವಾಗಿ ಎಲ್ಲಿ ಅಂದರೆ ಅಲ್ಲಿ ಹಾಡಿದರು. ನಾವು ಹೆಣ್ಣುಮಕ್ಕಳು, ಮನುಷ್ಯರು ಅಂತ ಗೊತ್ತಾದದ್ದೇ ಅಣ್ಣನವರು ಈ ಊರಿಗೆ ಬಂದಮೇಲೆ." ಅವಳ ಕಣ್ಣಿಗೆ ಶಿವ ನಿರ್ಲಜ್ಜೇಶ್ವರನಾಗಿ ಕಾಣುತ್ತಾನೆ. ಅದನ್ನೇ ಅಂಕಿತವಾಗಿ ಬಳಸಿ ತನ್ನ ವಚನಗಳನ್ನು ಅನ್ನುತ್ತಾಳೆ.

ಮಹಾದೇವಿ ಅಕ್ಕ ಶಿವನಿಲ್ಲದ ಅರಮನೆಯ ಶುಷ್ಕ ಸಂಸಾರ ಜೀವನಕ್ಕೆ ಬೇಸತ್ತು ಅರಣ್ಯಕ್ಕೆ ಹೋಗಿ ಚಿಲಿಮಿಲಿ ಎಂದೋದುವ ಗಿಳಿಗಳ ಸಂಗ, ಹಾಡುವ ಕೋಗಿಲೆಗಳ ಸಂಗದಲ್ಲಿದ್ದು ಕಡೆಗೆ ಅದೂ ಬೇಸರವಾಗಿ ತನ್ನಂತೆ ಶಿವನನ್ನೇ ಅರಸುವ ಜನರನ್ನು ಸೇರಲು ಅಪೇಕ್ಷಿಸುತ್ತಾಳೆ. ಕಲ್ಯಾಣದಲ್ಲಿ ಅಂಥ ಜನ ಇದ್ದಾರೆಂದು ತಿಳಿದು ಅಲ್ಲಿಗೆ ಹೋಗುತ್ತಾಳೆ. ಅಲ್ಲಿ ಜನ ತಂಡೋಪತಂಡವಾಗಿ ಹೋಗುತ್ತಿದ್ದ ಮನೆಯೊಂದಕ್ಕೆ ತಾನೂ ಹೋಗುತ್ತಾಳೆ. ಅದು ಬಸವಣ್ಣನವರ ಮನೆ. ಬಾಗಿಲಲ್ಲೇ ಈ ನಗ್ನ ಭಕ್ತೆ ನಾನಾ ಪ್ರಶ್ನೆಗಳನ್ನು ಎದುರಿಸಬೇಕಾಗುತ್ತದೆ. ಅವನ್ನೆಲ್ಲ ದಾಟಿ ಒಳಹೋದರೆ ಅಲ್ಲಿ

ಚರ್ಚೆ, ಕೊನೆಮೊದಲಿಲ್ಲದ ಮಾತು. ಅಲ್ಲಿಯೂ ಅವಳ ಬಗ್ಗೆ ಪ್ರಶ್ನೆಗಳು. ಚಮತ್ಕಾರದ ಪ್ರಶ್ನೆಗಳು. "ನಿನಗೆ ದೇಹವಿದೆ, ದೇಹ ಇಲ್ಲದ ದೇವರು ನಿನಗೆ ಹೇಗೆ ಗಂಡನಾದ?" ಚಿಟ್ಟು ಹಿಡಿಸುವ ಮಾತು. ಅಕ್ಕ ಅಲ್ಲಿಂದ ಹೊರಡಲು ಏಳುತ್ತಾಳೆ. ಆಗ ಬಸವಣ್ಣನವರು ಅನ್ನುತ್ತಾರೆ: "ಈ ತಾಯಿಗೆ ದೇಹ ಇದ್ದರೇನು? ಮನಸ್ಸಿನ ಲಜ್ಜೆಯ ನೆನಹನ್ನೇ ಈಕೆ ಸುಟ್ಟುಹಾಕಿದ್ದಾರೆ. ದಿಗಂಬರನನ್ನು ಒಲಿದವರಿಗೆ ಕೌಪೀನದ ಹಂಗುಂಟೆ? ಈಕೆ ನನ್ನನ್ನು ಹೆತ್ತ ತಾಯಿ. ಮಹಾದೇವಿ." ಬಸವಣ್ಣನವರಾಡಿದ ಅಮೃತದಂಥ ಆ ಮಾತನ್ನು ಅಕ್ಕ ಎಂದಿಗೂ ಹೀಗೆ ನೆನೆಯುತ್ತಾಳೆ: "ತಾಯ್ತನವನ್ನೇ ಕಾಣದ ನನ್ನಲ್ಲಿ ಒಮ್ಮೆಗೇ ಮಾತೃಭಾವ ಉಕ್ಕಿ ಹರಿಯುವಂತೆ ಮಾಡಿದ ಮಹಾನುಭಾವರು ಅಣ್ಣನವರು. ಅಕ್ಕರೆಯ ಈ ಭಕ್ತಿಯ ಮಗು ಇಂದಿಗೂ ನನ್ನ ಮನಸ್ಸಿನ ಅಂಗಳದಲ್ಲಿ ಆಡುತ್ತಲೇ ಇದೆ."

ಅಲ್ಲಮಪ್ರಭು ಹೇಳುತ್ತಾರೆ: "ನಾನು ಯಾತ್ರೆ ಕೈಗೊಂಡದ್ದೇ ಕಲ್ಯಾಣದಲ್ಲಿ ಬಸವಣ್ಣನವರ ಸಾಮೀಪ್ಯದಲ್ಲಿ ಇರಬೇಕು ಎಂದು... ಉದ್ದೇಶ ಬಸವಣ್ಣನವರೊಡನೆ ಅನುಭಾವದ ವಿನಿಮಯ. ಆತ್ಮ ಆತ್ಮ ಮಥಿಸಿ ಅನುಭಾವ ಉಕ್ಕುತ್ತದೆ ಎಂಬುದು ನನ್ನ ಅನುಭವ...

"ಬಸವಣ್ಣ ಅಪರೂಪದ ನಿಲವಿನ ಅನುಭಾವಿ. ಪರಶಿವ ಲಿಂಗದಷ್ಟೇ ಶುದ್ಧ ಚೇತನರು. ಅವರನ್ನು ಸೃಷ್ಟಿಸುವಾಗ ಅವರ ಚೇತನದಲ್ಲಿ ಅಹಂಕಾರ ಎನ್ನುವುದನ್ನು ಬೆರಸುವುದನ್ನೇ ಪ್ರಕೃತಿ ಮರೆತಂತೆ ತೋರುತ್ತದೆ. ಅವರನ್ನು ಹುಡುಕಿಕೊಂಡು ಬಂದದ್ದು ಅವರು ಗುರುಗಳ ಗುರು ಎಂದು... ಅವರು ನಮ್ಮನ್ನೇ ಗುರು ಎಂದು ಗೌರವಿಸುತ್ತಾರೆ. ಅವರಿಂದ ಮಾರ್ಗದರ್ಶನ ಪಡೆಯ ಬಂದವರಿಂದ ಮಾರ್ಗದರ್ಶನ ಬಯಸುತ್ತಾರೆ. ಅವರಿಗೆ ನಮಸ್ಕಾರ ಮಾಡಬಂದವರನ್ನು ಕೂರಿಸಿ ಪೂಜಿಸುತ್ತಾರೆ. ಅವರಿಗೆ ತಮ್ಮದಾದ ದೇಹವಿಲ್ಲ, ಮನಸ್ಸಿಲ್ಲ, ತಮ್ಮದು ಎನ್ನಬಹುದಾದ ಒಡೆದ ಓಡು ಕೂಡ ಇಲ್ಲ. ದೇಹವನ್ನು ಗುರುವಿಗೆ, ಮನಸ್ಸನ್ನು ಭಗವಂತನಿಗೆ, ಅವರ ಸರ್ವಸ್ವವನ್ನೂ ಭಕ್ತಕೋಟಿಗೆ ಎಂದೋ ಅರ್ಪಿಸಿಬಿಟ್ಟಿದ್ದಾರೆ. ಮೂಲಾಹಂಕಾರದ ಬೇರಿನ ಎಳೆ ಕೂಡ ಇಲ್ಲದ ಇವರನ್ನು ಯಾವುದು ಈ ನೆಲಕ್ಕೆ ಅಂಟಿಸಿ ನಿಲ್ಲಿಸಿದೆ ತಿಳಿಯುತ್ತಿಲ್ಲ. ಅವರೊಂದು ಬೆಳಕಿನ ಕಾಯ. ಅದು ಇಲ್ಲಿಗೆ-ಅಲ್ಲಿಗೆ ಇಹದಿಂದ ಪರಕ್ಕೆ, ಅಲ್ಲಿಂದ ಇಲ್ಲಿಗೆ ಲಾಳಿಯಾಡುತ್ತ ಅಧ್ಯಾತ್ಮದ ಪೀತಾಂಬರವನ್ನು ನೇಯುತ್ತಿದೆ. ಅವರು ಇಲ್ಲಿಯೂ ಸಲ್ಲುತ್ತಾರೆ, ಅಲ್ಲಿಯೂ ಸಲ್ಲುತ್ತಾರೆ."

ಕಡೆಯಲ್ಲಿ ಅಲ್ಲಮರು ನಮ್ಮ ಮುಂದೆ ಒಂದು ಅದ್ಭುತ ಪ್ರತಿಮೆಯನ್ನು ಕಲ್ಪಿಸುತ್ತಾರೆ. ಬಸವಣ್ಣನವರು ಆನೆಯೊಂದಕ್ಕೆ ಸ್ನಾನ ಮಾಡಿಸುತ್ತಿದ್ದಾರೆ. ಇವರು ಎಷ್ಟು ಶ್ರದ್ಧೆಯಿಂದ, ಪ್ರೀತಿಯಿಂದ ಅದರ ಮೈತೊಳೆದರೂ ಇವರು ಒಂದು ಕ್ಷಣ ದೃಷ್ಟಿ ಅದರ ಮೇಲಿಂದ ತೆಗೆದರೂ ಅದು ಮತ್ತೆ ತಲೆಯ ಮೇಲೆ ಮಣ್ಣು ಸುರಿದುಕೊಳ್ಳುತ್ತಿದೆ. ಇವರು ಮತ್ತೆ

ತೊಳೆಯುವುದು, ಅದು ಮತ್ತೆ ಮಣ್ಣು ಸುರಿದುಕೊಳ್ಳುವುದು ಹೀಗೇ ನಡೆದು ಕಡೆಗೆ ಆ ಮದ್ದಾನೆಗೆ ರೋಷವುಕ್ಕಿ ತನ್ನ ಕಾಲಿಗೆ ಕಟ್ಟಿದ ಸರಪಳಿಗಳನ್ನೆಲ್ಲ ಝಾಡಿಸಿ ಕಳಚಿ ಬಸವಣ್ಣನವರನ್ನು ಸೊಂಡಿಲಿನಿಂದ ಎತ್ತಿ ಆಕಾಶಕ್ಕೆ ಎಸೆಯುತ್ತದೆ. ಬೆರಗೆಂದರೆ, ಬಸವಣ್ಣನವರು ಅಲ್ಲಿಂದ ಮತ್ತೆ ಧರೆಗೆ ಇಳಿಯುವುದೇ ಇಲ್ಲ!



# ಅರಿವನರಿವ ಹಾದಿಗೆ ಹೆಣ್ಣೆಂಬ ಹೆಸರಿಹುದೇ ಅಯ್ಯಾ?

–ಮೀರಾ ಪಿ. ಆರ್.

ಅರಿಯುವ ಬಯಕೆ ಮನುಷ್ಯನ ಮೂಲ ಗುಣಗಳಲ್ಲಿ ಒಂದು. ತೀವ್ರ ಕುತೂಹಲಿಯಾದ ಜೀವಕ್ಕೆ ಭೌತಿಕ ಲೋಕವನ್ನು ಕುರಿತಷ್ಟೇ ಅಲ್ಲ ಅಮೂರ್ತ ಪಾರಮಾರ್ಥವನ್ನೂ ಅರಿಯುವ ಹಂಬಲ. ಅಲ್ಲಲ್ಲಿನ ಕಾಲ, ದೇಶ, ಸಂಸ್ಕೃತಿ-ಪರಂಪರೆಯ ನಂಬಿಕೆಗಳು, ಸಾಮಾಜಿಕ ಪರಿಸ್ಥಿತಿಗಳು, ವೈಯಕ್ತಿಕ ಅನುಭವಗಳು ಇದೆಲ್ಲದರ ಜೊತೆಗೆ ಪ್ರಕೃತಿ ಮತ್ತು ಪರಿಸರ ಒದಗಿಸಿಕೊಡುವ ದೈಹಿಕ ಸಂವೇದನೆಗಳು-ಇವೆಲ್ಲದರ ಚೌಕಟ್ಟಿನೊಳಗೆ ಸಿಗುವ, ಸಿಗಬಹುದಾದ ಅಥವಾ ಸಿಗಲಾರದಾದ ಇಹ-ಪರಗಳೆರಡಕ್ಕೂ ಸಂಬಂಧಿಸಿದ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕುತ್ತಾ ಜೀವವೊಂದರ ಹುಡುಕಾಟ ಪೀಳಿಗೆಯಿಂದ ಪೀಳಿಗೆಗೆ ಈ ಅರಿವಿನ ಹಂಬಲವನ್ನು ದಾಟಿಸುತ್ತಲೇ ಉಳಿಯುತ್ತದೆ. ಈ ಹುಡುಕಾಟಕ್ಕಿರುವ ಹಲವು ಮಾರ್ಗಗಳಲ್ಲಿ ಭಕ್ತಿಯೂ ಒಂದು. ಈ ಭಕ್ತಿ ಮಾರ್ಗದ ಒಂದು ಕವಲಾದ ಮಧುರ ಭಕ್ತಿಯ ಕುರಿತು ಈ ಹೊತ್ತು ಚಿಂತಿಸುತ್ತಾ 'ಶರಣ ಸತಿ, ಲಿಂಗ ಪತಿ' ಭಾವದ ಕೆಲವು ವಚನಗಳನ್ನು ಅವಲೋಕಿಸುತ್ತಿರು-ವಾಗ ನನ್ನ ಚೌಕಟ್ಟಿನೊಳಗೆ ನನಗೆ ಹೊಳೆಯುತ್ತಿರುವ ಕೆಲವು ಹೊಳಹುಗಳನ್ನು ನಿಮ್ಮೊಂದಿಗೆ ಹಂಚಿಕೊಳ್ಳುವ ಆಸೆ.

ಭಕ್ತಿಯ ಸ್ವರೂಪವನ್ನು ತಿಳಿಯುವುದು ಅಷ್ಟು ಸುಲಭವಲ್ಲ. ಆಯಾ ಕಾಲ, ದೇಶ, ಸಾಮಾಜಿಕ ಸಂದರ್ಭಗಳಲ್ಲಿನ ಸಾಮುದಾಯಿಕ ಮನೋಭಾವಗಳು ಜೊತೆಗೇ ಇವೆಲ್ಲದರ ಪ್ರಭಾವದಿಂದ ಹೊರತಾಗಲೂ ಬಲ್ಲ ವೈಯಕ್ತಿಕ ಅನುಭವಗಳೂ ಸೇರಿಯೇ ಅಲ್ಲಲ್ಲಿನ ಅಂದಂದಿನ ಭಕ್ತಿಯ ಸ್ವರೂಪವನ್ನು ವ್ಯಾಖ್ಯಾನಿಸುತ್ತಾ ವಿಸ್ತರಿಸುತ್ತಾ ಬಂದಿದೆ.

ಭಾರತೀಯ ಸಂದರ್ಭದಲ್ಲಿ ನೋಡುವುದಾದರೆ, ವೇದಕಾಲದಲ್ಲಿ ಸಣ್ಣ ಸಣ್ಣ ಸಮುದಾಯಗಳಲ್ಲಿ, ಸ್ವತಂತ್ರ ರಾಜ್ಯಗಳ, ಪ್ರಾಂತ್ಯಗಳ ಸಂರಚನೆಯಲ್ಲಿ ಬದುಕುತ್ತಿದ್ದ ಅಂದಿನ ಜನ ತಮ್ಮ ಗುಂಪಿನ ನಾಯಕನಲ್ಲಿ ತಮಗಿದ್ದ ನಿಕಟ ಸಂಬಂಧವನ್ನೇ ತಮ್ಮ ದೈವದ ಕಲ್ಪನೆಗೂ ಆರೋಪಿಸಿ, ದೈವ ಅಥವಾ ಪ್ರಕೃತಿಯ ಜೊತೆಗೆ ಸಖ್ಯಭಾವದ ಭಕ್ತಿ ಹೊಂದಿದ್ದರು ಎಂಬುವುದು ಒಂದು ವಾದ. ಇದರೊಂದಿಗೆ, ವರ್ಣ ವಿಭಜನೆ

ಎಂಬುದು ಸಾಮಾನ್ಯವಾಗಿ ವೃತ್ತಿ ವಿಭಜನೆಯಷ್ಟೇ ಆಗಿದ್ದ ಪರಿಸ್ಥಿತಿಯ ಹಿನ್ನೆಲೆಯೇ ದೈವದ ಕುರಿತಂತೆಯೂ ಇಂಥದ್ದೊಂದು ಮನೋಭಾವ ಮೂಡಲು ಕಾರಣವಾಗಿರ-ಬಹುದು.

ಕಾಲಕ್ರಮೇಣ ಸಣ್ಣ ಸಣ್ಣ ರಾಜ್ಯಗಳಳಿದು, ದೊಡ್ಡ ದೊಡ್ಡ ಸಾಮ್ರಾಜ್ಯಶಾಹಿ ಆಡಳಿತ ವ್ಯವಸ್ಥೆಯು ಬಂದಂತೆಲ್ಲ ರಾಜನಿಗೂ ಪ್ರಜೆಗಳಿಗೂ ನಡುವೆ ಅಂತಸ್ತು ಮತ್ತು ಮನೋಭಾವಗಳಲ್ಲಿ ಅಂತರವು ಹೆಚ್ಚಿ, ಅದು ಒಡೆಯ ಮತ್ತು ಸೇವಕ ಎಂಬ ಭಾವವು ಮೂಡಲು ಮೊದಲಾಗಿರಬಹುದು. ಬದಲಾದ ಈ ಸಮಾಜ ವ್ಯವಸ್ಥೆ ಮತ್ತು ಸಂಬಂಧಗಳ ಸಂಕೀರ್ಣತೆಯೇ ಮಾನವ ದೈವದ ಸಂಬಂಧದಲ್ಲೂ ಪ್ರತಿಬಿಂಬಿತವಾಗಿ ಅದು 'ಸಂಪೂರ್ಣ ಶರಣಾಗತಿ' ಎಂಬುದೇ ಭಕ್ತಿ ಎಂಬ ಹೊಸ ಅರ್ಥವೊಂದನ್ನು ಭಕ್ತಿಗೆ ಆರೋಪಿಸಿದ ಹಾಗೆ ಕಾಣುವುದುಂಟು. "ಅನ್ಯತಾ ಶರಣಂ ನಾಸ್ತಿ. ತ್ವಮೇವ ಶರಣಂ ಮಮ" ಎನ್ನುವ ಮನೋಭಾವ ಈ ಪ್ರಪತ್ತಿ ಮಾರ್ಗದ್ದು.

ವಾಙ್ಮಯಗಳ ಆಧಾರದಿಂದ ನೋಡುವುದಾದರೆ, ವೇದ ಉಪನಿಷತ್ತುಗಳಿಂದ ಮಹಾಭಾರತ, ಭಾಗವತ, ಭಗವದ್ಗೀತೆಗೆ ಹೊರಳಿಕೊಂಡ ಕಾಲದಲ್ಲಾದ ಸಾಮಾಜಿಕ ಬದಲಾವಣೆಗಳು ಮತ್ತು ಅದು ನಿರ್ಮಿಸಿದ ಮನೋಭಾವಕ್ಕನುಗುಣವಾಗಿ 'ಭಕ್ತಿ'ಯ ಸ್ವರೂಪಕ್ಕೂ ಹೀಗೆ ಹಲವು ಬಣ್ಣಗಳು ಬಂದಿರಬಹುದು. ಹಾಗೆ ಸ್ವರೂಪವು ಬದಲಾಗುತ್ತಾ ಬಂದರೂ 'ಭಕ್ತಿ' ಎಂದರೆ ತನಗಿಂತ ದೊಡ್ಡದಾದ ವಿಶ್ವ ಶಕ್ತಿಯೊಂದರಲ್ಲಿ ತಾನು ಹೊಂದಬಹುದಾದ ಒಂದು ಸಂಬಂಧವನ್ನು ಉದ್ದೀಪಿಸುವ ಭಾವ ಎನ್ನುವುದನ್ನು ಬಹುಶಃ ಎಲ್ಲ ಕಾಲ ದೇಶಗಳಲ್ಲೂ ಎಲ್ಲರೂ ಒಪ್ಪಿಕೊಂಡ ಹಾಗೆ ತೋರುತ್ತದೆ.

ಭಕ್ತಿಯನ್ನು ಒಂಬತ್ತು ವಿಧದಲ್ಲಿ ಆಚರಿಸಬಹುದಾದ ಒಂದು ಪರಿಕಲ್ಪನೆ ಭಾಗವತದ ಕಾಲಕ್ಕೆ ವಿಕಸಿತವಾಗಿ ಅದನ್ನು ನವ ವಿಧ ಭಕ್ತಿ ಎಂದೇ ಕರೆಯಲಾಯಿತು. ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮಾರ್ಪಣ ಎಂಬ ಅಹಂಕಾರ ನಿರಸನದ ಈ ಒಂಬತ್ತು ಮಾರ್ಗಗಳಲ್ಲೂ ಸಾಗಿ ಅದು ಒದಗಿಸುವ ಮಾನಸಿಕ ಸಂಸ್ಕಾರದಿಂದ ದೈವವನ್ನು ತಲುಪಬಹುದಾದ ಸಾಧ್ಯತೆ ಇದು. ಇಲ್ಲಿ **'ಆತ್ಮಾರ್ಪಣ' ಎನ್ನುವುದು ಅನುರಾಗ ಅಥವಾ ಮಧುರ ಭಕ್ತಿಯ ಮಾರ್ಗ ಮತ್ತು** ಕೃಷ್ಣನಲ್ಲಿ ರಾಧೆಗಿದ್ದಿದ್ದು ಇಂತಹ ಭಕ್ತಿ ಎಂದು ಹೇಳಲಾಗಿದೆ. ಮಧುರ ಭಕ್ತಿ ಎಂದರೆ ವಿಶ್ವ ಶಕ್ತಿಯಿಂದ ಅಥವಾ ದೈವದಿಂದ ಬೇರೆ ಯಾವ ಪ್ರಯೋಜನವನ್ನೂ ಬಯಸದೆ ಅದರೊಂದಿಗೆ ಹೊಂದಬಹುದಾದ ಅನುರಾಗದಂತಹ, ಪ್ರೇಮದಂತಹ, ರತಿಯ ಬಯಕೆಯೂ ಇರಬಹುದಾದಂತಹ ಒಂದು ಭಾವ ಎಂದು ಅಂದುಕೊಳ್ಳಬಹುದೇನೋ. ನಾವಿಬ್ಬರೂ ಒಂದೇ ಎಂಬ ಅವಿನಾಭಾವವನ್ನು ದೈವದೊಂದಿಗೆ ಸಹಜವಾಗಿ ಹೊಂದಿಬಿಡುವುದು ಮಧುರ ಭಕ್ತಿಯ ಕನಸು. ಕೃಷ್ಣನಲ್ಲಿ ರಾಧೆಗೆ ಇಂತಹ ಆಗ್ರಹವಿಲ್ಲದ

ಪ್ರೀತಿ ಇದ್ದಿದ್ದನ್ನು ಭಾಗವತ ಹೇಳುತ್ತದೆ. ವಿರಹದಲ್ಲಿ ಬೆಂದ ಮೇಲೂ ನನ್ನಲ್ಲೇ ನೀನಿದ್ದ ಮೇಲೆ ವಿರಹವೆಲ್ಲಿಯದು ಎಂದು ಸುಮ್ಮನಿದ್ದುಬಿಡುವ ನಿರಾಳತೆಯೂ ಉಳಿದ ಗೋಪಿಕೆಯರಿಗೆ ಸಾಧ್ಯವಾಗದೆ ರಾಧೆಗಷ್ಟೇ ಸಾಧ್ಯವಾಗಿದ್ದೂ ಈ ಅನುರಾಗದ ಕಾರಣಕ್ಕೇ ಇರಬಹುದು. ಶರಣ ಸತಿ–ಲಿಂಗ ಪತಿ ಭಾವದ ಹಿನ್ನೆಲೆಯಲ್ಲಿ ರಚಿತವಾದ ವಚನಗಳಲ್ಲಿ ನಮಗೆ ಕಾಣಿಸುವುದು ಇಂತಹ ಮಧುರ ಭಕ್ತಿ.

ಮಧುರ ಭಕ್ತಿ ಕೇವಲ ಭಾರತೀಯ ಭಕ್ತಿ ಪರಂಪರೆಯ ಸಾಹಿತ್ಯದಲ್ಲಿ ಅಷ್ಟೇ ಅಲ್ಲ, ಯೂರೋಪಿಯನ್ ಭಕ್ತಿ ಕಾವ್ಯದ ಮೆಟಫಿಸಿಕಲ್ ಪರಂಪರೆ, ಸೂಫಿ ಕಾವ್ಯ ಮತ್ತು ಜಾನಪದ ಸಾಹಿತ್ಯವೇ ಮುಂತಾಗಿ ವಿಶ್ವದ ಹಲವೆಡೆ ಇದು ಅಲ್ಲಲ್ಲಿ ಕಾಣಿಸಿಕೊಂಡಿದೆ. ಈ ಎಲ್ಲೆಡೆಯೂ ಮಧುರ ಭಕ್ತಿಯ ಈ ಭಾವವನ್ನು ಪ್ರೇಮ, ವಿರಹ, ಲೈಂಗಿಕ ವಾಂಛೆ, ಅವಿನಾಭಾವ ಸಂಬಂಧ ಇತ್ಯಾದಿಗಳಿಗೆ ಸಂಬಂಧಿಸಿದ ಪ್ರತಿಮೆಗಳನ್ನು ಬಳಸಿ ಅಭಿವ್ಯಕ್ತಿಸಲಾಗಿದೆ. ಈ ಅಭಿವ್ಯಕ್ತಿಯಲ್ಲಿ ಎದ್ದು ಕಾಣುವ ಒಂದು ಸಾಮಾನ್ಯ ಅಂಶವೆಂದರೆ ಇಲ್ಲಿ ಭಕ್ತ (ಕವಿ) 'ಹೆಣ್ಣಾಗುವುದು' ಮತ್ತು ದೈವ 'ಗಂಡಾಗುವುದು'. ಎಲ್ಲೋ ಕೆಲವೊಮ್ಮೆ ಇಲ್ಲಿ ಪಾತ್ರಗಳು ತಮ್ಮ ಸ್ಥಾನ ಬದಲಿಸಿಕೊಂಡರೂ ಲೈಂಗಿಕ ಪ್ರತಿಮೆಗಳನ್ನು ಬಳಸುವಾಗ ಮಾತ್ರ ಸಾಮಾನ್ಯವಾಗಿ ಭಕ್ತನು ಹೆಣ್ಣಾಗಿಯೇ ಉಳಿಯುತ್ತಾನೆ/ಳೆ. ಮೇಲ್ನೋಟಕ್ಕೆ ಇದು ಎಲ್ಲ ಕಾಲಗಳಲ್ಲೂ ಎಲ್ಲೆಡೆಯೂ ಸಾಮಾನ್ಯವಾಗಿ ಕಂಡುಬರುವ ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯ 'ಗಂಡಿನ ಮೇಲ್ಮೆ ಮತ್ತು ಹೆಣ್ಣಿನ ಅವಲಂಬನೆ'ಯ ಹಿನ್ನೆಲೆಯಲ್ಲಿ ದೈವವನ್ನು ಒಡೆಯ (ಗಂಡು) ಎಂದು ಭಾವಿಸಿ ಭಕ್ತನನ್ನು ಆ ಒಡೆಯನ ಸೇವಕ, ದಾಸ (ಹೆಣ್ಣು) ಎಂದು ಭಾವಿಸುವ ಮನೋಭಾವವನ್ನೇ ಪ್ರತಿಬಿಂಬಿಸುತ್ತದೆ ಎನ್ನುವುದು ಸಾಮಾನ್ಯವಾಗಿ ಪ್ರಚಲಿತವಾದ ಅಭಿಪ್ರಾಯ. ಆದರೆ ಈ ತರತಮ ಭೇದವೊಂದೇ ಮಧುರ ಭಕ್ತಿ ಸಾಹಿತ್ಯದಲ್ಲಿ ಕಾಣುವ ಹೆಣ್ಣು–ಗಂಡಿನ ಪಾತ್ರಗಳಿಗೆ ಭೂಮಿಕೆಯಾಗಿರುವುದು ಅನುಮಾನ. ಏಕೆಂದರೆ, ನಾವಿಬ್ಬರೂ ಒಂದೇ ಅಂದುಕೊಂಡುಬಿಡುವ ಸುಂದರವಾದ ಅವಿನಾಭಾವಕ್ಕೇರಿದ ಎರಡು ಜೀವಗಳ (ಅಥವಾ ಜೀವ ಮತ್ತು ದೈವದ) ನಡುವಿನ ಸಂಬಂಧದಲ್ಲಿ ಈ ಮೇಲು ಕೀಳು ಎಂಬ ಭಾವಕ್ಕೆ ಅವಕಾಶವಾದರೂ ಎಲ್ಲಿ ಸಾಧ್ಯ! ಆದರೂ ಈ ವಾದವನ್ನು ಸಂಪೂರ್ಣವಾಗಿ ನಿರಾಕರಿಸುವುದು ಸಾಧುವಾಗದು. ಈ ಮೊದಲೇ ನೋಡಿದಂತೆ ಸಾಮಾಜಿಕ ಮನೋಭಾವವು ಭಕ್ತಿಯ ಸ್ವರೂಪವನ್ನೂ ಕಾಲಕ್ಕೆ ತಕ್ಕಂತೆ ವ್ಯಾಖ್ಯಾನಿಸುತ್ತಲೇ ಬಂದಿದೆ. ಪುರುಷ ಪ್ರಧಾನ ವ್ಯವಸ್ಥೆಯ ದುರದೃಷ್ಟಗಳಲ್ಲೊಂದಾದ ಈ ವ್ಯವಸ್ಥಿತ ತರತಮ ಭೇದವೇ ಮಧುರ ಭಕ್ತಿಯಲ್ಲಿ ಕಾಣುವ ಭಕ್ತ (ಹೆಣ್ಣು) ಮತ್ತು ದೈವ (ಗಂಡು)ದ ಸಂಬಂಧದಲ್ಲಿ ಅಲ್ಲಲ್ಲಿ ಪ್ರತಿಬಿಂಬಿತವಾಗಿದ್ದಿರಬಹುದಾದರೂ ಇದಕ್ಕಿಂತಲೂ ಭಿನ್ನವಾದ ಅಥವಾ ಇದಕ್ಕೆ ವಿರುದ್ಧ ಎನ್ನಬಹುದಾದ ಒಂದು ಮನೋಭಾವ ಅಥವಾ ಅಭಿಲಾಷೆ ನನಗೆ ಮಧುರ ಭಕ್ತಿಯ ಸಾಹಿತ್ಯದಲ್ಲಿ ಮತ್ತೆ ಮತ್ತೆ ಕಾಣಿಸಿದೆ. ಈ

ಮಾರ್ಗದ 'ಶರಣ ಸತಿ–ಲಿಂಗ ಪತಿ' ಭಾವದ ಹಿನ್ನೆಲೆಯಲ್ಲಿ ರಚಿತಗೊಂಡ ಹಲವು ರಚನೆಗಳಲ್ಲಿ ಕೆಲವೇ ಕೆಲವು ವಚನಗಳನ್ನು ಪರಿಶೀಲಿಸುತ್ತಾ ನನ್ನ ಈ ಹೊಳಹನ್ನು ನಿಮ್ಮೊಡನೆ ಹಂಚಿಕೊಳ್ಳುವೆ.

**'ಹೆಣ್ಣು ಹೆಣ್ಣಾದಡೆ ಗಂಡಿನ ಸೂತಕ**
**ಗಂಡು ಗಂಡಾದಡೆ ಹೆಣ್ಣಿನ ಸೂತಕ**
**ಮನದ ಸೂತಕ ಹಿಂಗಿದಡೆ**
**ತನುವಿನ ಸೂತಕಕ್ಕೆ ತೆರಹುಂಟೆ**
**ಅಯ್ಯಾ**
**ಮೊದಲಿಲ್ಲದ ಸೂತಕಕ್ಕೆ ಮರುಳಾಯಿತ್ತು ಜಗವೆಲ್ಲ**
**ಎನ್ನ ದೇವ ಚೆನ್ನಮಲ್ಲಿಕಾರ್ಜುನನೆಂಬ ಗರುವಂಗೆ**
**ಜಗವೆಲ್ಲ ಹೆಣ್ಣು ನೋಡಾ ಅಯ್ಯಾ'** (ಅಕ್ಕ ಮಹಾದೇವಿ)

ಮನದ ಸೂತಕ ಇಲ್ಲವಾದಲ್ಲಿ ತನುವಿನ ಸೂತಕಕ್ಕೆ ಅವಕಾಶವೆಲ್ಲಿದೆ ಎಂದು ಕೇಳುತ್ತಲೇ ಅಕ್ಕ ಮಹಾದೇವಿ ಇಡೀ ಜಗವನ್ನು ಹೆಣ್ಣಾಗಿಸಿಯೂ ಚೆನ್ನ ಮಲ್ಲಿಕಾರ್ಜುನನನ್ನು ಗಂಡಾಗಿಸಿಯೂ ನೋಡುವ ಈ ಚೋದ್ಯ ಇಲ್ಲಿದೆ. ದೈವವೆಂಬ ವಿಶ್ವಶಕ್ತಿ ಗಂಡಾಗಿ, ಆ ಗಂಡಿಗೆ ತನುಮನದ ಸೂತಕ ಕಳೆದುಕೊಂಡ ಈ ಜಗವೆಲ್ಲ ಹೆಣ್ಣಾಗಿ ಮತ್ತೆ ಈ ಗಂಡು ಹೆಣ್ಣುಗಳಿಬ್ಬರೂ ಒಂದಾಗುವುದು ಅಂದರೆ ಏನಿರಬಹುದು? ನನಗನ್ನಿಸುವಂತೆ, ತಾನು ಗಂಡು ಅಥವಾ ಹೆಣ್ಣು ಎನ್ನುವ ಪ್ರಕೃತಿ ಒದಗಿಸಿಕೊಟ್ಟ ದೈಹಿಕ ಮಿತಿಯ ಮನೋಭಾವದಿಂದ ಕಳಚಿಕೊಳ್ಳಲು ಸಾಧ್ಯವಾಗುವುದು 'ಹೆಣ್ಣು' ಎನ್ನುವ ಮನೋಸ್ಥಿತಿಯನ್ನು ಮುಟ್ಟಿದಾಗ ಮಾತ್ರ ಎಂದಿರಬೇಕು. ಆಗ ಮಾತ್ರ ಚೆನ್ನಮಲ್ಲಿಕಾರ್ಜುನನನ್ನು ಮುಟ್ಟುವುದು ಸಾಧ್ಯ ಎಂದಿರಬೇಕು. 'ಹೆಣ್ಣು' ಎನ್ನುವುದು ಕೇವಲ ದೇಹಕ್ಕೆ ಸಂಬಂಧಿಸಿದ್ದಲ್ಲ, ಅದೊಂದು ಮನಃಸ್ಥಿತಿ ಮತ್ತು ಹೆಣ್ಣು ದೇಹದಲ್ಲಿ ಹುಟ್ಟಿದ ಮಾತ್ರಕ್ಕೆ 'ಹೆಣ್ಣು' ಮನಸ್ಥಿತಿ ಇರುವುದು ಅಥವಾ ಗಂಡು ದೇಹದಲ್ಲಿ ಹುಟ್ಟಿದ ಮಾತ್ರಕ್ಕೆ 'ಹೆಣ್ಣು' ಮನಃಸ್ಥಿತಿ ಇಲ್ಲದಿರುವುದು – ಇವೆರಡೂ ಸುಳ್ಳು. ದೇಹಭಾವವನ್ನು ಮೀರಿದ ಗಂಡು ಹೆಣ್ಣುಗಳಿಗೆ ಹೀಗೆ ನಿಜದಲ್ಲಿ **'ಹೆಣ್ಣಾಗಿ'** ದೈವವನ್ನು **'ಹೊಂದುವ'** ಸಾಧ್ಯತೆ ಇದೆ ಎಂದಾಯಿತಲ್ಲವೆ? ದೈವವನ್ನು ತಲುಪುವ, ಹೊಂದುವ ಮನೋಭಾವ 'ಹೆಣ್ಣಾಗಿಯೇ' ಯಾಕೆ ಇರಬೇಕು ಎಂಬ ಪ್ರಶ್ನೆಗೆ ಉತ್ತರ ನನಗೆ ಸಿಕ್ಕಿದ್ದು ಈ ಮಾದರಿಯ ಕಾವ್ಯಗಳಲ್ಲಿ ಮತ್ತೆ ಮತ್ತೆ ಎದ್ದು ಕಾಣಿಸುವ ಲೈಂಗಿಕ ಪ್ರತಿಮೆಗಳಲ್ಲಿ.

**'........**
**ಎಲ್ಲರ ಗಂಡಂದಿರಿಗೆ ಬೀಜವುಂಟು**
**ಎನ್ನ ಗಂಡಂಗೆ ಅಂಡದ ಬೀಜವಿಲ್ಲ**

**ಎಲ್ಲರ ಗಂಡಂದಿರು ಮೇಲೆ**
**ಎನ್ನ ಗಂಡ ಕೆಳಗೆ ನಾ ಮೇಲೆ**
**ಕದಿರರೆಮ್ಮಿಯೊಡೆಯ ಗುಮ್ಮೇಶ್ವರಾ'** (ಕದಿರ ರೆಮ್ಮವ್ವೆ)

ಅಂಡದಲ್ಲಿ ಬೀಜವಿರುವ ಗಂಡುಗಳ ಮೇಲಾಟದಂತಲ್ಲ ಈ ಕೂಟ. ಸಿದ್ಧ ಮಾದರಿಯ ಪಾತ್ರಗಳು, ವರ್ತನೆಗಳು ಇಲ್ಲಿಲ್ಲ.

**'ನಲ್ಲನ ಕೂಡುವ ಸುಖಭೋಗದ್ರವ್ಯವನೆಲ್ಲಿಂದಾ ತಪ್ಪೆನು**
**ಹೇಳಾ ಕೆಳದಿ**
**ನಲ್ಲನ ಬೇಡಲು ನಾಚಿಕೆ ಎನಗೆ**
**ಮತ್ತೆಲ್ಲಿಯು ನಿಲ್ಲೆನು**
**ಕೂಡುವ ಶಕ್ತಿಯ ತಾನರಿದಿಹನು**
**ಕೇಳಾ ಕೆಳದಿ**
**ಹೆಣ್ಣು ಹೆಣ್ಣ ಕೂಡುವ ಸುಖವ ಮಣ್ಣಿನಲ್ಲಿ ನೆರಹುವೆನು**
**ಉರಿಲಿಂಗದೇವನ ಕೂಡುವೆನು'** (ಉರಿಲಿಂಗದೇವ)

ಉರಿಲಿಂಗ ದೇವನ ಈ ವಚನದಲ್ಲಿ ಬರುವ ಈ 'ಕೂಡುವ ಶಕ್ತಿಯ ತಾನರಿದಿಹನು' ಎಂಬ ಮಾತನ್ನು ಒಮ್ಮೆ ಗಮನಿಸಿ. ಉರಿಲಿಂಗದೇವನೆಂಬ ದೈವವನ್ನು ಸೇರಲು ಗಂಡು ದೇಹದ ಈ ಭಕ್ತ ಕವಿಗೆ ಹೆಣ್ಣಾಗುವುದೊಂದೇ ಮಾರ್ಗ. ಏಕೆಂದರೆ ದೈವಕ್ಕೆ ಹೆಣ್ಣಿನ ಈ 'ಕೂಡುವ ಶಕ್ತಿ' ಅಪಾರವಾದದ್ದು ಎಂಬ ಅರಿವಿದೆ ಮತ್ತು ಇದರ ಜೊತೆಗೇ ಮರ್ತ್ಯದ ಗಂಡಿನ ಈ 'ಕೂಡುವ ಶಕ್ತಿ'ಗೆ ಮಿತಿ ಇದೆ ಎಂಬುದರ ಅರಿವೂ ಇದೆ!

ಸ್ತ್ರೀ ಮತ್ತು ಪುರುಷ ದೇಹಗಳಲ್ಲಿ ಇರುವ ಕೆಲವು ಮೂಲಭೂತ ವ್ಯತ್ಯಾಸಗಳಿಂದಾಗಿ ಇವರಿಬ್ಬರ ಲೈಂಗಿಕ ಶಕ್ತಿ ಸಾಮರ್ಥ್ಯದಲ್ಲೂ ಕೆಲವು ವ್ಯತ್ಯಾಸಗಳುಂಟು. ಹಾಗೆ ನೋಡಿದರೆ ರತಿಯನ್ನು ಹೊಂದುವ ಇಚ್ಛೆಯನ್ನು ವ್ಯಕ್ತಪಡಿಸುವುದರಲ್ಲಿ ಪುರುಷನು ತೋರುವ ಉತ್ಸಾಹವು ಹೆಚ್ಚು ಎನ್ನುವ ಹಾಗೆ ಮೇಲ್ನೋಟಕ್ಕೆ ಕಂಡುಬಂದರೂ ಕಾಲ, ದೇಶ ಮತ್ತು ಅಲ್ಲಲ್ಲಿನ ಸಾಮಾಜಿಕ ವಿಧಿ ನಿಷೇಧಗಳ ಪ್ರಭಾವದಿಂದ ಮಾತ್ರ ಕಾಣಿಸುವ ಪರಿಸ್ಥಿತಿ ಇದು ಎಂಬುದು ಆ ಪರಿಸರ ಪರಿಸ್ಥಿತಿಗಳ ವ್ಯತ್ಯಾಸ ಮಾತ್ರದಿಂದ ಕಾಣಿಸುವ ಬದಲಾವಣೆಗಳಿಂದ ಸುಲಭವಾಗಿ ತಿಳಿಯುತ್ತದೆ. ಆದರೆ ಮೈ ಮನಸ್ಸುಗಳೆರಡೂ ಒಂದಾಗಿ ನಡೆಯುವ ಲೈಂಗಿಕ ಕ್ರಿಯೆಯಲ್ಲಿ ಅತಿ ಮುಖ್ಯವಾದ ಮುನ್ನಲಿವಿನ ಅವಧಿಯಲ್ಲಿ ಹೆಚ್ಚು ಹೊತ್ತು ನಿಲ್ಲಬಲ್ಲ, ಒಂದೇ ಮಿಲನದಲ್ಲಿ ಹಲವು ಬಾರಿ ಸ್ಖಲಿಸಬಲ್ಲ, ಸ್ಖಲನದ ಪರಾಕಾಷ್ಠೆಯನ್ನು ತಲುಪಿದ ನಂತರ ರತಿಯ ಈ ತುರೀಯಾವಸ್ಥೆಯಲ್ಲಿ ಹೆಚ್ಚು ಹೊತ್ತು ಉಳಿಯಬಲ್ಲ ಮತ್ತು ಹಾಗೆ ತುದಿ ಮುಟ್ಟಿ ಮರಳಿದ ನಂತರವೂ ಇನ್ನೊಮ್ಮೆ

ಕ್ರೀಡಿಸಲು ಮತ್ತೆ ಮರುಕ್ಷಣವೇ ಅನುವಾಗಬಲ್ಲ ದೈಹಿಕ ಸಾಮರ್ಥ್ಯ ಹೆಣ್ಣು ದೇಹದ್ದು ಮಾತ್ರ. ಈ ವಿಷಯದಲ್ಲಿ ಪ್ರಕೃತಿಯು ಸ್ತ್ರೀ ಪಕ್ಷಪಾತಿ. ಎಷ್ಟು ಪಕ್ಷಪಾತಿ ಎಂದರೆ, ಪ್ರಕೃತಿಯು ಸ್ತ್ರೀ ದೇಹದಲ್ಲಿ ಕೇವಲ ಲೈಂಗಿಕ ತೃಪ್ತಿಗಷ್ಟೇ ಮೀಸಲಿರುವ ಭಗಾಂಕುರವೆಂಬ ಅದ್ಭುತವನ್ನು ನಿರ್ಮಿಸಿಕೊಟ್ಟಿದೆ. ಪುರುಷ ಲೈಂಗಿಕಾಂಗವೂ ಜೊತೆಗೇ ಜನನಾಂಗವೂ ಆದ ಶಿಶ್ನಕ್ಕೆ ಸಂವಾದಿಯಾಗಿಯೇ ಸ್ತ್ರೀ ಜನನಾಂಗವಾದ ಯೋನಿಯಿದೆ ಎಂಬ ಕಲ್ಪಿತ ಸಿದ್ಧಾಂತದಲ್ಲೇ ಕಾಮಶಾಸ್ತ್ರವನ್ನು ಅರ್ಥ ಮಾಡಿಕೊಳ್ಳಲೆತ್ನಿಸಿದ ಪ್ರಯತ್ನಗಳೆಲ್ಲ ಇದರಿಂದಾಗಿಯೇ ಸೋತು ಸುಮ್ಮನಾಗಿವೆ ಅಥವಾ ಅರ್ಧ ಸತ್ಯವನ್ನಷ್ಟೇ ಹೇಳಿವೆ. ಅಷ್ಟೇ ಅಲ್ಲ ಗಂಡು ದೇಹಕ್ಕಾದರೆ ಸಂತಾನೋತ್ಪತ್ತಿ ಸಾಮರ್ಥ್ಯವು ಕ್ಷೀಣವಾಗುತ್ತಿದ್ದಂತೆಯೇ ಕ್ರೀಡಿಸುವ ಸಾಮರ್ಥ್ಯವೂ ಕ್ಷೀಣಿಸುವುದು. ಆದರೆ ಭಗಾಂಕುರಕ್ಕಾದರೋ ಲೈಂಗಿಕ ಅಪೇಕ್ಷೆಯೊಂದು ಮನದಲ್ಲಿ ಇದ್ದರಾಯಿತು. ಆರೋಗ್ಯವಂತ ಹೆಣ್ಣು ದೇಹಕ್ಕೆ ಈ ವಿಷಯದಲ್ಲಿ ಮುಪ್ಪಿನ ಹಂಗೂ ಅಷ್ಟಾಗಿ ಕಾಡಲಾರದು. ಆಧುನಿಕ ಜೀವ ವಿಜ್ಞಾನದ ತಿಳಿವಿನಿಂದ ಈ ಕಾಲಕ್ಕೆ ತಿಳಿದುಬಂದಿರುವ ಹೆಣ್ಣುದೇಹದ ಈ ಸಾಧ್ಯತೆಗಳೆಲ್ಲ, ಎಲ್ಲಾ ಕಾಲದಲ್ಲಿಯೂ ಅನುಭವದ ಮೂಲಕವೇ ತೀವ್ರ ಕುತೂಹಲಿಗಳಾದ ಗಂಡು-ಹೆಣ್ಣುಗಳಿಗೆ ತಿಳಿದಿದ್ದಿರಲೇಬೇಕು. ದೈಹಿಕವಾಗಿ ಹೆಚ್ಚು ಬಲಶಾಲಿಯಾದ ಗಂಡಿಗೆ ಹೆಣ್ಣಿನ ಉಳಿದ ಹಲವು ಸಾಮರ್ಥ್ಯಗಳ ಜೊತೆಗೇ ಅವಳ ಈ ಲೈಂಗಿಕ ಶಕ್ತಿಯು ತನ್ನ ಪುರುಷ ಅಹಮ್ಮಿಗೆ ಸವಾಲೆನಿಸಿಸದ ಕಾರಣಕ್ಕೆ ಸಂಚೊಂದು ರೂಪಗೊಂಡು, ಹೆಣ್ಣನ್ನು ಹತ್ತಿಕ್ಕುವ ವ್ಯವಸ್ಥೆಯೊಂದು ನಿರ್ಮಾಣವಾಗೊಂಡು, ಈ ವ್ಯವಸ್ಥೆಯಲ್ಲಿ ಗಂಡು-ಹೆಣ್ಣುಗಳೆರಡೂ ಸಿಲುಕಿ ನರಳಬೇಕಾಗಿದ್ದು ನಮಗೆಲ್ಲರಿಗೂ ತಿಳಿದಿರುವ ದುರಂತ.

ಈ ಕಾರಣಕ್ಕೋ ಏನೋ ಹೆಣ್ಣು ದೇಹದ ಈ ಸಾಧ್ಯತೆಗಳು ಮತ್ತು ಕಾಮ ಕಲೆಯ ಈ ಸೂಕ್ಷ್ಮಾತಿ ಸೂಕ್ಷ್ಮಗಳೆಲ್ಲ ಜಗತ್ತಿನ ಸೃಜನಶೀಲ ಸಾಹಿತ್ಯದಲ್ಲಿ ತಲೆಮರೆಸಿಕೊಂಡು ಕುಳಿತಿವೆ. ಭಾರತೀಯ ಧಾರ್ಮಿಕ ಕಾವ್ಯಗಳಲ್ಲೂ ಇದು 'ನೆಲದ ಮರೆಯ ನಿಧಾನದಂತೆ ಭಾವದ ಮರೆಯ ಬ್ರಹ್ಮ'ವಾಗಿ 'ಕಂಡವರಿಗಷ್ಟೇ ಕಾಣುವಂತೆ' ಅಡಗಿ ಕುಳಿತಿದೆ. ಲೈಂಗಿಕ ಅಪೇಕ್ಷೆ ಮತ್ತು ಅದನ್ನು ಹೊಂದುವಲ್ಲಿನ ವಿವಿಧ ಅವಸ್ಥೆಗಳು ಮತ್ತು ದೇಹಗಳ ಮಿಲನದ ಸುಖದ ತುರೀಯಾವಸ್ಥೆಯಾದ ಸ್ಖಲನದಲ್ಲಿ ಮನೋ ದೈಹಿಕ ಇಚ್ಛೆಯೊಂದು ಹೀಗೆ ತೃಪ್ತಗೊಂಡ ಸ್ಥಿತಿಯಾಗುವುದಾದರೆ, ಜೀವವೊಂದರ ಆಧ್ಯಾತ್ಮಿಕ ಹಂಬಲಕ್ಕೆ, ಅತೀತದ ಹುಡುಕಾಟದಲ್ಲಿ ಒದಗಿ ಬರುವ ನಾನಾ ಅವಸ್ಥೆಗೆ ಮತ್ತು ಅ ಆನಂದೋಬ್ರಹ್ಮ ಸ್ಥಿತಿಯನ್ನು ಒಂದು ವೇಳೆ ತಲುಪಿದರೆ ಅಲ್ಲಿ ಆದಷ್ಟೂ ಹೊತ್ತು ನಿಲ್ಲಬೇಕೆಂದೆನಿಸುವ, ಮತ್ತೆ ಮತ್ತೆ ಅಲ್ಲಿಗೆ ಮರಳಿ ಹೋಗಬೇಕೆಂದೆನಿಸುವ ಜೀವಕ್ಕೆ ಈ ಹಂಬಲವನ್ನು ಕಾವ್ಯಾಭಿವ್ಯಕ್ತಿಗೊಳಿಸುವಾಗ, ಶಬ್ದಕ್ಕೆ ಸಿಲುಕಿಸುವಾಗ ಸ್ತ್ರೀ ಲೈಂಗಿಕ ಶಕ್ತಿ ಒಂದು ಶಕ್ತ ರೂಪಕವಾಗಿ ಯಾಕೆ ಒದಗಿರಬಾರದು? ಅಥವಾ ಇದಕ್ಕಿಂತಲೂ ಶಕ್ತವಾದ ರೂಪಕವಾದರೂ ಎಲ್ಲಿ ಸಿಗಬಹುದು?

ಭಾರತೀಯ ತತ್ವಶಾಸ್ತ್ರದಲ್ಲಿ ಕಾಮಕ್ಕೆ ಒಂದು ಉನ್ನತವಾದ ಸ್ಥಾನವಿದೆ. ನಾಲ್ಕು ಪುರುಷಾರ್ಥಗಳಲ್ಲಿ ಕಾಮವೂ ಒಂದು. ಮಧ್ಯ ಯುಗದ ದೇವಾಲಯಗಳಲ್ಲಿ ರತಿಯ ಶಿಲ್ಪಗಳಿರುವಂತೆಯೇ ಧಾರ್ಮಿಕ ಕಾವ್ಯಗಳಲ್ಲೂ ಶೃಂಗಾರದ ಅಭಿವ್ಯಕ್ತಿಯಾಗಿ ಲೈಂಗಿಕ ಪ್ರತಿಮೆಗಳು ಹೇರಳವಾಗಿವೆ. ಶಾಕ್ತ, ಪಾಶುಪತ ಮತ್ತಿತರ ಪಂಥಗಳ ತಾಂತ್ರಿಕ ಮಾರ್ಗಗಳಲ್ಲಂತೂ ಕಾಮವು ಧಾರ್ಮಿಕ ಆಚರಣೆಯಾಗಿಯೂ ಪರಿಗಣಿಸಲ್ಪಟ್ಟಿದೆ.

ಶೈವಭಕ್ತಿಯದ್ದೇ ಪರಂಪರೆಯ ವಚನ ಸಾಹಿತ್ಯದಲ್ಲಿ ಇದು 'ಶರಣ ಸತಿ ಲಿಂಗ ಪತಿ' ಎಂಬ ಭಾವವಾಗಿ ಜೀವಾತ್ಮವು ಪರಮಾತ್ಮನನ್ನು ಕಾಣಲು, ಮುಟ್ಟಲು, ಕೂಡಲು ಹಂಬಲಿಸುವ ತವಕ-ತಲ್ಲಣಗಳೂ ಕೂಡಿದಾಗಿನ ಸ್ಥಿತಿಯನ್ನು ಶಬ್ದಗಳಲ್ಲಿ ಬಣ್ಣಿಸಲು ಸಾಧ್ಯವಾಗದ ಸ್ಥಿತಿಯೂ ಸ್ತ್ರೀ ಲೈಂಗಿಕಾಭಿವ್ಯಕ್ತಿಯ ಪ್ರತಿಮೆಗಳಲ್ಲಿ ಅತ್ಯಂತ ಶಕ್ತವಾಗಿ ಮೂಡಿ ಬಂದಿವೆ. ಇದರ ಜೊತೆಗೇ ಎಚ್ಚರದಿಂದಲೇ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ 'ಹೆಣ್ಣು' ಎನ್ನುವುದು ಕೇವಲ ಹೆಣ್ಣು ದೇಹಕ್ಕಷ್ಟೇ ಸಂಬಂಧಿಸಿದ್ದಲ್ಲವೆಂದು ಹೇಳುತ್ತಾ 'ಹೆಣ್ಣು' ಎನ್ನುವುದು ಹೆಣ್ಣಿನ ದೇಹದ ಹಾಗೆ ಅಪರಿಮಿತ ಸಾಧ್ಯತೆಗಳಿರುವ, ವಿಕಸಿತಗೊಂಡ ಸ್ಥಿತಿ ಅಥವಾ ಅವಸ್ಥೆ ಎಂದು ಸೂಚಿಸಿರುವುದು. ಮನೋದೈಹಿಕ ಅಭಿಲಾಷೆಯೊಂದು ಆಧ್ಯಾತ್ಮಿಕ ಅಭಿಲಾಷೆಯ ರೂಪಕವಾಗಿ ಬಂದಿರುವ ವೇಳೆ ಇಲ್ಲಿ 'ಹೆಣ್ಣು' ಎನ್ನುವುದು ದೇಹವಲ್ಲ, ಅದು ಒಂದು ಸ್ಥಿತಿ ಎನ್ನುವುದನ್ನು ನಾವು ಮರೆಯದೆಯೇ ಇರಬೇಕಾಗುತ್ತದೆ.

'.....................

**ಅಂಗ ಮನ ಭಾವವಳಿದ ಕಾರಣ**
**ಕಾಯ ಅಕಾಯವಾಯಿತ್ತು**
**ಎನ್ನ ಕಾಯದ ಸುಖ ಭೋಗವ ಲಿಂಗವೆ ಭೋಗಿಸುವವನಾಗಿ**
**ಶರಣಸತಿ ಲಿಂಗಪತಿಯಾದೆನು**
**ಇದು ಕಾರಣ ಚೆನ್ನಮಲ್ಲಿಕಾರ್ಜುನನೆಂಬ ಗಂಡನ**
**ಒಳಹೊಕ್ಕು ಬೆರೆಸಿದೆನು'** (ಅಕ್ಕಮಹಾದೇವಿ)

ಹೀಗೆ ಒಳಹೊಕ್ಕು ಬೆರೆತ ಮೇಲಾದರೂ ತನಗಾದ ಈ ಅಪೂರ್ವ ಆಧ್ಯಾತ್ಮಿಕವೆನ್ನಬಹುದಾದ ಅನುಭೂತಿಯನ್ನು ಹೇಳಿಕೊಳ್ಳುವ ಬಗೆ ಎಲ್ಲಿದೆ ಅನ್ನುತ್ತಾ ವಚನಕಾರ ಗಣೇಶ ಮಸಣಯ್ಯ ತನ್ನದೊಂದು ವಚನದಲ್ಲಿ ಹೀಗೆ ಹೇಳಿಕೊಳ್ಳುತ್ತಾನೆ,

**'ಆತನ ಬೆರಸಿದ ಕೂಟವನೇನೆಂದು ಹೇಳುವೆನವ್ವಾ**
**ಹೇಳಲೂಬಾರದು ಕೇಳಲೂಬಾರದು**
**ಏನ ಹೇಳುವೆನವ್ವಾ ಶಿಖಿ ಕರ್ಪೂರ ಬೆರಸಿದಂತೆ**

**ಮಹಾಲಿಂಗ ಗಜೇಶ್ವರನ ಕೂಡಿದ ಕೂಟವ**
**ಹೇಳಲು ಬಾರದವ್ವಾ'** (ಗಣೇಶ ಮಸಣಯ್ಯ)

ಹೀಗಾಗಿ ಇರಬಹುದಾದ ಒಂದೇ ದಾರಿಯೆಂದರೆ, ಹೆಣ್ಣು ಗಂಡೆಂಬ ಈ ದೇಹಭಾವಕ್ಕಷ್ಟೇ ಮೀಸಲಾದ ಮಿತಿಯನ್ನು ಮೀರಿ, ಅರಿಯುವ ಹಂಬಲವಾಗಿ ಮಾತ್ರ ಉಳಿದು, ಅರಿತಿದ್ದನ್ನು ಬಣ್ಣಿಸುವ ಗೋಜಿಗೂ ಹೋಗದಿರಲು ಪ್ರಯತ್ನಿಸುವುದು.

**'ತನು ನಿಮ್ಮ ರೂಪಾದ ಬಳಿಕ ಆರಿಗೆ ಮಾಡುವೆ**
**ಮನ ನಿಮ್ಮ ರೂಪಾದ ಬಳಿಕ ಆರ ನೆನೆವೆ**

.

**ಚೆನ್ನಮಲ್ಲಿಕಾರ್ಜುನಯ್ಯಾ**
**ನಿಮ್ಮಿಂದ ನೀವೇಯಾದಿಯಾಗಿ**
**ನಿಮ್ಮನ್ನೆ ಅರಿವುತ್ತಿರ್ದೆನು'** (ಅಕ್ಕಮಹಾದೇವಿ)

ಅಕ್ಕನ ಈ ಮಾತು ಚೆನ್ನಮಲ್ಲಿಕಾರ್ಜನನದ್ದೂ ಆಗಿರಬಹುದು ಎಂದು ನನಗನ್ನಿಸುತ್ತಿದೆ. ಶಿವೆಯೊಂದಿಗೆ ಅರ್ಧ ದೇಹವನ್ನು ಹಂಚಿಕೊಂಡು ಅರ್ಧನಾರೀಶ್ವರ-ನಾದವನು ಅವನು. ಅವನು ಹಾಗೆ ಹಂಚಿಕೊಂಡಿದ್ದು ದೇಹವನ್ನಷ್ಟೇ ಅಲ್ಲ ಶಿವೆಯ 'ಸ್ಥಿತಿ'ಯನ್ನೂ ಎಂಬುದು ಸೂಚಿತ. ಇನ್ನು ಭಾಗವತ ಹೇಳುವಂತೆ, ಸೃಷ್ಟಿಯ ಆದಿಯಲ್ಲಿ ಇದ್ದಿದ್ದು 'ಭಗವಂತ'ನೆಂಬ ಒಂದೇ ಸ್ಥಿತಿಯಂತೆ. ತನ್ನ ಅನಂತ ಸಾಧ್ಯತೆಗಳನ್ನು ಅನಂತ ಸ್ಥಿತಿಗಳಲ್ಲಿ ಕಾಣುವ ಭಗವಂತನ ಹಂಬಲವೇ 'ಇಚ್ಛೆ'ಯಾಗಿ ಇಡೀ ಸೃಷ್ಟಿ ಹೀಗೆ ಬಹುರೂಪವಾಗಿ ಪ್ರಕಟವಾಗಲು ಮೊದಲಾಯಿತಂತೆ. ಅರಿವಿಗೆ, ಹೀಗೆ ತನ್ನ ಅನಂತ ಸಾಧ್ಯತೆಗಳನ್ನು ಬಳಸಿಕೊಂಡೇ ತನ್ನನ್ನು ತಾನು ಅರಿಯಬೇಕೆಂಬ ಹಂಬಲ ಮೂಡಿತು ಎಂಬ ಕಲ್ಪನೆಯೇ ಎಷ್ಟು ಚೆಂದ!

**ಈ ನಲ್ಲನ ಬೇಟದ ಕೂಟದ ಪರಿಯನು ಏನೆಂದು ಹೇಳುವೆ**
**ವಿಪರೀತ ಕೆಳದಿ**
**ಪುರುಷ ಶಕ್ತಿಯಾಗಿ ಶಕ್ತಿ ಪುರುಷನಾಗಿ**
**ನೆರೆದು ಸುಖಿಸುವನು**
**ಕೇಳಾ ಕೆಳದಿ**
**ಅತಿ ಕಾಮಿ ವಿಪರೀತನು**
**ಉರಿಲಿಂಗದೇವನು**
**ನೆರೆಯಲು ನೆರೆವುದು ಮನದಿಚ್ಛೆ ಕೆಳದಿ** (ಉರಿಲಿಂಗದೇವ)

■

# ಭಕ್ತಿ ಮತ್ತು ವಿಜ್ಞಾನ

–ಶ್ರೀಕಾಂತ್ ಬಾಬು

**ಈ** ಲೇಖನದ ಉದ್ದೇಶ ಕೇವಲ ಮುದ್ರಿತವಾದ ಕನ್ನಡ ಭಾಷೆಯ ಭಕ್ತಿ ಸಾಹಿತ್ಯವನ್ನು ಕುರಿತಾಗಿ ಅಲ್ಲ. ಭಾಷೆಗೆ ಮೀರಿದ ಆದರೆ ಸಾಹಿತ್ಯಕ್ಕೆ ಮೂಲವಾದ ಬದುಕು ಮತ್ತು ಅನುಭವಗಳಿಗೆ ಸಂಬಂಧಿಸಿದುದು. ಇದರ ವಿಸ್ತಾರ ಒಂದು ಭಾಷೆ, ಅಥವಾ ಒಂದು ಸಮುದಾಯ ಅಥವಾ ಒಂದು ಪ್ರದೇಶವನ್ನು ಮೀರಿದ್ದಾಗಿದೆ.

ಭಕ್ತಿ ಸಾಹಿತ್ಯವೆನ್ನುವುದು ಒಂದು ವಿಶಾಲ ಸಾಗರ. ಕನ್ನಡದ ಭಕ್ತಿ ಸಾಹಿತ್ಯವು ಈ ವಿಶಾಲ ಸಾಗರಕ್ಕೆ ಸೇರುವ ಒಂದು ನದಿಯೆಂದು ಪರಿಗಣಿಸಬಹುದು. ಈ ಲೇಖನದಲ್ಲಿ ನಾನು ಸ್ವಲ್ಪ ವಿಷಯ ಸ್ವಾತಂತ್ರ್ಯ ತೆಗೆದುಕೊಂಡು ಅತ್ತಿತ್ತ ಚಲಿಸಿದ್ದೇನೆ. ಇದಕ್ಕಾಗಿ ಓದುಗರ ಸಹನೆಯನ್ನು ವಿನಂತಿಸುತ್ತೇನೆ.

ಯಾವುದೇ ಭಾಷೆಯ ಸಾಹಿತ್ಯ ಎನ್ನುವ ಕಲಾವಸ್ತು ಒಂದು ಬದುಕಿನ ಮತ್ತು ಅನುಭವಗಳ ಸಂಕಲನ. ಲಿಖಿತ ರೂಪದಲ್ಲಿರುವ ಈ ವಸ್ತುವನ್ನು ಕಥೆ, ಕವನ, ಕಾವ್ಯ, ಇತ್ಯಾದಿಗಳ ಮೂಲಕ ದಾಖಲಿಸಲಾಗುತ್ತದೆ. ಆದರೆ ಈ ಲಿಖಿತ ಸಾಹಿತ್ಯಕ್ಕೆ ಮೂಲವಾದ ದ್ರವ್ಯ – ನಿಜವಾದ ಬದುಕು, ಅನುಭವ, ಸಮಕಾಲೀನ ಸಮಾಜ, ನಾಗರಿಕತೆ, ರಾಜಕೀಯ, ಆಧ್ಯಾತ್ಮಿಕತೆ, ಚಿಂತನೆ, ವಿಜ್ಞಾನ ಮತ್ತು ಹಲಕೆಲವು ಕಲ್ಪನೆ, ಇತ್ಯಾದಿಗಳು. ಹಾಗಾಗಿ ಈ ದ್ರವ್ಯ ವಸ್ತುಗಳನ್ನೂ ಕೂಡ ಅಲಿಖಿತ ಸಾಹಿತ್ಯವೆಂದೇ ಪರಿಗಣಿಸಬಹುದು.

**ಭಕ್ತಿ ಎನ್ನುವುದು ಮನಸ್ಸಿನ ಒಂದು ಕೋಮಲ ಭಾವನೆ. ಈ ಭಾವನೆಯ** ಮೂಲ – ಪ್ರೇಮ, ವಾತ್ಸಲ್ಯ, ಸ್ನೇಹ, ಕರುಣೆ, ದುಃಖ, ಆಕ್ರೋಶ, ಶರಣಾಗತಿ, ದೈನ್ಯತೆ, ದಾಸ್ಯ ಇತ್ಯಾದಿಗಳಿಂದ ಪ್ರೇರಿತವಾಗಿರಬಹುದು ಮತ್ತು ಈ ಭಾವನೆಗಳ ಉತ್ಕಟತೆಯನ್ನು ಅನುಸರಿಸಿದಂತೆ ಅದರ ತೀವ್ರತೆಯೂ ಕೂಡ ವಿವಿಧ ಸ್ತರಗಳಲ್ಲಿರಬಹುದು. ಭಕ್ತಿಯ ಭಾವವು ಮೂಲವಾಗಿ ದ್ವೈತ. ಅಂದರೆ ಇದರಲ್ಲಿ ಕನಿಷ್ಠ ೨ ವಸ್ತುಗಳು ಇರುತ್ತವೆ. ಈ ಎರಡು ವಸ್ತುಗಳ ಸಂಬಂಧವೇ ಭಕ್ತಿ. ಒಂದು ವ್ಯಕ್ತಿಯಾದರೆ ಇನ್ನೊಂದನ್ನು ಸಾಧಾರಣವಾಗಿ 'ದೈವ', 'ಶಕ್ತಿ', 'ದೇವರು' ಅಥವಾ

'ಮತ್ತೊಂದು ಅಸಾಧಾರಣ ವ್ಯಕ್ತಿ' ಎಂದು ಭಾವಿಸಬಹುದು. ಈ ೨ ವಸ್ತುಗಳ ನಡುವಣ ಸಂಬಂಧದ ಗಾಢತೆ ಅಥವಾ ತೀವ್ರತೆಯು ಅವರವರ 'ನಂಬಿಕೆ' ಅಥವಾ 'ಶ್ರದ್ಧೆ' ಯ ಮೂಲಕ ಪ್ರಕಟವಾಗುತ್ತದೆ.

ಈಗ ಲೇಖನದ ಮುಖ್ಯ ವಿಷಯ – ಭಕ್ತಿ ಮತ್ತು ವಿಜ್ಞಾನ.

ನನ್ನ ದೃಷ್ಟಿಯಲ್ಲಿ ಭಕ್ತಿ ಒಂದು ರೀತಿಯಲ್ಲಿ ನಿಂತ ನೀರಾದರೆ ವಿಜ್ಞಾನವು ಪ್ರಗತಿಯ ಸಂಕೇತ. ಭಕ್ತಿ ಭೂತವಾದರೆ ವಿಜ್ಞಾನ ಭವಿಷ್ಯ.

ಮನುಷ್ಯ ಸಹಜವಾದ ಕುತೂಹಲ ಮತ್ತು ಪ್ರಶ್ನಿಸುವ ಗುಣದ ಮೂಲಕ ವಿಜ್ಞಾನದ ಬೆಳವಣಿಗೆಯನ್ನು ನಾಗರಿಕತೆಯೊಂದಿಗೆ ಅಂದರೆ ಶಿಲಾಯುಗದಿಂದ ಗಮನಿಸಬಹುದು. ಆದರೆ ಭಕ್ತಿಯನ್ನು ಬಹಳ ಇತ್ತೀಚೆಗೆ ಅಂದರೆ ಧರ್ಮ, ದೇವರು, ಇತ್ಯಾದಿಗಳು ಜನಜೀವನದ ಭಾಗವಾದ ನಂತರ ಅಂದರೆ ಬಹುಶಃ ಸುಮಾರು ೩೦೦೦ ವರ್ಷಗಳಿಂದೀಚಿನಿಂದ ಗಮನಿಸಬಹುದು.

ಭಕ್ತಿ ಬದುಕಿನಲ್ಲಿ ಸೋಲನ್ನೊಪ್ಪಿದ ಹತಾಶ ಮನಸ್ಸಿಗೆ ಊರುಗೋಲಾಗಿ ಅಥವಾ ಆಲಸ್ಯ ಬದುಕಿನಲ್ಲಿ ಸುಲಭದ ಆಸರೆಯಾಗಿ ಅಥವಾ ಕಷ್ಟವನ್ನೆದುರಿಸಲು ಶಕ್ತಿಯಿಲ್ಲದ ಹೇಡಿತನಕ್ಕೆ ಜೊತೆಯಾಗಿ ಅಥವಾ ವಸ್ತುಸ್ಥಿತಿಯನ್ನು ಒಪ್ಪಿಕೊಂಡು ಪ್ರಶ್ನಿಸುವ ಜಾಯಮಾನಕ್ಕೆ ಹೋಗದ ಜನರಿಗೆ ಒಂದು ರೀತಿಯ ಶಾಂತಿಯನ್ನು ಕೊಡುವ ಸಾಧನವಾಗಿದೆ. ಆದರೆ, ಸಹಸ್ರಾರು ಜನ ಒಟ್ಟಾಗಿ ಭಜಿಸಿದರೂ ಭಕ್ತಿಯ ಮಾರ್ಗದಲ್ಲಿ ವೈಯಕ್ತಿಕವಾಗಿಯೇ ಆಧ್ಯಾತ್ಮಿಕ ಮುನ್ನಡೆಯನ್ನು ಪಡೆಯಬೇಕು. ಭಕ್ತಿಯ ವಿಷಯದಲ್ಲಿ ಹೇರಳವಾದ ಸಾಹಿತ್ಯ ಮತ್ತು ಪುರಾಣ ಕಥೆಗಳಿದ್ದರೂ ಅದರ ಸ್ಪಷ್ಟ ತಿಳಿವಳಿಕೆ ಮತ್ತು ನೇರ ಉಪಯೋಗವನ್ನು ಸಾರ್ವತ್ರಿಕವಾಗಿ ನಿಖರವಾಗಿ ಹೇಳುವುದು ಕಷ್ಟ. ಆದರೆ ವೈಯಕ್ತಿಕವಾಗಿ ಅನೇಕರಿಗೆ ಆಸರೆಯನ್ನು ನೀಡುತ್ತಿರುವ ಅಂಶವನ್ನು ಸಾಕಷ್ಟು ಕೇಳಿದ್ದೇವೆ. ಹಾಗಾಗಿ ಇದನ್ನು ವೈಯಕ್ತಿಕವಾಗಿ ಅವರವರ ನಂಬಿಕೆ ಮತ್ತು ಶ್ರದ್ಧೆಗಳನ್ನನುಸರಿಸಿ ಆಸರೆ ನೀಡುತ್ತಿರಬಹುದೆಂದು ಭಾವಿಸಬಹುದು.

ಇನ್ನು ವಿಜ್ಞಾನ – ಪ್ರಗತಿಯ ಸಂಕೇತ. ಮಾನವ ಕುಲದ ಪ್ರಗತಿಗೆ ಭಕ್ತಿ ಕಾರಣವಾಗಿರುವಂತೆ ಎಲ್ಲೂ ಕಂಡುಬರುವುದಿಲ್ಲ. ಆದರೆ ಮನುಕುಲದ ಪ್ರಗತಿ ವಿಜ್ಞಾನದಿಂದಾಗಿರುವುದು ನಿರ್ವಿವಾದ.

ಆದ್ದರಿಂದ ವಿಜ್ಞಾನ ನಮ್ಮ ಭವಿಷ್ಯವಾದರೆ, ಭಕ್ತಿಯು ನಮ್ಮ ಪೂರ್ವಜರಲ್ಲಿ ಅಧಿಕಾರಸ್ಥರಿಗೆ ಶಕ್ತಿಯಾಗಿಯೂ ಸಾಧಾರಣ ಪ್ರಜೆಗಳಿಗೆ ಕಷ್ಟಕರ ಬದುಕಿನ ಊರುಗೋಲಾಗಿತ್ತೆಂದೂ ಪರಿಗಣಿಸಬಹುದು.

ಭವಿಷ್ಯವನ್ನು ಕುರಿತು ಮಾತನಾಡುವಾಗ ನಮ್ಮ ಭೂತ ಹಾಗೂ ವರ್ತಮಾನದ ನಿಖರ ಸತ್ಯದ ಅರಿವು ಅತ್ಯಗತ್ಯ. ಮೊದಲು ಅವುಗಳನ್ನು ಗಮನಿಸೋಣ.

ಸಮಾಜ ಶಾಸ್ತ್ರದ ವಿಜ್ಞಾನಿಗಳ ಪ್ರಕಾರ ಮಾನವನ ನಾಗರಿಕತೆಯಲ್ಲಿ ಮೂರು ಯುಗಗಳನ್ನು ನೋಡಬಹುದು.

**ಶಿಲಾಯುಗ – ೩.೪ ಮಿಲಿಯನ್ B.C. – ೩೦೦೦ B.C.**

ಈ ಯುಗಾರಂಭದಲ್ಲಿ ಮೃಗನಾಗಿದ್ದ ಮಾನವ ಅವನ ಮೆದುಳಿನ ಬೆಳವಣಿಗೆಯೊಂದಿಗೆ ಮನುಷ್ಯನಾಗುತ್ತಾ ತನ್ನ ಅವಶ್ಯಕತೆಗಳನ್ನು ಸುತ್ತಲಿನ ಪ್ರಕೃತಿಲಭ್ಯ ವಸ್ತು ಮತ್ತು ಜೀವಿಗಳ ಮೂಲಕ ಪೂರೈಸಿಕೊಂಡು ಹೋಗುವುದರ ಜೊತೆಗೆ ನಾಗರಿಕತೆಯ ಆರಂಭವಾಗುತ್ತದೆ.

**ತಾಮ್ರಯುಗ – ೩೩೦೦ B.C. – ೧೨೦೦ B.C.**

ಈ ಯುಗದಲ್ಲಿ ತಾಮ್ರ, ಬೆಳ್ಳಿ, ಬಂಗಾರಗಳ ಶೋಧನೆಗಳ ಮೂಲಕ ತನ್ನ ಜೀವನವನ್ನು ಇನ್ನಷ್ಟು ವೈವಿಧ್ಯಮಯವಾಗಿ ಮತ್ತು ಸುಗಮವಾಗಿ ಮಾಡಿಕೊಳ್ಳುವುದರ ಜೊತೆಗೆ ನಾಗರಿಕತೆಯು ಇನ್ನೂ ಬೆಳೆಯುತ್ತಾ ಹೋಗುತ್ತದೆ.

**ಲೋಹಯುಗ – ೧೩೦೦ B.C. – ೩೦೦ A.D.**

ಕಬ್ಬಿಣ ಮತ್ತಿತರ ಲೋಹಗಳ ಮತ್ತು ರಸಾಯನಿಕ ವಸ್ತುಗಳ ಶೋಧನೆ ಮತ್ತು ಸಂಶೋಧನೆಗಳಿಂದ ನಾಗರಿಕತೆಯ ಉತ್ತುಂಗವನ್ನು ತಲುಪುವುದರ ಜೊತೆಗೆ ಲೋಭ, ಸ್ವಾರ್ಥಗಳ ಹಾನಿಕಾರಕ (ಯುದ್ಧಗಳು) ಪ್ರಕ್ರಿಯೆಗಳು ಮೊದಲುಗೊಂಡಿತು.

ಮಾನವನ ನಾಗರಿಕತೆಯ ಬೆಳವಣಿಗೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಪಾತ್ರವನ್ನು ಪ್ರತಿ ಹಂತದಲ್ಲೂ ಗಮನಿಸಬಹುದು. ಶಿಲಾಯುಗದಲ್ಲಿ ಬೆಂಕಿಯ ಉಪಯೋಗ, ಕಲ್ಲು–ಮಣ್ಣಿನ ಆಯುಧ, ಪಾತ್ರೆಗಳು, ಸಾಕು ಪ್ರಾಣಿಗಳ ಉಪಯೋಗ, ಇತ್ಯಾದಿ. ತಾಮ್ರ ಯುಗದಲ್ಲಿ, ಬಂಗಾರ, ಬೆಳ್ಳಿ, ತಾಮ್ರ ಲೋಹಗಳ ಶೋಧನೆ ಮತ್ತು ಅದರ ಉಪಯೋಗಗಳು, ನಂತರದ ಲೋಹ ಯುಗದಲ್ಲಿ ಕಬ್ಬಿಣ ಮತ್ತಿತರ ಮುಖ್ಯ ಲೋಹಗಳ ಅನ್ವೇಷಣೆಯ ಮೂಲಕ ನಾಗರಿಕತೆಯು ವಿನೂತನ ಮಟ್ಟವನ್ನು ಮುಟ್ಟುತ್ತದೆ. ಈ ಯುಗದಲ್ಲಿ ವಿವಿಧ ಧರ್ಮಗಳು, ಭಾಷೆ, ಅಕ್ಷರಮಾಲೆ, ಸಮಾಜ, ಸಾಮ್ರಾಜ್ಯ, ವ್ಯಾಪಾರ, ಇತ್ಯಾದಿ ಬೆಳವಣಿಗೆಗಳನ್ನು ಎಲ್ಲಾ ನಾಗರಿಕತೆಗಳಲ್ಲೂ ಗಮನಿಸಬಹುದು.

ಇದರ ನಂತರದ ಕ್ರಿ.ಶ. ಯುಗದ ಸುಮಾರು ೧೫೦೦ ವರ್ಷಗಳು ವಿವಿಧ ಧರ್ಮಗಳ, ಸಾಮ್ರಾಜ್ಯಗಳ ಸ್ಥಾಪನೆ ಮತ್ತು ವಿಸ್ತರಣೆ, ಯುದ್ಧಗಳು, ನಾನಾರೀತಿಯ ಹಿಂಸಾಚಾರಗಳು, ಇತ್ಯಾದಿ ವಿಚಾರಗಳನ್ನು ಗಮನಿಸಬಹುದು. ಈ ಸಮಯದಲ್ಲಿ ಯುದ್ಧನೀತಿ, ಕಲೆ, ಶಿಲ್ಪ ಕಲೆ, ಸಾಹಿತ್ಯ, ವಸ್ತ್ರ ಭೂಷಣ, ದೇವಾಲಯ, ಇತ್ಯಾದಿಗಳ ವಿಸ್ತೃತ ಬೆಳವಣಿಗೆ ಆಯಿತು.

ಕ್ರಿ.ಶ. ೧೫೦೦ರ ನಂತರದಲ್ಲಿ ವಿಜ್ಞಾನದ ಮುನ್ನಡೆ ಯೂರೋಪ್ ದೇಶಗಳಲ್ಲಿ ಆರಂಭವಾಗಿ ಇಂದಿಗೂ ನಿರಂತರವಾಗಿ ಮುನ್ನಡೆಯುತ್ತಿದೆ. ೨೦ನೆಯ ಶತಮಾನ-ದಲ್ಲಂತೂ ಅಮೆರಿಕದ ನೇತೃತ್ವದಲ್ಲಿ ನಡೆದ ತಂತ್ರಜ್ಞಾನದ ವಿಸ್ಫೋಟನೆ ವಿಶ್ವವನ್ನೆಲ್ಲಾ ವ್ಯಾಪಿಸಿತು. ಯಂತ್ರಗಳು, ಬಾಹ್ಯಾಕಾಶ ಕುರಿತಾದ ಸಂಶೋಧನೆ, ಅಣು ಶಕ್ತಿಯ ಸೃಷ್ಟಿ, ರೇಡಿಯೋ, ಫೋನ್, ಟಿ.ವಿ, ವೈದ್ಯಕೀಯ ಸಂಶೋಧನೆಗಳು ಮತ್ತು ಅದರಲ್ಲಿನ ತಂತ್ರ ಜ್ಞಾನದ ಬಳಕೆಯಿಂದಾಗಿ ವಿಶ್ವದ ಎಲ್ಲ ಜನರ ಜೀವನ ಮಟ್ಟವು ಸುಧಾರಿಸಿತು. ಅದರಲ್ಲೂ ಕಳೆದ ೨೫ ವರ್ಷಗಳಲ್ಲಿ ವೈರ್-ಲೆಸ್ ಹಾಗೂ ಇಂಟರ್‌ನೆಟ್‌ನ ಬಳಕೆಯಿಂದಾಗಿ ವಿಶ್ವದ ಎಲ್ಲೆಡೆಯಲ್ಲೂ ಜ್ಞಾನದ ಪ್ರಸಾರ ಸತತವಾಗಿ ನಡೆದಿದ್ದು, ಜಾಗತೀಕರಣದಿಂದಾಗಿ ಸಾಮಾನ್ಯ ಜನರ ಜೀವನ ಮಟ್ಟವು ಎಲ್ಲ ಸ್ತರಗಳಲ್ಲೂ ಬದಲಾದುದನ್ನು ಕಣ್ಣಾರೆ ನೋಡುತ್ತಿದ್ದೇವೆ.

ಈ ರೀತಿಯಾಗಿ ನಮ್ಮ ಮನುಕುಲದ ನಾಗರಿಕತೆ ಸಹಸ್ರಾರು ವರ್ಷಗಳಲ್ಲಿ ತನ್ನ ಅವಶ್ಯಕತೆಯ ಪೂರೈಕೆಗಾಗಿ ಮತ್ತು ಕುತೂಹಲಭರಿತ ಜ್ಞಾನಾರ್ಜನೆಯಿಂದ ನಿರಂತರವಾಗಿ ಬೆಳೆಯುಯುವುದರ ಜೊತೆಗೆ ಬೆಳವಣಿಗೆಯ ವೇಗವೂ ಕೂಡ ವೃದ್ಧಿಸುತ್ತಿದೆ.

ಈ ಪ್ರಗತಿ ಕೇವಲ ಯಾವುದೇ ಒಂದು ಜನಾಂಗದಿಂದಾಗಲೀ, ರಾಷ್ಟ್ರದಿಂದಾಗಲೀ, ಭಾಷೆಯಿಂದಾಗಲೀ ಆದುದಲ್ಲ. ಇದು ವಿಶ್ವದ ಮನುಕುಲದ ಜ್ಞಾನದ ವಿಕಾಸದಿಂದಾದದ್ದು. ವಿಜ್ಞಾನದ ಪ್ರಗತಿ ವ್ಯಾಟಿಕನ್ನಿನ ಚರ್ಚಿನಲ್ಲಿ ನಡೆಯುವ ಹಬ್ಬ, ಮೆಕ್ಕಾದ ಪ್ರಾರ್ಥನೆ, ಹರಿದ್ವಾರದ ಕುಂಭಮೇಳ, ಯಲ್ಲಾಪುರದ ಎಲ್ಲಮ್ಮನ ಜಾತ್ರೆಯ ಸಂಭ್ರಮದ ಆಚರಣೆಗಳ ಜೊತೆ ಜೊತೆಗೆ ಮತೀಯ ಕಲಹ, ಅಂತರರಾಷ್ಟ್ರೀಯ ಯುದ್ಧ, ಭೂಕಂಪ, ಸುನಾಮಿ, ಚಂಡಮಾರುತ ಪಿಡುಗುಗಳ ಪರಿವೆ ಇಲ್ಲದಂತೆ ನಿರಂತರವಾಗಿ ಮುನ್ನಡೆಯುತ್ತಿದೆ.

ಇತಿಹಾಸದ ಉದ್ದಕ್ಕೂ ನಮಗೆ ನೇರವಾಗಿ ಗೋಚರವಾಗದ ಪ್ರಕೃತಿಯ ಸತ್ಯಗಳಾದ, ಬಾಹ್ಯಾಕಾಶದ ಕಲ್ಪನೆ, ಜೀವರಾಶಿಯ ಮೂಲ, ರೋಗ-ರುಜಿನದ ಸ್ಪಷ್ಟ ತಿಳುವಳಿಕೆ, ಸಾವಿನಾಚೆಯ ಅಗೋಚರತೆ, ಪುನರ್ಜನ್ಮ, ಸುಖ-ದುಃಖಗಳನ್ನು ಊಹಿಸಿ, ಅನುಮಾನಿಸಿ ನಾನಾ ರೀತಿಯ ಮೂಢಕಲ್ಪನೆಗಳಿಗೂ ತುತ್ತಾಗಿದ್ದೇವೆ. ಆದರೆ ಅವುಗಳ **ಸತ್ಯಾಸತ್ಯತೆ ನಮಗೆ ಕಾಲಕ್ರಮೇಣ ಖಗೋಳಶಾಸ್ತ್ರ, ಭೌತಶಾಸ್ತ್ರ, ರಸಾಯನಶಾಸ್ತ್ರ, ಸಸ್ಯ ಮತ್ತು ಜೀವಶಾಸ್ತ್ರಗಳ ಸಂಶೋಧನೆಯ ಮೂಲಕ ಲಭಿಸುತ್ತಾ ಬಂದಿವೆ. ಮನುಕುಲದ** ಅವನತಿ ಮತ್ತು ಪ್ರಗತಿ (ವಿ)ಜ್ಞಾನಕ್ಕೆ ನೇರವಾಗಿ ಸಂಬಂಧಿಸಿದುದಾಗಿದೆ. ಅವನತಿ ನಮ್ಮ ಅಜ್ಞಾನದಿಂದ ಅಥವಾ ಮೂಢಕಲ್ಪನೆಗಳಿಂದಾಗಿ ಉಂಟಾದರೆ, ಜ್ಞಾನ ಪ್ರಗತಿಗೆ ಪೂರಕವಾಗಿದೆ. ಇಲ್ಲಿ ಒಂದು ವಿಷಯವನ್ನು ಹೇಳಬೇಕು. ವಿಜ್ಞಾನದ ಶಕ್ತಿಯ ದುರುಪಯೋಗದಿಂದಾಗಿ ಹಲವಾರು ಅನಾಹುತಗಳಾಗಿವೆ. ಆದರೆ ಆ ಅನಾಹುತಗಳು ವಿಜ್ಞಾನದಿಂದ ಆದುದಲ್ಲ, ಅದು ಅವಿವೇಕಿ ಮನುಷ್ಯರ ದುರುಪಯೋಗದಿಂದಾಗಿ ಎನ್ನುವುದನ್ನು ಮರೆಯಬಾರದು.

ಶಿಲಾಯುಗ ಕಾಲದಿಂದ ಮನುಷ್ಯನ ಮೆದುಳು ಬೆಳೆದಂತೆ ಅವನು ಸಂಘಜೀವಿಯಾಗಿ ತನ್ನ ಬಂಧು ಬಾಂಧವರಲ್ಲಿ ಸಹಜ ಭಾವನೆಗಳಾದ ಸ್ನೇಹ, ಪ್ರೀತಿ, ಸಹನೆ, ಗುರು-ಶಿಷ್ಯ ಭಾವ, ಕರುಣೆ, ಶಾಂತ, ರಕ್ಷಣಾಭಾವ ಇತ್ಯಾದಿಗಳು ಬೆಳೆಯಿತು. ಇದನ್ನು ವಿಶ್ವದ ವಿವಿಧ ನಾಗರಿಕತೆಗಳಲ್ಲೂ ಗಮನಿಸಬಹುದು. ನಂತರ ಭಾಷೆಯ ಉತ್ಪನ್ನವಾದಂತೆ ಕುಲ, ಗುಂಪುಗಳು ಬೆಳೆದು ಸಂವಹನ ಶಕ್ತಿಯೊಂದಿಗೆ ತಮ್ಮ ತಮ್ಮ ನಂಬಿಕೆಗಳನ್ನು ಪೋಷಿಸಿಕೊಳ್ಳುತ್ತಾ ಪ್ರತ್ಯೇಕತೆಗಳನ್ನು ಕಂಡುಕೊಂಡವು. ಪ್ರಕೃತಿಯ ವೈಚಿತ್ರ್ಯಗಳನ್ನು ವೈಜ್ಞಾನಿಕವಾಗಿ ಅರ್ಥೈಸಲಾಗದೇ ವಿವಿಧ ರೀತಿಯ ಕಲ್ಪನೆಗಳಿಗೆ ಶರಣಾದರು. ಉದಾಹರಣೆಗೆ ಜನನ-ಮರಣ, ರೋಗ ರುಜಿನ, ಅಂಗವಿಕಲತೆ, ವೃದ್ಧಾಪ್ಯ, ಭೂಕಂಪ, ಪ್ರಳಯ, ಮಳೆ-ಗಾಳಿ, ಇತ್ಯಾದಿಗಳು. ಈ ಕಲ್ಪನೆಗಳು ನಮಗೆ ಮೀರಿದ ಒಂದು ಶಕ್ತಿಯನ್ನು ಪ್ರತಿಪಾದಿಸಿದವು. ಆ ಕಾಣದ ಶಕ್ತಿಯೇ ದೇವರಾಗಿ ಸಹಸ್ರಾರು ವರ್ಷಗಳಿಂದ ವಿವಿಧ ಸಮುದಾಯಗಳಿಗೆ ಒಂದು ಸಾಂತ್ವನ ನೀಡುತ್ತಾ ಬಂದಿರುವುದನ್ನು ಕಾಣಬಹುದು.

ನಮ್ಮ ಇತ್ತೀಚಿನ ದೇವರ ಕಲ್ಪನೆ ಸಾವಿರಾರು ವರ್ಷಗಳ ಹಿಂದಿನ ಕಲ್ಪನೆಗಿಂತ ಭಿನ್ನವಾಗಿರುವುದನ್ನು ಗಮನಿಸಬಹುದು. ಈಜಿಪ್ಟ್, ಗ್ರೀಕ್, ರೋಮನ್ ಮತ್ತು ಕ್ರಿ.ಪೂ. ಹಿಂದೂ ದೇವರ ಕಲ್ಪನೆಗಳಲ್ಲಿ ಪ್ರಕೃತಿಯ ಶಕ್ತಿಗಳನ್ನು ದೇವರಂತೆ ಕಾಣುವ ಕೆಲವು ಸಮಾನತೆಗಳನ್ನು ಗಮನಿಸಬಹುದು. ಆದರೆ ಆ ಭಕ್ತಿಯ ಭಾವ ಸ್ನೇಹ ಮತ್ತು ಕೃತಜ್ಞತೆಯ ರೀತಿಯಲ್ಲಿತ್ತು. ವೇದ ಕಾಲದಲ್ಲಿ ದೇವತೆಗಳಿಗೆ ಹವಿಸ್ಸನ್ನು ನೀಡುವುದು ಒಂದು ರೀತಿಯ ಸ್ನೇಹ-ಭಕ್ತಿಯಾಗಿ ತೋರುತ್ತದೆ.

ಆದರೆ ನಂತರದ ಕೆಲವು ಶತಮಾನಗಳಲ್ಲಿ ಅದರಲ್ಲೂ ಕ್ರೈಸ್ತ ಮತ್ತು ಇಸ್ಲಾಂ ಮತಗಳ ಸ್ಥಾಪನೆ ಮತ್ತು ಬೆಳವಣಿಗೆಯೊಂದಿಗೆ ವಿಭಿನ್ನ ರೀತಿಯ ಭಕ್ತಿ ಭಾವವು ವಿಶ್ವದ ಎಲ್ಲೆಡೆ ಪಸರಿಸಿದವು. ಆಳುವವರಿಗೆ ಈ ದೈವಿಕ ಭಕ್ತಿ ಒಂದು ಶಕ್ತಿಯಾಗಿ ಗೋಚರಿಸಿದರೆ ಆಳಿಸಿಕೊಳ್ಳುವವರಿಗೆ ಇದು ದೈನ್ಯತೆಯ ಅಥವಾ ಕಾರುಣ್ಯದ ಭಾವವಾಗಿ ಗೋಚರಿಸಿತು. ಪಾದ್ರಿಗಳು, ಮುಲ್ಲಾಗಳು, ರಾಜಗುರುಗಳು ಪರೋಕ್ಷವಾಗಿ ದೇವರ ರಾಯಭಾರಿಗಳಂತೆ ವರ್ತಿಸುತ್ತಾ ಅಧಿಕಾರದಲ್ಲಿ ಹಸ್ತಕ್ಷೇಪ ನಡೆಸಿದರು. ಇದೇ ಕಾಲದಲ್ಲಿ ಬೇರೆ-ಬೇರೆ ಸಮುದಾಯಗಳ ದೇವಾಲಯಗಳು ನಿರ್ಮಾಣವಾಗಿ ಅವರವರ ಭಕ್ತಿ ಮತ್ತು ಶಕ್ತಿಗಳ ಕೇಂದ್ರವಾಗಿ ಪ್ರದರ್ಶಿತಗೊಂಡವು. ಅಲ್ಪಸಂಖ್ಯಾತ ವರ್ಗವು ಬಹು ಸಂಖ್ಯಾತ ಅಥವಾ ಬಲಸಂಖ್ಯಾತವರ್ಗಕ್ಕೆ ಸೇರಲಾಗದಿದ್ದಲ್ಲಿ ಅವರ ನಂಬಿಕೆಗಳನ್ನು ಗೌಪ್ಯವಾಗಿಟ್ಟುಕೊಳ್ಳಬೇಕಿತ್ತು ಇಲ್ಲವಾದಲ್ಲಿ ಅವಹೇಳನಕ್ಕೆ ಗುರಿಯಾಗಬೇಕಾಗುತ್ತಿತ್ತು. ದೇವಾಲಯಗಳು ಭಕ್ತಿಯ ಬಹಿರಂಗ ಪ್ರದರ್ಶನಕ್ಕೆ ಸಾಧನಗಳಾದವು. ಆಳುವ ಮತೀಯರಿಂದ ಧರ್ಮದ ಹೆಸರಿನಲ್ಲಿ ಅಲ್ಪಸಂಖ್ಯಾತರು ಮತ್ತು ದುರ್ಬಲರ ಮೇಲೆ

ನಾನಾ ರೀತಿಯ ಶೋಷಣೆ, ಅತ್ಯಾಚಾರಗಳು ಬಹಿರಂಗವಾಗಿ ನಿರ್ಲಜ್ಜೆಯಿಂದ ನಡೆಯಿತು. ಈ ಅವಧಿಯಲ್ಲಿ ವಿವಿಧ ಧರ್ಮ, ಮತ ಮತ್ತು ಭಕ್ತಿ ಸಾಹಿತ್ಯಗಳ ಉದಯ ಮತ್ತು ಅಭ್ಯುದಯಗಳಾಯಿತು.

ಕ್ರಿ.ಶ. ೧೦–೧೨ ನೆಯ ಶತಮಾನದವರೆಗೆ ಭಾರತದಲ್ಲಿ ಸ್ಥಳೀಯ ಧರ್ಮಗಳಾದ ಹಿಂದು (ಶೈವ, ವೈಷ್ಣವ, ಶಾಕ್ತೇಯ, ಇತ್ಯಾದಿ), ಬೌದ್ಧ, ಜೈನ ಮತೀಯರು ಸಾಕಷ್ಟು ಶಾಂತಪೂರ್ವಕವಾಗಿ ತಮ್ಮ ತಮ್ಮ ಧಾರ್ಮಿಕ ನಂಬಿಕೆಗಳ ಜೊತೆಗೆ ರಾಜ್ಯ ನಡೆಯಿಸಿಕೊಂಡು ಹೋಗುತ್ತಿದ್ದ ಕಾಲ. ನಂತರ ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳ ಸತತ ಧಾಳಿಯಿಂದ ಮತ್ತು ಅವರ ಸೈನ್ಯ ಬಲದಿಂದ ಭಾರತೀಯರ ನೈತಿಕತೆ ಕುಗ್ಗಿ ಹತಾಶರಾದರು. ದುರ್ಬಲರು ಮತ್ತು ಅವಕಾಶವಾದಿಗಳು ಜೀವ ಭಿಕ್ಷೆಗಾಗಿ ತಮ್ಮ ಮತಗಳನ್ನು ಬದಲಾಯಿಸಿಕೊಂಡರು. ಉಳಿದವರು ದೇವರ ಮೇಲೆ ಭಾರ ಹಾಕಿ ದಿನ ನೂಕಿದರು. ದಬ್ಬಾಳಿಕೆಗಳಿಂದ ನಲುಗಿದ ಈ ಜನಕ್ಕೆ ದೈವದ ಮೇಲಿನ ಶರಣಾಗತಿಗಿಂತ ಬೇರೆ ಮಾರ್ಗವಿರಲಿಲ್ಲ. ದೈವ ಭಕ್ತಿಯು ಬಲಗೊಂಡಿದ್ದು ಈ ಆಪತ್ಕಾಲದಲ್ಲಿ. ಭಕ್ತಿ ಸಾಹಿತ್ಯದ ಮತ್ತು ಅದರ ವಿವಿಧ ಕಲಾಪ್ರಾಕಾರಗಳು ಅಪಾರ ಜನಪ್ರಿಯತೆಗಳಿಸಿದವು ಮತ್ತು ಬೆಳೆಯುತ್ತಾ ಹೋದವು. ಭಕ್ತಿ ಸಾಹಿತ್ಯದಿಂದ ಅನೇಕ ಪ್ರಯೋಜನಗಳಲ್ಲಿ ಮುಖ್ಯವಾದದ್ದು, ಪರಕೀಯರ ಧಾಳಿಯಲ್ಲಿ ಸ್ವದೇಶಿಯರನ್ನು ಒಂದುಗೂಡಿಸುವ ಸಾಧನವಾಗಿ ಮತ್ತು ಹತಾಶ ಮನಸ್ಸುಗಳಿಗೆ ಸಾಂತ್ವನ ನೀಡುವ ಏಕೈಕ ಸಾಧನವಾಗಿ ಸಹಕಾರಿಯಾಯಿತು.

ಕನ್ನಡದ ಭಕ್ತಿ ಸಾಹಿತ್ಯಕ್ಕೆ ಮೂಲ ಪದಾರ್ಥ ಪುರಾಣಗಳು ಮತ್ತು ಅದರಲ್ಲಿ ಬರುವ ಕಾಲ್ಪನಿಕವೆನ್ನಿಸುವ ಕಥಾವಸ್ತುಗಳು. ಈ ವಸ್ತುವನ್ನು ತೆಗೆದುಕೊಂಡು ಪ್ರತಿಭಾವಂತ ಕವಿಗಳಾದ ಪಂಪ, ರನ್ನ, ಪೊನ್ನ, ಜನ್ನ, ಕುಮಾರವ್ಯಾಸ, ಪುರಂದರ, ಹಲವು ವಚನ ಸಾಹಿತಿಗಳು ಅನ್ಯಾದೃಶವಾದ ಸಾಹಿತ್ಯವನ್ನು ಕನ್ನಡದಲ್ಲಿ ರಚಿಸಿದ್ದಾರೆ. ಇವರಲ್ಲದೆ ಅನೇಕ ಕವಿಗಳೂ, ಸಾಹಿತಿಗಳೂ ಕನ್ನಡದಲ್ಲಿ ಭಕ್ತಿ ಸಾಹಿತ್ಯವನ್ನು ಪುರಾಣಗಳ ಕಥೆಗಳ ಆಧಾರದಲ್ಲಿ ಹಲವಾರು ವಿನೂತನ ಕಲ್ಪನೆಗಳ ಮತ್ತು ಬಣ್ಣಬಣ್ಣದ ರೂಪಕಗಳ ಮೂಲಕ ರೋಚಕವಾಗಿಸುತ್ತಾ ಸಮೃದ್ಧವಾಗಿ ಸುಮಾರು ೧೦ ಶತಮಾನಗಳ ಕಾಲ ಬೆಳೆಸಿ ಪೋಷಿಸಿದ್ದಾರೆ.

ಈ ಭಕ್ತಿ ಸಾಹಿತ್ಯದ ಪ್ರವಾಸ ಸುಮಾರು ೨೦ನೆಯ ಶತಮಾನದವರೆವಿಗೂ ನಡೆಯಿತೆನ್ನಬಹುದು. ಸುಮಾರು ಕಥಾವಸ್ತುಗಳು ಚರ್ವಿತ ಚರ್ವಣವೆನಿಸಿದರೂ ಹೇಳುವ ರೀತಿ ಹೊಸಹೊಸದಾಗಿ ಜನರನ್ನು ಆಕರ್ಷಿಸಿದವು. ರಾಮಾಯಣ, ಮಹಾಭಾರತ, ಭಾಗವತ, ಶಿವ ಮತ್ತು ಗಣಪತಿ ಪುರಾಣಗಳು ಅದೆಷ್ಟು ಸಾಮಗ್ರಿಯನ್ನು ಸಾಹಿತ್ಯಕ್ಕೆ ಒದಗಿಸಿವೆ? ಈ ಸಾಹಿತ್ಯವನ್ನು ಜನರು ಇತರ ಕಲಾಪ್ರಾಕಾರಗಳಲ್ಲಿ ಅಂದರೆ

ಚಿತ್ರಕಲೆ, ಶಿಲ್ಪಕಲೆ, ನಾಟ್ಯ, ನಾಟಕ, ಸಂಗೀತ, ಇತ್ಯಾದಿಗಳ ಮೂಲಕ ಕೂಡ ಆನಂದಿಸಿದ್ದಾರೆ.

೧೬ನೆಯ ಶತಮಾನದಿಂದ ಈಚೆಗೆ ನಮ್ಮ ಜನರಲ್ಲಿ ನಿರುತ್ಸಾಹ ಮೂಡಿದುದನ್ನು ಕಾಣುತ್ತೇವೆ. 'ರಾಜಕೀಯ', 'ಸಾಮಾಜಿಕ', 'ಧಾರ್ಮಿಕ' ಪ್ರಪಂಚದಲ್ಲಿ ಜನರು ಕ್ಷೋಭೆಗೊಂಡು ಕಳೆಗೆಟ್ಟರು. 'ಸಪ್ತಮಂ ದೈವಚಿಂತನಂ'ಗೆ ಬದಲಾಗಿ 'ಪ್ರಥಮಂ ದೈವ ಚಿಂತನಂ' ಆರಂಭವಾಯಿತೆಂದು ತೋರುತ್ತದೆ. ಧರ್ಮ ದೈವಗಳ ಹೆಸರಿನಲ್ಲಿ ಕುರುಡು ನಂಬಿಕೆಗಳೂ, ಅಂಧಾನುಕರಣೆಗಳೂ ಬೇಕಾದಷ್ಟು ಆರಂಭವಾದವು. ಅವುಗಳ ಜೊತೆಗೆ ವಿಧಿ, ಕರ್ಮ, ಜನ್ಮಾಂತರ ಭಾವನೆ ಪ್ರಬಲಿಸಿ 'ದೈವೀ ವಿಚಿತ್ರಾಗತಿಃ', 'ಕಾಲಾಯ ತಸ್ಮೈ ನಮಃ', 'ದೈವಂ ಪರಂ ದುರ್ಜಯಂ', 'ಆರೇನ ಮಾಡುವರು ಆರಿಂದಲೇನಹುದು ಪೂರ್ವಜನ್ಮದ ಕರ್ಮ ವಿಧಿ ಬೆನ್ನ ಬಿಡದು' – ಎಂಬ ನುಡಿಗಳು ಮನಸ್ಸಿನಲ್ಲಿ ಮನೆಮಾಡಿಕೊಳ್ಳುವಂತಾಯಿತು. ಇದಕ್ಕೆ ಪ್ರತಿಭಟನೆಯನ್ನು ತಂದೊದಗಿಸಿತು ಪಾಶ್ಚಾತ್ಯರ ವೈಜ್ಞಾನಿಕ ಮನೋಭಾವನೆ.

೨೦ನೆಯ ಶತಮಾನದಲ್ಲಿ ನವೋದಯ ಸಾಹಿತ್ಯದೊಂದಿಗೆ ಕನ್ನಡದ ಸಾಹಿತ್ಯದಲ್ಲಿ ಹೊಸ ನೀರು ಹರಿಯಲು ಶುರುವಾಗಿ ಹೊಸ ಚಿಂತನೆಗಳಿಗೆ ನಾಂದಿಯಾಯಿತು. ಪಾಶ್ಚಿಮಾತ್ಯ ಸಾಹಿತ್ಯ ಭಕ್ತಿಯ ವಿಷಯದಿಂದ ಸರಿದು ಹಲವಾರು ಶತಮಾನಗಳೇ ಕಳೆದಿದ್ದರೂ ಕನ್ನಡವು ೨೦ನೆಯ ಶತಮಾನದವರೆಗೂ ಕಾಯಬೇಕಾಯಿತು.

ಕಳೆದ ಶತಮಾನದಿಂದ ನಮ್ಮ ಭಾರತೀಯ ಭಕ್ತಿಮಾರ್ಗ ಇನ್ನೊಂದು ನಿರ್ದಿಷ್ಟ ಆದರೆ ಅನಾರೋಗ್ಯಕರವಾದ ದಾರಿಯನ್ನು ಕಂಡುಕೊಂಡಂತೆ ತೋರುತ್ತದೆ. ಇದಕ್ಕೆ ಮೂಲ ಕಾರಣ ದೇಶದ ಸ್ವಾತಂತ್ರ್ಯದ ನಂತರ ವಿಜಾತೀಯ ಆಕ್ರಮಣ ಮತ್ತು ಯುದ್ಧದ ಪರಿಣಾಮಗಳು ಕಡಿಮೆಯಾಗಿ, ಪ್ರಜಾಪ್ರಭುತ್ವದ ನಿರ್ಮಾಣವಾಗಿ ವಿಜ್ಞಾನ, ತಂತ್ರಜ್ಞಾನಗಳು ಬೆಳೆದು ಜನಜೀವನದ ಸೌಕರ್ಯಗಳು ಉತ್ತಮವಾಗಿ ಜನರ ಲಕ್ಷ್ಯ ಆತ್ಮರಕ್ಷಣೆಯಿಂದ ಲೌಕಿಕದ ಕಡೆಗೆ ತಿರುಗಿತು. ಸೌಲಭ್ಯ ಮತ್ತು ಅಪರಿಮಿತ ಕಾಮನೆಗಳು ಸಾಮಾನ್ಯ ಜನರ ಅಪೇಕ್ಷೆಯ ಮಂತ್ರವಾಯಿತು. ಕಾಮನೆಗಳ ಪೂರೈಕೆಗಾಗಿ ನಾನಾ ರೀತಿಯ ತಂತ್ರಗಳು ಹುಟ್ಟಿಕೊಂಡವು. ಅವುಗಳಲ್ಲಿ ಭಕ್ತಿಯ ವಿನೂತನ ಕಲ್ಪನೆಗಳು ಜನಪ್ರಿಯವಾಯಿತು. ಇದರಲ್ಲಿ ದೇವಸ್ಥಾನದ ವ್ಯವಹಾರವನ್ನು ಒಂದು ವ್ಯಾಪಾರದ ರೀತಿಯಲ್ಲಿ ಪ್ರಚಾರ ಮಾಡಲಾರಂಭಿಸಿದರು. ಇಂಥಾ ಪೂಜೆಗೆ ಇಷ್ಟು ಬೆಲೆ ಮತ್ತು ಇದರ ಪ್ರಯೋಜನಗಳು ಹೀಗೆ ಎಂದು ಸುಲಭ ಪಟ್ಟಿಯು ಜನರನ್ನು ಆಕರ್ಷಿಸುತ್ತಿದೆ. ಹೊಸ ಹೊಸ ಬಾಬಾಗಳು, ಪವಾಡ ಪುರುಷರು ಎಲ್ಲೆಲ್ಲೂ ಕಂಡುಬರುತ್ತಿದ್ದಾರೆ. ಭಕ್ತಿ ಎನ್ನುವುದು ಪುರುಷಾರ್ಥ ಸಿದ್ಧಿಗಿಂತ ಇಹ ಲೋಕದಲ್ಲಿ ಮೇಲೆ ಬರಲು ಒಂದು ರೀತಿಯ ವ್ಯಾಪಾರವೆನ್ನುವಂತೆ ಪ್ರಚಾರಮಾಡಲಾಗುತ್ತಿದೆ. ಯಜ್ಞ, ವ್ರತ, ಹೋಮ,

ಇತ್ಯಾದಿ ದೈವಿಕ ಕ್ರಿಯೆಗಳು ನಮ್ಮ ಆಸೆಗಳನ್ನು ಪೂರೈಸಿಕೊಳ್ಳುವ ಸುಲಭ ಸಾಧನಗಳೆಂಬಂತೆ ದೇವಸ್ಥಾನಗಳು, ಪೂಜಾರಿಗಳು, ಸಾಧು ಸನ್ಯಾಸಿಗಳು, ಜ್ಯೋತಿಷಿಗಳು ಮತ್ತಿತರರು ಸಾಧಾರಣ ಮುಗ್ಧ ಜನರಿಗೆ ವಿಕ್ರಯಿಸುತ್ತಿದ್ದಾರೆ. ಇವರ ವ್ಯವಹಾರವನ್ನು ಕುದುರಿಸಲು ದಿಢೀರ್ ಸಾಹಿತ್ಯಗಳೂ ಸೃಷ್ಟಿಯಾಗುತ್ತಿವೆ. ಸ್ಥಳ ಪುರಾಣ, ಕ್ಷೇತ್ರ ಪುರಾಣ, ದೇವರ ಮತ್ತು ಸ್ವಾಮಿ, ಸನ್ಯಾಸಿಗಳ ಮೇಲೆ ಹೊಸ ಹೊಸ ಕಥೆ, ಕವನ, ಸಂಗೀತಗಳು ಪುಂಖಾನುಪುಂಖವಾಗಿ ಬೆಳೆಯುತ್ತಿವೆ. ಇದನ್ನು ನಂಬುವ ಮುಗ್ಧಜನರ ಸಂಖ್ಯೆಯೂ ಅಸಂಖ್ಯವಾಗಿದೆ. ಹಬ್ಬ ಹರಿದಿನಗಳನ್ನು ಭಕ್ತಿಯ ನೆವದಲ್ಲಿ ವ್ಯಾಪಾರೀಕರಿಸಲಾಗುತ್ತಿದೆ. ಇತಿಹಾಸ ಪ್ರಸಿದ್ಧ ಪುಣ್ಯ ಕ್ಷೇತ್ರಗಳು ವಂಚನೆಯ ಬೀಡಾಗುತ್ತಿವೆ. ಹೊಸ ಮಠ, ಆಶ್ರಮಗಳು ಶಾಂತಿ, ಸಂಪತ್ತುಗಳ ಆಮಿಷಗಳನ್ನು ಒಡ್ಡುತ್ತಾ ವ್ಯಾಪಾರವನ್ನು ಸಮೃದ್ಧಿಯಾಗಿ ಬೆಳೆಸುತ್ತಿವೆ. ಇದರ ಪ್ರಚಾರ ಕಾರ್ಯಕ್ಕೆ ನಿರ್ದಿಷ್ಟ ಭಕ್ತಿ ಸಾಹಿತ್ಯಗಳನ್ನು ಸೃಷ್ಟಿಸಿ ಉಪಯೋಗಿಸಿಕೊಳ್ಳಲಾಗುತ್ತಿದೆ.

ಇದಕ್ಕೆ ಪರ್ಯಾಯವೆನ್ನುವಂತೆ ವೈಜ್ಞಾನಿಕ ಮನೋಭಾವನೆಗಳೂ ಸಹ ಜನರಲ್ಲಿ ಸ್ವತಂತ್ರ ವಿವೇಚನೆಯನ್ನು ಬೆಳೆಸುತ್ತಿದೆ. ಇದರ ಫಲವಾಗಿ ನಮ್ಮಲ್ಲಿದ್ದ ಕುರುಡು ನಂಬಿಕೆಗಳೆಲ್ಲಾ ಹಾರಿಹೋಗಿವೆ. ಅಂಧಶ್ರದ್ಧೆಗೆ ಅರ್ಧಚಂದ್ರ ಪ್ರಯೋಗವಾಗಿದೆ. ಶ್ರದ್ಧೆಗಿಂತಲೂ ಬುದ್ಧಿಗೆ ಪ್ರಧಾನ ಸ್ಥಾನ ದೊರಕಿದೆ. ಶ್ರುತಿ ಪ್ರಮಾಣಕ್ಕಿಂತಲೂ ಮತೀಯ ಸಂಶೋಧನೆಗೆ ಹೆಚ್ಚೆಚ್ಚು ಮನ್ನಣೆ ದೊರೆತಿದೆ. ಮತೀಯ ಒರೆಗಲ್ಲಿನ ಪರೀಕ್ಷೆಯಲ್ಲಿ ತೇರ್ಗಡೆ ಹೊಂದದ ಯಾವ ನಂಬುಗೆಯೂ ಬದುಕುವಂತಿಲ್ಲ. ಪವಿತ್ರವಾದುದೆಂದೂ ಪ್ರಶ್ನೆಗೆ ಅತೀತವಾದುದೆಂದು ಭಾವಿಸಿದ್ದ ಪುರಾಣ ಪುಣ್ಯಕಥೆಗಳೆಲ್ಲವೂ ವಿಜ್ಞಾನ ದೃಷ್ಟಿಯ ಫಲವಾಗಿ ನಮ್ಮ ವಿಮರ್ಶೆಗೂ ಟೀಕೆಗೂ ಒಳಗಾಗಬೇಕಾಗಿದೆ. ಮತಸೂಚಕಗಳಾದ ವಿಭೂತಿಯುಂಡೆ, ತುಲಸೀಮಣಿಗಳ ಪ್ರಾಬಲ್ಯ ನಿಂತುಹೋಗುತ್ತಿದೆ. ಮತ ದೃಷ್ಟಿಯೆಂಬುದು ಹಿಂದಿನಂತೆ ಪ್ರಚಾರಶೀಲವಾಗಿರದೆ ವಿಚಾರಾತ್ಮಕವಾಗುತ್ತಿದೆ. ಅದರಲ್ಲಿದ್ದ ಭಿನ್ನ ಮನೋಧರ್ಮಗಳು ಮಾಯವಾಗಿ ವಿಶಾಲಭಾವನೆ ಬೆಳೆಯುತ್ತಿದೆ. 'ಉದಾರ ಚರಿತಾನಾಂತು ವಸುಧೈವ ಕುಟುಂಬಕಂ' ಅಹುದು. ವಿಜ್ಞಾನದಿಂದ ಬಂದಿರುವ ಯಂತ್ರಸಾಧನೆಗಳ ಫಲವಾಗಿ ಬೆಲೆಗಳು ಕುಗ್ಗಿವೆ ಮತ್ತು ಸಾಮಾನ್ಯ ಮನುಷ್ಯರಿಗೂ ಲಭ್ಯವಾಗಿವೆ. ಜನರೆಲ್ಲರೂ ಬೇಕಿರಲಿ ಬೇಕಿಲ್ಲದಿರಲಿ ಪರಸ್ಪರ ಕಲೆಯುವುದು ಅನಿವಾರ್ಯವಾಗಿದೆ. ಜಗತ್ತಿನ ಮೂಲೆಮೂಲೆಗಳಲ್ಲಿ ನಡೆಯುವುದನ್ನು ಕೊಠಡಿಯ ಮೂಲೆಯಲ್ಲಿ ಕುಳಿತೇ ಕೇಳುವ, ನೋಡುವ ಅನುಕೂಲವಿರುವುದರಿಂದ ನಮಗೆ ಅರಿವಿಲ್ಲದೆಯೇ ನಮ್ಮ ಜ್ಞಾನ ವೃದ್ಧಿಯಾಗುತ್ತಿದೆ. ಆಧುನಿಕ ಜಗಜ್ಜೀವನ ರಾಜಕೀಯಾಗ್ನಿ-ಯಿಂದ ಕುದಿಯುತ್ತಿರುವುದರಿಂದ ಅದರ ಕಾವು ನಿತ್ಯ ಜೀವನದಲ್ಲೂ ಅದರ ಪ್ರತಿಬಿಂಬವಾದ ಸಾಹಿತ್ಯದಲ್ಲಿಯೂ ಮನೆ ಮಾಡಿಕೊಳ್ಳುತ್ತಿದೆ.

ಹೀಗೆ ವಿಚಿತ್ರವಾದರೂ ಸತ್ಯವೆನ್ನುವಂತೆ ನಾವು ಈಗ ಎರಡು ಜಗತ್ತನ್ನು ನೋಡುತ್ತಿದ್ದೇವೆ. ಒಂದು ವೈಜ್ಞಾನಿಕ ಮತ್ತು ಪ್ರಗತಿಪರವಾಗಿದ್ದರೆ ಇನ್ನೊಂದು ಹಳೆಯ ಕಂದಾಚಾರಗಳ ಪುನರ್ನವೀಕರಣವಾಗುತ್ತಿರುವುದು. ಒಬ್ಬ ಮನುಷ್ಯನಿಗೆ ಎರಡು ಮುಖಗಳಿದ್ದಂತೆ, ಒಂದು ಭೌತಿಕ ಅಂಶಗಳ ನೆಲೆಯಲ್ಲಿ ಬಹುಮಟ್ಟಿಗೆ ವಿಜ್ಞಾನವನ್ನವಲಂಬಿಸಿದ ಜೀವನಾಧಾರಕ್ಕೆ ಅವಶ್ಯಕವಾದ ಕಾಯಕ ಮತ್ತೊಂದು ಒಂದು ಭಾವುಕ ಅಥವಾ ಭ್ರಮಾಧೀನ ಪ್ರಪಂಚ. ಇವೆರಡೂ ಒಂದಕ್ಕೊಂದು ಪೂರಕವಾಗಿ ಆರೋಗ್ಯಕಾರಿಯಾಗಿದ್ದರೆ ಒಳ್ಳೆಯದು. ಆದರೆ ಅವೆರಡೂ ಪರಸ್ಪರ ವಿರೋಧಾಭಾಸ ವಾಗಿದ್ದರೆ ಬಹುಶಃ ಅದರ ಪ್ರಯೋಜನ ಅಷ್ಟೊಂದು ಉಪಯುಕ್ತವಲ್ಲವೆಂದೆನಿಸುತ್ತದೆ.

ಈಗ ಉದಾಹರಣೆಗಾಗಿ ಕೆಲವು ಭಕ್ತಿಸಾಹಿತ್ಯಕ್ಕೆ ಸಂಬಂಧಿಸಿದ ಕಾವ್ಯಗಳಲ್ಲಿ ಬರುವ ವೈಚಿತ್ರ್ಯಗಳನ್ನು ಗಮನಿಸೋಣ.

ಭಕ್ತಿಯ ಕೆಲವು ವಚನಗಳು ಹಲವು ಹಳೆಯ ಕಂದಾಚಾರಗಳನ್ನು ದೂಷಿಸುವಂತೆ ತೋರಿದರೂ ಮತ್ತೊಂದು ಕಂದಾಚಾರವನ್ನು ಯಾವುದೇ ಆಧಾರವಿಲ್ಲದೆ ಪ್ರತಿಪಾತಿಸುತ್ತದೆ. ಕೆಲವು ಉದಾಹರಣೆಗಳನ್ನು ನೋಡೋಣ. ಸ್ಥಳಾವಕಾಶದಿಂದ ಪೂರ್ಣಪಾಠವನ್ನು ಕೊಟ್ಟಿಲ್ಲ.

**ಉದರ ವೈರಾಗ್ಯವಿದು, ನಮ್ಮ ಪದುಮನಾಭನಲಿ ಲೇಶ ಭಕುತಿಯಿಲ್ಲ..**
**ಹರಿಯ ಭಜನೆಮಾಡೊ ನಿರಂತರ ಪರಗತಿಗಿದು ನಿರ್ಧಾರ ನೋಡೊ..**
**ನಾರಾಯಣ ನಿನ್ನ ನಾಮದ ಬಲವೊಂದಿದ್ದರೆ ಸಾಕು...**
**ನಾದಪ್ರಿಯ ಶಿವನಲ್ಲ, ವೇದಪ್ರಿಯ ಶಿವನಲ್ಲ, ಭಕ್ತಿ ಪ್ರಿಯ ಶಿವನು..**
**ಎಲವೋ ಎಲವೋ ಪಾಪಕರ್ಮ ಮಾಡಿದವನೇ...**

ಸಹೃದಯ ವಿಮರ್ಶಕರು ಮತ್ತು ವ್ಯಾಖ್ಯಾನಕಾರರು ಇವುಗಳಿಂದ ಗಹನ ತತ್ವಗಳನ್ನು ಮತ್ತು ಉಪದೇಶಸಾರಗಳನ್ನು ಹುಡುಕಿ ತೆಗೆಯುತ್ತಾರೆ. ಆದರೆ ತೊಂದರೆ ಏನೆಂದರೆ ಈ ತತ್ವಗಳು ಭಕ್ತಿಯ ಮಾರ್ಗವನ್ನು ಪ್ರತಿಪಾದಿಸುತ್ತಾ ಅದು ಯಾವ ರೀತಿಯಲ್ಲಿ ನಮ್ಮನ್ನು ಉನ್ನತಿಗೆ ಕರೆದೊಯ್ಯುತ್ತದೆಯೆನ್ನುವುದು ಸ್ಪಷ್ಟವಾಗಿ ತಿಳಿಯಗೊಡುವುದಿಲ್ಲ. ಅಷ್ಟೊಂದು ಶತಮಾನಗಳಿಂದ ಇವು ಚಾಲನೆಯಲ್ಲಿದ್ದು ಜನಪ್ರಿಯವಾಗಿದ್ದರೂ ನಮ್ಮ ಸಮಾಜವು ಪ್ರಾಮಾಣಿಕತೆಯಲ್ಲಿ ಮತ್ತು ಧಾರ್ಮಿಕತೆಯಲ್ಲಿ ಏಳ್ಗೆ ಸಾಧಿಸಿದೆಯೆನ್ನುವುದಕ್ಕೆ ಯಾವುದೇ ಆಧಾರವಿಲ್ಲ ಮತ್ತು ನಮ್ಮ ಜನರ ನೈತಿಕ ಅಧಃಪತನದ ಬಗ್ಗೆ ದಿನನಿತ್ಯ ಸುದ್ದಿಗಳನ್ನು ಕೇಳುತ್ತಲೇ ಇದ್ದೇವೆ. ಹಾಗಾಗಿ ಭಕ್ತಿ ಸಾಹಿತ್ಯ ಒಂದು ರೀತಿಯಲ್ಲಿ ಪುಸ್ತಕದ ಸಾಹಿತ್ಯವಾಗಿ ಒಂದು ಸರ್ವತೋಮುಖ ಉನ್ನತಿಗೆ ಸಾಧಕವಾಗಿಲ್ಲವೆಂದೆನಿಸುತ್ತದೆ.

ಭಕ್ತಿಮಾರ್ಗ ಪ್ರಚಾರದ ಮುಖ್ಯ ಗುಟ್ಟು – ಆಮಿಷ ಅಥವಾ ಭಯ. ಅದರ ಫಲಶೃತಿಯೆಂದು ಮೂಲ ಸಾಹಿತ್ಯದಲ್ಲೇ ಸೇರಿಸಲಾಗುತ್ತದೆ. ಇದು ಸ್ವಲ್ಪ ಯೋಚನಾಸಕ್ತರನ್ನು ಗೊಂದಲಕ್ಕೀಡುಮಾಡುತ್ತದೆ. ಭಯಕ್ಕಾಗಿ ಅಥವಾ ಆಸೆಗಾಗಿ ಭಕ್ತಿ ಮಾಡಿದರೆ ಅದೊಂದು ರೀತಿಯ ವ್ಯವಹಾರವಲ್ಲವೆ? ದೇವರೊಡನೆಯ ಸಂಬಂಧ ನಿಜವಾಗಲೂ ಈ ರೀತಿಯಾದುದೇ ಎಂದು ವಿಚಾರವಂತರಿಗೆ ಕಾಡುವುದು ಸಹಜ. ಪ್ರತಿಫಲಾಕಾಂಕ್ಷೆಯಿಲ್ಲದೆ ಕೇವಲ ಆತ್ಮಶಾಂತಿಗಾಗಿ ಮಾಡಿಕೊಳ್ಳುವ ಪ್ರಾರ್ಥನೆ ಮನಸ್ಸಿಗೆ ಶಾಂತಿಯನ್ನು ಕೊಡಬಹುದು. ಆದರೆ ಬಯಕೆ ತುಂಬಿದ ಪ್ರಾರ್ಥನೆ ನಿರಾಶೆಯಲ್ಲಿ ಕೊನೆಯಾದರೆ ಆಶ್ಚರ್ಯವಿಲ್ಲ.

ಹಾಗೆಂದು ಹೇಳುತ್ತಾ ಕನ್ನಡದ ಭಕ್ತಿಸಾಹಿತ್ಯವನ್ನೆಲ್ಲಾ ಸಾರಾಸಗಟಾಗಿ ತಳ್ಳುವುದಲ್ಲ. ಅನೇಕ ಭಕ್ತಿ ಕಾವ್ಯಗಳು ಅದ್ಭುತವಾದ ಸೃಜನಾತ್ಮಕ ಕೃತಿಗಳಾಗಿವೆ. ಪಂಪ ಮತ್ತು ಕುಮಾರವ್ಯಾಸರು ಕನ್ನಡದ ಮೇರು ಕವಿಗಳು. ಕನ್ನಡದ ವಚನ ಮತ್ತು ದಾಸ ಸಾಹಿತ್ಯದಲ್ಲಿ ಹೇರಳವಾದ ಭಕ್ತಿ ಸಾಹಿತ್ಯ ತುಳುಕುತ್ತಿದೆ. ಸುಮಾರು ೧೧ನೆಯ ಶತಮಾನದಿಂದ ೧೯ನೆಯ ಶತಮಾನದವರೆಗೆ ವಿಪುಲವಾದ ಭಕ್ತಿ ಸಾಹಿತ್ಯ ಕೃತಿಗಳು ರಚಿಸಲ್ಪಟ್ಟವು. ಇವೆಲ್ಲವೂ ಕನ್ನಡ ಸಾಹಿತ್ಯದ ಅಮೂಲ್ಯವಾದ ಆಸ್ತಿ ಎಂದೇ ಹೇಳಬಹುದು. ಅದ್ಭುತ ಸಾಹಿತ್ಯ, ಗೇಯತ್ವ ಮತ್ತು ಘನ ತತ್ವಗಳು ಇದರ ವೈಶಿಷ್ಟ್ಯ. ವಚನಗಳಂತೂ ಅಪ್ಪಟ ಕನ್ನಡ ನೆಲದ ಸಾಹಿತ್ಯ. ಈ ರೀತಿಯ ಸಾಹಿತ್ಯ ಭಾರತದ ಮತ್ತಾವ ಭಾಷೆಯಲ್ಲೂ ಕಂಡುಬರುವುದಿಲ್ಲವೆಂದು ವಿದ್ವಾಂಸರ ಅಭಿಪ್ರಾಯ. ಇದು ಹೆಮ್ಮೆಪಡುವ ವಿಷಯ. 'ಕಾಯಕವೇ ಕೈಲಾಸ' ಮತ್ತು 'ತನ್ನ ತಾನರಿದರೆ ತನ್ನರಿವೇ ಗುರು' ಅನ್ನುವ ಕಲ್ಪನೆಗಳು ಯಾವ ಉಪನಿಷದ್ವಾಕ್ಯಗಳಿಗೂ ಕಡಿಮೆಯಿಲ್ಲದ್ದು.

ಭಕ್ತಿ ಸಾಹಿತ್ಯವು ಕಲೆಗೆ ಅದರಲ್ಲೂ ಚಿತ್ರಕಲೆ, ಶಿಲ್ಪಕಲೆ, ನಾಟ್ಯ, ನಾಟಕ, ಸಿನಿಮಾ, ಸಂಗೀತ, ಇತ್ಯಾದಿಗಳಿಗೆ ಅಪರಿಮಿತ ವಸ್ತುಗಳನ್ನು ಒದಗಿಸಿ ಈ ಕಲಾಪ್ರಕಾರಗಳ ಅದ್ಭುತ ಬೆಳವಣಿಗೆಗೆ ಕಾರಣವಾಗಿದೆ. ಭಕ್ತಿ ಸಂಗೀತದಲ್ಲಿ ಎಂತಹವನನ್ನಾದರೂ ಗಂಧರ್ವಲೋಕಕ್ಕೆ ಕರೆದೊಯ್ಯುವ ಶಕ್ತಿ ಇದೆ. ಇದನ್ನು 'ಭಾವೋನ್ಮಾದ' ಎಂದು ಕರೆಯಬಹುದು. ಇದು ಸಾತ್ವಿಕವಾದಾಗ ಎಲ್ಲವೂ ಸುಂದರ ಹಾಗೂ ಮಧುರ.

ಆದರೆ ಆವೇಶಕ್ಕೊಳಗಾದ ಭಕ್ತಿ ಅತ್ಯಂತ ಕ್ರೂರವಾಗಲೂಬಹುದು. ಉದಾಹರಣೆಗೆ ಮತೀಯ ಭಕ್ತಿಯಲ್ಲಿ ಮುಳುಗಿದ ಉಗ್ರಗಾಮಿಗಳು ಭಯೋತ್ಪಾದಕ ಕೃತ್ಯಗಳಿಗೆ ತೊಡಗಿ ತಮ್ಮ ಕೃತ್ಯವನ್ನು ಸಮರ್ಥಿಸಿಕೊಳ್ಳಬಹುದು. ದೇವರ ಭಕ್ತಿಯ ನೆವದಲ್ಲಿ ನಮ್ಮಲ್ಲೂ ಕೂಡ ಕಳೆದ ಕೆಲವು ಶತಮಾನಗಳಲ್ಲಿ ಹೆಣ್ಣಿಗಾಗಿರುವ ಶೋಷಣೆ ಅಪರಿಮಿತ. ಒಟ್ಟಾರೆ ಮೇಲ್ನೋಟಕ್ಕೆ ಭಕ್ತಿಯು ಶಾಂತಿ, ಸಹನೆ, ಅಹಿಂಸೆಯಂತೆ ತೋರಿದರೂ ಹಲ ಕೆಲವು ಉಗ್ರ ಭಕ್ತರ ಮೌಢ್ಯದಿಂದ ಆಗಿರುವ ಅನಾಹುತಗಳು ಅಪಾರ. ಪ್ರತಿ ವರ್ಷ

ಕುಂಭಮೇಳಗಳಲ್ಲಿ ಲಕ್ಷಾಂತರ ಭಕ್ತರು ಸೇರುತ್ತಾರೆ ಆದರೆ ಅಲ್ಲಿ ಒಂದಲ್ಲ ಒಂದು ಕಾರಣದಿಂದ ನೂರಾರು ಮಂದಿಯ ಪ್ರಾಣಹರಣವಾಗುತ್ತದೆ. ಇದು ಯಾವ ರೀತಿಯ ಭಕ್ತಿಯ ಪ್ರದರ್ಶನ? ಮುಗ್ಧ ಜನರಲ್ಲಿ ಭಕ್ತಿ ಸಂಬಂಧಿಸಿದ 'ನಂಬಿಕೆ' ಯಲ್ಲಿ ಚಿಂತನೆಗೆ ಸ್ಥಳವಿಲ್ಲ. ಹಲವಾರು ಮೂಢನಂಬಿಕೆಗಳಿಗೂ ಕಾರಣವಾಗಿದೆ. ಉದಾಹರಣೆಗೆ ಸುಮಾರು ಶತಮಾನಗಳಿಂದ ಮಾರಮ್ಮನಿಗೆ ಕೋಣ, ಕುರಿ, ಕೋಳಿಗಳ 'ಬಲಿ' ಕೊಡುವುದು ಚಾಲ್ತಿಯಲ್ಲಿದೆ. ಇದನ್ನು ಪ್ರತಿಪಾದಿಸುವ ಸಾಹಿತ್ಯ, ಸಂಗೀತ, ನೃತ್ಯಗಳಿವೆ.

ಕೆಲವು ಆಧಾರಿತ ಅಂಕಿ ಅಂಶಗಳ ಪ್ರಕಾರ ವಿಶ್ವದಲ್ಲಿ ಈವರೆಗೆ ನಡೆದಿರುವ ಯುದ್ಧಗಳಲ್ಲಿ ಮಡಿದವರ ಸಂಖ್ಯೆಗಿಂತಾ ಮತೀಯ ಸಂಘರ್ಷಣೆಗಳಲ್ಲಿ ಮಡಿದವರ ಸಂಖ್ಯೆಯು ಸುಮಾರು ಪಟ್ಟು ಅತ್ಯಧಿಕವೆಂದು ಸಾಬೀತಾಗಿದೆ.

ಹಲವಾರು ಶತಮಾನಗಳಲ್ಲಿ ಲಕ್ಷಾಂತರ ಪ್ರಾಣಹಾನಿಗೆ ಕಾರಣವಾದ – ಪ್ಲೇಗ್, ಮಲೇರಿಯಾ, ಸಿಡುಬು, ಇತ್ಯಾದಿ ಪಿಡುಗುಗಳ ನಿವಾರಣೆಗಾಗಿ 'ಭಕ್ತಿ' ಪರಾಕಾಷ್ಠೆಯ ಪರೀಕ್ಷೆಯಾಗಿರಬಹುದೆಂದು ಸುಲಭವಾಗಿ ಊಹಿಸಬಹುದು. ಆದರೆ ಅದರ ನಿವಾರಣೆಯಾದದ್ದು ವಿಜ್ಞಾನದಿಂದ ಎನ್ನುವುದನ್ನು ಮರೆಯಬಾರದು. ಭಕ್ತಿಯೆನ್ನುವ ವರ್ತುಲದಲ್ಲಿ ಸಿಲುಕಿ ನಲುಗಿದ ಯೂರೋಪ್ ೧೫ನೆಯ ಶತಮಾನದ ರಿನೆಸಾನ್ಸ್ ಕಾಲದಲ್ಲಿ ವೈಚಾರಿಕ ಹಿನ್ನೆಲೆಯಿಂದ ಹೊರಬಂದು ವಿಜ್ಞಾನದ ಮೂಲಕ ಸಾಧಿಸಿದ ಅಪೂರ್ವ ಯಶಸ್ಸನ್ನು ಜಗತ್ತು ಮರೆಯುವಂತಿಲ್ಲ.

ನಮ್ಮ ಚಿತ್ರಪಟಗಳ ತುಂಬಾ ಸಂತರು, ಬಾಬಾಗಳು ತುಂಬಿ ತುಳುಕುತ್ತಿದ್ದಾರೆ. ಆದರೆ ನಮ್ಮವರೇ ಆದ ನೊಬಲ್ ಪ್ರಶಸ್ತಿ ವಿಜೇತ ಡಾ. ಸಿ. ವಿ. ರಾಮನ್ ಅವರನ್ನಾಗಲೀ, ವಿಶ್ವೇಶ್ವರಯ್ಯರವರನ್ನಾಗಲೀ, ಡಾ. ಯು. ಆರ್. ರಾವ್ ಅವರನ್ನಾಗಲೀ ಅಷ್ಟೇ ಭಕ್ತಿಯಿಂದ ಪೂಜಿಸುತ್ತೇವೆಯೆ? ನಮ್ಮ ಜೀವನದಲ್ಲಿ ಅವರ ಕೊಡುಗೆಗಳು ಯಾವ ರೀತಿಯಲ್ಲಿ ಸಂತರು ಅಥವಾ ಬಾಬಾಗಳಿಗಿಂತ ಕಡಿಮೆ? ಯಾವಾಗ ನಾವು ವಿಜ್ಞಾನಿಗಳನ್ನು ಸಂತರಂತೆ ಪೂಜಿಸುತ್ತೇವೆ? ನಾವು ಅವರನ್ನು ಸಂತರಂತೆ ಖಂಡಿತಾ ಪೂಜಿಸಬೇಕಾಗಿಲ್ಲ. ಆದರೆ ಅವರಿಂದ ಸಮಾಜಕ್ಕಾಗಿರುವ ಕೊಡುಗೆ ಸಾಧು, ಸಂತರಿಗಿಂತ ಮಿಗಿಲಾದುದು ಎನ್ನುವುದನ್ನು ಅರಿಯಬೇಕು. ಅವರ ಸಾಧನೆಗಳು ಕಟ್ಟು ಕಥೆಯಲ್ಲ, ಸತ್ಯವಾದದ್ದು. ನಾವು ವಿಜ್ಞಾನದ ಸಾಧನೆಯ ಮಹತ್ವವನ್ನು ಪೂರ್ಣವಾಗಿ ಅರಿಯದೆ ಪವಾಡ ಪುರುಷರ ಪವಾಡಗಳನ್ನು ನೋಡಿ ಧನ್ಯರಾಗುತ್ತೇವೆ ಮತ್ತು ಭಕ್ತಿಪರವಶವಾಗುತ್ತೇವೆ. ಇವುಗಳ ವ್ಯತ್ಯಾಸವನ್ನು ತಿಳಿದುಕೊಳ್ಳುವುದು ಅತ್ಯವಶ್ಯಕ.

ಭಕ್ತಿಯ ಮೂಲ ಮಂತ್ರ 'ತೃಪ್ತಿ' ಅಥವಾ 'ಸಾಕು' ಎನ್ನುವುದರಲ್ಲಿದ್ದರೆ ಪ್ರಗತಿಯ ಮಾನದಂಡ 'ಬೇಕು' ಎನ್ನುವುದರಲ್ಲಿದೆ.

'ತೃಪ್ತಿ' ಮತ್ತು 'ಸಾಕು' ಎನ್ನುವುದರಲ್ಲಿ ಸಾವಿದ್ದರೆ 'ಬೇಕು' ಎನ್ನುವುದರಲ್ಲಿ ಬದುಕಿದೆ.

ಭಕ್ತಿಸಾಹಿತ್ಯ ಒಂದು ರೀತಿಯಲ್ಲಿ ಮುಗಿಯುತ್ತಿರುವ ಅಧ್ಯಾಯ. ಅದರ ಪ್ರಯೋಜನವನ್ನು ಪಡೆದದ್ದಾಗಿದೆ. ಇತಿಹಾಸದಲ್ಲಿ ದಾಖಲಾಗಿದೆ ಕೂಡ. ನಮ್ಮ ಇತ್ತೀಚಿನ ವರ್ಷಗಳ ಭಕ್ತಿ ಸಾಹಿತ್ಯ ಆಶಾದಾಯಕವಾಗಿಲ್ಲ. ನಾವಿಂದು ಮುಂದೆ ನೋಡಬೇಕು. ಹೊಸ ಸಾಹಿತಿಗಳಿಗೆ ನನ್ನ ನಮ್ರ ಕೋರಿಕೆ – ಕನ್ನಡದಲ್ಲಿ ಭಕ್ತಿ ಸಾಹಿತ್ಯವು ಈಗಾಗಲೇ ಸಂಪತ್ಭರಿತವಾಗಿದೆ. ಹೊಸದನ್ನೇನಾದರೂ ಹೇಳುವುದಿದ್ದಲ್ಲಿ ಸರಿ ಆದರೆ ಮತ್ತೆಮತ್ತೆ ಚರ್ವಿತ ಚರ್ವಣವಾದ ಹಳೇ ವಿಷಯಗಳನ್ನು ಕುರಿತು ಸಾಹಿತ್ಯವನ್ನು ಬೆಳೆಸುವುದು ಬೇಡ. ಆದರೆ ಅಗತ್ಯತೆ ಕಾಣುವುದಿಲ್ಲ. ಈಗಾಗಲೇ ಕನ್ನಡದ ಭಕ್ತಿಸಾಹಿತ್ಯದಲ್ಲಿ ನಕಲುಗಳು ಮತ್ತು ನಕಲುಗಳ ನಕಲುಗಳು ಬೇಕಾದಷ್ಟಿವೆ. ಭಾಷಾ ಶಾಸ್ತ್ರಜ್ಞರ ಪ್ರಕಾರ ಕನ್ನಡ ಭಾಷೆಗೇ ಕುತ್ತು ಬಂದಿರುವಾಗ ಈ ರೀತಿಯ ಸಾಹಿತ್ಯವನ್ನು ಬೆಳೆಸುವುದು ಉಪಯೋಗಕಾರಿಯಲ್ಲ. ಅದಕ್ಕೆ ಬದಲಾಗಿ ಕನ್ನಡ ಭಾಷೆಯನ್ನು ವೈಜ್ಞಾನಿಕವಾಗಿ ಬೆಳೆಯಿಸುವುದರಲ್ಲಿ ಹೆಚ್ಚು ಅರ್ಥವಿದೆ. ಇದು ಭವಿಷ್ಯದ ದೃಷ್ಟಿಯಿಂದ ಎಲ್ಲ ರೀತಿಯಲ್ಲೂ ಪ್ರಯೋಜನಕಾರಿ.

ಕನ್ನಡದ ಲಿಖಿತ ಸಾಹಿತ್ಯದಲ್ಲಿ ಭಕ್ತಿ ಕುರಿತಾದ ಮತ್ತು ವಿಜ್ಞಾನ ಕುರಿತಾದ ಪುಸ್ತಕದ ಸಂಖ್ಯೆಗಳನ್ನು ಗಮನಿಸಿದಲ್ಲಿ ಬಹುಶಃ ಶೇಕಡ ೯೯ ಭಕ್ತಿ ಸಾಹಿತ್ಯಕ್ಕೆ ಸಂಬಂಧಿಸಿದ್ದುದಾದರೆ ೧% ವಿಜ್ಞಾನ ಕುರಿತಾದದ್ದಿರಬಹುದು. ಇದು ವಸ್ತು ವಿಷಯ ಮತ್ತು ಭಾಷೆಯ ದೃಷ್ಟಿಯಿಂದ ಆರೋಗ್ಯಕರವಲ್ಲ. ವಿಜ್ಞಾನದ ಮಹತ್ವದ ಮತ್ತು ಅವಶ್ಯಕತೆಯ ಪ್ರಚಾರ ಹೆಚ್ಚಾಗಿ ಆಗಬೇಕು.

ಒಟ್ಟಿನಲ್ಲಿ ಭಕ್ತಿ ಸಾಹಿತ್ಯದ ಬಗ್ಗೆ ನನ್ನ ತಕರಾರನ್ನು ನಾಲ್ಕಾರು ಸಾಲುಗಳಲ್ಲಿ ಹೇಳಬೇಕೆಂದರೆ, ಕನ್ನಡದಲ್ಲಿ ಸುಮಾರು ಒಂದು ಸಾವಿರ ವರ್ಷಗಳ ಭಕ್ತಿ ಸಾಹಿತ್ಯ ತುಂಬಿ ತುಳುಕುತ್ತಿದೆ. ಅಷ್ಟೊಂದು ದೊಡ್ಡ ಭಂಡಾರದಲ್ಲಿ ಎಲ್ಲ ದರ್ಜೆಯ ಸಾಹಿತ್ಯವು ಇರುವುದರಲ್ಲಿ ಆಶ್ಚರ್ಯವಿಲ್ಲ. ಇದರಲ್ಲಿ 'ಸತ್ವ'ವಿರುವ ಸಾಹಿತ್ಯ ಉಳಿಯುತ್ತದೆ ಮತ್ತು ಜೊಳ್ಳೆನಿಸುವುದು ಕಾಲಕ್ರಮೇಣ ಮರೆಯಾಗುತ್ತದೆ. ಇವುಗಳ ಮೇಲೆ ಅವಶ್ಯಕತೆಗಿಂತ ಹೆಚ್ಚಿನ ಚರ್ಚೆ ಅನವಶ್ಯಕ. ಆದರೆ ನನ್ನ ಕಳಕಳಿ ಇರುವುದು ಸ್ವಾತಂತ್ರ್ಯಾನಂತರದ ಮತ್ತು ಸದ್ಯದ ಕನ್ನಡದ ಭಕ್ತಿ ಸಾಹಿತ್ಯವನ್ನು ಕುರಿತಾಗಿ. ಅದು ತನ್ನ ಸಂಪೂರ್ಣ ದೃಷ್ಟಿಯನ್ನು ಹಿನ್ನೋಟವಾಗಿಸುವುದರ ಬದಲು ಹೊಸ ವಿಷಯಗಳು ಅದರಲ್ಲೂ ವಿಜ್ಞಾನದ ಕಡೆಗೆ ಸ್ವಲ್ಪ ಗಮನಹರಿಸುವುದು ಭವಿಷ್ಯದ ದೃಷ್ಟಿಯಿಂದ ಪ್ರಯೋಜನಕಾರಿಯೆಂದು ನನ್ನ ದೃಢವಾದ ನಂಬಿಕೆ.

ನಾನು ಪ್ರಾಮಾಣಿಕವಾಗಿ ಹೇಳಬೇಕೆಂದರೆ ಈ ಲೇಖನಕ್ಕೆ ಸ್ಫೂರ್ತಿ ಭಕ್ತಿ ಸಂಗೀತವೆಂದೇ ಹೇಳಬೇಕು. ದಾಸ ಮತ್ತು ವಚನ ಸಾಹಿತ್ಯದ ಸಂಗೀತ ನನಗೆ ಅತ್ಯಂತ ಪ್ರಿಯವಾದುದು. ಅತಿ ಶೀಘ್ರವಾಗಿ ನನ್ನನ್ನು ಭಾವಸಮಾಧಿಗೆ ಕರೆದೊಯ್ಯುವ ಸಾಧನ. ಆದರೆ ನಂತರ ಆ ಸಾಹಿತ್ಯವನ್ನು (ಸಂಗೀತವನ್ನಲ್ಲ) ಮೆಲುಕುಹಾಕಿದಾಗ ಬಹಳ ಸಂದೇಹಗಳು, ವಿಚಾರಗಳು ಕಾಡಿದವು. ಅದರ ಫಲವೇ ಈ ಲೇಖನ.

ಮಲ್ಲಿಕಾರ್ಜುನ ಮನ್ಸೂರರ ಮತ್ತು ಕಸ್ತೂರಿ ಶಂಕರರ ವಚನಗಳು, ಭೀಮಸೇನ ಜೋಶಿ ಮತ್ತು ಎಮ್. ಎಸ್. ಸುಬ್ಬಲಕ್ಷ್ಮಿಯವರ ಪುರಂದರದಾಸರ ಕೃತಿಗಳು, ಬಾಲಮುರಳಿಯವರ ಭಕ್ತಿಸಂಗೀತ, ಪಿ. ಬಿ. ಶ್ರೀನಿವಾಸ್ ಮತ್ತು ಎಸ್. ಜಾನಕಿಯವರ ಸುಶ್ರಾವ್ಯ ಭಕ್ತಿ ಸುಧೆಯು ನಮ್ಮ ಬದುಕಿನ ಅವಿಭಾಜ್ಯ ಅಂಗವಾಗಿದೆ. ಇವು ನಮ್ಮ ವ್ಯಕ್ತಿತ್ವವನ್ನು ರೂಪಿಸಿವೆ ಮತ್ತು ನಮ್ಮ ಭಾವ ಪ್ರಪಂಚದಲ್ಲಿ ಎಂದೆಂದೂ ಇರುವಂತಹುದು.

ಭಕ್ತಿಸಾಹಿತ್ಯದ ಸಂಗೀತವನ್ನು ಆನಂದಿಸುತ್ತಾ ಅದರ ಚಿತ್ರಗಳನ್ನು ಸವಿಯುತ್ತಾ ಭಕ್ತಿರಸ ಪ್ರವಾಹದಲ್ಲಿ ಸಂತೋಷದಿಂದ ಈಜಾಡೋಣ. ಅದು ನಮ್ಮ ಜೀವನದ ಭಾವಕೋಶವಾಗಿ ಆನಂದವನ್ನು ಕೊಡುತ್ತಿರಲಿ. ಅದಕ್ಕೆ ಕೊಡಬೇಕಾದ ಸಮಯ ಮತ್ತು ಗೌರವಗಳನ್ನು ಕೊಡೋಣ ಆದರೆ ಆ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುವುದು ಮಾತ್ರ ಬೇಡ. ವಿಜ್ಞಾನವು ಪ್ರಗತಿಯ ಪಥವೆನ್ನುವುದು ಐತಿಹಾಸಿಕವಾಗಿ ನಿರ್ವಿವಾದವಾದ ಅಂಶ. ಹಾಗಾಗಿ ನಮ್ಮ ಭಕ್ತಿಯನ್ನು ವಿಜ್ಞಾನದ ಕಡೆಗೆ ಹರಿಸಿ ಪ್ರಗತಿಯ ಪಥದಲ್ಲಿ ಸಾಗೋಣ.

ವಿಜ್ಞಾನಕ್ಕೆ ಶುಭವಾಗಲಿ
ವಿಜ್ಞಾನಕ್ಕೆ ಶರಣೆನ್ನಿ
ವಿಜ್ಞಾನಿಗೆ ಶರಣೆನ್ನಿ



# ನಂಬಿಕೆ

**ಅನುವಾದಕ: ಮೈ. ಶ್ರೀ. ನಟರಾಜ**

**ಟಿಪ್ಪಣಿ:** ಅಂತರ್ಜಾಲದಲ್ಲಿ ಓಡಾಡುತ್ತಿರುವ ಒಂದು ಆಂಗ್ಲ ಲೇಖನದ ಕನ್ನಡ ಅನುವಾದ ಇದು. ಈ ಲೇಖನವನ್ನು ಬರೆದವರಾರೋ ತಿಳಿಯದು. ಇಂಥ ಹಲವು ಲೇಖನಗಳು ಒಬ್ಬರಿಂದೊಬ್ಬರಿಗೆ ಬರುತ್ತಲೇ ಇರುತ್ತವೆ. ಕೆಲವು ಕಾಲಹರಣ ಮಾಡಿಸಿದರೆ ಕೆಲವು ಅಮೂಲ್ಯವಾಗಿರುತ್ತವೆ. ಕಳಿಸುವ ಮುನ್ನ ಹಲವು ಬದಲಾವಣೆಗಳನ್ನು ಮಾಡಿರುವ ಸಾಧ್ಯತೆಗಳೂ ಇರುತ್ತವೆ. ಒಟ್ಟಿನಲ್ಲಿ ಇಂಥ ಲೇಖನಗಳ ವಿಶ್ವಾಸಾರ್ಹತೆ ಹೀಗೆ ಎಂದು ಹೇಳಲಾಗದು. ಆದುದರಿಂದ ಇಲ್ಲಿ ಪ್ರಸ್ತುತಗೊಳಿಸಿರುವ ಪ್ರಸಂಗ ನಡೆದದ್ದೋ ಅಲ್ಲವೋ ಹೇಳುವುದು ಕಷ್ಟ. ಆದರೆ ಲೇಖನದ ಸಂದೇಶ ನಿಸ್ಸಂದೇಹವಾಗಿ ಗಮನಾರ್ಹವಾಗಿದೆ ಮತ್ತು ನಮ್ಮ ಗ್ರಂಥದ ಮುಖ್ಯವಸ್ತುವಿಗೆ ನೇರ ಸಂಬಂಧವುಳ್ಳದ್ದಾಗಿದೆ. ಭಕ್ತಿ ನಮ್ಮ ಗ್ರಂಥದ ಮುಖ್ಯ ವಸ್ತು; ಭಕ್ತಿ ಎಂದ ಮೇಲೆ ದೇವರು ಮತ್ತು ದೇವರ ಮೇಲೆ ನಂಬಿಕೆ ಇತ್ಯಾದಿ ವಿಷಯಗಳು ನಮ್ಮ ಚರ್ಚೆಯ ಸುತ್ತಲೂ ಅಂಟಿಕೊಂಡೇ ಇರುತ್ತವೆ. ಹಲವಾರು ಲೇಖಕರು ಬೇರೆ ಬೇರೆ ವಿಷಯಗಳನ್ನು ಕುರಿತು ತಮ್ಮದೇ ಆದ ವಾದಸರಣಿಗಳಿಂದ ಕೂಡಿದ ವಿದ್ವತ್ಪೂರ್ಣ ಪ್ರಬಂಧಗಳನ್ನು ಮಂಡಿಸಿದ್ದಾರೆ. ಅಷ್ಟೊಂದು ಗಂಭೀರ ಬರಹಗಳ ನಡುವೆ ಈ ಲೇಖನ ಓದುಗರನ್ನು ವಿಭಿನ್ನ ರೀತಿಯಲ್ಲಿ ಚಿಂತಿಸುವಂತೆ ಪ್ರಭಾವ ಬೀರುತ್ತದೆ. ತಿಳಿ ಹಾಸ್ಯದ ಪದರದ ಕೆಳಗೆ ಗಂಭೀರವಾದ ವಿಷಯ ಒಂದನ್ನು ನಿರೂಪಿಸುತ್ತಿದೆ. ಇಡೀ ಪ್ರಸಂಗ ಪಾಶ್ಚಿಮಾತ್ಯ ದೇಶದ ಕಾಲೇಜೊಂದರ ತರಗತಿಯಲ್ಲಿ ನಡೆಯುತ್ತಿದೆ ಎಂಬುದನ್ನು ಮನದಲ್ಲಿಟ್ಟುಕೊಂಡು ನೀವೂ ಒಬ್ಬ ವಿದ್ಯಾರ್ಥಿ ಅಥವಾ ಪ್ರಾಧ್ಯಾಪಕರಾಗಿ ಓದಿಕೊಂಡರೆ ಉಪಯೋಗವಾದೀತು! (ಸಂ).

ಪ್ರಾಧ್ಯಾಪಕ: ಮಗು, ನೀನೊಬ್ಬ ಕ್ರೈಸ್ತ. ಅಲ್ಲವೋ?

ವಿದ್ಯಾರ್ಥಿ: ಹೌದು, ಸರ್.

ಪ್ರಾಧ್ಯಾಪಕ: ಅಂದಮೇಲೆ, ನಿನಗೆ ದೇವರಲ್ಲಿ ನಂಬಿಕೆ ಇದೆಯಷ್ಟೆ?

ವಿದ್ಯಾರ್ಥಿ : ಖಂಡಿತ, ಸರ್.

ಪ್ರಾಧ್ಯಾಪಕ: ಹಾಗಾದರೆ ದೇವರು ಒಳ್ಳೆಯವನೋ?

ವಿದ್ಯಾರ್ಥಿ: ನಿಸ್ಸಂದೇಹವಾಗಿ, ಸರ್.

ಪ್ರಾಧ್ಯಾಪಕ: ದೇವರು ಸರ್ವಶಕ್ತನೋ?

ವಿದ್ಯಾರ್ಥಿ: ಹೌದು, ಸರ್.

ಪ್ರಾಧ್ಯಾಪಕ: ನನ್ನ ಸೋದರ ದೇವರನ್ನು ಕುರಿತು ನಿತ್ಯ ಪ್ರಾರ್ಥಿಸುತ್ತಿದ್ದ. "ಸ್ವಾಮೀ ನನ್ನನ್ನು ಕ್ಯಾನ್ಸರ್‌ನಿಂದ ಪಾರು ಮಾಡು" ಎಂದು. ಆದರೂ ಅವನು ಕ್ಯಾನ್ಸರ್‌ನಿಂದ ತೀರಿಕೊಂಡ. ನಮ್ಮಂಥ ಅನೇಕರು ರೋಗದಿಂದ ನರಳುತ್ತಿರುವವರಿಗೆ ಸಹಾಯಮಾಡಲು ಯತ್ನಿಸುತ್ತೇವೆ. ಆದರೆ ಆ ದೇವರು ಏನೂ ಮಾಡಲಿಲ್ಲ. ಅಂದಮೇಲೆ ಅವನು ಒಳ್ಳೆಯವ ಹೇಗಾದ? ಹೇಳು ಮತ್ತೆ.

ವಿದ್ಯಾರ್ಥಿ: (ಮೌನ.)

ಪ್ರಾಧ್ಯಾಪಕ: ನೀನು ಜವಾಬು ಕೊಡಲಾರೆ, ಅಲ್ಲವೇ? ಎಲೆ ತರುಣ, ಈಗ ಮತ್ತೊಮ್ಮೆ ಶುರುಮಾಡೋಣ. ದೇವರು ಒಳ್ಳೆಯವನೋ?

ವಿದ್ಯಾರ್ಥಿ: ಹೌದು, ಸರ್.

ಪ್ರಾಧ್ಯಾಪಕ: ಶೈತಾನ ಒಳ್ಳೆಯವನೋ?

ವಿದ್ಯಾರ್ಥಿ: ಇಲ್ಲಾ, ಸರ್.

ಪ್ರಾಧ್ಯಾಪಕ: ಶೈತಾನ ಎಲ್ಲಿಂದ ಬಂದ?

ವಿದ್ಯಾರ್ಥಿ: ಅವನು...ಅವನೂ...ದೇವರಿಂದಲೇ ಬಂದಿರಬೇಕು...

ಪ್ರಾಧ್ಯಾಪಕ: ಅದು ನಿಜ ಕಣಪ್ಪ. ಈಗ ಹೇಳು ಮಗು, ಶೈತಾನನನ್ನು ದೇವರು ಏಕೆ ಸೃಷ್ಟಿಸಿದ? ಈ ಪ್ರಪಂಚದಲ್ಲಿ ಕೆಟ್ಟದ್ದು ಇದೆ ತಾನೆ?

ವಿದ್ಯಾರ್ಥಿ: ಇದೆ, ಸರ್.

ಪ್ರಾಧ್ಯಾಪಕ: ಕೆಟ್ಟದ್ದು ಎಲ್ಲೆಲ್ಲು ಇದೆ, ಅಲ್ಲವೇ? ಎಲ್ಲವನ್ನೂ ಮಾಡಿದವನು ಆ ದೇವರೇ. ಸರಿ ತಾನೆ?

ವಿದ್ಯಾರ್ಥಿ: ಸರಿ, ಸರ್.

ಪ್ರಾಧ್ಯಾಪಕ: ಹಾಗಾದರೆ, ಕೆಟ್ಟದ್ದನ್ನು ಸೃಷ್ಟಿಸಿದವನೂ ಅವನೇ ಅಂತ ಆಯ್ತು. (ವಿದ್ಯಾರ್ಥಿ ನಿರುತ್ತರ.)

ಪ್ರಾಧ್ಯಾಪಕ: ಪ್ರಪಂಚದಲ್ಲಿ ಖಾಯಿಲೆ ಕಸಾಲೆ ಉಂಟಲ್ಲವೋ? ಮೃತ್ಯು? ದ್ವೇಷ? ಕರಾಳತೆ? ಈ ಎಲ್ಲ ಭಯಾನಕಗಳು ಜಗತ್ತಿನಲ್ಲಿ ತುಂಬಿಕೊಂಡಿವೆ-ಯಷ್ಟೆ?

ವಿದ್ಯಾರ್ಥಿ: ಹೌದು, ಸರ್.

ಪ್ರಾಧ್ಯಾಪಕ: ಹಾಗಾದ್ರೆ ಅವನ್ನೆಲ್ಲ ಸೃಷ್ಟಿಸಿದವನು ಯಾರು?
(ವಿದ್ಯಾರ್ಥಿ ಬಳಿ ಉತ್ತರವಿಲ್ಲ.)

ಪ್ರಾಧ್ಯಾಪಕ: ವಿಜ್ಞಾನ ಹೇಳುತ್ತದೆ, ನಮ್ಮ ಸುತ್ತಮುತ್ತ ಇರುವ ಜಗತ್ತನ್ನು ಅರಿಯಲು ಪಂಚೇಂದ್ರಿಯಗಳಿವೆ ಅಂತ. ಹೇಳು, ಮಗು, ನೀನು ಯಾವಾಗಲಾದರೂ ದೇವರನ್ನು ಕಂಡಿದ್ದೀಯಾ?

ವಿದ್ಯಾರ್ಥಿ: ಇಲ್ಲಾ, ಸರ್.

ಪ್ರಾಧ್ಯಾಪಕ: ಹೋಗಲಿ, ಯಾವಾಗಲಾದರೂ ಅವನಾಡುವ ಮಾತುಗಳನ್ನ ಕೇಳಿದ್ದೀಯೋ? ಹೇಳು.

ವಿದ್ಯಾರ್ಥಿ: ಇಲ್ಲಾ, ಸರ್.

ಪ್ರಾಧ್ಯಾಪಕ: ಅಥವಾ, ನಿನ್ನ ದೇವರನ್ನು ಮುಟ್ಟಿ ನೋಡಿದ್ದೀಯೋ? ಎಂದಾದರೋ ಅವನ ರುಚಿ ನೋಡಿದ್ದೀಯೋ? ಅವನನ್ನು ಮೂಸಿ ನೋಡಿದ್ದೀಯೋ? ಹೋಗಲಿ, ಯಾವುದೇ ರೀತಿಯ ಇಂದ್ರಿಯಗಳ ಮೂಲಕ ಸಂಪರ್ಕ ನಿನ್ನ ಮತ್ತು ದೇವರ ನಡುವೆ ಆಗಿದ್ದುಂಟೆ, ಮಗು?

ವಿದ್ಯಾರ್ಥಿ: ಇಲ್ಲಾ, ಸರ್. ಅಂಥ ಇಂದ್ರಿಯ ಸಂಪರ್ಕ ಆಗಿದೆಯೆಂದು ಹೇಳಲಾರೆ.

ಪ್ರಾಧ್ಯಾಪಕ: ಅಷ್ಟಾದಾಗ್ಯೂ ನೀನು ಅವನಲ್ಲಿ ನಂಬಿಕೆ ಇಟ್ಟಿದ್ದೀಯಾ?

ವಿದ್ಯಾರ್ಥಿ: ಹೌದು ಸರ್..

ಪ್ರಾಧ್ಯಾಪಕ: ಪ್ರತ್ಯಕ್ಷ ಅಥವಾ ಪರೋಕ್ಷ ಅನುಭವದಿಂದಾಗಲೀ, ಪರೀಕ್ಷೆಗೊಳ-ಪಡಿಸಿಯಾಗಲೀ ಪ್ರಮಾಣಿಸಿ ಸಿದ್ಧಗೊಳಿಸಲಾಗದ್ದನ್ನು ವಿಜ್ಞಾನ ಅಲ್ಲಗಳೆಯುತ್ತದೆಯಾಗಿ ನಿನ್ನ ದೇವರು ಇಲ್ಲವೆಂದೇ ವಿಜ್ಞಾನದ ಅಂಬೋಣ! ಅದಕ್ಕೇನೆನ್ನುತ್ತಿ, ಮಗು?

ವಿದ್ಯಾರ್ಥಿ: ನಾನೇನೂ ಹೇಳಲಾರೆ, ಸರ್. ನನ್ನ ಬಳಿ ನಂಬಿಕೆ ಬಿಟ್ಟು ಮತ್ತೇನೂ ಇಲ್ಲ.

ಪ್ರಾಧ್ಯಾಪಕ: ಹ್ಞಾ, ಅದೇ ನೋಡು, ನಂಬಿಕೆ. ವಿಜ್ಞಾನಕ್ಕಿರುವ ಭಾರೀ ತೊಂದರೆ ಎಂದರೆ ಅದೇ. ನಂಬಿಕೆ!

ವಿದ್ಯಾರ್ಥಿ: ಸರ್, 'ಶಾಖ' ಎಂಬುದೊಂದು ಏನಾದರೂ ಇದೆಯೇ ಸರ್?

ಪ್ರಾಧ್ಯಾಪಕ: ಇದೆ.

ವಿದ್ಯಾರ್ಥಿ: ಸರಿ, ಮತ್ತೆ, 'ಶೀತ' ಎಂಬುದು ಏನಾದರೂ ಉಂಟೋ ಸರ್?

ಪ್ರಾಧ್ಯಾಪಕ: ಇದೆ.

ವಿದ್ಯಾರ್ಥಿ: ಇಲ್ಲಾ ಸರ್, ಅಂಥದ್ದೇನೂ ಇಲ್ಲ.

(ತಿರುಮಂತ್ರ ಹಾಕಲು ಹೊರಟ ಶಿಷ್ಯನ ಸವಾಲಿನಿಂದ ತರಗತಿಯಲ್ಲಿ ನಿಶ್ಶಬ್ದ ಕವಿಯಿತು!)

ವಿದ್ಯಾರ್ಥಿ: ಸರ್, ಶಾಖ ಇದ್ದಂತೆ ಹೆಚ್ಚು ಶಾಖ, ಅತಿ ಹೆಚ್ಚು ಶಾಖ, ಅದಕ್ಕಿಂತಲೂ ವಿಪರೀತ ಶಾಖ, ಶಾಖಾತಿಶಾಖ, ಪ್ರಚಂಡ ಶಾಖ, ಶ್ವೇತಶಾಖ, ಕೊಂಚ ಶಾಖ, ಶೂನ್ಯಶಾಖ, ಹೀಗೆಲ್ಲ ಉಂಟಲ್ಲವೇ ಸರ್? ಆದರೆ ಶೀತ ಎಂಬುದೇ ಇಲ್ಲ. ಶೂನ್ಯಕ್ಕಿಂತ ಕೆಳಗೆ ೪೫೮ ಡಿಗ್ರಿಗಳನ್ನು ತಲುಪಬಹುದಷ್ಟೆ, ಅದನ್ನೇ ಶೂನ್ಯಶಾಖ ಎನ್ನುತ್ತೇವಷ್ಟೆ? ಅದಕ್ಕಿಂತ ಕಡಿಮೆ ತಲುಪಲು ಸಾಧ್ಯವಿಲ್ಲ. ಆದ್ದರಿಂದ ಶೀತ ಎಂಬುದೇ ಇಲ್ಲ, ಸರ್. ಶಾಖದ ಅನುಪಸ್ಥಿತಿಯನ್ನು ವರ್ಣಿಸಲು ಉಪಯೋಗಿಸುವ ಶಬ್ದವೇ ಶೀತ. ಶೀತವನ್ನು ಅಳತೆಮಾಡಲು ಸಾಧ್ಯವಿಲ್ಲ. ಶಾಖ ಎಂಬುದು ಶಕ್ತಿ, ಶೀತವೆಂಬುದು ಅದರ ವಿರುದ್ಧವಲ್ಲ ಸರ್, ಅದರ ಅನುಪಸ್ಥಿತಿ, ಅಷ್ಟೆ.

(ತರಗತಿಯಲ್ಲಿ ಸೂಜಿ ಬಿದ್ದರೆ ಕೇಳುವಷ್ಟು ಮೌನ!)

ವಿದ್ಯಾರ್ಥಿ: ಈಗ ಕತ್ತಲೆ ಬಗ್ಗೆ ನೋಡೋಣ, ಸರ್. ಕತ್ತಲೆ ಎಂಬುದೇನಾದರೋ ಇದೆಯೇ ಸರ್?

ಪ್ರಾಧ್ಯಾಪಕ: ಇದ್ದೇ ಇದೆ, ರಾತ್ರಿ ಎಂಬುದೇನಯ್ಯ? ಕತ್ತಲೆಯೇ ತಾನೇ?

ವಿದ್ಯಾರ್ಥಿ: ಮತ್ತೊಮ್ಮೆ ತಪ್ಪು ನುಡಿದಿರಿ, ಸರ್. ಕತ್ತಲೆಯೆಂಬುದು ಯಾವುದೋ ಒಂದರ ಅನುಪಸ್ಥಿತಿ. ಕಡಿಮೆ ಬೆಳಕಿರಬಹುದು, ಸಾಧಾರಣ ಬೆಳಕಿರಬಹುದು, ಕೋರೈಸುವ ಬೆಳಕಿರಬಹುದು, ಮಿಂಚುವ ಬೆಳಕಿರಬಹುದು, ಬೆಳಕೇ ಇಲ್ಲದಿದ್ದರೆ, ಅದನ್ನೇ ನೀವು ಕತ್ತಲು ಎನ್ನುವುದು. ಅಲ್ಲವೇ ಸರ್? ನಿಜವಾಗಿ ನೋಡಿದರೆ ಕತ್ತಲೆ ಎಂಬುದೇ ಇಲ್ಲ, ಹಾಗೊಂದು ವೇಳೆ ಇದ್ದಿದ್ದರೆ, ಕತ್ತಲೆಯನ್ನು ಮತ್ತಷ್ಟು ಕತ್ತಲು ಮಾಡಬಹುದಿತ್ತು, ಬೆಳಕನ್ನು ಹೆಚ್ಚಿಸುವಂತೆ ಕತ್ತಲನ್ನು ಹೆಚ್ಚಿಸಲಾಗದು, ಬೆಳಕನ್ನು ಕಮ್ಮಿ ಮಾಡುತ್ತಾ ಹೋದರೆ ಕತ್ತಲಾಗುವುದು, ಅಲ್ಲವೇ ಸರ್?

ಪ್ರಾಧ್ಯಾಪಕ: ಹಾಗಾದರೆ ನಿನ್ನ ಮಾತಿನ ಸಾರಾಂಶವಾದರೂ ಏನಯ್ಯ, ತರುಣ?

ವಿದ್ಯಾರ್ಥಿ: ಸರ್, ನನ್ನ ಅಭಿಪ್ರಾಯ ಏನೆಂದರೆ ತಮ್ಮ ವಾದಸರಣಿಯಲ್ಲಿನ ತಾತ್ವಿಕ ತರ್ಕದ ತಳಹದಿಯೇ ಭದ್ರವಾಗಿದ್ದಂತಿಲ್ಲ ಸರ್.

ಪ್ರಾಧ್ಯಾಪಕ: ತರ್ಕದ ತಳಹದಿ? ಭದ್ರವಾಗಿಲ್ಲ? ಹೇಗೆ? ಕೊಂಚ ವಿವರಿಸುವಂತಹವನಾಗು.

ವಿದ್ಯಾರ್ಥಿ: ಸರ್, ನಿಮ್ಮ ವಾದಸರಣಿಯ ಆಧಾರ ದ್ವಂದ್ವ ಮತ್ತು ದ್ವೈತಗಳಿಂದ ಕಲುಷಿತವಾಗಿರುವುದೇ ದೊಡ್ಡ ಸಮಸ್ಯೆ! ನಿಮ್ಮ ವಾದದ ಪ್ರಕಾರ, ಜೀವ ಎಂಬುದಿದೆ, ಮರಣ ಎಂಬುದಿದೆ, ಒಳ್ಳೆಯ ದೇವರೊಬ್ಬನಿದ್ದರೆ ಕೆಟ್ಟ ದೇವನೊಬ್ಬನಿದ್ದಾನೆ. ಬೆಳಕಿದೆ, ಕತ್ತಲಿದೆ. ಶಾಖವಿದೆ, ಶೀತವಿದೆ. ಸರ್, ನೀವು ದೇವರು ಎಂಬ ಪರಿಕಲ್ಪನೆಯನ್ನು ಅತಿ ಸಂಕುಚಿತ ದೃಷ್ಟಿಯಿಂದ ಕಾಣುತ್ತ ಅದನ್ನು ಅಳತೆಮಾಡಬಹುದಾದ ಒಂದು ಮಿತವಾದ ಕಲ್ಪನೆಯೊಂದಿಗೆ ಸಮೀಕರಿಸುತ್ತಿದ್ದೀರಿ. ಅಪ್ರಮೇಯವನ್ನು ಪ್ರಮೇಯವಾಗಿ ಕಾಣುವುದು, ಅನಂತವನ್ನು ಮಿತಿಯಿಂದ ಕೂಡಿರುವಂತೆ ಕಲ್ಪಿಸಿಕೊಳ್ಳುವುದೇ ನಿಮ್ಮ ವಾದದ ದೌರ್ಬಲ್ಯ, ಸರ್.

ವಿಜ್ಞಾನಕ್ಕೆ ಮಿತಿಯುಂಟು, ಸರ್. ಅದು ಒಂದು ಸಣ್ಣ ಪರಿಕಲ್ಪನೆಯನ್ನೇ ಸಂಪೂರ್ಣವಾಗಿ ವಿವರಿಸಲಾರದು. ವಿಜ್ಞಾನ ಅಯಸ್ಕಾಂತತ್ವ, ವಿದ್ಯುಚ್ಛಕ್ತಿ ಮುಂತಾದವನ್ನು ಬಳಸಿಕೊಳ್ಳುತ್ತದೆ. ಆದರೆ ವಿಜ್ಞಾನಿಗಳು ಅವನ್ನು ಕಂಡಿದ್ದಾರೆಯೇ? ಹೋಗಲಿ, ಸಂಪೂರ್ಣವಾಗಿ ಅರ್ಥವನ್ನಾದರೂ ಮಾಡಿಕೊಂಡಿದ್ದಾರೆಯೆ? ಅದೇ ರೀತಿ, ಮರಣವನ್ನು ಜೀವನದ ವಿರುದ್ಧ ಸ್ಥಿತಿಯೆಂದು ತಿಳಿಯುವುದಿದೆಯಲ್ಲಾ, ಅದು ಅಜ್ಞಾನ! ಮರಣವೆಂಬುದಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ ಸರ್. ಮರಣ ಜೀವದ ವಿರುದ್ಧವಲ್ಲ, ಅದು ಕೇವಲ ಜೀವದ ಅನುಪಸ್ಥಿತಿ.

ಹೇಳಿ ಸರ್, ನರ ವಾನರನಿಂದ ವಿಕಸನಗೊಂಡನೆಂದು ನಿಮ್ಮ ವಿದ್ಯಾರ್ಥಿಗಳಿಗೆ ನೀವು ಬೋಧಿಸುತ್ತೀರಾ?

ಪ್ರಾಧ್ಯಾಪಕ: ಪ್ರಕೃತಿಯ ವಿಕಾಸವಾದದ ಬಗ್ಗೆ ನೀನು ಹೇಳುತ್ತಿರುವುದಾದರೆ, ವಾನರನಿಂದ ನರ ಉಂಟಾದನೆಂದು ನಿಶ್ಚಯವಾಗಿ ಬೋಧಿಸುವೆ.

ವಿದ್ಯಾರ್ಥಿ: ವಾನರ ನರನಾದ ವಿಕಸನ ಕ್ರಿಯೆಯನ್ನು ನೀವು ಕಣ್ಣಾರೆ ಕಂಡಿದ್ದುಂಟಾ ಸರ್?

(ಪ್ರಾಧ್ಯಾಪಕ ನಗುತ್ತಾ ತಲೆಯಾಡಿಸಿದರು, ವಿದ್ಯಾರ್ಥಿಯ ವಾದ ಎತ್ತ ಸಾಗುತ್ತಿದೆ ಎಂದು ಮನವರಿಕೆ ಮಾಡಿಕೊಳ್ಳುತ್ತ)

ವಿದ್ಯಾರ್ಥಿ: ಈ ವಿಕಸನ ಕ್ರಿಯೆಯನ್ನು ಯಾರೂ ಕಣ್ಣಾರೆ ಕಂಡಿಲ್ಲ, ಅಥವಾ ಅಂಥಾ ವಿಕಸನ ಕ್ರಿಯೆ ನಮ್ಮೆದುರಿಗೆ ಮುಂದುವರೆಯುತ್ತಿದೆ ಎಂದು ಸಾಧಿಸಿ ತೋರಿಸಲೂ ಸಾಧ್ಯವಿಲ್ಲ. ಹಾಗಿದ್ದಲ್ಲಿ ನೀವು ವಿದ್ಯಾರ್ಥಿಗಳಿಗೆ ನಿಮ್ಮ ಅಭಿಪ್ರಾಯವನ್ನು ಮಾತ್ರ ಬೋಧಿಸುತ್ತಿದ್ದೀರಾ ಅಲ್ಲವೇ ಸರ್? ನೀವೇನು ವಿಜ್ಞಾನಿಯೋ ಅಥವಾ ಚರ್ಚಿನಲ್ಲಿ ಬೋಧಿಸುವ ಪಾದ್ರಿಯೋ, ಸರ್?

(ಇಡೀ ತರಗತಿ ಹುಚ್ಚೆದ್ದು ಕುಣಿಯುತ್ತಿದೆ.)

ವಿದ್ಯಾರ್ಥಿ: (ಸಹಪಾಠಿಗಳನ್ನುದ್ದೇಶಿಸಿ) ಈ ತರಗತಿಯಲ್ಲಿ ಯಾರಾದರೂ ನಮ್ಮ ಪ್ರಾಧ್ಯಾಪಕರ ಮಿದುಳನ್ನು ಕಂಡಿದ್ದೀರಾ?

(ಇಡೀ ತರಗತಿ ನಕ್ಕು ನೀರಾಗುತ್ತಿದೆ)

ವಿದ್ಯಾರ್ಥಿ: ನಿಮ್ಮಗಳ ಪೈಕಿ ಯಾರಾದರೂ ನಮ್ಮ ಪ್ರಾಧ್ಯಾಪಕರ ಮಿದುಳನ್ನು ಮುಟ್ಟಿ ನೋಡಿದ್ದೀರಾ, ಅದರ ಶಬ್ದವನ್ನು ಕೇಳಿದ್ದೀರಾ, ಅದರ ರುಚಿ ಅಥವಾ ವಾಸನೆಯನ್ನು ನೋಡಿದ್ದೀರಾ? ಯಾರೂ ಮಾಡಿದಂತೆ ಕಾಣಲಿಲ್ಲ, ಅಲ್ಲವೇ? ಹಾಗೆಂದ ಮೇಲೆ ವಿಜ್ಞಾನದ ಪ್ರಕಾರ ಕಣ್ಣಿಗೆ ಕಾಣದ, ಕಿವಿಗೆ ಕೇಳದ, ಮುಟ್ಟಿ ನೋಡಲಾಗದ, ಅಥವಾ ಮೂಸಲಾಗದ, ರುಚಿ ನೋಡಲಾಗದ ವಸ್ತು, ಅರ್ಥಾತ್ ನಿಮ್ಮ ಮಿದುಳೂ ಸಹ ಇಲ್ಲವೇ ಇಲ್ಲ ಸರ್. ನನ್ನ ಉದ್ಧಟತನವನ್ನು ಮನ್ನಿಸಿ ಸರ್, ಮಿದುಳೇ ಇಲ್ಲದ ನಿಮ್ಮ ಉಪನ್ಯಾಸವನ್ನು ನಾವು ನಂಬುವುದಾದರೂ ಹೇಗೆ, ಸರ್?

(ತರಗತಿಯಲ್ಲಿ ಮೌನ! ಪ್ರಾಧ್ಯಾಪಕರು ವಿದ್ಯಾರ್ಥಿಯತ್ತ ದುರುಗುಟ್ಟಿ ನೋಡುತ್ತಾರೆ, ಆ ವಿದ್ಯಾರ್ಥಿಯ ಮುಖಭಾವವೋ ಅಳತೆಗೆ ಸಿಕ್ಕದ್ದು!)

ಪ್ರಾಧ್ಯಾಪಕ: ಕೇವಲ ನಂಬಿಕೆಗೆ ಶರಣಾಗಬೇಕು ಮಗು, ನಂಬಿಕೆ!

ವಿದ್ಯಾರ್ಥಿ: ಅಷ್ಟೇ ಸರ್! ಅದು ಹಾಗೇನೇ! ಮಾನವ ಮತ್ತು ದೇವರ ನಡುವಿನ ಕೊಂಡಿಯೇ ನಂಬಿಕೆ ಸರ್. ನಂಬಿಕೆಮಾತ್ರದಿಂದಲೇ ಜಡ, ಜೀವ, ಚೈತನ್ಯ ಎಲ್ಲವೂ. ಎಲ್ಲಕ್ಕೂ ಆ ದೇವರೇ ಮೂಲ, ಒಂದು ಹುಲ್ಲು ಕಡ್ಡಿಯ ಚಲನೆಗೂ ಅವನೇ ಕಾರಣ ಎಂದು ಗ್ರಹಿಸುವುದೂ ನಂಬಿಕೆಯ ಆಧಾರದ ಮೇಲೆ ಸರ್.....!

ಇಂಥ ಪ್ರಚಂಡ ವಾದಸರಣಿಯಿಂದ ಪ್ರಾಧ್ಯಾಪಕರನ್ನೂ, ವಿದ್ಯಾರ್ಥಿಗಳನ್ನೂ ದಿಗ್ಭ್ರಮೆಗೊಳಿಸಿದ ಆ ವ್ಯಕ್ತಿ ಒಬ್ಬ ಮೇಧಾವಿಯೇ ಆಗಿದ್ದಿರಬೇಕು! ■

# ಆಧುನಿಕ ವೈದ್ಯಶಾಸ್ತ್ರ ಮತ್ತು ಭಕ್ತಿ ಎಂಬ ಉದ್ಯಮ

–ಗುರುಪ್ರಸಾದ್ ಕಾಗಿನೆಲೆ

'ಭಕ್ತಿ' ಸಾಹಿತ್ಯದ ಈ ಪುಸ್ತಕದಲ್ಲಿ ನನ್ನ ಈ ಲೇಖನ ಕೊಂಚ ಅಪವಾದವೆನಿಸಬಹುದು. ಭಕ್ತಿ ಎಂಬ ಪದಕ್ಕೆ ಪ್ರೊಫೆಸರ್ ಜಿ. ವೆಂಕಟಸುಬ್ಬಯ್ಯನವರ ಕನ್ನಡ ಕ್ಲಿಷ್ಟ ಪದಕೋಶದಲ್ಲಿ ಗುರುಹಿರಿಯರಲ್ಲಿ ತೋರುವ ನಿಷ್ಠೆ ಎಂಬ ಅರ್ಥವಿದೆ. ಭಕ್ತ ಎಂಬ ಪದಕ್ಕೆ ಪೂಜಿಸುವವನು, ಆರಾಧಕ ಎಂಬ ಅರ್ಥವಿದೆ. ಈ ಪುಸ್ತಕದಲ್ಲಿ ಬೇರೆ ಬೇರೆ ಲೇಖಕರು ಭಕ್ತಿ ಎಂಬ ಪದವನ್ನು ಯಾವ ಅರ್ಥದಲ್ಲಿ ಬಳಸಿಕೊಂಡಿದ್ದಾರೋ ಗೊತ್ತಿಲ್ಲ. ವೈದ್ಯಕೀಯ ಲೋಕದಲ್ಲಿ ಅದರಲ್ಲಿಯೂ ಮುಖ್ಯವಾಗಿ ಪಶ್ಚಿಮದ ದೇಶಗಳಲ್ಲಿ ಪ್ರಚಲಿತವಿರುವ ಔಷಧಿ ಮತ್ತು ಆಧುನಿಕ ತಂತ್ರಜ್ಞಾನಗಳನ್ನೇ ತನ್ನ ಜೀವ ಉಳಿಸುವ ಸಾಧನಗಳನ್ನಾಗಿ ಮಾಡಿಕೊಂಡಿರುವ ಪಶ್ಚಿಮದ ವೈದ್ಯಪದ್ಧತಿಯ ಸಂದರ್ಭದಲ್ಲಿ ರೋಗಿಯ ಚೇತರಿಕೆಯಲ್ಲಿ ಭಕ್ತಿಯ ಪಾತ್ರವನ್ನು ಅಧ್ಯಯನ ಮಾಡುವುದು ಹೇಗೆ? ಎಲ್ಲವನ್ನೂ ಸಂಶೋಧಿಸುವ, ಸಂಶೋಧನೆಯ ಆಧುನಿಕ ಪರಿಕರಗಳನ್ನು ಬಳಸಿಕೊಳ್ಳದ ಸಂಶೋಧನೆಗಳ ಫಲಿತಾಂಶವನ್ನು ಎಂದೂ ಒಪ್ಪದ ಈ ಕ್ಷೇತ್ರದಲ್ಲಿ ಭಕ್ತಿಯ ಪರಿಮಾಣವನ್ನು, ಡೋಸನ್ನು ಅಳೆಯುವುದು ಹೇಗೆ? ಆಧುನಿಕ ವೈದ್ಯವಿಜ್ಞಾನ ಎಲ್ಲದಕ್ಕೂ ಸಾಕ್ಷಿ ಕೇಳುತ್ತದೆ. ಅಷ್ಟೇ ಅಲ್ಲ, ಇಲ್ಲಿ ಫಲಿತಾಂಶಗಳು ಅಳತೆಗೆ, ಲೆಕ್ಕಕ್ಕೆ ಸಿಗಬೇಕು.

ಒಂದು ಸರಳವಾದ ಸಂಶೋಧನೆಯ ಉದಾಹರಣೆಯನ್ನು ತೆಗೆದುಕೊಳ್ಳೋಣ. ಕೊಲೆಸ್ಟೆರಾಲ್ ಜಾಸ್ತಿಯಿರುವ ನೂರು ಜನ ರೋಗಿಗಳಿದ್ದಾರೆ ಎಂದುಕೊಳ್ಳೋಣ. ಅವರನ್ನು ಎರಡು ಗುಂಪುಗಳಾಗಿ ವಿಂಗಡಿಸೋಣ. ಎ ಮತ್ತು ಬಿ ಎಂದು ಈ ಗುಂಪುಗಳಿಗೆ ಹೆಸರಿಡೋಣ. ಎರಡು ಔಷಧಿಗಳು ಲಭ್ಯವಿವೆ. ಆ ಎರಡು ಔಷಧಿಗಳಿಗೆ ಸಿ ಮತ್ತು ಡಿ ಎಂದು ಕರೆಯೋಣ. 'ಎ' ಗುಂಪಿಗೆ 'ಸಿ' ಎಂಬ ಔಷಧಿಯನ್ನೂ 'ಬಿ' ಗುಂಪಿಗೆ 'ಡಿ' ಎಂಬ ಔಷಧಿಯನ್ನೂ ಕೊಟ್ಟಾಗ ಯಾವ ಔಷಧಿ ಹೆಚ್ಚು ಪರಿಣಾಮಕಾರಿ ಎಂದು ಕಂಡುಹಿಡಿಯಬೇಕಾದರೆ ಕೆಲವೊಂದು ಮೂಲ ಸಂಶೋಧನಾ ನಿಯಮಗಳನ್ನು ಪಾಲಿಸಬೇಕಾಗುತ್ತದೆ.

೧. ಎ ಮತ್ತು ಬಿ ಗುಂಪಿನ ರೋಗಿಗಳು ಹೆಚ್ಚು ಕಮ್ಮಿ ಒಂದೇ ವಯಸ್ಸಿನವರಾಗಿರಬೇಕು. (ಉದಾ. ೩೫ ರಿಂದ ೪೫ ಎನ್ನೋಣ)

೨. ಅವರ ಲಿಂಗ ಕೂಡ ಒಂದೇ ಆಗಿರಬೇಕು. (ಎಲ್ಲ ಗಂಡಸರು ಅಥವಾ ಹೆಂಗಸರು)

೩. ಇಬ್ಬರಿಗೂ ಕೊಲೆಸ್ಟೆರಾಲಿನ ಮಟ್ಟ ಹೆಚ್ಚು ಕಮ್ಮಿ ಒಂದೇ ಇರಬೇಕು. (ಉದಾ- ೨೦೦-೩೦೦)

೪. ಎರಡೂ ಗುಂಪಿನ ಆಹಾರಕ್ರಮ ಒಂದೇ ಆಗಿರಬೇಕು.

೫. ಮುಖ್ಯವಾಗಿ ಸಿ ಮತ್ತು ಡಿ ಎಂಬುವವು ಔಷಧಿಗಳು. ಅವುಗಳಿಗೆ ಇಂತಿಷ್ಟೇ ಎಂದು ಒಂದು ಕನಿಷ್ಟ ಹಾಗೂ ಗರಿಷ್ಠ ಡೋಸಿದೆ. ಅಷ್ಟೇ ಅಲ್ಲದೆ ಫಲಿತಾಂಶ ಅಳತೆಗೆ ಸಿಗುವ ಹಾಗಿದೆ (ಕೊಲೆಸ್ಟ್ರಾಲಿನ ಅಂಶ)

೬. ಆರು ತಿಂಗಳಿನ ನಂತರ ಸಿ ಔಷಧಿ ಡಿ ಔಷಧಿಗಿಂತ ಸರಾಸರಿ ೪೦ ಅಂಶ ಕೊಲೆಸ್ಟೆರಾಲನ್ನು ಕಮ್ಮಿ ಮಾಡಿದ್ದರೆ ಸಿ ಔಷಧಿ ಡಿ ಔಷಧಿಗಿಂತ ಹೆಚ್ಚು ಪರಿಣಾಮಕಾರಿ ಎಂದು ನಿರ್ಧರಿಸಬಹುದು.

ಇದು ತೀರ ಸರಳೀಕೃತ ಸಂಶೋಧನೆಯ ಒಂದು ನೀಲನಕಾಶೆ. ನಿಜವಾದ ಸಂಶೋಧನೆಗಳು ಇನ್ನೂ ಬಹಳ ಸಂಕೀರ್ಣವಾಗಿರುತ್ತವೆ. ಸಂಶೋಧನೆಯ ಸಂಕೀರ್ಣತೆಯ ಬಗ್ಗೆ ವಿವರಿಸುವುದು ಈ ಲೇಖನದ ಮೂಲ ಉದ್ದೇಶವಲ್ಲ. ಅದನ್ನು ನಾನು ಪ್ರಯತ್ನಿಸುತ್ತಲೂ ಇಲ್ಲ.

ಆದರೆ, ಇದೇ ಸಂಶೋಧನೆಯಲ್ಲಿ ಎ ಗುಂಪಿನವರು ನಾವು ದೇವರನ್ನು ನಂಬುತ್ತೇವೆ. ಕೊಲೆಸ್ಟ್ರಾಲ್ ಮಾತ್ರೆಯ ಜತೆಜತೆಗೂ ದೇವರೇ ನಮ್ಮ ಕೊಲೆಸ್ಟೆರಾಲು ಕಮ್ಮಿ ಮಾಡಿಸಪ್ಪ ಎಂದು ನಾವು ಭಕ್ತಿಯಿಂದ ಪ್ರಾರ್ಥಿಸುತ್ತಿದ್ದೆವು ಆದ್ದರಿಂದ ನಮ್ಮ ಕೊಲೆಸ್ಟೆರಾಲು ಕಮ್ಮಿಯಾಗಿದೆ ಎಂದು ಹೇಳಿದಲ್ಲಿ ಈ ಭಕ್ತಿಯ ಪರಿಮಾಣವನ್ನು ನಾವು ಅಳೆಯುವುದು ಹೇಗೆ? ಅಷ್ಟಕ್ಕೂ ಅವರೆಲ್ಲ ಪ್ರಾರ್ಥಿಸುತ್ತಿದ್ದರು ಎನ್ನುವುದಕ್ಕೆ ಸಾಕ್ಷಿಯೇನಿದೆ?

ಇಲ್ಲಿ ನಾವು ಗಮನಿಸಬೇಕಾದ್ದು ಏನೆಂದರೆ ಅಧ್ಯಾತ್ಮದಲ್ಲಿ ಭಕ್ತಿಯ, ಭಕ್ತನ ವಿವರಣೆ ಹೇಗೆ ಬೇಕಾದರೆ ಇರಲಿ, ವೈದ್ಯವಿಜ್ಞಾನದ ಮಟ್ಟಿಗೆ ಭಕ್ತಿ ಎಂದರೆ ದೇವರು ಅಥವಾ ನಮ್ಮ ವೈದ್ಯವಿಜ್ಞಾನವನ್ನು ಮೀರಿದ ಒಂದು ಶಕ್ತಿಯ ಬಗ್ಗೆ ಇರುವ ಶ್ರದ್ಧೆ. ಬಹುಶಃ ಪ್ರಾರ್ಥನೆ ಅಥವಾ ಧ್ಯಾನ ಇವುಗಳೆಲ್ಲ ಈ ಭಕ್ತಿಕ್ರಿಯೆಯ ಅಥವಾ ಶ್ರದ್ಧೆಯ ಸಾಧನ, ಉಪಕರಣ.

ಈ ಸಂಬಂಧ ಆಗಿರುವ ಕೆಲವು ಸಂಶೋಧನೆಗಳನ್ನು ಗಮನಿಸೋಣ.

ಅಮೆರಿಕಾದ ಕೊಲೊರಡೋ ಸ್ಪ್ರಿಂಗ್ಸ್‌ನಲ್ಲಿ ಸುಮಾರು ಒಂದು ಸಾವಿರ ಜನ ಒಂದು ಸುಸಜ್ಜಿತ ಪ್ರಯೋಗಾಲಯದಲ್ಲಿ ಮಲಗಿದ್ದಾರೆ. ಅತ್ಯಾಧುನಿಕ ತಂತ್ರಜ್ಞಾನಗಳ ಮೂಲಕ ಪರೀಕ್ಷಿಸಿದಾಗ ಅವರುಗಳಲ್ಲಿ ಕೆಲವರ ಸುತ್ತ ಅಯಸ್ಕಾಂತೀಯ ಮತ್ತು ವಿದ್ಯುತ್ ತರಂಗಗಳು ಆವೃತವಾಗುತ್ತಿರುವುದು ಗ್ರಹಿತವಾಗುತ್ತದೆ. ಈ ತರಂಗಗಳಿಗೆ ಕಾರಣ ಸುಮಾರು ಒಂದು ಸಾವಿರ ಮೈಲು ದೂರ ಕೂತು ಪ್ರಾರ್ಥಿಸುತ್ತಿರುವ ಒಂದು ಯಾವುದೋ ಗುಂಪು ಕಾರಣ ಎಂದು ವಿಜ್ಞಾನಿಗಳು ವೈಜ್ಞಾನಿಕ ಸಂಶೋಧನಾತಂತ್ರಗಳಿಂದ ಪುರಾವೆಯೊದಗಿಸುತ್ತಾರೆ. ಇದಕ್ಕೆ ಅವರು ಪುರಾವೆ ಒದಗಿಸಿದ್ದು ಹೇಗೆ? ಅಳತೆಗೆ ಸಿಗುವ ಅಯಸ್ಕಾಂತೀಯ ಮತ್ತು ವಿದ್ಯುತ್ ತರಂಗಗಳು. ಈ ತರಂಗಗಳಿಗೆ ಆ ಕ್ಷಣದಲ್ಲಿ ಪ್ರಾರ್ಥನೆ ಬಿಟ್ಟು ಬೇರೆ ಯಾವುದೇ ಅಳತೆಗೆ ಸಿಗುವ ಕ್ರಿಯೆ ನಡೆದಿಲ್ಲ ಎಂದು ಸಂಶೋಧಕರು ಸಾಕ್ಷಿಯನ್ನು ಕೂಡಾ ಒದಗಿಸುತ್ತಾರೆ. ಈ ತರಂಗಗಳ ಪ್ರಾಯೋಗಿಕ ಅಥವಾ ವ್ಯಾವಹಾರಿಕ ಮಹತ್ವ, ಮರ್ಮ, ಅರ್ಥ ಏನು ಎಂಬುದು ಯಾರಿಗೂ ಸರಿಯಾಗಿ ಗೊತ್ತಾಗುವುದಿಲ್ಲ.

ಒಬ್ಬ ವ್ಯಕ್ತಿ ಹೃದಯದ ಬೈ ಪಾಸ್ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುತ್ತಿರುವಾಗ ಆ ವ್ಯಕ್ತಿ ಬೇಗ ಗುಣಮುಖನಾಗಲಿ ಎಂದು ಯಾರಾದರೂ ಆತನ ಪರವಾಗಿ ಪ್ರಾರ್ಥಿಸಿದಲ್ಲಿ ಆತ ಬೇಗ ಚೇತರಿಸಿಕೊಳ್ಳುತ್ತಾನೆಯೇ? ವೈದ್ಯ ವಿಜ್ಞಾನ ಇಂಥ ಪ್ರಶ್ನೆಗಳಿಗೆ ಉತ್ತರ ಕೊಡಲು ಪ್ರಯತ್ನಿಸಿದೆ. ರಾಂಡಾಲ್ಫ್ ಬರ್ಡ್ ಎಂಬ ವೈದ್ಯ ವಿಜ್ಞಾನಿಯೊಬ್ಬ ಮಾಡಿದ ಸಂಶೋಧನೆಯಲ್ಲಿ ಸುಮಾರು ನಾಲ್ಕುನೂರು ಜನ ಹೃದಯರೋಗಿಗಳಿಗೆ ಹೃದಯದ ಶಸ್ತ್ರಚಿಕಿತ್ಸೆಯ ನಂತರ ಅವರುಗಳ ಚೇತರಿಕೆಗಾಗಿ ಪ್ರಾರ್ಥಿಸಲಾಯಿತು. ಇದು ಸಂಶೋಧನಾ ತಂತ್ರಗಳನ್ನು ಅತಿ ವೈಜ್ಞಾನಿಕವಾಗಿ ಉಪಯೋಗಿಸಿಕೊಂಡ ಅಧ್ಯಯನ ಎಂದೇ ಪ್ರಸಿದ್ಧವಾಗಿತ್ತು. ಚಿಕಿತ್ಸೆ ಮಾಡುತ್ತಿರುವ ವೈದ್ಯನಿಗಾಗಲೀ, ಅಥವಾ ಚಿಕಿತ್ಸೆ ಪಡೆದುಕೊಳ್ಳುತ್ತಿರುವ ರೋಗಿಗಾಗಲೀ ತಮ್ಮ ಈ ಚಿಕಿತ್ಸೆಯಲ್ಲಿ ಪ್ರಾರ್ಥನೆಯೆಂಬ ಕ್ರಿಯೆಯೊಂದು ನಡೆಯಲ್ಪಡುತ್ತಿದೆ ಎಂಬುದರ ಅರಿವೂ ಇರಲಿಲ್ಲ. ಈ ರೀತಿಯ ಚಿಕಿತ್ಸೆಯ ಮುಂಚಿನ ಅರಿವು ವೈದ್ಯ ಮತ್ತು ರೋಗಿ ಇಬ್ಬರನ್ನೂ ಚೇತರಿಕೆಗೆ ಪೂರ್ವಗ್ರಹಪೀಡಿತಗೊಳಿಸುತ್ತವೆ (ಟ್ರೀಟ್‌ಮೆಂಟ್ ಬಯಾಸ್) ಎಂದು ಈ ಇಬ್ಬರನ್ನೂ ಪ್ರಾರ್ಥನಾಕ್ರಿಯೆಯಿಂದ ಹೊರಗುಳಿಸಲಾಗಿತ್ತು (ಡಬಲ್ ಬ್ಲೈಂಡ್). ಪ್ರಾರ್ಥಿಸಲ್ಪಟ್ಟ ರೋಗಿಗಳು ಪ್ರಾರ್ಥಿಸಲ್ಪಡದ ರೋಗಿಗಳಿಗಿಂತ ಬೇಗ ಚೇತರಿಸಿಕೊಂಡರು ಮತ್ತು ಸಾಯದೇ ಬದುಕುಳಿದರು ಎಂಬುದು ಈ ಅಧ್ಯಯನದ ಫಲಿತಾಂಶ.

ನಂತರ ಇದಕ್ಕಿಂತ ಹೆಚ್ಚು ವೈಜ್ಞಾನಿಕವಾಗಿ (ಟ್ರಿಪಲ್ ಬ್ಲೈಂಡ್) ಬಾಸ್ಟನ್ ಮತ್ತು ಇತರ ನಗರಗಳಲ್ಲಿ ನಡೆದ ಇನ್ನೊಂದು ಸಂಶೋಧನೆಯಲ್ಲಿ ೧೮೦೨ ಮಂದಿ ಹೃದಯದ

ಬೈಪಾಸ್ ಸರ್ಜರಿ ಮಾಡಿಸಿಕೊಳ್ಳುವ ರೋಗಿಗಳ ಮೇಲೆ ಪ್ರಾರ್ಥನೆಯ ಪರಿಣಾಮ ಏನಿರಬಹುದೆಂದು ಪರೀಕ್ಷಿಸಲಾಯಿತು. ಈ ಬೈಪಾಸ್ ಮಾಡಿಸಿಕೊಳ್ಳುವ ರೋಗಿಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಲಾಯಿತು. ಮೊದಲ ಎರಡು ಗುಂಪಿನ ರೋಗಿಗಳ ಪರವಾಗಿ ಪ್ರಾರ್ಥಿಸಲಾಯಿತು. ಮೂರನೇ ಗುಂಪಿನ ರೋಗಿಗಳ ಪರವಾಗಿ ಯಾರೂ ಪ್ರಾರ್ಥಿಸಲಿಲ್ಲ. ಪ್ರಾರ್ಥಿಸಲ್ಪಡುವ ರೋಗಿಗಳಲ್ಲಿ ಅರ್ಧ ಜನರಿಗೆ ಅವರ ಪರವಾಗಿ ಪ್ರಾರ್ಥನೆ ನಡೆಯುತ್ತಿದೆ ಎಂದು ತಿಳಿಸಲಾಯಿತು. ಇವರನ್ನು 'ಪ್ರಾರ್ಥಿಸಲ್ಪಡುವವರು ಮತ್ತು ತಮಗಾಗಿ ಪ್ರಾರ್ಥನೆ ನಡೆಯುತ್ತಿದೆ ಎಂದು ಗೊತ್ತಿರುವವರು' ಎಂದು ಅಥವಾ ಸರಳವಾಗಿ 'ಗೊತ್ತಿರುವವರು' ಎಂದು ವರ್ಗೀಕರಿಸಬಹುದು. ಇನ್ನರ್ಧ ಜನಕ್ಕೆ ಅವರ ಪರವಾಗಿ ಪ್ರಾರ್ಥನೆ ನಡೆಯುತ್ತಿರಬಹುದು ಅಥವಾ ನಡೆಯದೇ ಕೂಡ ಇರಬಹುದು ಎಂದು ಹೇಳಲಾಯಿತು. ಇವರನ್ನು 'ಗೊತ್ತಿಲ್ಲದವರು' ಎಂದು ಕರೆಯೋಣ. ಮೂರನೇ ಗುಂಪು 'ಪ್ರಾರ್ಥಿಸಲ್ಪಡದವರ ಗುಂಪು'. ಪ್ರಾರ್ಥನೆ ನಡೆಯುವುದು ಆಸ್ಪತ್ರೆಯಿಂದ ಬಹುದೂರವಿರುವ ಮೂರು ಬೇರೆ ಬೇರೆ ಚರ್ಚ್‌ಗಳಲ್ಲಿ. ಪ್ರಾರ್ಥನೆ ಮಾಡಲಿಕ್ಕೆಂದೇ ಬೇರೆ ಜನರನ್ನು ನೇಮಿಸಲಾಗಿತ್ತು. ಹಾಗೆಯೇ ಪ್ರಾರ್ಥನೆ ಮಾಡುತ್ತಿರುವವರಿಗೆ ರೋಗಿಯ ಪರಿಚಯವಿರಲಿಲ್ಲ. ಅವರಿಗೆ ರೋಗಿಯ ಮೊದಲ ಹೆಸರು ಮತ್ತು ಕಡೆಯ ಹೆಸರಿನ ಮೊದಲ ಅಕ್ಷರವನ್ನು ಮಾತ್ರ ಕೊಡಲಾಗಿತ್ತು. ಪ್ರಾರ್ಥನೆ ಮಾಡುವವರು ತಮಗಿಷ್ಟ ಬಂದಹಾಗೆ ಪ್ರಾರ್ಥನೆ ಮಾಡಬಹುದಾಗಿತ್ತು. ಉದಾಹರಣೆಗೆ ಅಲೆಕ್ಸ್ ಸ್ಮಿತ್ ಎನ್ನುವ ರೋಗಿಯ ಪರವಾಗಿ ಪ್ರಾರ್ಥಿಸಬೇಕಾಗಿದ್ದರೆ ಅಲೆಕ್ಸ್ ಎಸ್. ಎಂಬ ರೋಗಿಯ ಹೆಸರನ್ನು ಹೇಳಿ ಹೇಗೆ ಬೇಕಾದರೂ ಪ್ರಾರ್ಥಿಸಬಹುದು ಆದರೆ 'ಅಲೆಕ್ಸ್ ಎಸ್ ಎಂಬ ರೋಗಿಗೆ ಈ ಆಪರೇಷನ್ ಸುಖಕರವಾಗಿ ಆಗಲಿ, ಬೇಗ ಗುಣಮುಖನಾಗಲಿ ಮತ್ತು ಯಾವುದೇ ರೀತಿಯ ತೊಡಕುಗಳಾಗದೇ ಇರಲಿ' ಎಂಬ ಪ್ಯಾರಾವನ್ನು ಮಾತ್ರ ಹೇಳಲೇಬೇಕಾಗಿತ್ತು. ಇಲ್ಲಿ ನೋಂದಾಯಿತರಾದ ಎಲ್ಲ ರೋಗಿಗಳೂ ಕ್ರಿಶ್ಚಿಯನ್ ಧರ್ಮದವರಾದ್ದರಿಂದ ಅವರಿಗೆ ಚರ್ಚುಗಳಲ್ಲಿ ಮಾತ್ರ ಪ್ರಾರ್ಥನೆ ನಡೆಸಲಾಯಿತು. ಇಲ್ಲಿ ರಾಮಚಂದ್ರ ಪುರಾಣಿಕ, ಮಹಮದ್ ಹಸನ್ ಎಂಬ ರೋಗಿಗಳ್ಯಾರೂ ಇರಲಿಲ್ಲ ಹಾಗಾಗಿ ಇಲ್ಲಿ ವಿಷ್ಣು ಸಹಸ್ರನಾಮ ಪಾರಾಯಣ ಅಥವಾ ಕುರಾನ್ ಪಠಣ ನಡೆಯಲಿಲ್ಲ ಎಂಬುದನ್ನು ಗಮನಿಸಬೇಕು. ಈ ಸಂಶೋಧನೆಯ ಫಲಿತಾಂಶ ಈ ಹಿಂದೆ ನಮೂದಿಸಿದ ಸಂಶೋಧನೆಯ ಫಲಿತಾಂಶವನ್ನು ಪೂರಾ ಉಲ್ಟಾ ಮಾಡಿತ್ತು. ಅಂದರೆ ಈ ಸಂಶೋಧನೆಯ ಪ್ರಕಾರ, ಪ್ರಾರ್ಥಿಸಲ್ಪಟ್ಟ ರೋಗಿಗಳಿಗೂ ಪ್ರಾರ್ಥಿಸಲ್ಪಡದ ರೋಗಿಗಳಿಗೂ ಶಸ್ತ್ರಚಿಕಿತ್ಸಾನಂತರದ ಚೇತರಿಕೆ ಅಥವಾ ತೊಡಕು ಎರಡರ ಪರಿಮಾಣದಲ್ಲೂ ಯಾವುದೇ ವ್ಯತ್ಯಾಸವಿರಲಿಲ್ಲ.

ಈ ಸಂಶೋಧನೆಯ ಇನ್ನೊಂದು ಮಹತ್ತರ ಫಲಿತಾಂಶವೆಂದರೆ ತಮಗಾಗಿ ಯಾರೋ ಅಪರಿಚಿತರು ಪ್ರಾರ್ಥಿಸುತ್ತಿದ್ದಾರೆ ಎಂದು 'ಗೊತ್ತಿದ್ದ' ರೋಗಿಗಳಲ್ಲಿ ತಮಗಾಗಿ

ಪ್ರಾರ್ಥನೆ ನಡೆಯುತ್ತಿದೆಯೋ ಇಲ್ಲವೋ ಎಂದು 'ಗೊತ್ತಿಲ್ಲದ' ರೋಗಿಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಚಿಕಿತ್ಸೆಯ ಅಡ್ಡ ಪರಿಣಾಮಗಳು ತೊಡಕುಗಳು ಕಾಣಿಸಿಕೊಂಡವು. ಇದಕ್ಕೆ ಕಾರಣ ಸರಿಯಾಗಿ ಏನಿರಬಹುದೆಂದು ಸಂಶೋಧಕರು ಸರಿಯಾಗಿ ವಿವರಿಸಿಲ್ಲವಾದರೂ ಪ್ರಾಯಶಃ 'ನನಗಾಗಿ ಪ್ರಾರ್ಥಿಸುತ್ತಿದ್ದಾರೆ ಎಂದರೆ ನನಗೆ ಗಂಭೀರವಾದ ಖಾಯಿಲೆ ಇರಬಹುದೇನೋ' ಎಂದು 'ಗೊತ್ತಿದ್ದವರಲ್ಲಿ' ಕೆಲವರಾದರೂ ಯೋಚಿಸಿರಬಹುದು. ಆ ರೀತಿಯ ಯೋಚನೆ ಶಸ್ತ್ರಚಿಕಿತ್ಸೆಯಿಂದ ಚೇತರಿಸಿಕೊಳ್ಳುವುದನ್ನು ತಡ ಮಾಡಿತ್ತು.

ಈ ಸಂಶೋಧನೆಯಿಂದ ಮತ್ತೊಂದು ಅಂಶ ತಿಳಿದುಬಂತು. 'ಗೊತ್ತಿಲ್ಲದವರ' ಗುಂಪಿನವರು ಪ್ರಾರ್ಥಿಸಲ್ಪಡದವರ ಗುಂಪಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಹೃದಯಾಘಾತ, ಪಾರ್ಶ್ವವಾಯು ಇತರೇ ಕಾಂಪ್ಲಿಕೇಶನ್‌ಗಳಿಗೆ ಬಲಿಯಾದರು. ಇದಕ್ಕೆ ಕಾರಣ ಈ ಸಂಶೋಧನೆಯ ಡಿಸೈನ್, ಸ್ವರೂಪ. ಉದಾಹರಣೆಗೆ ನಮ್ಮ ಅಲೆಕ್ಸ್ ಸ್ಮಿತ್ ಈ 'ಗೊತ್ತಿಲ್ಲದವರ' ಗುಂಪಿನಲ್ಲಿದ್ದಾನೆ ಎಂದುಕೊಳ್ಳಿ. ಅಂದರೆ ಅಲೆಕ್ಸ್ ಸ್ಮಿತ್‌ಗೆ ತನ್ನ ಪರವಾಗಿ ಪ್ರಾರ್ಥನೆ ನಡೆಯುತ್ತಿದೆಯೋ ಇಲ್ಲವೋ ಎಂಬ ಅರಿವಿಲ್ಲ. ಅಲೆಕ್ಸ್ ಸ್ಮಿತ್‌ಗೆ ಪ್ರಾರ್ಥನೆಯ ಶಕ್ತಿಯ ಬಗ್ಗೆ ನಂಬಿಕೆ ಇದ್ದು ಆತನಿಗೆ ತನ್ನ ಪರವಾಗಿ ನಿಜವಾಗಿ ಪ್ರಾರ್ಥನೆ ನಡೆದಿದೆಯೋ ಇಲ್ಲವೋ ಗೊತ್ತಾಗದಿದ್ದಲ್ಲಿ ಆತ ವಿನಾಕಾರಣ ಖಿನ್ನತೆಗೆ ಒಳಗಾಗುತ್ತಾನೆ, ಆಂಕ್ಸೈಟಿ ಇತರೇ ಕಾರಣಗಳಿಂದ ಆಪರೇಷನ್ ನಂತರ ಹೃದಯಾಘಾತ, ಸ್ಟ್ರೋಕು ಮುಂತಾದ ಬೇರೆ ಕಾಂಪ್ಲಿಕೇಶನ್‌ಗಳಾಗಬಹುದು ಎಂದು ಈ ಸಂಶೋಧನಾಕಾರರು ಅಭಿಪ್ರಾಯಪಟ್ಟರು. ಒಟ್ಟು ಇದೊಂದು ಋಣಸಂಪಾದನೆಯ ಸಂಶೋಧನೆ. ಅಂದರೆ ಪ್ರಾರ್ಥನೆಯಿಂದ ಬೈಪಾಸ್ ಸರ್ಜರಿಯ ನಂತರದ ಚೇತರಿಕೆಗೆ ಏನೂ ಉಪಯೋಗವಿಲ್ಲ ಎಂದು ಈ ಸಂಶೋಧನೆ ತೋರಿಸಿತು.

ಪ್ರಾರ್ಥನೆ, ಧ್ಯಾನ ಅಥವಾ ದೇವರು ಇಂಥ ಯಾವುದೇ ಅಳೆಯಲಾಗದ ಅಥವಾ ಮನುಷ್ಯನಿಗೆ ಗೊತ್ತಿರುವ ಮಾಪಕಗಳಿಗೆ ಸಿಗದ ಆದರೆ ರೋಗಿ ನಂಬಿರುವ ಕೆಲವು ಕ್ರಮಗಳನ್ನು ಸಂಶೋಧನೆಗೆ ಒಡ್ಡುವಾಗ ಆಗುವ ತೊಡಕುಗಳು ಹಲವು. ಉದಾಹರಣೆಗೆ ಪ್ರಾರ್ಥಿಸಲ್ಪಡದಿರುವವರ ಗುಂಪೊಂದನ್ನು ವೈಜ್ಞಾನಿಕವಾಗಿ ವಿನ್ಯಾಸಗೊಳಿಸಲು ಹೇಗೆ ಸಾಧ್ಯ? ಒಂದು ಪ್ರಾರ್ಥನಾಗುಂಪು ಪ್ರಾರ್ಥಿಸದಿದ್ದರೂ ಅವರ ಬಂಧುಗಳು ಸ್ನೇಹಿತರು ಪ್ರಾರ್ಥಿಸುತ್ತಿಲ್ಲ ಎಂದು ಹೇಳುವುದು ಹೇಗೆ? ಮೇಲಿನ ಉದಾಹರಣೆಯಲ್ಲಿನ ಕೊನೆಯ ಸಂಶೋಧನೆಯಲ್ಲಿ ಈ ಪ್ರಾರ್ಥನಾ ಗುಂಪುಗಳ ಪ್ರಾರ್ಥನೆಯ ಪರಿಣಾಮವನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುತ್ತದೆ, ಅವರ ಮನೆಯವರು ಕುಟುಂಬದವರು ಪ್ರಾರ್ಥಿಸಿದರೆ ಪರವಾಗಿಲ್ಲ ಎಂದು ಪ್ರಮೇಯದಲ್ಲಿಯೇ ನಮೂದಿಸಲಾಗಿತ್ತು. ಅಂದರೆ ನೀವು ನಾಸ್ತಿಕರಾಗಿದ್ದು ಅಥವಾ ಈ ಪ್ರಾರ್ಥನೆ, ದೇವರು

ಇವುಗಳನ್ನೆಲ್ಲಾ ನಂಬದೇ ಇರುವವರಾಗಿದ್ದು 'ನನ್ನ ಪರವಾಗಿ ಯಾರೂ ಪ್ರಾರ್ಥಿಸಬೇಡಿ' ಎಂದು ನೀವಾಗಿಯೇ ಪ್ರಾರ್ಥಿಸಲ್ಪಡದವರ ಗುಂಪಿಗೆ ನೋಂದಾಯಿಸಿಕೊಂಡರೂ ನಿಮ್ಮ ಪರವಾಗಿ ನಿಮ್ಮ ಕುಟುಂಬದವರು ಪ್ರಾರ್ಥಿಸಿದಲ್ಲಿ ಅದರ ಒಳ್ಳೆಯ ಅಥವಾ ಕೆಟ್ಟ ಪರಿಣಾಮದಿಂದ ನಿಮ್ಮನ್ನು ತಪ್ಪಿಸುವುದು ಹೇಗೆ? ಈ ಪ್ರಾರ್ಥನೆಯ ಸರಿಯಾದ ಡೋಸು ಯಾವುದು? ಜಾಸ್ತಿ ಜನ ಪ್ರಾರ್ಥಿಸಿದಷ್ಟೂ ಮನುಷ್ಯನ ಆಯಸ್ಸು ವೃದ್ಧಿಸುವುದಾದರೆ ತಮಿಳುನಾಡಿನ ಮುಖ್ಯಮಂತ್ರಿಯಾಗಿದ್ದ ಜಯಲಲಿತಾ ಅಂಥವರು ಸಾಯಲೇಬಾರದಲ್ಲ? ಅಥವಾ ಇಡೀ ನಾಡಿನ ಜನತೆ ಜಯಲಲಿತಾ ಅವರ ಪರವಾಗಿ ಮಾಡುವ ಪ್ರಾರ್ಥನೆ, ಮರಣ ಶಯ್ಯೆಯಲ್ಲಿರುವ ಒಬ್ಬ ಸಾಮಾನ್ಯ ಮನುಷ್ಯನಿಗಾಗಿ ಅವನ ಸಂಸಾರದವರು ಮಾಡುವ ಪ್ರಾರ್ಥನೆಗಿಂತ ಕಮ್ಮಿ ಎಂದು ಯಾವ ಮಾಪಕದಿಂದ ಹೇಳುವುದು?

ಈ ಪ್ರಶ್ನೆಗಳಿಗೆ ಉತ್ತರ ಕೊಡುವಂತೆ ಪ್ರಾರ್ಥನಾಪರ ಸಂಶೋಧಕರು ಈ ಸಂಶೋಧನೆಯನ್ನು ಇನ್ನೂ ಒಂದು ಮಟ್ಟ ಮೇಲೆ ಒಯ್ದರು. ಮನುಷ್ಯರಿಗಾಗಿ ಪ್ರಾರ್ಥಿಸಬಹುದು. ಮನೆಯಲ್ಲಿ ಸಾಕಿದ ಸಾಕುಪ್ರಾಣಿಗಳ ಆರೋಗ್ಯಕ್ಕಾಗಿಯೂ ಪ್ರಾರ್ಥಿಸಬಹುದು. ಆದರೆ ಬ್ಯಾಕ್ಟೀರಿಯಾ, ವೈರಸ್, ಅಣಬೆಗಳು, ಜೀವಕೋಶ ಇವುಗಳ ಪರವಾಗಿ ಯಾರು ಪ್ರಾರ್ಥಿಸುತ್ತಾರೆ? ಇಂಥ ಬ್ಯಾಕ್ಟೀರಿಯಾ ವೈರಸ್‌ಗಳ ನಾಶ ಅಣಬೆಗಳ ಬೆಳವಣಿಗೆ, ಕೋಶವಿಭಜನೆ ಮುಂತಾದ ಸೂಕ್ಷ್ಮ ಕ್ರಿಯೆಗಳ ಮೇಲೆಯೂ ಪ್ರಾರ್ಥನೆ ಪರಿಣಾಮ ಮಾಡಬಹುದು ಎಂದು ಕೆಲ ಸಂಶೋಧನೆಗಳಿಂದ ತಿಳಿದುಬಂದಿದೆ. ಇದಕ್ಕೆ ವೈಜ್ಞಾನಿಕ ಪುರಾವೆಗಳಿವೆಯಂತೆ. ಈ ಸೂಕ್ಷ್ಮಾಣುಗಳ ಮೇಲಾಗುವ ಬದಲಾವಣೆಗಳು ಮತ್ತು ಸೂಕ್ಷ್ಮಾತಿಸೂಕ್ಷ್ಮ 'ಜೀನ್'ಗಳ ಮೇಲಾಗುವ "ಮ್ಯುಟೇಷನ್"ಗಳು ಪ್ರಾರ್ಥನೆಯಂತಹ ಒಂದು 'ಆಧ್ಯಾತ್ಮಿಕ' ಕ್ರಿಯೆಯಿಂದ ಸಾಧ್ಯವೇ? ಇದೆ ಎನ್ನುತ್ತಾರೆ ಪ್ರತಿಪಾದಕರು, ಇಲ್ಲ ಎನ್ನುತ್ತಾರೆ ವಿರೋಧಿಗಳು.

ವಿಜ್ಞಾನ ಮತ್ತು ಅಧ್ಯಾತ್ಮ ಎರಡನ್ನೂ ಒಂದೇ ತಕ್ಕಡಿಯಲ್ಲಿಟ್ಟು ತೂಗಲಾಗುತ್ತದೆಯಾ? ಇಲ್ಲ. ಹಾಗೊಂದು ತೀರ ಸರಳೀಕೃತ ಹೋಲಿಕೆಗೂ ಕೆಲವೊಂದು ಮೂಲಭೂತ ಪರಿಕಲ್ಪನೆಗಳನ್ನು ನಾವು ಬದಲಿಸಿಕೊಳ್ಳಬೇಕಾಗುತ್ತದೆ.

ಉದಾಹರಣೆಗೆ ಪ್ರಾರ್ಥನೆಯನ್ನು ವೈಜ್ಞಾನಿಕವಾಗಿ ವಿವರಿಸುವುದು ಹೇಗೆ? ಪ್ರಾರ್ಥನೆ 'ಸಮಯದ ಒಂದು ಘಟ್ಟದಲ್ಲಿ (ಕ್ರಾಸ್ ಸೆಕ್ಷನ್) ನಡೆಯುವ ಒಂದು ಧಾರ್ಮಿಕ ಅಥವಾ ಅಧ್ಯಾತ್ಮ ಕ್ರಿಯೆ'. ಅಂದರೆ 'ಸಂಕಟ ಬಂದಾಗ ವೆಂಕಟರಮಣ' ಎನ್ನುವಂತೆ ಒಬ್ಬ ವ್ಯಕ್ತಿ ಕಾಯಿಲೆ ಬಿದ್ದಾಗ ಅವನ ಒಳಿತಿಗಾಗಿ, ಅಥವಾ ಅವನ ಆರೋಗ್ಯದ ಚೇತರಿಕೆಗಾಗಿ ಅಂದು ಮಾಡುವ 'ಆಧ್ಯಾತ್ಮಿಕ ಶುಶ್ರೂಷೆ'. ಅಂದರೆ, ಜ್ವರ ಬಂದಾಗ ಪ್ಯಾರಾಸಿಟಮಾಲ್ ಕೊಟ್ಟಂತೆ. ಇದು ಪ್ರಾರ್ಥಿಸುವವನ ಜೀವನಕ್ರಮ ಅಥವಾ

ಅವನ ಇನ್ನಿತರ ನಂಬಿಕೆಗಳ ಬಗ್ಗೆ ಏನೂ ಹೇಳುವುದಿಲ್ಲ. ಪರಮ ನಾಸ್ತಿಕನೂ ಮರಣಶಯ್ಯೆಯಲ್ಲಿದ್ದಾಗ ಪ್ರಾರ್ಥಿಸಬಹುದು.

ಈ ರೀತಿಯ ಪ್ರಾರ್ಥನೆಗೂ ಮತ್ತು ಅಲೌಕಿಕ ಶಕ್ತಿಯ ಮೇಲಿನ ಭಕ್ತಿಗೂ ಮತ್ತು ಆ ಶ್ರದ್ಧೆಯಿಂದಲೇ ಜೀವನ ನಡೆಸಿದಾಗ ಪಡೆದುಕೊಳ್ಳುವ ಜೀವನ ಶೈಲಿಗೂ ವ್ಯತ್ಯಾಸವುಂಟು. ಭಕ್ತಿ ಒಂದು ನಂಬುಗೆ, ಶ್ರದ್ಧೆ. ಅದು ಒಬ್ಬ ಮನುಷ್ಯನ ವ್ಯಕ್ತಿತ್ವವನ್ನು ಮತ್ತು ಅವನ ಜೀವನ ಶೈಲಿಯನ್ನು ಬಿಂಬಿಸುತ್ತದೆ. ಒಬ್ಬ ಭಕ್ತ ಅನುಕ್ಷಣವೂ ಆತ ನಂಬಿದ ಶಕ್ತಿಯ, ದೇವರ, ಗುರುವಿನ ಕುರಿತು ಪ್ರಾರ್ಥಿಸುತ್ತಲೇ ಇರುತ್ತಾನೆ. ಆತ ಕಾಯಿಲೆ ಬಿದ್ದಾಗ ಮಾಡುವ ಪ್ರಾರ್ಥನೆ ದೈನಿಕದ ವಿಸ್ತರಣೆ ಅಷ್ಟೇ. ಇಲ್ಲಿ ಪ್ರಾರ್ಥನೆ ಭಕ್ತಿಯ ಒಂದು ಟೂಲ್ ಅಥವಾ ಪರಿಕರ ಮಾತ್ರ. ಭಕ್ತಿ ಜೀವನ ಶೈಲಿಯಾದರೆ ಪ್ರಾರ್ಥನೆ ಚಿಕಿತ್ಸಾ ಕ್ರಿಯೆ. ಹೃದಯದ ಖಾಯಿಲೆಯ ಭಾಷೆಯಲ್ಲಿ ಹೇಳಬೇಕೆಂದರೆ ಭಕ್ತಿ, ಶದ್ಧೆ ಎಲ್ಲವೂ ಹಿತಮಿತವಾದ ಆಹಾರವಿದ್ದಂತೆ, ವ್ಯಾಯಾಮವಿದ್ದಂತೆ. ಪ್ರಾರ್ಥನೆ ಆಂಜಿಯೋಪ್ಲಾಸ್ಟಿ ಇದ್ದಂತೆ.

ಅಂಕಿಅಂಶಗಳ ಪ್ರಕಾರ ಧಾರ್ಮಿಕ ಶ್ರದ್ಧೆಯುಳ್ಳವ ಪ್ರಾಯಶಃ ಆರೋಗ್ಯಕರ ಜೀವನಶೈಲಿಯನ್ನೇ ರೂಢಿಸಿಕೊಂಡಿರುತ್ತಾನೆ. ಅಂದರೆ, ದಿನಾ ಬೆಳಿಗ್ಗೆ ಎದ್ದು ಯೋಗಾಭ್ಯಾಸ ಮಾಡಿ, ತಣ್ಣೀರಿನಲ್ಲಿ ಸ್ನಾನಮಾಡಿ ಸಂಧ್ಯಾವಂದನೆ ಮಾಡಿ, ಏಕಾದಶಿ ಉಪವಾಸ ಮಾಡಿ, ಚಾತುರ್ಮಾಸ ವ್ರತ ಮಾಡುವವನು ಅಥವಾ ಪ್ರತಿ ಭಾನುವಾರ ಚರ್ಚಿಗೆ ಹೋಗುವವನು ಬೀಡಿ ಸಿಗರೇಟು ಸೇದುವ ಮತ್ತು ಆರೋಗ್ಯಕ್ಕೆ ಹಾನಿಕರವಾಗುವ ಜೀವನಶೈಲಿಯನ್ನು ರೂಢಿಸಿಕೊಂಡಿರುವ ಸಂದರ್ಭ ಕಮ್ಮಿ. ಹಾಗೆಯೇ, ಬೆಳಿಗ್ಗೆ ಎದ್ದ ತಕ್ಷಣ ಟಾಯ್ಲೆಟ್ಟಿಗೆ ಹೋಗಬೇಕಾದಾಗ ಸಿಗರೇಟು ಹಚ್ಚುವವನು ಮತ್ತು ರಾತ್ರಿ ಬಾರಿನಿಂದ ನೇರವಾಗಿ ಬಂದು 'ರಾಮಸ್ಕಂದಂ ಹನೂಮಂತಂ' ಹೇಳಲು ಪುರುಸೊತ್ತಿಲ್ಲದೆ ಮಲಗುವವನು ಬಹುಶಃ ನಿಷ್ಠೆಯಿಂದ ಅಥವಾ ಆಸ್ಥೆಯಿಂದ ಪ್ರಾರ್ಥನೆ ಮಾಡಲಾರ.

ಒಟ್ಟು ಪ್ರಾರ್ಥನೆ, ಧಾರ್ಮಿಕ ನಂಬಿಕೆ ಹಾಗೂ ಭಕ್ತಿ, ಧರ್ಮ ಇವುಗಳ ವಿರೋಧಿಗಳು ಹೇಳುವುದು ಪ್ರಾರ್ಥನೆಯನ್ನುವುದು ಮನುಷ್ಯನ ಯಾವುದೇ ಕಾಯಿಲೆಯ ಮೇಲೆ ಯಾವ ರೀತಿಯೂ ಪರಿಣಾಮ ಮಾಡುವುದಿಲ್ಲ. ನೀವು ಆರೋಗ್ಯಕರ ಜೀವನಶೈಲಿಯನ್ನು ರೂಢಿಗೊಳಿಸಿಕೊಂಡಿದ್ದೂ ನಾಸ್ತಿಕರಾಗಿದ್ದ ಪಕ್ಷದಲ್ಲಿ, ನಿಮಗೆ ನಿಮ್ಮ ಸಮವಯಸ್ಕನ 'ಕಂಟ್ರೋಲ್' ಗುಂಪಿಗೆ ಬರದ ಖಾಯಿಲೆಗಳು ಏನೂ ಬರುವುದಿಲ್ಲ. ನೂರು ವರ್ಷ ಬಾಳಿದ ನಿರೀಶ್ವರವಾದಿಗಳು ಎಷ್ಟಿಲ್ಲ, ನಮ್ಮಲ್ಲಿ. ಹಾಗೆಯೇ, ನೀವು ದಿನಾ ದೇವರ ಪೂಜೆ ಮಾಡಿ, ದೇವರು, ಧರ್ಮ ಮತ್ತು ಅಲೌಕಿಕ ಶಕ್ತಿಯ ಬಗ್ಗೆ ಶ್ರದ್ಧೆಯುಳ್ಳವರಾದರೂ ಜೀವನ ಶೈಲಿ ಸರಿಯಿಲ್ಲದಿದ್ದರೆ (ದಿನಾ ಸಿಗರೇಟು

ಸೇದಿ, ಮಿತಿಮೀರಿ ಕುಡಿಯುವವರಾಗಿದ್ದರೆ) ಅಥವಾ ನಿಮ್ಮ ಅನುವಂಶಿಕತೆಯೇ ಸರಿಯಿಲ್ಲದಿದ್ದರೆ ಆ ದೇವರು ನಿಮ್ಮನ್ನು ಕಾಪಾಡುವುದಿಲ್ಲ. (ರಿಚರ್ಡ್ ಸ್ಲೋನ್ ಎನ್ನುವ ನ್ಯೂಯಾರ್ಕಿನ ಕೊಲಂಬಿಯಾ ವಿಶ್ವವಿದ್ಯಾನಿಲಯದ ಒಬ್ಬಾತ ಇದರ ಬಗ್ಗೆ ದೊಡ್ಡದಾದ ಲೇಖನವೊಂದನ್ನು ಬರೆದಿದ್ದ. ಇದರ ಬಗ್ಗೆ ಬೇಕಾದಷ್ಟು ವಾದವಿವಾದಗಳು ನಡೆದಿವೆ, ವೈದ್ಯಸಮುದಾಯದಲ್ಲಿ).

ಆದರೆ, ಇವೆಲ್ಲ ಸಂಶೋಧನೆಗಳು. ಸಂಶೋಧನೆಗಳನ್ನು ಮೀರಿದ್ದು ಪ್ರಾಯೋಗಿಕ, ವ್ಯಾವಹಾರಿಕ ವೈದ್ಯವಿಜ್ಞಾನ. ಸಂಶೋಧನೆಗಳು ಏನೇ ಹೇಳಿದರೂ ಪ್ರಾರ್ಥನೆ ಹಾಗೂ ಧಾರ್ಮಿಕ ನಂಬಿಕೆಗಳ ಪರಿಣಾಮವನ್ನು ಮತ್ತು ಚಿಕಿತ್ಸೆಯಲ್ಲಿ ಅವುಗಳ ಪಾತ್ರವನ್ನು ಉಪೇಕ್ಷೆ ಮಾಡುವ ಹಾಗಿಲ್ಲ. ಈ ಕೆಳಗಿನ ಅಂಕಿ ಅಂಶಗಳನ್ನೇ ನೋಡಿ.

– ಅಮೆರಿಕಾದಲ್ಲಿ ಶೇಕಡ ೭೭ ಮಂದಿ ತಮ್ಮ ವೈದ್ಯರೊಂದಿಗೆ ತಮ್ಮ ಧಾರ್ಮಿಕ ನಂಬಿಕೆಗಳು ಹಾಗೂ ಆಧ್ಯಾತ್ಮಿಕ ಬೇಕುಬೇಡಗಳ ಬಗ್ಗೆ ಮಾತಾಡಲು ಅಥವಾ ಚರ್ಚಿಸಲು ಇಷ್ಟಪಡುತ್ತಾರೆ.
– ಶೇಕಡ ೮೪ರಷ್ಟು ಅಮೆರಿಕನ್ನರು ರೋಗಿಗಳಿಗಾಗಿ ದೇವರಲ್ಲಿ ಪ್ರಾರ್ಥಿಸುವುದರಿಂದ ಅವರ ಕಾಯಿಲೆ ಗುಣವಾಗುತ್ತದೆಂದು ನಂಬಿದ್ದಾರೆ.
– ರಾಷ್ಟ್ರೀಯ ಆರೋಗ್ಯ ಸಂಸ್ಥೆ ಕಳೆದ ಹತ್ತು ವರ್ಷಗಳಲ್ಲಿ ೩.೫ ಮಿಲಿಯ ಡಾಲರ್ಗಳಷ್ಟನ್ನು ಈ ಅಮೂರ್ತ ಕ್ರಿಯೆಗಳಾದ ಧ್ಯಾನ, ಶ್ರದ್ಧಾ ಚಿಕಿತ್ಸೆ (faith healing) ಮುಂತಾದುವುಗಳ ಉಪಯುಕ್ತತೆ ಹಾಗೂ ಮನಸ್ಸು/ ದೇಹದ ಕಾಯಿಲೆಗಳ ಸಂವಹನಕ್ರಿಯೆಯನ್ನು ತಿಳಿದುಕೊಳ್ಳಲು ವೆಚ್ಚಮಾಡಿದೆ.
– ಸುಮಾರು ಎಪ್ಪತ್ತೈದು ಮೆಡಿಕಲ್ ಕಾಲೇಜುಗಳಲ್ಲಿ ಅಧ್ಯಾತ್ಮ ವಿಜ್ಞಾನ, ಐಚ್ಛಿಕ ಪಠ್ಯವಾಗಿ ಓದಲು ಲಭ್ಯವಿದೆ.

ಆದ್ದರಿಂದ ಮುಂದೊಂದು ದಿನ ಪ್ರಾರ್ಥನೆಯನ್ನು ಪ್ರಿಸ್ಕ್ರೈಬ್ ಮಾಡದೇ ಇರುವುದು ವೈದ್ಯನಿಗೆ ಅಸಾಧ್ಯವಾಗಬಹುದು. ರೋಗಿಗಳೇ ಬಂದು ವೈದ್ಯನಿಗೆ "ನೀವು ಕೊಡುವ ಔಷಧಿಗಳ ಬದಲಿಗೆ ಅಥವಾ ನೀವು ಮಾಡಬೇಕೆಂದುಕೊಂಡಿರುವ ಆಂಜಿಯೋಪ್ಲಾಸ್ಟಿ ಬದಲಿಗೆ ನಾನು ಪ್ರಾರ್ಥನೆ ಮಾಡುತ್ತೇನೆ. ಅಮೆರಿಕಾದ ಇಂತಹ ಕಡೆ ಪ್ರಾರ್ಥನೆಯ ಶಕ್ತಿಯ ಬಗ್ಗೆ ಇಂತಹ ಒಂದು ಪ್ರಯೋಗ ನಡೆದಿದೆ, ಅದರಿಂದ ಉಪಯೋಗ ಇದೆ ನೋಡಿ," ಎಂದು ಸಾಕ್ಷಿ ಸಮೇತ ಬಂದು ತೋರಿಸಿದಲ್ಲಿ ವೈದ್ಯನಿಗೆ ಅದರ 'ಮಾಸ್ ಎಫೆಕ್ಟ್' ಅನ್ನು ನಿರ್ಲಕ್ಷ್ಯ ಮಾಡಲಾಗುವುದಿಲ್ಲ.

ಆದರೆ, ಇದಕ್ಕೆ ಇನ್ನೂ ಹಲವು ಆಯಾಮಗಳಿವೆ. ಈ ಪ್ರಾರ್ಥನೆಯನ್ನು ಒಂದು ಅಧ್ಯಾತ್ಮ ಕ್ರಿಯೆಯೆಂದಾಗಲೀ, ಧಾರ್ಮಿಕ ಕ್ರಿಯೆಯೆಂದಾಗಲೀ ಹೇಳಿದಲ್ಲಿ

ಅವುಗಳಿಂದಾಗುವ ವೈಜ್ಞಾನಿಕ ಪರಿಣಾಮಗಳನ್ನು ಅಧ್ಯಯನ ಮಾಡುವುದೂ ಅವೈಜ್ಞಾನಿಕ ಸಂಶೋಧನೆ. ಇದು ವಿಜ್ಞಾನಕ್ಕೆ ದ್ರೋಹ ಮಾತ್ರ ಅಲ್ಲ, ಧರ್ಮ ದ್ರೋಹವೂ ಕೂಡ ಎಂದು ಕೆಲವು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಈ ರೀತಿಯ ಅಧ್ಯಯನಗಳು 'ಧರ್ಮಬಾಹಿರ' ಎಂದು ಕೆಲವು ಧಾರ್ಮಿಕ ಸಂಸ್ಥೆಗಳು ಈ ರೀತಿಯ ಸಂಶೋಧನೆಗಳನ್ನು ನಿಲ್ಲಿಸಬೇಕು ಎಂದು ಕೇಳಿಕೊಂಡಿವೆ. ಈ ರೀತಿಯ ಸಂಶೋಧನೆ ಮಾಡುವ ಸಂಶೋಧಕರು ವೈದ್ಯಸಮುದಾಯದಿಂದಲೂ ಮತ್ತು ಧರ್ಮಗುರುಗಳಿಂದಲೂ ಒಟ್ಟಿಗೇ ಬೈಸಿಕೊಂಡಿದ್ದಾರೆ. ಅಮೆರಿಕಾದ ರಾಷ್ಟ್ರೀಯ ಆರೋಗ್ಯ ಸಂಸ್ಥೆ ಮಾದಕವಸ್ತು ಮತ್ತು ಕುಡಿತದ ವ್ಯಸನಿಗಳ ರಿಹ್ಯಾಬಿಲಿಟೇಶನ್‌ಗೋಸ್ಕರ ಪ್ರಾರ್ಥನೆಯನ್ನು ಶುಶ್ರೂಶಾಕ್ರಮವೆಂದು ಉಪಯೋಗಿಸಿತ್ತು. ಈ ಕ್ರಿಯೆ ಧರ್ಮಕ್ಕೆ ರಾಜಕೀಯವನ್ನು ಅಥವಾ ಸರಕಾರ ಮತ್ತು ಚರ್ಚ್ ಎಂಬ ಎರಡು ಪೂರಾ ಬೇರೆಬೇರೆಯಾದ ಸಂಸ್ಥೆಗಳ ಸಿದ್ಧಾಂತಗಳನ್ನು ಒಂದುಗೂಡಿಸುವ ಅಸಂವಿಧಾನಾತ್ಮಕ ತಂತ್ರ ಎಂದು ಟೀಕಿಸಲಾಯಿತು.

ರಾಷ್ಟ್ರೀಯ ಆರೋಗ್ಯ ಸಂಸ್ಥೆಯ ವತಿಯಿಂದ ನಡೆಯುವ ಅಧ್ಯಯನಗಳಿಗೆ ಬೇಕಾಗುವ ಖರ್ಚನ್ನು ಪೂರೈಸಲು ಚರ್ಚನ್ನು ಅಥವಾ ಪ್ರಾರ್ಥನೆಯಿಂದ ಯಾವುದೋ ರೋಗ ಬೇಗ ಗುಣಪಡುತ್ತದೆ ಎಂಬುದನ್ನು ಸಾಧಾರಪಡಿಸಲು ಬೇಕಾದ ಅಧ್ಯಯನವನ್ನು ಸರಕಾರದಿಂದ ಪ್ರಾಯೋಜಿತಪಡಿಸಲು ಇರುವ ಬ್ಯುರಾಕ್ರಟಿಕ್ ಅಡ್ಡಿಗಳು ಹಲವು. ಅದಕ್ಕೆ ಪ್ರಾರ್ಥನೆ, ಧರ್ಮ, ಭಕ್ತಿ ಇತರೇ ವಿಷಯಗಳನ್ನು ಅಧ್ಯಯನ ಮಾಡುವ ವೈದ್ಯವಿಜ್ಞಾನಿಗಳು ಇನ್ನೊಂದು ತಂತ್ರವನ್ನು ಕಂಡುಹಿಡಿದುಕೊಂಡರು. ಪ್ರಾರ್ಥನೆ ಒಂದು ಧಾರ್ಮಿಕ ಕ್ರಿಯೆ ಎಂದರೆ ತಾನೇ ಅದಕ್ಕೆ ಸರಕಾರಿ ಅನುದಾನ ಸಿಗುವುದು ಕಷ್ಟ? ಪ್ರಾರ್ಥನೆಯನ್ನು ಬೇರೆ ರೀತಿಯಾಗಿ ವಿವರಿಸೋಣ. ಇನ್ನೂ ವೈಜ್ಞಾನಿಕವಾಗಿ ಎಂದು ಅದಕ್ಕೆ ಮೈಂಡ್‌ಫುಲ್‌ನೆಸ್, ಬಿಹೇವಿಯರಲ್ ಥೆರಪಿ ಇನ್ನಿತರ ಹೆಸರಿನಲ್ಲಿ ಅನುದಾನ ಪಡೆಯಲು ಪ್ರಯತ್ನ ಪಡೆಯಲಾಯಿತು. ಪ್ರಾರ್ಥನೆ ಅನ್ನುವುದು ಒಂದು ರೀತಿಯ ಸಮಾಧಿ ಸ್ಥಿತಿ. ನಮ್ಮ ಅರಿವು, ಎಚ್ಚರ ಮತ್ತು ಸುಶುಪ್ತಿಗಳಿದ್ದಂತೆ. ಧ್ಯಾನದಿಂದ, ಪ್ರಾರ್ಥನೆಯಿಂದ ದೊರಕುವ ನಿರ್ವಾಣ ಸ್ಥಿತಿಯೂ ಒಂದು ವೈಜ್ಞಾನಿಕ ಸ್ಥಿತಿ. ಪೆಂಟಥಾಲ್ ಕೊಟ್ಟಾಗ ಆಗುವಂತೆ. ಯಾವುದೋ ಔಷಧಿಗಳನ್ನು ಕೊಟ್ಟು ನಿಮ್ಮ ಡಿಪ್ರೆಶನ್ ಅನ್ನು ಕಡಿಮೆ ಮಾಡುವ ಬದಲು, ಆ ಔಷಧಿಯಿಂದ ನಿಮ್ಮ ಮಿದುಳಿನ ಜೀವಕೋಶಗಳಲ್ಲಿ ಆಗುವ ಜೈವಿಕ ಟ್ರಾನ್ಸ್ಮಿಟರ್‌ಗಳ ಪರಿಮಾಣವನ್ನು ಪ್ರಾರ್ಥನೆಯೆಂಬ ಕ್ರಿಯೆಯಿಂದಲೂ ಹೆಚ್ಚಿಸಿದರೆ? ಈ ರೀತಿಯ ಜೈವಿಕ ಬದಲಾವಣೆಗಳಿಂದ ನಿಮ್ಮ ಡಿಪ್ರೆಶನ್ ದೂರವಾದರೆ?

ಆಗ ಪ್ರಾರ್ಥನೆ ಒಂದು ಧಾರ್ಮಿಕ ಕ್ರಿಯೆಯಾಗಿ ಉಳಿಯುವುದಿಲ್ಲ. ಅದು ಎಚ್ಚರ ಸ್ಥಿತಿಯ ಒಂದು ಹಂತ, ಸುಶುಪ್ತಿಯ ಇನ್ನೊಂದು ಪ್ರಜ್ಞೆ. ಪೆಂಟತಾಲ್ ಕೊಟ್ಟು ಮನೋವಿಶ್ಲೇಷಣೆ ಮಾಡುವ ಬದಲು ರೋಗಿಗೆ ತಾನು ಸುಶುಪ್ತಿಸ್ಥಿತಿ ಸೇರುವವರೆಗೂ

ಪ್ರಾರ್ಥಿಸುವಂಥ ತಂತ್ರವನ್ನು ಹೇಳಿ ಕೊಟ್ಟುಬಿಟ್ಟರೆ, ಇಂತಹ ತಂತ್ರವು ಔಷಧಿಗಳಿಗಿಂತಾ ಪರಿಣಾಮಕಾರಿ ಎಂದು ಒಂದೆರಡು ಅಧ್ಯಯನಗಳು ತೋರಿಸಿಬಿಟ್ಟರೆ, ಅದು ಅಮೆರಿಕಾದಲ್ಲಿ ಚಿಕಿತ್ಸಾ ಕ್ರಮ. ಅಮೆರಿಕಾದಲ್ಲಿ ಆದದ್ದು ಸರ್ವವೇದ್ಯ. ಎಚ್ಚರ ಸುಶುಪ್ತಿಯ ಬಗ್ಗೆ ಈಗಾಗಲೇ ಬೇಕಾದಷ್ಟು ವೈಜ್ಞಾನಿಕ ಹಾಗೂ ಸ್ಪಿರಿಚುಯಲ್ ವಿವರಣೆಗಳ ಗೊಂದಲವಿರುವುದರಿಂದ, ಪ್ರಾರ್ಥನೆ ಅಥವಾ ಧ್ಯಾನಸ್ಥ ಸ್ಥಿತಿ ಇಂತಹ ಒಂದು ಸ್ಥಿತಿ ಎಂದು ಕರೆಯುವಲ್ಲಿ ಅಂತಾ ಏನೂ ತೊಂದರೆಯಿರುವುದಿಲ್ಲ. ಈಗಾಗಲೇ ಅಂತಹ ಪ್ರಯತ್ನಗಳು ನಡೆದಿವೆ.

ಈ ರೀತಿಯ ಚಿಂತನಾಕ್ರಮದ ಹಿಂದೆ ಕೆಲವು ಶಕ್ತಿಗಳು ಕೆಲಸಮಾಡಬಹುದು. ಅಮೆರಿಕಾದಲ್ಲಿ ಪ್ರಾರ್ಥನೆ ಚಿಕಿತ್ಸಾ ಕ್ರಮವಾಗಬೇಕಾದರೆ ಆಹಾರ ಮತ್ತು ಔಷಧಿ ಪ್ರಾಧಿಕಾರ (ಫುಡ್ ಅಂಡ್ ಡ್ರಗ್ ಅಡ್ಮಿನಿಸ್ಟ್ರೇಷನ್) ಈ ಚಿಕಿತ್ಸೆಯನ್ನು ಅಂಗೀಕರಿಸಬೇಕು. ಪ್ರಾರ್ಥನೆ ಚಿಕಿತ್ಸಾಕ್ರಮವಾದರೆ ಆರೋಗ್ಯ ವಿಮಾ ಕಂಪೆನಿಗಳು ಪ್ರಾರ್ಥನೆಗೆ ಬೇಕಾದ ಖರ್ಚನ್ನು ಭರಿಸಬೇಕು. ಆರೋಗ್ಯ ವಿಮಾ ಕಂಪೆನಿಗಳು ಯಾವಾಗಲೂ ಖರ್ಚು ಹೇಗೆ ಕಮ್ಮಿ ಮಾಡುವುದು ಎನ್ನುವುದನ್ನೇ ನೋಡುತ್ತಿರುತ್ತವೆ. ಒಂದು ವೇಳೆ ಹೃದಯ ರೋಗಕ್ಕೆ ಆಂಜಿಯೋಪ್ಲಾಸ್ಟಿಗಿಂತ ಪ್ರಾರ್ಥನೆ ಹೆಚ್ಚು ಪರಿಣಾಮಕಾರಿ ಮತ್ತು ಕಾಸ್ಟ್ ಎಫೆಕ್ಟಿವ್ ಎಂದು ಯಾರಾದರೂ ಸಂಶೋಧನೆ ಮಾಡಿದಲ್ಲಿ ಆಗ ಆರೋಗ್ಯವಿಮಾ ಕಂಪೆನಿಗಳು ಪ್ರಾರ್ಥನೆಯ ಖರ್ಚನ್ನು ಮಾತ್ರ ಭರಿಸಬಹುದು. ಅಷ್ಟೇ ಅಲ್ಲ, ಯಾವುದಾದರೂ ಔಷಧ ಕಂಪೆನಿಗಳು ಈ ಥರದ ಸಂಶೋಧನೆಯನ್ನು ಪ್ರಾಯೋಜಿಸಿ, ವಿಷ್ಣುಸಹಸ್ರನಾಮಕ್ಕೋ, ಬೈಬಲ್ ಪಠಣಕ್ಕೋ ಹದಿನೈದು ವರ್ಷದ ಪೇಟೆಂಟನ್ನೂ ಪಡೆದುಕೊಳ್ಳಬಹುದು!

ಹಾಗಾಗೇ ಯೋಗದಂತ ಯೋಗವೂ ಒಂದು ಧ್ಯಾನಕ್ರಿಯೆಯಾಗಿ ಉಳಿದಿಲ್ಲ. (ಡ್ಯಾನ್ಸ್ ಯೋಗ, ಹಟಯೋಗ ಇತ್ಯಾದಿ). ಬಾಬಾ ರಾಮ್‌ದೇವ್ ಒಂದು ಬ್ರಾಂಡ್ ಅಂಬ್ಯಾಸಡರ್ ಆಗುತ್ತಾನೆ. ಒಂದು ಸಮೀಕ್ಷೆಯ ಪ್ರಕಾರ ಯೋಗ ಹಲವು ಮಿಲಿಯನ್ ಡಾಲರ್‌ಗಳ ವ್ಯವಹಾರ. ಓಂಕಾರವೆನ್ನುವುದು ಒಂದು ಫ್ಯಾಷನ್, ಸೆಕ್ಸಿಯಾಗಿರುವ ಗಣಪ ಕಾರಿನ ಡ್ಯಾಷ್ಬೋರ್ಡಿನಲ್ಲೂ ಇದ್ದಾನೆ, ಬೇಕೆಂದರೆ, ಟಾಯ್ಲೆಟ್ಟಿನ ಕಮೋಡಿನ ಮುಚ್ಚಳದ ಮೇಲೂ ಇರುತ್ತಾನೆ. ಯಾವುದು ಮಾರಾಟವಾಗಬೇಕೋ, ಅದಕ್ಕೊಂದು ಮಾರಾಟ ಮಾಡಿಸಿಕೊಳ್ಳುವ ದಾರಿಯೂ ಬೇಕಾಗುತ್ತದೆ.

ಇನ್ನೊಂದು ಆತ್ಯಂತಿಕವಾದ ವಾದವಿದೆ. ಈ ಪ್ರಾರ್ಥನೆಗೇಕೆ ಬೇಕು, ಸಾಕ್ಷಿ ಪುರಾವೆಗಳು? ಇಲ್ಲೇಕೆ ಬೇಕು ನಮ್ಮ ಸಾಕ್ಷ್ಯಾಧಾರಿತ ವೈದ್ಯದ ಸಂಶೋಧನೆಗಳು? ಎಷ್ಟೊಂದು ವೈದ್ಯಕೀಯ ಚಿಕಿತ್ಸಾಕ್ರಮಗಳಿಗೆ ಸಾಕಷ್ಟು ವೈಜ್ಞಾನಿಕವಾದ ಅಧ್ಯಯನಗಳು ನಡೆದಿಲ್ಲ. ರೂಢಿಗತವಾದ ಶಸ್ತ್ರಚಿಕಿತ್ಸೆಗಳನ್ನು, ಔಷಧಗಳನ್ನು ಯಾವುದೇ ಅಧ್ಯಯನಗಳಿಲ್ಲದೆ

ಚಿಕಿತ್ಸಾಕ್ರಮವೆಂದು ವೈದ್ಯಕೀಯ ಸಮುದಾಯ ಅಂಗೀಕರಿಸಿಕೊಂಡಿರುವ ಉದಾಹರಣೆಗಳು ಹಲವಾರು (ಬೈಪಾಸ್ ಸರ್ಜರಿ, ಕೆಲವು ಎಚ್‌ಐವಿ ಔಷಧಿಗಳು). ಹಾಗಾದಲ್ಲಿ ಈ ಪ್ರಾರ್ಥನೆಗೇಕೆ ಬೇಕು, ಈ ಅಧ್ಯಯನಗಳು? ಈ ಹೊಸ ಹೊಸ ಸಾಕ್ಷ್ಯಾಧಾರಿತ ವೈದ್ಯದ ಸಂಶೋಧನಾ ತಂತ್ರಗಳು? ಅದರಿಂದ ಉಪಯೋಗವಿದೆ ಎಂದು ಲಕ್ಷಾಂತರ ಜನಗಳು ಒಪ್ಪಿಕೊಂಡರೆ ಸಾಲದೇ?

ನಾನು ಇತ್ತೀಚೆಗೆ 'ವೆನ್ ಬ್ರೆತ್ ಬಿಕಮ್ಸ್ ಏರ್' ಎನ್ನುವ ಒಂದು ಪುಸ್ತಕ ಓದಿದೆ. ಪಾಲ್ ಕಲಾನಿಧಿ ಎನ್ನುವ ನ್ಯೂರೋಸರ್ಜನ್ ಬರೆದದ್ದು. ಈತ ತನ್ನ ಮೂವತ್ತೈದನೆಯ ವಯಸ್ಸಿನಲ್ಲಿ ಶ್ವಾಸಕೋಶದ ಕ್ಯಾನ್ಸರ್‌ಗೆ ತುತ್ತಾಗಿ ತನ್ನ ಮೂವತ್ತೇಳನೆಯ ವಯಸ್ಸಿನಲ್ಲಿ ಸತ್ತ. ತನಗೆ ಕ್ಯಾನ್ಸರ್ ಇದೆ ಎಂದು ವೈದ್ಯರು ಹೇಳಿದ ಮೇಲೆ ಈತ ಈ ಪುಸ್ತಕವನ್ನು ಬರೆದದ್ದು. ಸಾಹಿತ್ಯವನ್ನು ಬಹಳ ಗಂಭೀರವಾಗಿ ಅಭ್ಯಸಿಸಿದ್ದ ಈತನಿಗೆ ಇಂಗ್ಲಿಷ್ ಸಾಹಿತ್ಯ ಮತ್ತು ತತ್ವಶಾಸ್ತ್ರದಲ್ಲಿ ಬ್ಯಾಚಲರ್ಸ್ ಡಿಗ್ರಿ ಕೂಡ ಇತ್ತು. ನ್ಯೂರೋಸರ್ಜರಿ ಮತ್ತು ಸಾಹಿತ್ಯ ಎರಡೂ ವಿಷಯದಲ್ಲಿಯೂ ಉತ್ತಮವಾಗಿ ಬರೆಯಬಲ್ಲ ಬಹಳ ಅಪರೂಪವಾದ ವ್ಯಕ್ತಿ ಈತ. ಆತ ತನ್ನ ಪುಸ್ತಕದಲ್ಲಿ ಬರೆಯುತ್ತಾನೆ 'ನಾನು ಸಂಪ್ರದಾಯಸ್ಥ ಕ್ರಿಶ್ಚಿಯನ್ ಕುಟುಂಬದಲ್ಲಿ ಬೆಳೆದದ್ದು. ಪ್ರತಿ ರಾತ್ರಿ ನಮ್ಮನೆಯಲ್ಲಿ ಪ್ರಾರ್ಥನೆ ಮತ್ತು ಧರ್ಮಗ್ರಂಥ ಪಠನ ನಡೆದಿರುತ್ತಿತ್ತು. ನಾನು ಬಹುತೇಕ ವೈಜ್ಞಾನಿಕ ಮಂದಿಯಂತೆ ಸತ್ಯ ಶೋಧಕ್ಕೆ ಮೆಟೀರಿಯಲ್ ಪರಿಕಲ್ಪನೆ, ಪರಿಕರಗಳೇ ಸಾಕು ಎಂದು ತಿಳಿದಿದ್ದೆ. ನನ್ನದೇ ಆದ ಈ ರೀತಿಯ ವಿಚಾರವನ್ನು ಬೆಳೆಸಿಕೊಂಡರೆ ನಾನು ಹಳಸಲು ಆತ್ಮ, ದೇವರು ಮತ್ತು ಕೆಂಪು ಮೇಲ್ವಸ್ತ್ರ ಹೊದ್ದ ಬಿಳಿಗಡ್ಡದ ಮುದುಕರಿಲ್ಲದ ಮೆಟಫಿಸಿಕಲ್ ಅಧ್ಯಾತ್ಮದ ಗ್ರಹಿಕೆ ಸಾಧ್ಯ ಎಂದೂ ಭಾವಿಸಿದ್ದೆ. ನಾನು ಇಪ್ಪತ್ತು ವರ್ಷದ ಹುಡುಗನಾಗಿದ್ದಾಗ ಈ ನಿಟ್ಟಿನ ನನ್ನ ಮುಂದಿನ ಪಯಣಕ್ಕೆ ಬೇಕಾದ ಅಸ್ಥಿಯನ್ನು, ಬುನಾದಿಯನ್ನು ಕಟ್ಟಿಕೊಳ್ಳಲೆಂದೇ ಸಾಕಷ್ಟು ಸಮಯ ಕಳೆದೆ. ನನ್ನ ಸಮಸ್ಯೆ ಏನು ಎಂದು ನಂತರ ನಾನರಿತುಕೊಂಡೆ: ಅಧ್ಯಾತ್ಮವನ್ನು ಅಥವಾ ಮೆಟಫಿಸಿಕ್ಸ್ ಅನ್ನು ವೈಜ್ಞಾನಿಕ ದೃಷ್ಟಿಯಿಂದ ಅರ್ಥೈಸುವಲ್ಲಿ ಇರುವ ತೊಂದರೆಯೆಂದರೆ ಅಲ್ಲಿ ಬರೇ ದೇವರು ಎಂಬ ಪರಿಕಲ್ಪನೆಯಷ್ಟೇ ಅಲ್ಲ ಅದರ ಜತೆ ಪ್ರೀತಿ, ದ್ವೇಷ, ಭರವಸೆ, ಭಯ, ಸೌಂದರ್ಯ, ಹೊಟ್ಟೆಯುರಿ, ಗೌರವ, ದೌರ್ಬಲ್ಯಗಳು, ಸುಖ, ದುಃಖ–ಒಟ್ಟಾರೆ ಈ ಜೀವನವನ್ನು ಅರ್ಥಪೂರ್ಣವಾಗಿ ಮಾಡಬಲ್ಲ ಎಲ್ಲವನ್ನೂ ದೂರವಿಡಬೇಕಾಗುತ್ತದೆ. ಅಂದರೆ ನಾವಿರುವ ರಾಗದ್ವೇಷ ತುಂಬಿರುವ ಈ ಪ್ರಪಂಚವನ್ನೇ ನಾವು ಬಹಿಷ್ಕರಿಸಬೇಕಾಗುತ್ತದೆ. ಈ ಜೀವನಕ್ಕೆ ಒಂದು ಅರ್ಥವಿದೆ ಎಂದು ನೀವು ನಂಬಿದರೆ ನೀವು ದೇವರನ್ನೂ ನಂಬುವವರಾಗಿರುತ್ತೀರ. ವಿಜ್ಞಾನ ದೇವರ ಅಸ್ತಿತ್ವವನ್ನು ನಿರಾಕರಿಸುವುದಾದರೆ ಅದು ಈ ಜೀವನಕ್ಕೆ ಒಂದು

ಅರ್ಥ ಇದೆ ಎಂಬುದನ್ನೂ ನಿರಾಕರಿಸುತ್ತದೆ. ಏಕೆಂದರೆ ವಿಜ್ಞಾನದಲ್ಲಿ ಪುರಾವೆಯಿಲ್ಲದಿದ್ದಲ್ಲಿ ನಮ್ಮ ಅಸ್ತಿತ್ವಕ್ಕೂ ಅರ್ಥವಿಲ್ಲ. ವೈಜ್ಞಾನಿಕ ಜ್ಞಾನ ಮಾತ್ರ ನಿಜವಾದ ಜ್ಞಾನವೆನಿಸಿಕೊಳ್ಳುತ್ತದೆ.'.

ಪಾಲ್ ಕಲಾನಿಧಿ ಈ ಪುಸ್ತಕ ಹಸ್ತಪ್ರತಿಯ ಹಂತದಲ್ಲಿದ್ದಾಗಲೇ ಸತ್ತ. ಆತ ಮೇಲಿನ ಸಾಲುಗಳನ್ನು ಬರೆದಾಗ ಆತನ ಕ್ಯಾನ್ಸರ್ ಉಲ್ಬಣಾವಸ್ಥೆಯಲ್ಲಿತ್ತು.

ಉತ್ತರ ಕೆರೊಲೈನಾದ ಡ್ಯೂಕ್ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಡಾ. ಕೆನಿಗ್, ಧರ್ಮ ಪ್ರಾರ್ಥನೆ ಹಾಗೂ ಕಾಯಿಲೆಯ ಸುಧಾರಣೆಗೆ ನೇರ ಸಂಬಂಧವಿದೆ ಅನ್ನುವುದನ್ನು ಬಲವಾಗಿ ಪ್ರತಿಪಾದಿಸುತ್ತಾ ಬಂದಿದ್ದಾನೆ. ಈತನ ಪ್ರಕಾರ, ಈ ನಂಬಿಕೆಗಳು ಏನಿಲ್ಲದಿದ್ದರೂ ತೀವ್ರತರವಾದ ಕಾಯಿಲೆಗಳನ್ನು ಎದುರಿಸಲು ಮಾನಸಿಕ ಸ್ಥೈರ್ಯವನ್ನು ಕೊಡುತ್ತದೆ, ಅಥವಾ ಆ ಕಾಯಿಲೆಗಳ ಬಗ್ಗೆ ಕೇರ್ ಮಾಡದಿರುವ ಒಂದು ನಿರ್ಲಿಪ್ತ ಸ್ಥಿತಿಯನ್ನು ಕೊಡುತ್ತದೆ. ಮಾನಸಿಕ ಕಾಯಿಲೆಗಳಾದ ಖಿನ್ನತೆ ಮುಂತಾದವುಗಳು ಖಂಡಿತಾ ಸುಧಾರಿಸುತ್ತವೆ. ಆತ್ಮಹತ್ಯಾ ಪ್ರಯತ್ನಗಳು ಕಡಿಮೆಯಾಗುತ್ತವೆ. ಪ್ರಾರ್ಥನೆಯಿಂದ ನಮ್ಮ ಭೌತಿಕ ಆರೋಗ್ಯ ಸುಧಾರಿಸುತ್ತದೆ ಅನ್ನುವುದನ್ನು ಸಾಬೀತುಮಾಡುವುದಕ್ಕೆ ಇನ್ನೂ ಹೆಚ್ಚಿನ ಸಾಕ್ಷಿಗಳು ಬೇಕು. ಆದರೆ ಆ ಸಾಕ್ಷಿಗಳು ಒಂದಲ್ಲ ಒಂದು ದಿನ ಸಿಕ್ಕೇ ಸಿಗುತ್ತದೆ. ಈ ಅಧ್ಯಯನಗಳನ್ನು ವಿನ್ಯಾಸಗೊಳಿಸುವ ಜಾಣರು ನಮ್ಮಲ್ಲಿಲ್ಲ ಅಂದಾಕ್ಷಣ ಸತ್ಯ ಸುಳ್ಳಾಗುವುದಿಲ್ಲ. (ವೈದ್ಯಕೀಯ ರಂಗದಲ್ಲಿ ನಂಬಿಕೆಗಳನ್ನೇ ಪಲ್ಲಟಗೊಳಿಸುವ ಇಂತಹ ಸಂಶೋಧನೆಗಳು ದಿನಾ ಆಗುತ್ತಲೇ ಇರುತ್ತವೆ.) ವೈದ್ಯಕೀಯ ಕಾಲೇಜಿನಲ್ಲಿ ಈ ವಿಷಯಗಳ ಬಗ್ಗೆ ಹೆಚ್ಚು ಹೆಚ್ಚು ಕಲಿಸಬೇಕು. ವೈದ್ಯರುಗಳು ತಮ್ಮ ರೋಗಿಗಳ ಕಾಯಿಲೆಗಳ ಬಗ್ಗೆ ವಿಚಾರಿಸಿದಷ್ಟೇ ಆಸ್ಥೆಯಿಂದ ಅವರ ಮನೆ, ಧರ್ಮ, ನಂಬಿಕೆಗಳ ಬಗ್ಗೆಯೂ ಮಾತಾಡಬೇಕು. ಅವರ ಧಾರ್ಮಿಕ ನಂಬಿಕೆಗಳನ್ನು ಪೂರೈಸಲು ಸಹಕರಿಸಬೇಕು, ಎನ್ನುತ್ತಾನೆ ಈತ.

ಆದರೆ ಈತನ ವಾದಕ್ಕೆ ಪೂರಾ ವಿರುದ್ಧವಾದ ಅಭಿಪ್ರಾಯಗಳನ್ನೊಳಗೊಂಡ ಒಂದು ಲೇಖನ ಕೆಲ ವರ್ಷಗಳ ಹಿಂದೆ ವೈದ್ಯರಂಗದ ಪ್ರತಿಷ್ಠಿತ ನಿಯತಕಾಲಿಕೆ 'ಲ್ಯಾನ್ಸೆಟ್'ನಲ್ಲಿ ಪ್ರಕಟವಾಗಿತ್ತು. ಆ ಲೇಖನದ ತಲೆಬರಹ "ಧರ್ಮ, ಅಧ್ಯಾತ್ಮ ಮತ್ತು ವೈದ್ಯವಿಜ್ಞಾನ" ಅದನ್ನು ಬರೆದವ ನ್ಯೂಯಾರ್ಕಿನ ಕೊಲಂಬಿಯಾ ವಿಶ್ವವಿದ್ಯಾನಿಲಯದ ಪ್ರೊಫೆಸರ್ ರಿಚರ್ಡ್ ಸ್ಲೋನ್ ಎಂಬಾತ. ಆತ ಧರ್ಮ, ಪ್ರಾರ್ಥನೆ ಹಾಗೂ ಆರೋಗ್ಯದ ಬಗ್ಗೆ ಅದುವರೆಗೂ ಪ್ರಕಟವಾಗಿದ್ದ ಸಂಶೋಧನಾತ್ಮಕ ಲೇಖನಗಳನ್ನೆಲ್ಲಾ ವಿಶ್ಲೇಷಿಸಿ ಬರೆದಿದ್ದ. ಆತನ ಪ್ರಕಾರ ಈ ಪ್ರಾರ್ಥನೆಗೂ ಮತ್ತು ರೋಗಶಮನಕ್ಕೂ ಇರುವ ಸಂಬಂಧ ಕಾಕತಾಳೀಯವಾದದ್ದು. ಒಂದಕ್ಕೊಂದನ್ನು ಪೋಣಿಸುವ, ಇಲ್ಲದ ಸಂಬಂಧವನ್ನು ಹುಡುಕುವುದು ಮೂರ್ಖತನ. ನನ್ನ ಈ ಲೇಖನದಲ್ಲಿ ಈ ಮೊದಲೇ ವಿವರಿಸಿರುವಂತೆ ಚರ್ಚಿಗೆ ಹೋಗುವವರು ಹೆಚ್ಚುಕಾಲ ಬದುಕುವುದು ಅವರು ಚರ್ಚಿಗೆ

ಹೋಗುವುದರಿಂದಲ್ಲ, ಅವರ ಆರೋಗ್ಯಕರ ಜೀವನಕ್ರಮದಿಂದ. ಜಾಸ್ತಿ ಕುಡಿಯದವನು, ಸಿಗರೇಟು ಸೇದದವನು ಹಾಗೂ ನಿಯಮಿತವಾಗಿ ವ್ಯಾಯಾಮ ಮಾಡುವವನು ಚರ್ಚಿಗೆ ಹೋಗದಿದ್ದರೂ ಬಹುಕಾಲ ಬದುಕಿಯೇ ಬದುಕುತ್ತಾನೆ. ಧರ್ಮವನ್ನು ಇಲ್ಲಿ ಇನ್ನೊಂದು variable ಆಗಿ ತರಬೇಕಾಗಿಲ್ಲ. ಆತನ ಪ್ರಕಾರ ಇದು ವಿಜ್ಞಾನವಲ್ಲ, ಸಾಮಾನ್ಯ ಜ್ಞಾನ. ನಿಮ್ಮ ರೋಗಿಗೆ ಸಿಗರೇಟು ಬಿಡಲು ಮಾನಸಿಕ ಸ್ಥೈರ್ಯ ಸಿಗಲು ಮತ್ತು ಇದೇ ಥರದ 'ಸಪೋರ್ಟ್ ಸಿಸ್ಟಮ್'ಗಾಗಿ ಆತ ಚರ್ಚಿಗೆ ಹೋಗುವುದಾದರೆ ಹೋಗಲಿ. ಆದರೆ ಇಲ್ಲಿ ಆತನ ನಂಬಿಕೆಯಿಂದ ಆತ ಸಿಗರೇಟ್ ಸೇದುವುದನ್ನು ಬಿಟ್ಟ ಎಂದು ಹೇಳುವುದು ಅವೈಜ್ಞಾನಿಕ. ಒಬ್ಬ ನಾಸ್ತಿಕ ಸಿಗರೇಟು ಸೇದದಿದ್ದರೆ, ಆತನ ಆಯಸ್ಸು ಸಿಗರೇಟ್ ಸೇದದ ಆಸ್ತಿಕನಿಗಿಂತಾ ಕಡಿಮೆಯೇನಾಗುವುದಿಲ್ಲ. ಆಸ್ತಿಕ ಸಿಗರೇಟ್ ಸೇದಿಯೂ ಹೆಚ್ಚು ಆರೋಗ್ಯದಿಂದಿರುವುದಿಲ್ಲ. ಇಲ್ಲಿ ಆತನ ನಂಬಿಕೆ ಹಾಗೂ ಧರ್ಮಗಳು ಹೆಚ್ಚಿನ ರಕ್ಷಣೆಯನ್ನು ಕೊಡುವುದಿಲ್ಲ. ಮದುವೆಯಾಗಿ ಸಂಸಾರಸುಖ ಅನುಭವಿಸಿ, ಮಕ್ಕಳು ಮೊಮ್ಮಕ್ಕಳನ್ನು ಕಂಡು ಪರಿಪೂರ್ಣ ಜೀವನವನ್ನು ಅನುಭವಿಸಿದಾತ ಮದುವೆಯಾಗದ ಒಬ್ಬಂಟಿಗಳಿಗಿಂತ ಹೆಚ್ಚುಕಾಲ ಬದುಕುತ್ತಾರೆ ಅನ್ನುವುದಕ್ಕೆ ಇನ್ನೂ ಒಳ್ಳೆಯ ಸಾಕ್ಷಿಗಳಿವೆ. ಹಾಗಂತ ನಾವು ನಮಗೆ ಬರುವ ರೋಗಿಗಳಿಗೆಲ್ಲಾ ಮದುವೆಯಾಗಿ ಎಂದು ಹೇಳುವುದಿಲ್ಲವಲ್ಲ. ಅಂತದೇ ಇನ್ನೊಂದು ಅವೈದ್ಯಕೀಯ variable ಆದ ಧರ್ಮವನ್ನು ನಾವು ಏಕೆ ಮುಖ್ಯ ಎಂದು ಭಾವಿಸಬೇಕು? –ಇವು ರಿಚರ್ಡ್ ಸ್ಲೋನ್ ಮತ್ತು ಅವನದೇ ರೀತಿ ಯೋಚಿಸುವವರ ಇನ್ನೂ ಹಲವರ ಪ್ರಶ್ನೆ.

ಪ್ರಾಯಶಃ ಧರ್ಮ ಮದುವೆಗಿಂತ ರೋಚಕ ವಿಷಯ. ಮಾಧ್ಯಮಗಳಲ್ಲಿ ಪ್ರಕಟವಾಗಬಲ್ಲ ವಿಷಯ. ಅದರ ಬಗ್ಗೆ ಸಂಶೋಧನೆ ಮಾಡಿದರೆ ನಿಮ್ಮ ಅಧ್ಯಯನಗಳನ್ನು ವಿಶ್ವವಿಖ್ಯಾತ ಜರ್ನಲ್ಲುಗಳು ಪ್ರಕಟಮಾಡಬಲ್ಲ ಸಾಧ್ಯತೆಗಳನ್ನು ನಿಮಗೆ ದೊರಕಿಸಿಕೊಡಬಲ್ಲ ವಿಷಯ!!

ಕೆಲವು ವರ್ಷಗಳ ಹಿಂದೆ ಅಮೆರಿಕಾದ 'ನ್ಯೂಸ್ ವೀಕ್' ನಿಯತಕಾಲಿಕ ಡಾ. ಕೆನಿಗ್ ಹಾಗೂ ಡಾ. ಸ್ಲೋನ್ ಇಬ್ಬರನ್ನೂ ಸಂದರ್ಶನ ಮಾಡಿತು. ಸಂದರ್ಶನದ ಕೊನೆಯಲ್ಲಿ ಇಬ್ಬರಿಗೂ ಒಂದು ಪ್ರಶ್ನೆಯನ್ನು ಕೇಳಲಾಗಿತ್ತು. "ನೀನು ಧಾರ್ಮಿಕ ಮನುಷ್ಯನೇ?"

ಡಾ. ಕೆನಿಗ್ ಹೇಳಿದ– "ಹೌದು, ನಾನು ಕ್ರಿಶ್ಚಿಯನ್. ನನ್ನ ಧರ್ಮವನ್ನು ನಾನು ನನ್ನ ಕಾಯಿಲೆಯ ಶಮನಕ್ಕೆ, ಮದುವೆಯೆಂಬ ವ್ಯವಸ್ಥೆಯನ್ನು ಉಳಿಸುವುದಕ್ಕೆ ಮತ್ತು ನನ್ನ ಮಕ್ಕಳನ್ನು ಬೆಳೆಸುವುದಕ್ಕೆ ಆಸರೆಯಾಗಿಟ್ಟುಕೊಳ್ಳುತ್ತೇನೆ."

ಡಾ. ಸ್ಲೋನ್ ಹೇಳಿದ "ನಾನು ಈ ಪ್ರಶ್ನೆಗೆ ಉತ್ತರ ಕೊಡಲು ಇಷ್ಟಪಡುವುದಿಲ್ಲ. ಯಾಕೆಂದರೆ ಅದು ತೀರ ಸ್ವಂತ ವಿಷಯ."

ಅವರವರ ನಂಬಿಕೆಗಳು ಅವರ ಕೆಲಸ, ಸಂಶೋಧನೆ ಮತ್ತು ಸಿದ್ಧಾಂತಗಳಿಗೆ ಏನೂ ಪ್ರಭಾವ ಬೀರಿಲ್ಲ ಎಂದು ಹೇಳುವುದು ಹೇಗೆ?

ಒಟ್ಟಾರೆ ಪ್ರಾರ್ಥನೆ ಬರೀ ದೇವರ ಮನೆಯಲ್ಲಿ, ಚರ್ಚಿನಲ್ಲಿ ಅಥವಾ ಮಸೀದಿಯಲ್ಲಿ ಮಾತ್ರ ಉಳಿದಿಲ್ಲ. ಅದು ಐಸಿಯುನಲ್ಲಿ ವೆಂಟಿಲೇಟರಿನ ಸಹಾಯದಿಂದ ಉಸಿರಾಡುತ್ತಿರುವ ರೋಗಿಯ ಚೇತರಿಕೆಗೆ ಸಹಕಾರಿಯಾಗುತ್ತದೆ, ವ್ಯಸನಿಗಳ ಪುನಶ್ಚೇತನಕ್ಕೆ, ಖಿನ್ನತೆಗೆ ಸಾಂಪ್ರದಾಯಿಕ ಚಿಕಿತ್ಸೆಗಳ ಜತೆ ಪೂರಕವಾಗಿ, ಬೈಪಾಸ್ ಶಸ್ತ್ರಚಿಕಿತ್ಸೆಯ ನಂತರ ರಕ್ತನಾಳಗಳು ಮುಚ್ಚದಂತೆ ಉಳಿಯಲು ಮಾಡುವ ಪರ್ಯಾಯ ಮತ್ತು ಪೂರಕ ಪದ್ಧತಿಯಾಗಿದೆ. ನಿಮಗೆ ಬೇಕೋ ಬೇಡವೋ ವೈದ್ಯವಿಜ್ಞಾನದಲ್ಲಿ ಅದು ಧರ್ಮ, ದೇವರು, ಪ್ರಾರ್ಥನೆಗಳು ಔಷಧಿ ಕಂಪೆನಿಗಳಂತೆ ದುಡ್ಡು ಮಾಡಬಲ್ಲ ಉದ್ಯಮವಾಗಿದೆ. ನೀವು ಆಸ್ತಿಕರೋ, ನಾಸ್ತಿಕರೋ ನಮಗೆ ಬೇಕಾಗಿಲ್ಲ, ಪ್ರಾರ್ಥನೆಯೆನ್ನುವ ಕ್ರಿಯೆ ಎಚ್ಚರ, ಸುಶುಪ್ತಿಯ ನಡುವೆಯ ಒಂದು ಧ್ಯಾನಸ್ಥ ಸಮಾಧಿ ಸ್ಥಿತಿಯೆಂದು ವಿವರಿಸುವ ಪ್ರಯತ್ನ ಯಶಸ್ವಿಯಾದಲ್ಲಿ, ಪ್ರಾರ್ಥನೆ ಒಂದು ಚಿಕಿತ್ಸಾಕ್ರಮವಾಗುತ್ತದೆ. ಅದಕ್ಕೆ ಯಾವ ಸಾಕ್ಷಿಯೂ ಬೇಕಾಗುವುದಿಲ್ಲ. ಜನಕ್ಕೆ ಏನು ಬೇಕೋ, ಅದನ್ನು ವೈದ್ಯ ಸಮುದಾಯ ಕೊಡುತ್ತದೆ. ಪ್ರಾರ್ಥನೆ ಇಷ್ಟವಾದರೆ ಅದನ್ನು ಕೂಡ.



ಅನುಬಂಧ-೧

## ನಮ್ಮ ಲೇಖಕರು

**ಲಕ್ಷ್ಮೀಶ ತೋಳ್ಪಾಡಿ**

ದಕ್ಷಿಣಕನ್ನಡ ಜಿಲ್ಲೆಯ ಪುತ್ತೂರಿನಿಂದ ೧೨ ಕಿ.ಮೀ. ದೂರದಲ್ಲಿರುವ ಶಾಂತಿಗೋಡು ಗ್ರಾಮದ ಸಂತ ಮೌನ ಮತ್ತು ಕುಮಾರಧಾರೆ ಸರಿತೆಯ ಶಾಂತ ಸ್ವನ-ಎರಡನ್ನೂ ತನ್ನೊಳಗೆ ಧರಿಸಿದಂತಿದ್ದಾರೆ ಲಕ್ಷ್ಮೀಶ ತೋಳ್ಪಾಡಿ. ಅವರು ಜನಿಸಿದ್ದು ಭಾರತಕ್ಕೆ ಸ್ವಾತಂತ್ರ್ಯ ಬಂದ ವರ್ಷ. ಹೇಳಿಕೇಳಿ ತೋಳ್ಪಾಡಿತ್ತಾಯ ವೈದಿಕ ಮನೆತನ. ಉತ್ತುಬಿತ್ತು ಗೇಯುವ ಕಾಯಕ. ಆಡುಭಾಷೆ ತುಳು. ದೇವಭಾಷೆ ಸಂಸ್ಕೃತ. ಒಂದು ಒಲವಿಗೆ ಇನ್ನೊಂದು ಅರಿವಿಗೆ. ಬರೆಯಲು, ಬರೆಯಲು ಕನ್ನಡ ಹೇಗೂ ಇದ್ದೇ ಇತ್ತು. ಹೊಸ ಯೋಚನೆ ಕೊಡಲು ಇಂಗ್ಲಿಷ್, ಆಧುನಿಕ ಮನಸ್ಸಿನಲ್ಲಿ ವೇದೋಪನಿಷತ್ತುಗಳನ್ನು ಮೂಲಭಾಷೆಯಲ್ಲಿ ಓದುತ್ತಲೇ ವೈದಿಕ ಮತ್ತು ವೈಚಾರಿಕ ನಿಲುವುಗಳನ್ನು ಪರಸ್ಪರ ಮುಖಾಮುಖಿಯಾಗಿಸಿದರು.

ತಾರುಣ್ಯದಲ್ಲೊಮ್ಮೆ ಕೊಂಚ ಕಾಲ ಬೆಂಗಳೂರಿನಲ್ಲಿದ್ದರು. ಆಗ ವೈಎನ್‌ಕೆಯವರ ವಾತ್ಸಲ್ಯವೃಕ್ಷದ ನೆರಳು ತಂಗುದಾಣ. ಜೊತೆಗೆ, ಗೋಪಾಲಕೃಷ್ಣ ಅಡಿಗರ ಸನಿಹದಲ್ಲಿ ನವ್ಯದೀಕ್ಷೆ, ಲಂಕೇಶರ ಪತ್ರಿಕಾ ಕಚೇರಿಗೆ ಭೇಟಿ. ಕಿ.ರಂ. ನಾಗರಾಜರ ಕೂಡೆ ಹರಟೆ. ಅಷ್ಟರಲ್ಲಾಗಲೇ ಭಕ್ತಿ-ವಿಭಕ್ತಿಗಳ ನಡುವಿನ ಆಧ್ಯಾತ್ಮಿಕ ವ್ಯಾಕರಣವನ್ನು ಹುಡುಕಿ ಹೊರಡಬೇಕೆನ್ನಿಸಿತ್ತು ತೋಳ್ಪಾಡಿಯವರಿಗೆ. ಶಿವಮೊಗ್ಗದಲ್ಲಿ ಸತ್ಯಕಾಮ ಸಿಕ್ಕಿದರು. ಅವರು ತೋಳ್ಪಾಡಿಗೆ, ಇವರು ಕಲ್ಲಳ್ಳಿಗೆ ಹೋಗಿಬಂದದ್ದಿದೆ. ಪುತ್ತೂರಿನ ಅಜ್ಜನ ಸಾಧನೆಯ ಗವಿಯೊಳಗೆ ಕಂಡ ಬೆಳಕು ಕೆಲಕಾಲ ಕೈಹಿಡಿದು ನಡೆಸಿತು. ಕೆಲವೊಮ್ಮೆ ಬುದ್ಧ, ಗಾಂಧಿಯವರ ಮಧ್ಯಮ ಮಾರ್ಗದ ಬೆರಗು. ಈ ಮಧ್ಯೆ ಸಿಕ್ಕಿದವರು ಸೂಫಿ ಬ್ಯಾರಿ. ಕೃಷಿಯನ್ನು ಋಷಿಯ ಆಸ್ಥೆಯಲ್ಲಿ ಬದುಕಿದ ಪುಣ್ಯಾತ್ಮ. 'ಒಂದು ಗಿಡ ತನಗೆ ಬೇಕಾದ್ದನ್ನು ಮಣ್ಣಿನಿಂದ ಪಡೆದುಕೊಂಡು ಅದು ಏನು ಕೊಡಬೇಕೆಂದಿದೆಯೊ ಅದನ್ನು ಕೊಟ್ಟೇ ಕೊಡುತ್ತದೆ' ಎಂಬ ಸೂಫಿ ಬ್ಯಾರಿಯವರ ಮಾತುಗಳು ಲಕ್ಷ್ಮೀಶ ತೋಳ್ಪಾಡಿಯರಿಗೆ ಇವತ್ತಿಗೂ ಕೇಳಿಸುತ್ತಿವೆ. ಕುಮಾರಧಾರೆಗೆ ಅಣೆಕಟ್ಟು ಕಟ್ಟುವುದು ಸ್ಥಳೀಯ ರೈತರಿಗೆ ಹಾನಿಕಾರಕವೆನ್ನಿಸಿದಾಗ ಕಿಸಾನ್ ಸಂಘದ ಮೂಲಕ ಪ್ರತಿಭಟಿಸಿ ಯೋಜನೆಯನ್ನು ಹಿಮ್ಮೆಟ್ಟಿಸಲು ಕಾರಣರಾದವರು. ಜೊತೆಗೆ ರೈತಪರ, ಸ್ವದೇಶಿ ಚಳುವಳಿಗಳ ಕೂಡಾಟ. ಗ್ರಾಮಸ್ವರಾಜ್ಯದ ನಿರಂತರ ಕನಸು.

ಆಧ್ಯಾತ್ಮಿಕ ನಿಗೂಢತೆಯನ್ನು ಜೀವನಪ್ರೀತಿಯ ಸರಳತೆಯನ್ನಾಗಿ ಕಾಣುವ ತುಡಿತದಲ್ಲಿಯೇ ಅವರ ಮಾತು, ಮೌನ, ಓದು, ಬರಹಗಳು ಸಾಗಿವೆ. ಇದೇ ಕಾರಣಕ್ಕಾಗಿ

ವೇದ, ಉಪನಿಷತ್, ಪೌರಾಣಿಕ ಮಹಾಕಾವ್ಯಗಳ ಪದಗಳ ನಡುವಿನ ಮೌನವನ್ನು ಅವರಿಗೆ ಓದುವುದಕ್ಕೆ ಸಾಧ್ಯವಾಗಿದೆ. 'ಗೋತ್ರಗಳು ಹುಟ್ಟಿನಿಂದ ಬರುವುದಿಲ್ಲ' ಎಂಬ ಸಮರ್ಥನೆಗಾಗಿ ಉಪನಿಷತ್‌ಗಳ ವಾಕ್ಯಗಳನ್ನು ಉದ್ಧರಿಸಲು, 'ಬಂಧುಮೋಹ ತೊರೆದ ಅರ್ಜುನನೇಕೆ ಅಭಿಮನ್ಯು ಅಳಿದಾಗ ಅಳುತ್ತಾನೆ?' ಎಂಬ ಜಿಜ್ಞಾಸೆ ವ್ಯಕ್ತಪಡಿಸಲು ಅವರಿಗಷ್ಟೇ ಸಾಧ್ಯ. ಪುರಾಣವನ್ನು ಬಗೆಯುತ್ತ ಪೌರಾಣಿಕ ಬಿಂಬಗಳನ್ನು ಸಮಕಾಲೀನ ಕನ್ನಡಿಯ ಮುಂದೆ ತಂದು ನಿಲ್ಲಿಸುತ್ತ ಅವರು ಮಾತಿನ ಹಾರವನ್ನು ಪೋಣಿಸುತ್ತಾರೆ. ಆರ್ಷೇಯ ಜ್ಞಾನ ಮತ್ತು ಸಮಕಾಲೀನ ಅರಿವುಗಳ ಸಮಪಾಕದಲ್ಲಿ ಅವರ ವಚನಗಳು ಸಮನ್ವಯ ಪ್ರತಿಪಾದನೆಯ ಪ್ರವಚನಗಳಾಗುತ್ತವೆ. ಅವರದು ಕವಿ ಹೃದಯ, ಮಾತಿನಲ್ಲಿಯೂ ಮೌನದಲ್ಲಿಯೂ ಕಥನಕ್ಕಿಂತ ಕಾವ್ಯವೇ ಹೆಚ್ಚು.

ನಾಡಿನ ಹಲವು ಪತ್ರಿಕೆಗಳಲ್ಲಿ ಅವರ ಲೇಖನಗಳು ಪ್ರಕಟವಾಗಿವೆ. ಭಗವದ್ಗೀತೆಯ ಬಗೆಗಿನ 'ಮಹಾಯುದ್ಧಕ್ಕೆ ಮುನ್ನ' ಮೊದಲ ಪ್ರಕಟಿತ ಕೃತಿ. ಈ ಕೃತಿಯ ಬಗ್ಗೆ ಬಂದಿರುವ ಪತ್ರಿಕಾ ವಿಮರ್ಶೆಯಲ್ಲಿ 'ಆಧುನಿಕನಿಗೆ ಹೃದಯಸ್ಪರ್ಶಿ' ಎಂಬ ಮೆಚ್ಚುಗೆ ವ್ಯಕ್ತವಾಗಿತ್ತು. ಅಂತರ್ಜಾಲ ಪತ್ರಿಕೆಯಲ್ಲಿ ಭಾಗವತದ ಬಗ್ಗೆ ಬರೆದ ಸರಣಿ ಬರಹಗಳ ಸಂಕಲನ 'ಸಂಪಿಗೆ ಭಾಗವತ', 'ಬೆಟ್ಟ ಮಹಮದನ ಬಳಿಗೆ ಬಾರದಿದ್ದರೆ', 'ಭವ ತಲ್ಲಣ' (ತಾಳಮದ್ದಲೆ ಕುರಿತು) ಎಂಬ ಕೃತಿಗಳು ಪ್ರಕಟವಾಗಿವೆ.

## ವೈದೇಹಿ

ಹುಟ್ಟಿದ್ದು ಉಡುಪಿ ಸಮೀಪದ ಕುಂದಾಪುರದಲ್ಲಿ (೧೨.೨. ೧೯೪೫). ಮರ ಗಿಡ ಬಳ್ಳಿ, ಅಂತರಂಗದ ಪುಟಗಳು, ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗಳು, ಕ್ರೌಂಚ ಪಕ್ಷಿಗಳು, ಗೋಲ (ಅಲೆಗಳಲ್ಲಿ ಅಂತರಂಗ-ಸಮಗ್ರ) ಕಥಾ ಸಂಕಲನಗಳು. ಕಾವ್ಯ (ಪಾರಿಜಾತ), ಪ್ರಬಂಧ (ಮಲ್ಲಿನಾಥನ ಧ್ಯಾನ, ಜಾತ್ರೆ), ಕಾದಂಬರಿ (ಅಸ್ಪೃಶ್ಯರು), ಜೀವನ ಚರಿತ್ರೆ (ಬಿ ವಿ ಕಾರಂತ, ಕೋ ಲಾ ಕಾರಂತ, ಸೇಡಿಯಾಪು, ಸರಸ್ವತಿ ಬಾಯಿ ರಾಜವಾಡೆ), ಮಕ್ಕಳ ನಾಟಕ ಹೀಗೆ ಹಲವು ಕ್ಷೇತ್ರಗಳಲ್ಲಿ ಸಾಧನೆ. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪುಸ್ತಕ ಬಹುಮಾನ, ಅತ್ತಿಮಬ್ಬೆ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ ಸೇರಿದಂತೆ ಹಲವು ಗೌರವಗಳು ಸಂದಿವೆ. ಸದ್ಯ ಉಡುಪಿಯಲ್ಲಿ ನೆಲಸಿದ್ದಾರೆ.

## ಡಾ. ನಾಗರಾಜರಾವ್ ಹವಾಲ್ದಾರ್

ಡಾ. ನಾಗರಾಜರಾವ್ ಹವಾಲ್ದಾರ್ ಬಳ್ಳಾರಿ ಜಿಲ್ಲೆಯಲ್ಲಿ ಜನಿಸಿದರು ಮತ್ತು ಪದವಿಯವರೆಗೆ ಇಲ್ಲಿಯೇ ತಮ್ಮ ಬಾಲ್ಯ ಜೀವನವನ್ನು ಕಳೆದರು. ಅವರು ಕಿರಾಣಾ ಘರಾನಾ ಶ್ರೇಷ್ಠರಾದ ಪಂಡಿತ್ ಭೀಮಸೇನ್ ಜೋಶಿಯವರ ಮುಖ್ಯ ಶಿಷ್ಯರಲ್ಲೊಬ್ಬರಾದ ಪಂಡಿತ್ ಮಾಧವ ಗುಡಿಯವರ ಶಿಷ್ಯರಾಗಿದ್ದಾರೆ. ಹವಾಲ್ದಾರ್ ಜೈಪುರ-ಅತ್ರೌಲಿ ಘರಾನಾದ ಮನ್ಸೂರ್ ಅವರ ಹಿರಿಯ ಶಿಷ್ಯರಲ್ಲೊಬ್ಬರಾಗಿರುವ ಪಂಡಿತ್ ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ ಅವರ ಶಿಷ್ಯರೂ ಸಹ ಆಗಿದ್ದಾರೆ.

ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಆರು ವರ್ಷದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ 'ಸಂಗೀತ ರತ್ನ' ಪದವಿಯನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಹವಾಲ್ದಾರ್ ಪಂಡಿತ ಮಲ್ಲಿಕಾರ್ಜುನ ಮನ್ಸೂರ್ (ಸಂಗೀತ ವಿಭಾಗದ ಮುಖ್ಯಸ್ಥರು), ಮತ್ತು ಪ್ರತಿಭಾಶಾಲಿ ಪ್ರಾಧ್ಯಾಪಕರುಗಳಾದ ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ, ಪಂಡಿತ್ ಬಸವರಾಜ ರಾಜಗುರು (ಕಿರಾಣಾ), ಪಂಡಿತ್ ಸಂಗಮೇಶ್ವರ ಗುರಾವ (ಕಿರಾಣ) ಮತ್ತು ಡಾ. ಬಿ.ಡಿ. ಪಾಠಕ್ ಅವರುಗಳ ಅಡಿಯಲ್ಲಿ ಅಧ್ಯಯನ ಮಾಡಿದರು. ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತದ 'ಸಂಗೀತ ರತ್ನ' ಪದವಿಯಲ್ಲಿ ಉನ್ನತ ಶ್ರೇಣಿಯನ್ನು ಪಡೆದಿದ್ದಾರೆ. ಇವರು ಇತಿಹಾಸ ಮತ್ತು ಪುರಾತತ್ವ ಶಾಸ್ತ್ರದ ಎಂ.ಎ.ಯಲ್ಲಿ ಚಿನ್ನದ ಪದಕವನ್ನು ಗಳಿಸಿದ್ದಾರೆ ಮತ್ತು ಕರ್ನಾಟಕದ ವಿಶ್ವವಿದ್ಯಾನಿಲಯ-ದಿಂದ ಸಂಗೀತದಲ್ಲಿ ಡಾಕ್ಟರೇಟ್‌ನ್ನು ಪಡೆದಿದ್ದು, ಇವರ ಡಾಕ್ಟರೇಟ್ ಪ್ರಬಂಧವು 'ಕರ್ನಾಟಕದಲ್ಲಿ ಶಾಸ್ತ್ರೀಯ ಸಂಗೀತದ ಇತಿಹಾಸ' ಎನ್ನುವುದಾಗಿದೆ.

ವಚನಗಳನ್ನು, ಹರಿದಾಸರ ಸಾಹಿತ್ಯಿಕ ಕಾರ್ಯಗಳನ್ನು ಕನ್ನಡ ಖಯಾಲ್ ಅನ್ನು ಮತ್ತು ಸೂಕ್ತ ಸಮಕಾಲೀನ ಕವನಗಳನ್ನು ಸಾಂಪ್ರದಾಯಿಕ ಖಯಾನ್ ರೂಪದಲ್ಲಿ ಜನಪ್ರಿಯಗೊಳಿಸಿದರಲ್ಲಿ ಇವರು ಅಗ್ರಗಣ್ಯರಾಗಿದ್ದಾರೆ. ಇವರು ಭಾರತೀಯ ಶಾಸ್ತ್ರೀಯ ಸಂಗೀತದ ಪ್ರಚಾರಕ್ಕೆ ಮೀಸಲಾಗಿರುವ ಸುನಾದ ಕಲಾ ಫೌಂಡೇಶನ್‌ನ ಸ್ಥಾಪಕರು ಮತ್ತು ಅಧ್ಯಕ್ಷರಾಗಿದ್ದಾರೆ.

ಡಾ. ಹವಾಲ್ದಾರ್ ಅವರು ಸ್ಥಳೀಯವಾಗಿ ಬೆಂಗಳೂರಿನಲ್ಲಿ ಜೊತೆಗೆ ಅಂತರ-ರಾಷ್ಟ್ರೀಯವಾಗಿ ಕಾರ್ಯಾಗಾರಗಳು ಮತ್ತು ದೂರವಾಣಿ ಸೆಷನ್‌ಗಳ ಮೂಲಕ ಯುನೈಟೆಡ್ ಸ್ಟೇಟ್ಸ್ ಮತ್ತು ಯುನೈಟೆಡ್ ಕಿಂಗ್‌ಡಮ್‌ನ ವಿದ್ಯಾರ್ಥಿಗಳಿಗೆ ಹಿಂದೂಸ್ತಾನಿ ಸಂಗೀತವನ್ನು ಕಲಿಸಿದ್ದಾರೆ ಮತ್ತು ಕಲಿಸುವುದನ್ನು ಮುಂದುವರಿಸಿದ್ದಾರೆ.

ಡಾ. ಹವಾಲ್ದಾರ್ ಅವರು ಈ ಹಿಂದೆ ಮ್ಯೂಸಿಕ್ ಆರ್ಕೈವ್ಸ್, ಆಲ್ ಇಂಡಿಯಾ ರೇಡಿಯೋ, ಹುಬ್ಬಳ್ಳಿ (೧೯೮೮-೧೯೯೧) ಇಲ್ಲಿ ಕಾರ್ಯಕ್ರಮ ನಿರ್ವಾಹಕರಾಗಿ ಕಾರ್ಯನಿರ್ವಹಿಸಿದ್ದಾರೆ. ಹಾಗೆಯೇ ಇವರು ಪಠ್ಯಪುಸ್ತಕಗಳ ನಿರ್ದೇಶನಾಲಯ, ಕರ್ನಾಟಕ ಇದರ ಹಿಂದೂಸ್ತಾನಿ ಸಂಗೀತದ ಪಠ್ಯಪುಸ್ತಕ ಸಮಿತಿಯ ಮಾಜಿ ಅಧ್ಯಕ್ಷರೂ ಸಹ ಆಗಿದ್ದಾರೆ. ಪ್ರಸ್ತುತ ಹವಾಲ್ದಾರ್ ಅವರು ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಇವರ ಮಕ್ಕಳಾದ ಓಂಕಾರನಾಥ್ ಮತ್ತು ಕೇದಾರನಾಥ್ ಉದಯೋನ್ಮುಖ ಸಂಗೀತಕಾರರಾಗಿದ್ದಾರೆ - ಓಂಕಾರನಾಥ್ ಗಾಯಕರಾಗಿದ್ದರೆ ಕೇದಾರನಾಥ್ ಪಟುವಾಗಿದ್ದಾರೆ.

## ಮೈ. ಶ್ರೀ. ನಟರಾಜ

ಹುಟ್ಟೂರು ಹಾಸನ, ವೃತ್ತಿಯಿಂದ ಸಿವಿಲ್ ಇಂಜಿನಿಯರ್, ಬೆಂಗಳೂರು ವಿವಿ, ಮುಂಬೈ ಐಐಟಿ, ಮತ್ತು ಪಿಟ್ಸ್ ಬರ್ಗ್ ವಿವಿಗಳಿಂದ ಪದವಿಗಳು. ಅಮೆರಿಕದ ಅಣುಶಕ್ತಿ ನಿಯಂತ್ರಣ ಆಯೋಗದಲ್ಲಿ ರಾಕ್ ಮೆಕ್ಯಾನಿಕ್ಸ್ ವಿಭಾಗಾಧಿಕಾರಿ ಮತ್ತಿತರ ವಿವಿಧ

ಜವಾಬ್ದಾರಿಗಳೊಂದಿಗೆ ಸೇವೆ ಸಲ್ಲಿಸಿ ನಿವೃತ್ತರಾಗಿ ಮೇರೀಲ್ಯಾಂಡಿನಲ್ಲಿ ಪತ್ನಿ ಗೀತಾಳೊಂದಿಗೆ ವಾಸ.

**ಪ್ರಕಟಿತ ಕೃತಿಗಳು:** 'ನಾನೂ ಅಮೆರಿಕನ್ ಆಗಿಬಿಟ್ಟೆ', 'ಮಧುಚಂದ್ರ, ಸಿರಿಕೇಂದ್ರ', (ಕವನ ಸಂಕಲನಗಳು); 'ಮೀನಿನ ಹೆಜ್ಜೆ' ಮತ್ತು 'ನೇಣು', 'ಪರದೇಶಿಗಳ ಪಾರ್ಟಿ ಮತ್ತು ಇತರ ಮೂರು ನಾಟಕಗಳು' ಮತ್ತು 'I am Brahman" (ನಾಟಕಗಳು); 'ಜಾಲತರಂಗ' ಮತ್ತು 'ಜಾಲತರಂಗಿಣಿ' (ಅಂಕಣ ಬರಹಗಳ ಸಂಗ್ರಹ); 'ಮಾಯಾವಿ ಸರೋವರ' (ಅನುವಾದಿತ ನಾಟಕ); 'The Void and The Womb', ('ಬಯಲು-ಬಸಿರು' ಕನ್ನಡ ಕಾದಂಬರಿಯ ಆಂಗ್ಲಾನುವಾದ), 'ಭಾಷೆಯಿಂದ ಭಾಷೆಗೆ' ಮತ್ತು 'Beyond Words' (ಅನುವಾದಿತ ಕವನ ಸಂಕಲನಗಳು); 'ಸಿರಿಗನ್ನಡ ಗೀತರಾಮಾಯಣ' (ನೀಳ್ಗಾವ್ಯ), 'ಕಥೆಯಂ ಕೇಳೆಲೊ ಕಂದ' (ಕಥಾಸಂಕಲನ).

**ಸಂಪಾದಿಸಿರುವ ಪ್ರಮುಖ ಗ್ರಂಥಗಳು:** 'ಕನ್ನಡ ಕಾದಂಬರಿ ಲೋಕದಲ್ಲಿ-ಹೀಗೆ ಹಲವು', 'ತಂತ್ರ ವಿಜ್ಞಾನವಾಹಿನಿ', 'ಸ್ನೇಹದಲ್ಲಿ ನಿಮ್ಮ, ಹರಿ', 'ದೀಪ ತೋರಿದೆಡೆಗೆ' (ಕಥಾ ಸಂಕಲನ); 'ನಾರೀಗೀತ' (ಹಾಸನದ ರಾಜಾರಾಯರ ಕಾದಂಬರಿಯ ಮರುಸೃಷ್ಟಿ), 'ರಂಗ ತರಂಗ-ಕನ್ನಡದ ಮುನ್ನಡೆಯ ಮಿಂಚು ನೋಟ' (ಆಹ್ವಾನಿತ ಭಾಷಣಗಳ ಸಂಗ್ರಹ).

**ಇತರ ಕ್ಷೇತ್ರಗಳಲ್ಲಿ:** ಕಾವೇರಿ ಕನ್ನಡ ಸಂಘದ ಕಾರ್ಯಕಾರೀ ಸಮಿತಿಯ ಮತ್ತು ಆಡಳಿತ ಮಂಡಲಿಯ ಅಧ್ಯಕ್ಷತೆ, ಕನ್ನಡ ಸಾಹಿತ್ಯ ರಂಗದ ಅಧ್ಯಕ್ಷತೆ. ಹಲವು ಪತ್ರಿಕೆಗಳ ಮತ್ತು ಸ್ಮರಣ ಸಂಚಿಕೆಗಳ ಸಂಪಾದಕತ್ವ. ಕನ್ನಡ ನಾಟಕ ತಂಡವನ್ನು ತಯಾರುಮಾಡಿ ಊರೂರಿಗೆ ಕೊಂಡೊಯ್ದ ಖ್ಯಾತಿ. ಸಂಸ್ಕೃತದಲ್ಲಿ 'ನವರತ್ನಮಾಲಿಕಾ' ಎಂಬ ಒಂಬತ್ತು ಕೃತಿಗಳ ಹಾಗೂ ಕನ್ನಡದಲ್ಲಿ 'ನವಮಣಿಮಾಲಿಕಾ' ಎಂಬ ಒಂಬತ್ತು ಕೃತಿಗಳ ಸಾಹಿತ್ಯ ರಚನೆ (ಇವು ಮತ್ತು ಇವರು ರಚಿಸಿದ 'ಸುಂದರಕಾಂಡ' ಧ್ವನಿಸಾಂದ್ರಿಕೆಗಳಾಗಿ ಜನಪ್ರಿಯವಾಗಿವೆ).

**ಪ್ರಶಸ್ತಿಗಳು:** ಸಾಹಿತ್ಯಕ್ಷೇತ್ರದಲ್ಲಿ, 'ತ್ರಿವೇಣಿ' ಸಂಸ್ಥೆ ಕೊಟ್ಟ 'ನೀಲಮ್ಮ ಮೆಟ್‌ಗುಡ್' ಪಾರಿತೋಷಕ; 'ಕಾವೇರಿ ಕನ್ನಡ ಸಂಘ' 'ಹ್ಯೂಸ್ಟನ್ ಕನ್ನಡ ವೃಂದ' ಮತ್ತು 'ಅಕ್ಕ' ಸಂಸ್ಥೆ ಕೊಟ್ಟ ವಿಶೇಷ ಪ್ರಶಸ್ತಿ ಫಲಕಗಳು; ಮಂಗಳೂರಿನ ಪತ್ರಿಕೆ 'ಹೃದಯವಾಹಿನಿ' ಕೊಟ್ಟ 'ಹೃದಯವಂತರು' ಪಾರಿತೋಷಕ ಮತ್ತು ಎಲ್ಲಕ್ಕಿಂತ ಮುಖ್ಯವಾಗಿ 'ಮಧುಚಂದ್ರ-ಸಿರಿಕೇಂದ್ರ' ಕವನ ಸಂಕಲನಕ್ಕೆ ಕನ್ನಡ ನಾಡಿನಲ್ಲಿ ಸಂದ 'ಗೊರೂರು' ಪ್ರಶಸ್ತಿ. ಇವುಗಳ ಜೊತೆಗೆ, ಇವರ ತಾಂತ್ರಿಕ ನೈಪುಣ್ಯವನ್ನು ಮತ್ತು ಉತ್ತಮ ಸೇವೆಯನ್ನು ಗುರುತಿಸಿ ಅಣುಶಕ್ತಿ ನಿಯಂತ್ರಣ ಆಯೋಗ ಕೊಟ್ಟು ಗೌರವಿಸಿದ ಆಯೋಗದ ಅತ್ಯುನ್ನತ ಪ್ರಶಸ್ತಿಗಳಲ್ಲೊಂದಾದ 'ವಿಶಿಷ್ಟ ಸೇವಾ ಪ್ರಶಸ್ತಿ' ಹಾಗು ರಾಜಧಾನಿಯ National Council of Asian Indian Associations ಕೊಟ್ಟ ಸೇವಾ ಪ್ರಶಸ್ತಿ.

Email: mysreena@aol.com

**ತ್ರಿವೇಣಿ ಶ್ರೀನಿವಾಸರಾವ್**

'ತುಳಸಿವನ' ಮತ್ತು 'ತಿಳಿನೀಲಿ ಪೆನ್ನು' ಎಂಬೆರಡು ಪ್ರಕಟಿತ ಪುಸ್ತಕಗಳು. ಕರ್ನಾಟಕದ ಪ್ರಮುಖ ಪತ್ರಿಕೆಗಳಲ್ಲಿ ಕಥೆ, ಲೇಖನಗಳು ಪ್ರಕಟಗೊಂಡಿವೆ. ಲಲಿತಪ್ರಬಂಧಗಳು, ವೈಚಾರಿಕ ಲೇಖನ, ಸಿನಿಮಾ, ಸಂಗೀತ, ನಾಟಕ, ದಾಸಸಾಹಿತ್ಯಗಳಲ್ಲಿ ಹೆಚ್ಚಿನ ಆಸಕ್ತಿ. ಕನ್ನಡಸಾಹಿತ್ಯರಂಗದ ಪದಾಧಿಕಾರಿಗಳಲ್ಲೊಬ್ಬರು ಮತ್ತು ಅದರ ವೆಬ್ ತಾಣದ ನಿರ್ವಾಹಕಿ. ಕನ್ನಡ ಸಾಹಿತ್ಯ ರಂಗವು ಪ್ರಕಟಿಸಿದ 'ಮಥಿಸಿದಷ್ಟು ಮಾತು', 'ಬೇರು ಸೂರು' ಗ್ರಂಥಗಳ ಸಂಪಾದಕ ಮಂಡಳಿಯಲ್ಲಿದ್ದು ಕಾರ್ಯ ನಿರ್ವಹಿಸಿರುವುದರ ಜೊತೆಗೆ ಕನ್ನಡ ಸಾಹಿತ್ಯ ರಂಗವು ಹೊರತಂದಿರುವ ಎಲ್ಲಾ ಗ್ರಂಥಗಳಲ್ಲಿಯೂ ತ್ರಿವೇಣಿಯವರ ಲೇಖನಗಳು ಪ್ರಕಟಗೊಂಡಿವೆ. 'ತುಳಸಿವನ.ಕಾಂ' ಎಂಬ ಸ್ವಂತ ಅಂತರ್ಜಾಲ ತಾಣವಿದೆ. ವಿದ್ಯಾರಣ್ಯ ಕನ್ನಡ ಕೂಟದ 'ಸಂಗಮ' ಸಂಚಿಕೆಯ ಸಂಪಾದಕತ್ವ ನಿರ್ವಹಣೆಯ ಅನುಭವ. ಹುಟ್ಟೂರು ಚಿಕ್ಕಮಗಳೂರು ಜಿಲ್ಲೆಯ ಕಡೂರು. ಪ್ರಸ್ತುತ, ಪತಿ ಮತ್ತು ಮಕ್ಕಳೊಂದಿಗೆ ಅಮೆರಿಕದ ಇಲಿನಾಯ್ ರಾಜ್ಯದ 'ಆರೋರ' ನಗರದಲ್ಲಿ ವಾಸ.

Email - sritri@gmail.com

**ಶಂಕರ ಹೆಗಡೆ**

ಹುಟ್ಟಿ ಬೆಳೆದದ್ದು ಉತ್ತರಕನ್ನಡ ಜಿಲ್ಲೆಯ ಶಿರಸಿಯ ಹತ್ತಿರದ ಒಂದು ಚಿಕ್ಕ ಹಳ್ಳಿ. ಹೆಚ್ಚಿನ ವಿದ್ಯಾಭ್ಯಾಸ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಕೆನಡಾದ ಸಸ್ಕಾಚೆವಾನ್ ವಿಶ್ವವಿದ್ಯಾಲಯಗಳಲ್ಲಿ. ಗಣಿತ ಶಾಸ್ತ್ರದಲ್ಲಿ ಡಾಕ್ಟರೇಟ್ ಪದವಿ ಪಡೆದ ನಂತರ ಶಿಕ್ಯಾಗೋ ಸಮೀಪದ ನೋರ್ದರ್ನ್ ಇಲ್ಲಿನೊಯ್ಸ್ ವಿಶ್ವವಿದ್ಯಾಲಯದಲ್ಲಿ ಗಣಿತ ಮತ್ತು ಗಣಕ ಶಾಸ್ತ್ರಗಳ ಪ್ರಾಧ್ಯಾಪಕರಾಗಿ ಹಲವು ವರ್ಷ ಸೇವೆ ಸಲ್ಲಿಸಿ ಈಗ ನಿವೃತ್ತರಾಗಿದ್ದಾರೆ. ತನ್ಮಧ್ಯೆ, ಹದಿನೇಳು ವರ್ಷಗಳ ಕಾಲ ಲೂಸೆಂಟ್ ಟೆಕ್ನೋಲೋಜಿ ಕಂಪನಿಯ (ಸದ್ಯ ನೋಕಿಯಾ ಕಂಪನಿಯ ಅಂಗ) ವಿವಿಧ ವಿಭಾಗಗಳಲ್ಲಿ ಇಂಜನಿಯರ್/ ಮ್ಯಾನೇಜರ್ ಆಗಿಯೂ ಕೆಲಸ ಮಾಡಿದ್ದಾರೆ. ಕೆಲವು ವರ್ಷ ಕಲಬುರ್ಗಿಯ ಸ್ನಾತಕೋತ್ತರ ಕೇಂದ್ರದಲ್ಲಿ ಕೂಡ ಗಣಿತ ಶಾಶ್ತ್ರದ ಪ್ರಾಧ್ಯಾಪಕರಾಗಿದ್ದರು. ಕನ್ನಡದಲ್ಲಿ ಬರೆಯುವದಕ್ಕಿಂತ ಓದುವದರಲ್ಲಿಯೇ ಹೆಚ್ಚಿನ ಆಸಕ್ತಿ. ಶಿಕ್ಯಾಗೋ ವಿದ್ಯಾರಣ್ಯ ಕನ್ನಡ ಕೂಟದ 'ಸಂಗಮ' ಪತ್ರಿಕೆ ಮತ್ತು ಅಮೇರಿಕೆಗಳ ಹವ್ಯಕ ಸಂಘದ ಸಮ್ಮೇಳನಗಳ ಸ್ಮರಣ ಸಂಚಿಕೆಗಳಲ್ಲಿ ಇವರ ಹತ್ತೆಂಟು ಲೇಖನ, ಕಥೆ-ಕವನಗಳು ಪ್ರಕಟವಾಗಿವೆ. ಇವರು ಕನ್ನಡದಲ್ಲಿ ಬರೆದ 'ಬೀಜಗಣಿತ ಪ್ರವೇಶ' ಎಂಬ ಪಠ್ಯಪುಸ್ತಕ ಕರ್ನಾಟಕ ವಿಶ್ವವಿದ್ಯಾಲಯದಿಂದ ಹಲವು ವರ್ಷಗಳ ಹಿಂದೆಯೇ ಪ್ರಕಟವಾಗಿದೆ.

**ನಾಗ ಐತಾಳ**

ಹುಟ್ಟೂರು ಕರ್ನಾಟಕದ ಕರಾವಳಿಯ ಕೋಟ. ಪ್ರಾಥಮಿಕ ವಿದ್ಯಾಭ್ಯಾಸವನ್ನು ಕೋಟದಲ್ಲಿ ಮುಗಿಸಿ, ಹೈಸ್ಕೂಲು, ಕಾಲೇಜು ವಿದ್ಯಾಭ್ಯಾಸ ಬೆಂಗಳೂರಿನಲ್ಲಿ. ಮುಂದೆ

ಬನಾನಾರಸ್‌ನಲ್ಲಿ B.Pharm. ಡಿಗ್ರಿ ಪಡೆದು, ಬೆಂಗಳೂರಿನ Indian Institute of Scienc ನಲ್ಲಿ ಬಯೋಕೆಮಿಸ್ಟ್ರಿಯಲ್ಲಿ M.Sc., & Ph.D. ಪದವಿಗಳನ್ನು ಗಳಿಸಿದ್ದಾರೆ. ಬಯೋಕೆಮಿಸ್ಟ್ರಿಯಲ್ಲಿ ಹೆಚ್ಚಿನ ತರಬೇತಿ ಪಡೆಯಲು ೧೯೬೯ರಲ್ಲಿ ಅಮೆರಿಕಕ್ಕೆ ವಲಸೆ. ಮೊದಲಿಗೆ ಲಾಸ್ ಏಂಜಲಿಸ್‌ನ USC School of Medicineನಲ್ಲಿ ಮೂರು ವರ್ಷ, ಕೆನಡಾದಲ್ಲಿ ಮೂರು ವರ್ಷ, University of Chicagoದಲ್ಲಿ ೨೫ ವರ್ಷ ಸಂಶೋಧನಾ ಅಧ್ಯಾಪನಾಗಿ ಕೆಲಸ. ೨೦೦೧ರಲ್ಲಿ ನಿವೃತ್ತಿ ಪಡೆದು, ಲಾಸ್ ಏಂಜಲಿಸ್‌ನ ನೆರೆ ಬಡಾವಣೆ ಆರ್ಕೇಡಿಯದಲ್ಲಿ ಮಡದಿ ಲಕ್ಷ್ಮಿ, ಮಗಳು ಅನುರಾಧಾರೊಡನೆ ಹಾಗೂ ನ್ಯೂ ಜರ್ಸಿಯಲ್ಲಿರುವ ಮಗ ಅರವಿಂದ, ಸೊಸೆ ಸೆಪಿಡೆ, ಮೊಮ್ಮಕ್ಕಳು– ಅಲೆಕ್ಸಾಂಡರ್ ಕೃಷ್ಣ, ಕ್ಯಾಮರಾನ್ ಕವಿನ್‌ರ ಜೊತೆ ತಮ್ಮ ನಿವೃತ್ತ ಜೀವನವನ್ನು ತೃಪ್ತಿಕರವಾಗಿ ಕಳೆಯುತ್ತಿದ್ದಾರೆ.

ಹವ್ಯಾಸಕ್ಕೆಂದು ಅಷ್ಟಿಷ್ಟು ಬರಹದಲ್ಲಿ ತೊಡಗಿಸಿಕೊಂಡಿದ್ದಾರೆ. ಕಾರಂತ, ಕುವೆಂಪು, ಮಾಸ್ತಿ, ಬೇಂದ್ರೆ ಮುಂತಾದವರ ಕುರಿತು ೭ ಸಂಪಾದಿತ ಕೃತಿ, ಹಾಗೂ, ಅಮೆರಿಕದ ಕನ್ನಡ ಬರಹಗಾರರ ಕಿರುಪರಿಚಯದ (ಜ್ಯೋತಿ ಮಹದೇವರೊಡನೆ) ಒಂದು ಸಂಪಾದಿತ ಕೃತಿ. ಅಲ್ಲದೆ ಸ್ವಂತ ಲೇಖಕನಾಗಿ (ಎರಡು ಕಾದಂಬರಿ, ಎರಡು ಪ್ರಬಂಧ ಸಂಕಲನ, ಎರಡು ಕಥಾಸಂಕಲನ, ಒಂದು ವೈಜ್ಞಾನಿಕ ಗ್ರಂಥ, ಎರಡು ಅನುಭವ ಕಥನ) ೯ ಕೃತಿಗಳನ್ನೂ ಪ್ರಕಟಿಸಿದ್ದಾರೆ.

ಕನ್ನಡ ಸಾಹಿತ್ಯ ರಂಗ ಪ್ರಕಟಿಸಿದ ಕೃತಿಗಳ ಸಂಪಾದಕ ಮಂಡಲಿಯಲ್ಲಿಯೂ ಕೆಲಸ ಮಾಡಿದ್ದಾರೆ. ಪ್ರಸ್ತುತ ಕನ್ನಡ ಸಾಹಿತ್ಯ ರಂಗದ ಆಡಳಿತ ಮಂಡಲಿಯ ಅಧ್ಯಕ್ಷ.

Email: nagaaithal@gmail.com

**ಮಂಜುನಾಥ ಪೆಂಡಕೂರು**

ಮಂಜುನಾಥ ಪೆಂಡಕೂರು ಅವರು ಬಳ್ಳಾರಿ ಜಿಲ್ಲೆಯಲ್ಲಿ ಬೆಳೆದವರು. ಮದ್ರಾಸಿನ Institute of film technologyಯಲ್ಲಿ ಶಿಕ್ಷಣ ಪಡೆದ ಇವರು ೬೦ರ ದಶಕದಲ್ಲಿ ಮೂರು ಕನ್ನಡ ಚಿತ್ರಗಳಿಗೆ ಸಹ ನಿರ್ದೇಶಕರಾಗಿದ್ದರು. ಮುಂದೆ ಅಮೆರಿಕಾಗೆ ವಲಸೆ ಹೋದ ಇವರು Simon Fraser Universityಯಲ್ಲಿ political economy of the mediaನಲ್ಲಿ ಸ್ನಾತಕೋತ್ತರ ಪದವಿ ಗಳಿಸಿದರು. ಪೆನ್ಸಿಲ್ವೇನಿಯಾ ಸ್ಟೇಟ್ ಯೂನಿವರ್ಸಿಟಿ, ನಾರ್ತ್ ವೆಸ್ಟರ್ನ್ ಯೂನಿವರ್ಸಿಟಿ, ಯೂನಿವರ್ಸಿಟಿ ಅಫ್ ವೆಸ್ಟರ್ನ್ ಒಂಟಾರಿಯೊ, ಸದರ್ನ್ ಇಲಿನಾಯ್ ಯೂನಿವರ್ಸಿಟಿ, ಫ್ಲಾರಿಡಾ ಅಟ್ಲಾಂಟಿಕ್ ಯೂನಿವರ್ಸಿಟಿ ಮುಂತಾದ ಕಡೆ ಪ್ರೊಫೆಸರ್ ಆಗಿದ್ದರು. ಇಂಥ ಯೂನಿವರ್ಸಿಟಿಗಳಲ್ಲಿ ಡೀನ್, ವಿಭಾಗದ ಪೀಠಾಧಿಕಾರಿ ಮುಂತಾದ ಉನ್ನತ ಹುದ್ದೆಗಳಲ್ಲಿದ್ದವರು. ಹಲವಾರು ಗ್ರಂಥಗಳನ್ನು ಹಾಗೂ ಲೇಖನಗಳನ್ನು ಅಮೆರಿಕಾ, ಕೆನಡಾ ಮತ್ತು ಭಾರತದಲ್ಲಿ ಪ್ರಕಟಿಸಿದ್ದಾರೆ.

Email: mpendakur@gmail.com

**ಸುಮತಿ ಮುದ್ದೇನಹಳ್ಳಿ**

ಒಹಾಯೋ ರಾಜ್ಯದಲ್ಲಿ ವಾಸ. ಇಂಗ್ಲಿಷ್ ಸಾಹಿತ್ಯದಲ್ಲಿ ಸ್ನಾತಕೋತ್ತರ, ಮಾನಸಿಕ ಆರೋಗ್ಯ ಚಿಕಿತ್ಸೆಯಲ್ಲಿ ಇನ್ನೊಂದು ಸ್ನಾತಕೋತ್ತರದ ವ್ಯಾಸಂಗ ನಡೆಯುತ್ತಿದೆ. ಮಯೂರ, ಪ್ರಜಾವಾಣಿ, ವಿಜಯಕರ್ನಾಟಕದಲ್ಲಿ ಅನುವಾದಗಳು, ವಿಚಾರಗಳು ಪ್ರಕಟಣೆಯಾಗಿವೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕುವೆಂಪು ಭಾಷಾ ಭಾರತಿ ಪ್ರಾಧಿಕಾರಕ್ಕೆ ಕೆಲವು ಕನ್ನಡ ಕವನಗಳನ್ನು ಇಂಗ್ಲಿಷಿಗೆ ಅನುವಾದಿಸಿದ್ದಾರೆ. 'Her Poems' ಎಂಬ ಹೆಸರಿನ ಪ್ರಾಧಿಕಾರದ ಸಂಕಲನದಲ್ಲಿ ಈ ಭಾಷಾಂತರಗಳು ಅಚ್ಚಾಗಿವೆ. ಸದರಿ ಸಂಸ್ಥೆಗೆ, ಪೂರ್ಣಚಂದ್ರ ತೇಜಸ್ವಿಯವರ ಮೂರು ಪ್ರಬಂಧಗಳನ್ನು ಕನ್ನಡದಿಂದ ಇಂಗ್ಲಿಷಿಗೆ ಅನುವಾದಿಸಿದ್ದಾರೆ– ಈ ಪ್ರಬಂಧಗಳು: ಜನತಾದಳ ನಾಶವಾಗಿದ್ದೇಕೆ; ನಮಸ್ಕಾರ – ಈ ಟಿವಿ ಮತ್ತು ತೇಜಸ್ವಿ ಕಂಡಂತೆ ಜಾಗತೀಕರಣ.

Email:sumathi_mv@hotmail.com

**ಜ್ಯೋತಿ ಮಹಾದೇವ್ (ಸುಪ್ತದೀಪ್ತಿ)**

ಕಥೆ–ಕವನಗಳ ರಚನೆ, ಓದು, ಚರ್ಚೆ, ವಿಮರ್ಶೆ ಮುಂತಾದ ಸಾಹಿತ್ಯಿಕ ಹವ್ಯಾಸಗಳಲ್ಲಿ ತೊಡಗಿಸಿಕೊಂಡವರು 'ಸುಪ್ತದೀಪ್ತಿ' ಕಾವ್ಯನಾಮದ ಜ್ಯೋತಿ ಮಹಾದೇವ್.

'ಭಾವಲಹರಿ', 'ಭಾವಗಾನ', 'ಭಾವಬಿಂಬ', 'ಭಾವಲೋಕ', 'ಅಗ್ನಿಮುಡಿ'– ಪ್ರಕಟಿತ ಕವನ ಸಂಕಲನಗಳು. 'ಭಾವಯಾನ'– ಕಥೆ–ಹರಟೆಗಳ ಸಂಕಲನ. 'ಮಿನುಗು ಮಿಂಚು' ಎಂಬ ವಿಶೇಷವಾದೊಂದು ಹೊತ್ತಗೆಯನ್ನೂ 'ಹೇಳು ಮನಸೇ' ಎಂಬ ಭಾವಗೀತ ಧ್ವನಿಮುದ್ರಿಕೆಯನ್ನೂ ಹೊರತಂದಿದ್ದಾರೆ. 'ಶ್ರೀಗಂಧ', 'ಸ್ವರ್ಣಸೇತು' (ಉತ್ತರ ಕ್ಯಾಲಿಫೋರ್ನಿಯಾ ಕನ್ನಡ ಕೂಟದ ವಾರ್ಷಿಕ ಸಾಹಿತ್ಯಿಕ ಸಂಚಿಕೆಗಳು); 'ಬೇರು ಸೂರು' (ಅಮೆರಿಕದಲ್ಲಿ ನಮ್ಮ ಬದುಕು; ಕನ್ನಡ ಸಾಹಿತ್ಯ ರಂಗ ಪ್ರಕಟಣೆ); 'ಅಮೆರಿಕನ್ನಡ ಬರಹಗಾರರು' (ಅಮೆರಿಕದ ಪ್ರಕಟಿತ ಕನ್ನಡ ಲೇಖಕರ ಮಾಹಿತಿಕೋಶ; ಕನ್ನಡ ಸಾಹಿತ್ಯ ರಂಗ ಪ್ರಕಟಣೆ); 'ರಂಗ ತರಂಗ' (ಅಮೆರಿಕದಲ್ಲಿ ನಡೆದ ಏಳು ವಸಂತ ಸಾಹಿತ್ಯೋತ್ಸವಗಳ ಮುಖ್ಯಭಾಷಣಗಳ ಒಟ್ಟು ಸಂಗ್ರಹ ಗ್ರಂಥ; ಕನ್ನಡ ಸಾಹಿತ್ಯ ರಂಗ ಪ್ರಕಟಣೆ) – ಸಂಪಾದಿತ ಕೃತಿಗಳು. 'ಸುಪ್ತದೀಪ್ತಿ–ಇನ್ನರ್ ಲೈಟ್' ಹಾಗೂ 'ಹರಿವ ಲಹರಿ' ಇವರ ಬ್ಲಾಗ್‌ಗಳು.

ಪ್ರಕೃತಿ ವೀಕ್ಷಣೆ, ಹೂದೋಟ–ಕೈತೋಟಗಳ ಆರೈಕೆ, ಮನಃಶಾಸ್ತ್ರ, ಅಧ್ಯಾತ್ಮ, ಸಂಪೂರ್ಣ ಮನೋ–ದೈಹಿಕ ಸ್ವಾಸ್ಥ್ಯ, ಪ್ರಕೃತಿ ಚಿಕಿತ್ಸೆ–ಇವರ ಆಸಕ್ತಿಯ ಇತರ ವಿಷಯಗಳು.

ಮಂಗಳೂರಲ್ಲಿ ಹುಟ್ಟಿ, ಪುತ್ತೂರು, ಕಾರ್ಕಳಗಳಲ್ಲಿ ಬೆಳೆದು, ವಿದ್ಯಾಭ್ಯಾಸ ಪಡೆದು, ಹಲವು ವರ್ಷ ಕ್ಯಾಲಿಫೋರ್ನಿಯಾದ ಬೇ ಏರಿಯಾದಲ್ಲಿ ವಾಸವಾಗಿದ್ದು, ಈಗ ಪತಿಯೊಂದಿಗೆ, ತಮ್ಮೆರಡೂ ಮನೆಗಳ ಹಿರಿಯರಿಗಾಗಿ, ಮಣಿಪಾಲದಲ್ಲಿ ಬೇರೂರಿದ್ದಾರೆ.

ಹಿಪ್ನೋಥೆರಪಿ ಮತ್ತು ಫ್ಲಿಟ್‌ನೆಸ್‌ಗಾಗಿ ಮಣಿಪಾಲದಲ್ಲಿ 'ಇನ್ನರ್‌ಲೈಟ್ ವೆಲ್‌ನೆಸ್ ಸೆಂಟರ್' ಆರಂಭಿಸಿ, ಸಂಪೂರ್ಣ ಸ್ವಾಸ್ಥ್ಯದತ್ತ ಆಸಕ್ತರನ್ನೊಯ್ಯುವ ನಿಟ್ಟಿನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

Email:jyothimahadev@gmail.com

**ಪ್ರಕಾಶ್ ನಾಯಕ್**

ಉತ್ತರಕನ್ನಡ ಜಿಲ್ಲೆಯ ಹನೇಹಳ್ಳಿಯವರು. ಉತ್ತರ ಕ್ಯಾಲಿಫೋರ್ನಿಯದ ಕುಪರ್ಟಿನೋದಲ್ಲಿ ವಾಸ. ಸಾಂತಾ ಕ್ಲಾರದಲ್ಲಿನ ಮಾರ್ವೆಲ್ ನಲ್ಲಿ ಪ್ರಾಡೆಕ್ಟ್ ಮ್ಯಾನೇಜರ್ ಆಗಿ ಕೆಲಸ. ಮಯೂರ ಮತ್ತು ಉದಯವಾಣಿ ವಿಶೇಷಾಂಕಗಳಲ್ಲಿ ಕಥೆಗಳು ಪ್ರಕಟವಾಗಿವೆ.

ಪ್ರಕಟಿತ ಕಥಾಸಂಕಲನ – 'ಅಮೂರ್ತ ಚಿತ್ತ'

Blog - prakashnayak.in

**ಅಲಮೇಲು ಅಯ್ಯಂಗಾರ್**

ತಮ್ಮ ಪ್ರಹಸನಗಳು, ನಗೆ ನಾಟಕಗಳು, ನೃತ್ಯ ರೂಪಕ ನಿರ್ದೇಶನ ಮತ್ತು ಇತರ ಚಟುವಟಿಕೆಗಳಿಂದ ಅಮೆರಿಕನ್ನಡಿಗರಲ್ಲಿ ಮನೆಮಾತಾಗಿರುವವರು. ಮೈಸೂರಿನ ಮಾನಸ ಗಂಗೋತ್ರಿಯ ಕನ್ನಡ ಸ್ನಾತಕೋತ್ತರ ಪದವೀಧರೆ. ಅಮೆರಿಕಾದ ನೆಲದಲ್ಲಿ ಕನ್ನಡ ಚಟುವಟಿಕೆಗಳ ಅಧ್ವರ್ಯು. ಇವರ ಸೃಜನ ಶಕ್ತಿಯ ಹರವು ನಾಟಕ, ನಟನೆಗಳಿಗಷ್ಟೇ ಸೀಮಿತವಾಗಿಲ್ಲದೆ ಕಥೆ, ಕವನ, ವಿಮರ್ಶೆ ಮತ್ತು ಸಂಶೋಧನಾತ್ಮಕ ಪ್ರಬಂಧಗಳ ಬರವಣಿಗೆಯನ್ನು ಒಳಗೊಂಡಿದೆ. ಜೊತೆಗೆ ಚಲನಚಿತ್ರ ಸಂಭಷಣೆಯ ನೇಯ್ಗೆಗೂ ಹಬ್ಬಿದೆ. 'ಹೈಟೆಕ್ ಹಯವದನಾಚಾರ್' ಎಂಬ ಅವರ ನಾಲ್ಕು ನಾಟಕಗಳ ಸಂಕಲನ ಬಹಳ ಜನಪ್ರಿಯವಾಗಿದೆ. ವಿದೇಶಿ ನೆಲದ ದೇಶೀ ಬದುಕಿನ ಸಂದಿಗ್ಧಗಳನ್ನು, ವಿಪರ್ಯಾಸಗಳನ್ನು ಚಾಕಚಕ್ಯತೆಯಿಂದ ವಿಡಂಬನೆಗೆ ಗುರಿ ಮಾಡುವುದರಲ್ಲಿ ಅಲಮೇಲು ಸಿದ್ಧಹಸ್ತರೆಂಬುದನ್ನು ಈ ನಾಟಕಗಳು ದೃಢಪಡಿಸುತ್ತವೆ. ಅವರ ತಂದೆ ಡಾ. ಪು.ತಿ.ನ. ಅವರ 'ಹರಿಣಾಭಿಸರಣ', 'ಗೋಕುಲ ನಿರ್ಗಮನ', 'ಶ್ರೀರಾಮ ಪಟ್ಟಾಭಿಷೇಕ' ಮುಂತಾದ ನೃತ್ಯ ರೂಪಕಗಳ ನಿರ್ಮಾಪಣೆಯ ಹೊಣೆಹೊತ್ತು ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಈ ಎಲ್ಲ ಪ್ರತಿಭೆ ಮತ್ತು ಸೇವೆಗೆ ಭಾರತ ಮತ್ತು ಅಮೆರಿಕಾದಾದ್ಯಂತ ಮನ್ನಣೆ ದೊರಕಿದೆ. ಉತ್ತರ ಕ್ಯಾಲಿಫೋರ್ನಿಯಾ ಕನ್ನಡ ಕೂಟವು ಅವರಿಗೆ 'ನಾಟಕ ಕಲಾವಸಂತ' ಎಂಬ ಬಿರುದು ನೀಡಿ ಗೌರವಿಸಿದೆ.

Email:iyengars@gmail.com

**ಸಂಧ್ಯಾ ರವೀಂದ್ರನಾಥ್**

ಸ್ಯಾನ್ ಫ್ರಾನ್ಸಿಸ್ಕೊ ಬೇ ಏರಿಯಾದಲ್ಲಿ ವಾಸಿಸುತ್ತಿರುವ ಸಂಧ್ಯಾ ಉತ್ತರ ಅಮೆರಿಕಾಗೆ ಬಂದದ್ದು ೧೯೭೪ರಲ್ಲಿ. ಇಂಟೆಲ್ ಕಾರ್ಪೊರೇಶನ್‌ನಲ್ಲಿ ೨೦ಕ್ಕೂ ಹೆಚ್ಚು ವರ್ಷ ಕೆಲಸ

ಮಾಡಿದ ಇವರ ಹವ್ಯಾಸಗಳು ಸುಗಮ ಸಂಗೀತ ಹಾಡುಗಾರಿಕೆ ಮತ್ತು ನಾಟಕ, ಕಥೆ, ಕವನಗಳನ್ನು ಬರೆಯುವುದು. ಇವರ ಹಲವಾರು ಕವಿತೆಗಳಿಗೆ ಪತಿ ರವೀಂದ್ರನಾಥ್ ಸಂಗೀತ ನೀಡಿದ್ದು, 'ಸಂಧ್ಯಾ', 'ವಿಶ್ವಕನ್ನಡ' ಮತ್ತು 'ದಿವ್ಯ' ಎನ್ನುವ ಭಾವಗೀತೆ ಮತ್ತು ಭಕ್ತಿಗೀತೆಗಳ ಸೀ.ಡಿ.ಗಳನ್ನು ಹೊರತಂದಿದ್ದಾರೆ. ಇವರು ಬರೆದ ಸಣ್ಣ ಕಥೆಗಳ ಸಂಗ್ರಹ, 'ಮರಳಿ ಬರುವೆ ನಾ', ೨೦೦೩ರಲ್ಲಿ ಪ್ರಕಟವಾಯಿತು. 'ಆಟದೊಡನೆ ಪಾಠ' ಎಂಬ ಧ್ಯೇಯವನ್ನಿಟ್ಟುಕೊಂಡು ಇವರ ನೇತೃತ್ವದಲ್ಲಿ ೨೦೦೬ರಲ್ಲಿ ಪ್ರಾರಂಭಗೊಂಡ 'ಕನ್ನಡ ಕಲಿ' ಕಾರ್ಯಕ್ರಮವು ಅತ್ಯಂತ ಯಶಸ್ವಿಯಾಗಿ ನಡೆದುಬಂದಿದೆ ಮತ್ತು ನೂರಾರು ಮಕ್ಕಳು ಬೇ ಏರಿಯಾದಲ್ಲಿ ಕನ್ನಡ ಕಲಿಯಲು ಸಾಧನವಾಗಿದೆ.

Email:sandhya_ravindranath@yahoo.com

**ಕಾವ್ಯಾ ನಾಗರಕಟ್ಟೆ**

೧೯೮೮ರಲ್ಲಿ ಜನನ. ಬಿಎಸ್ಸಿ ನಂತರ ಕರ್ನಾಟಕ ವಿವಿಯಿಂದ ಆರು ಚಿನ್ನದ ಪದಕಗಳೊಂದಿಗೆ ಪತ್ರಿಕೋದ್ಯಮ ಎಂ.ಎ ಪದವಿ. ಸದ್ಯಪತಿಯೊಡನೆ ಅಮೆರಿಕಾದ ನ್ಯೂಜೆರ್ಸಿಯಲ್ಲಿ ವಾಸ. ಮೊದಲ ಕವನಸಂಕಲನ 'ಧ್ಯಾನಕ್ಕೆ ತಾರೀಖಿನ ಹಂಗಿಲ್ಲ'ಕ್ಕೆ ೨೦೧೪ರ ಕೇಂದ್ರ ಸಾಹಿತ್ಯ ಅಕಾಡಮಿಯ 'ಯುವ ಪುರಸ್ಕಾರ', ಯುವ ಬರಹಗಾರರಿಗೆ ನೀಡುವ ೨೦೧೨ರ ಟೋಟೋ ಪುರಸ್ಕಾರ, ಕ್ರೈಸ್ಟ್ ಕಾಲೇಜು ಡಾ. ಬೆಂದ್ರೆ ಕವನ ಸ್ಪರ್ಧೆಯಲ್ಲಿ ಆರು ವರ್ಷ ಹಾಗೂ ಸಂಚಯದಲ್ಲಿ ಮೂರು ಬಾರಿ ಕಾವ್ಯ ಬಹುಮಾನ. ಅಕ್ಕ ಸಮ್ಮೇಳನ ೨೦೧೪ ಕಥಾಸ್ಪರ್ಧೆಯಲ್ಲಿ ಪ್ರಥಮ. ಬಳ್ಳಾರಿಯ ರಂಗತೋರಣ ವಿದ್ಯಾರ್ಥಿ ನಾಟಕೋತ್ಸವದಲ್ಲಿ ರಂಗ ಬಹುಮಾನ, ದೆಹಲಿಯಲ್ಲಿ ನಡೆದ ಆಲ್ ಇಂಡಿಯಾ ಯಂಗ್ ರೈಟರ್ಸ್ ಮೀಟ್‌ನಲ್ಲಿ 'ಇಶ್ಯೂಸ್ ಆಫ್ ನ್ಯೂ ಫಿಕ್ಷನ್' ಪ್ರಬಂಧ ಮಂಡನೆ.

'ಪುನರಪಿ' ಮೊದಲ ಕಾದಂಬರಿ. ಈ ಕೃತಿಗೆ ಗುಲ್ಬರ್ಗ ಜಿಲ್ಲೆಯ ಸೇಡಂನ ಅಮ್ಮ ಪ್ರಶಸ್ತಿ, ೨೦೧೫ನೇ ಸಾಲಿನ ಬೇಂದ್ರೆ ಗ್ರಂಥ ಬಹುಮಾನ, ರತ್ನಮ್ಮಹೆಗ್ಗಡೆ ಗ್ರಂಥ ಬಹುಮಾನಗಳು ದೊರೆತಿವೆ. ಇವರ ಎರಡನೆಯ ಕವನಸಂಕಲನ 'ಜೀನ್ಸು ತೊಟ್ಟ ದೇವರು' ಅಚ್ಚಿನಲ್ಲಿದೆ.

**ಪ್ರಸನ್ನ ಸಂತೇಕಡೂರು**

ಪ್ರಸನ್ನ ಸಂತೇಕಡೂರು ರವರು ಮೂಲತಃ ಶಿವಮೊಗ್ಗ ಸಮೀಪದ ಸಂತೇಕಡೂರಿ-ನವರು. ಶಿವಮೊಗ್ಗದ ಸಹ್ಯಾದ್ರಿ ವಿಜ್ಞಾನ ಕಾಲೇಜಿನಲ್ಲಿ ಪದವಿ, ಮೈಸೂರು ವಿಶ್ವವಿದ್ಯಾನಿಲಯದಿಂದ ಜೈವಿಕ ತಂತ್ರಜ್ಞಾನದಲ್ಲಿ ಸ್ನಾತಕೋತ್ತರ ಮತ್ತು ಡಾಕ್ಟರೇಟ್ ಪದವಿಯನ್ನು ಪಡೆದು ಪ್ರಸ್ತುತ ಅಮೇರಿಕಾದ ವರ್ಜಿನಿಯಾ ಸಂಸ್ಥಾನದ ರಿಚ್ಮಂಡ್ ನಗರದ ಹಂಟರ್ ಹೋಲ್ಮ್ ಮ್ಯಾಕ್ಗುರ್ ಸಂಶೋಧನಾ ಕೇಂದ್ರದಲ್ಲಿ ಸಹಾಯಕ

ಪ್ರಾಧ್ಯಾಪಕರಾಗಿದ್ದಾರೆ. ವಿಜ್ಞಾನದ ಜೊತೆ ಸಾಹಿತ್ಯದಲ್ಲಿ ಅಪಾರವಾದ ಆಸಕ್ತಿ ಇರುವ ಇವರು ಇತ್ತೀಚೆಗೆ ಕೆಲವು ಕತೆಗಳನ್ನ ಬರೆದಿದ್ದಾರೆ.

Email:pksgoldenhelix@gmail.com

**ಅನಿಲ್ ದೇಶಪಾಂಡೆ**

ಅನಿಲ ದೇಶಪಾಂಡೆಯವರು ಈಗ ನೆಲೆಸಿರುವದು ಅಮೇರಿಕೆಯ ಚಿಕಾಗೊ ನಗರದಲ್ಲಾದರೂ, ದಾಸರ ಪದದಲ್ಲಿ ಹೇಳಿರುವಂತೆ "ಅಲ್ಲಿದೆ ನಮ್ಮ ಮನೆ, ಇಲ್ಲಿಗೆ ಬಂದೆವು ಸುಮ್ಮನೆ" ಎನ್ನುವ ರೀತಿಯಲ್ಲಿ ಕನ್ನಡ ಭಾಷೆ, ಸಂಸ್ಕೃತಿ ಮತ್ತು ಕನ್ನಡ ನಾಡಿನ ಬಗೆಗೆ ತುಂಬ ಪ್ರೀತಿ ಮತ್ತು ಕಾಳಜಿಯನ್ನು ಹೊಂದಿದವರಾಗಿದ್ದಾರೆ. ಅವರ ಸಾಹಿತ್ಯ ಚಟುವಟಿಕೆಗಳು; ಕವನಗಳು, ವೈಚಾರಿಕ ಲೇಖನಗಳು, ಪ್ರಬಂಧಗಳು,ನಾಟಕಗಳು, ಆಶು ಕವಿತೆಗಳು, ಹಾಸ್ಯ ಬರಹಗಳು, ಆಧ್ಯಾತ್ಮ ಪ್ರವಚನಗಳು, ಹಾಸ್ಯ ಮಾತುಗಾರಿಕೆ, ಪೋಲಿ ಪದ್ಯಗಳು ಹೀಗೆ ಹಲವು ಬಗೆ!

ಚಿಕಾಗೊ ಕನ್ನಡ ಕೂಟದ ಪ್ರಕಟಣೆಗಳು ಅವರ ಕೆಲವು ಕೃತಿಗಳಿಗೆ ಜೀವ ನೀಡಿವೆ. ಅವರು ೨೦೧೦ ರಲ್ಲಿ ಗಿಏಏ ಅಧ್ಯಕ್ಷರಾಗಿದ್ದಾಗ, ಸಾಹಿತ್ಯ ಹಾಗು ಸಂಸ್ಕೃತಿ ಉಳಿಸಿ ಬೆಳೆಸಲು ಅನೇಕ ಹೊಸ ಕಾರ್ಯಕ್ರಮಗಳನ್ನು ಹೊಸದಾಗಿ ಪ್ರಾರಂಬಿಸಿದರು. ಅನಿಲ ಅವರು ಚಿಕಾಗೊದಲ್ಲಿ ೨೦೦೮ ರಲ್ಲಿ ನಡೆದ ೦ಏಏಂಪ್ರಯೋಜಿತ ವಿಶ್ವಕನ್ನಡ ಸಮ್ಮೇಳನದಲ್ಲಿ, 'ಆಧ್ಯಾತ್ಮ ಸಮಿತಿ' ಹಾಗು 'ಸಾಂಸ್ಕೃತಿಕ ಕಾರ್ಯಕ್ರಮ' ಸಮಿತಿಗಳಲ್ಲಿ ಸೇವೆ ಸಲ್ಲಿಸಿದರು. ನಂತರ ೨೦೧೧-೧೨ ರಲ್ಲಿ AKK ದ Board of Director ಆಗಿ ಸೇವೆ ಸಲ್ಲಿಸಿದರು. ಅವರು 'ಹಿಂದು ಸ್ವಯಂ ಸೇವಕ ಸಂಘ', 'ವಿಶ್ವ ಹಿಂದು ಪರಿಷತ್' ಸಂಸ್ಥೆಗಳಿಗೆ ಸ್ವಯಂಸೇವಕರಾಗಿ ದುಡಿಯುತ್ತಾರೆ. ೨೦೧೩ ರಲ್ಲಿ ನಡೆದ ಶ್ರೀ ವಿವೇಕಾನಂದರ ೧೫೦ ಜನ್ಮ ಶತಾಬ್ಧಿ ಕಾರ್ಯಕ್ರಮಗಳಿಗೆ ಅವಿರತವಾಗಿ ಸೇವೆ ಸಲ್ಲಿಸಿದ್ದಾರೆ. ೨೦೧೧ ರಿಂದ ಅವರು, ಹಿಂದು ಸ್ವಯಂ ಸೇವಕ ಸಂಘ ಪ್ರೇರಿತ ಸೇವಾ ಸಂಸ್ಥೆ 'SEWA International USA, (WWW.SEWAUSA.ORG)' ಸಂಸ್ಥೆಗೆ ಅಮೇರಿಕ ವಿಭಾಗದ 'VicePresidentof Marketing & Development' ದಾಯಿತ್ವದಲ್ಲಿ ಸ್ವಯಂಸೇವಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.. ವೃತ್ತಿಯಲ್ಲಿ ಅವರು PriceWaterHouse Cooper ಸಂಸ್ಥೆಯ Advisory ವಿಭಾಗದಲ್ಲಿ ಸೇವೆಯಲ್ಲಿದ್ದಾರೆ.

Email:anilrd@yahoo.com

**ವಿಶ್ವನಾಥ್ ಹುಲಿಕಲ್**

ಶ್ರೀಯುತರು ಖರಗಪುರದ ಭಾರತೀಯ ತಂತ್ರಜ್ಞಾನ ಸಂಸ್ಥೆಯಿಂದ ಎಂ.ಟೆಕ್. ಪದವಿಯನ್ನು ಗಳಿಸಿದ್ದಾರೆ. ಇವರು ವೃತ್ತಿಯಿಂದ ಸಾಫ್ಟ್‌ವೇರ್ ಇಂಜಿನಿಯರ್ ಮತ್ತು ಪ್ರವೃತ್ತಿಯಿಂದ ಸಣ್ಣ ಕಥೆಗಾರರು, ಅನುವಾದಕರು ಮತ್ತು ಸಾಹಿತ್ಯ ಸಂಘಟಕರು. ಶ್ರೀಯುತರು ಇದುವರೆವಿಗೆ ಏಳು ಕೃತಿಗಳನ್ನು ರಚಿಸಿ ಪ್ರಕಟಿಸಿದ್ದಾರೆ: 'ಸೌರಭ' (ಸಣ್ಣ

ಕಥೆಗಳ ಸಂಕಲನ), 'ಹೃದಯ' (ಸಣ್ಣಕಥೆಗಳ ಸಂಕಲನ), 'ಗೃಹಪ್ರವೇಶ' (ಸಣ್ಣಕಥೆಗಳ ಸಂಕಲನ), 'ಮಂಥನ' (ಬರ್ಟ್ರಂಡ್ ರಸಲ್‌ರ ಲೇಖನಗಳ ಅನುವಾದ), 'ಅಮೆರಿಕ ಮತ್ತು ಅಮೆರಿಕನ್ನರು' (ಜಾನ್ ಸ್ಟೈನ್‌ಬೆಕ್ ಅವರ ಚಿಂತನಶೀಲ ಪ್ರಬಂಧಗಳ ಕೃತಿಯ ಅನುವಾದ), 'ಆತ ಮಂಗಳ ಲೋಕದಿಂದ, ಈಕೆ ಶುಕ್ರ ಲೋಕದಿಂದ' (ಜಾನ್ ಗ್ರೇ ಅವರ ಪುಸ್ತಕದ ಅನುವಾದ) ಮತ್ತು 'ನಾಗರೀಕತೆಯ ಕಥೆ – ಸಂಪುಟ ೩' (ವಿಲ್ ಡ್ಯೂರೆಂಟ್ ಅವರ ಬೃಹದ್‌ಗ್ರಂಥದ ಅನುವಾದ); ಎರಡು ಕೃತಿಗಳನ್ನು ಸಂಪಾದಿಸಿದ್ದಾರೆ: 'ವಿಷು' (ಸಾಹಿತ್ಯಿಕ ಸಂಚಿಕೆ) ಮತ್ತು 'Dots and Line' (ಜಯಂತ ಕಾಯ್ಕಿಣಿಯವರ ಕಥೆಗಳ ಆಂಗ್ಲ ಅನುವಾದ). ಶ್ರೀಯುತರು ಅನುವಾದಿಸಿದ 'ಭಾವುಕ ಪ್ರಬುದ್ಧತೆ' ಎಂಬ ಸ್ವಾಮಿ ದಯಾನಂದ ವಿರಚಿತ ಕೃತಿಯನ್ನು ಕನ್ನಡದ ಜನಪ್ರಿಯ ವಾರ್ತಾಪತ್ರಿಕೆ ಉದಯವಾಣಿ ೨೮ ವರಗಳ ಕಾಲ ಸಾಪ್ತಾಹಿಕ ಅಂಕಣವಾಗಿ ಪ್ರಕಟಿಸಿತು. ರಾಜ್ಯ ಮತ್ತು ರಾಷ್ಟ್ರಪ್ರಶಸ್ತಿವಿಜೇತ ಚಲನಚಿತ್ರ 'ಅಮೇರಿಕ ಅಮೇರಿಕ'ಕ್ಕೆ ಕಥೆ ಬರೆದವರಲ್ಲಿ ಇವರೂ ಒಬ್ಬರು.

ಸಾಹಿತ್ಯಾಸಕ್ತರಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಸದಭಿರುಚಿಯನ್ನು ಪೋಷಿಸಿ, ವೃದ್ಧಿಸುವ ದೃಷ್ಟಿಯಿಂದ 'ಸಾಹಿತ್ಯ ಗೋಷ್ಠಿ' ಯನ್ನು ಉತ್ತರ ಕ್ಯಾಲಿಫ಼ೋರ್ನಿಯದಲ್ಲಿ ನವೆಂಬರ್ ೨೦೦೧ ರಲ್ಲಿ ಸ್ಥಾಪಿಸಿ, ಸಾಹಿತ್ಯದ ವಿವಿಧ ಪ್ರಕಾರಗಳ ಮೇಲೆ ಪ್ರತಿ ತಿಂಗಳಿಗೆರಡರಂತೆ ಉಪನ್ಯಾಸಗಳನ್ನು ಸ್ಯಾನ್ ಫ಼್ರಾನ್‌ಸಿಸ್ಕೋ ಕೊಲ್ಲಿ ಪ್ರದೇಶದಲ್ಲಿ ಸುಮಾರು ೯ ವರ್ಷಗಳ ಕಾಲ ಏರ್ಪಡಿಸಿದ್ದಾರೆ. ೨೦೧೪ರಲ್ಲಿ ಸ್ಯಾನ್ ಹೊಸೆಯಲ್ಲಿ ಆಯೋಜಿಸಲಾದ ೮ನೇ 'ಅಕ್ಕ' ವಿಶ್ವ ಕನ್ನಡ ಸಮ್ಮೇಳನದ ಸಾಹಿತ್ಯಿಕ ವೇದಿಕೆಯ ನಾಯಕತ್ವವನ್ನು ವಹಿಸಿದರು; ಆರು ಉತ್ಕೃಷ್ಟ ಸಾಹಿತ್ಯಿಕ ಕಾರ್ಯಕ್ರಮಗಳನ್ನು ಪ್ರಸ್ತುತಪಡಿಸಲಾಯಿತು ಹಾಗೂ 'ಕಥಾ ಸಂಭ್ರಮ' ಮತ್ತು 'ಹರಟೆ ಕಟ್ಟೆ' ಎಂಬ ಕೃತಿಗಳನ್ನು ಪ್ರಕಟಿಸಲಾಯಿತು.

ಶ್ರೀಯುತರ ಸಾಹಿತ್ಯಿಕ ಸಾಧನೆಗಳು ಮತ್ತು ಅವರು ಅಮೇರಿಕಾದಲ್ಲಿ ಕನ್ನಡ ಸಾಹಿತ್ಯವನ್ನು ಪ್ರೋತ್ಸಾಹಿಸುತ್ತಿರುವುದನ್ನು ಗಮನದಲ್ಲಿಟ್ಟುಕೊಂಡು, ಅನೇಕ ಸಂಸ್ಥೆಗಳು ಶ್ರೀಯುತರನ್ನು ಸನ್ಮಾನಿಸಿವೆ: ಕರ್ನಾಟಕ ಸಾಂಸ್ಕೃತಿಕ ಸಂಘ (ಲಾಸ್ ಆಂಜಲೀಸ್), ಉತ್ತರ ಕ್ಯಾಲಿಫ಼ೋರ್ನಿಯ ಕನ್ನಡ ಕೂಟ (ಸ್ಯಾನ್ ಹೊಸೆ) ಮತ್ತು ಅಮೇರಿಕಾ ಕನ್ನಡ ಕೂಟಗಳ ಆಗರ. ಉದಯ ಟಿವಿ ಶ್ರೀಯುತರನ್ನು ತನ್ನ 'ಪರಿಚಯ' ಕಾರ್ಯಕ್ರಮದಲ್ಲಿ ಸಂದರ್ಶಿಸಿದೆ (ನವೆಂಬರ್ ೧೨, ೨೦೦೪). ಇವೆಲ್ಲಕ್ಕೂ ಕಳಶವಿಟ್ಟಂತೆ, ಕರ್ನಾಟಕ ಜನತಾ ಸೇನಾದಳದವರು 'ಸುವರ್ಣ ಕರ್ನಾಟಕ' ಎಂಬ ರಾಜ್ಯ ಪ್ರಶಸ್ತಿಯನ್ನು ಶ್ರೀಯುತರಿಗೆ ಪ್ರದಾನಮಾಡಿ ಗೌರವಿಸಿತು (ನವೆಂಬರ್ ೧೪, ೨೦೦೫).

email:vhulikal@yahoo.com

**ವೈಶಾಲಿ ಹೆಗಡೆ**

ಊರು, ಪಿಯುಸಿವರೆಗಿನ ಓದು, ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ. ಇವರ ಪ್ರಕಟಿತ ಪುಸ್ತಕ 'ಒದ್ದೆಹಿಮ... ಉಪ್ಪುಗಾಳಿ' ಪ್ರಬಂಧ ಸಂಕಲನ. ಹುಬ್ಬಳ್ಳಿಯ ಬಿ.ವಿ.ಬಿ.

ಎಂಜಿನಿಯರಿಂಗ್ ಕಾಲೇಜಿನಲ್ಲಿ ಇಲೆಕ್ಟ್ರೋನಿಕ್ಸ್ ಹಾಗೂ ಕಮ್ಯುನಿಕೇಶನ್ ಕ್ಷೇತ್ರದಲ್ಲಿ ಬಿ.ಇ. ಪದವಿ. ಯುನಿವರ್ಸಿಟಿ ಆಫ್ ಮ್ಯಸ್ಸಚುಸೆಟ್ಸ್‌ನಿಂದ ಕಂಪ್ಯೂಟರ್ ಸೈನ್ಸ್‌ನಲ್ಲಿ ಮಾಸ್ಟರ್ಸ್ ಪದವಿ. ಮಾಸ್ಟರ್ಸ್ ಥೀಸಿಸ್ ಪ್ರಬಂಧ ಲೇಖನ IEEE ಕಾನ್ಫರೆನ್ಸಿನಲ್ಲಿ ಮಂಡಿತವಾಗಿದೆ. ಪ್ರಸ್ತುತ ಸಾಫ್ಟವೇರ್ ಇಂಜಿನಿಯರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅಮೆರಿಕೆಯ ಬಾಸ್ಟನ್ ಸಮೀಪದ ವೆಸ್ಟ್‌ಫ್ಲೋರ್ಡ್‌ನಲ್ಲಿ ವಾಸವಾಗಿದ್ದಾರೆ. ಅಮೆರಿಕೆಯ ಹವ್ಯಾಸಿ ಯಕ್ಷಗಾನ ತಂಡ 'ಯಕ್ಷಲೋಕ'ದ ಪಾತ್ರಧಾರಿಗಳಲ್ಲೊಬ್ಬರು. ಬರವಣಿಗೆಯ ಜೊತೆಯಲ್ಲಿ ಆಗಾಗ ನೃತ್ಯ, ನಾಟಕ, ರಂಗಪ್ರದರ್ಶನಗಳನ್ನು ಸಂಯೋಜಿಸುತ್ತ ಬಂದಿದ್ದಾರೆ. ಬಾಸ್ಟನ್ ಕನ್ನಡ ಕೂಟದಲ್ಲಿ ಮನರಂಜನ ಸಮಿತಿಯ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸಿದ್ದರೆ. ನಾವಿಕ ಎರಡನೇ ವಿಶ್ವ ಸಮ್ಮೇಳನದ ಸಾಹಿತ್ಯ ಸಮಿತಿಯು ಮುಖ್ಯಸ್ಥರಾಗಿ ನೇಮಕಗೊಂಡಿದ್ದಾರೆ.

email:vaishalimadhu@gmail.com

### ಗುಂಡು ಶಂಕರ್

ಪತ್ನಿ ಶೈಲಜ ಮತು ಇಬ್ಬರು ಮಕ್ಕಳೊಂದಿಗೆ ಫ್ರೀಹೋಲ್ಡ್, ನ್ಯೂಜರ್ಸಿಯಲ್ಲಿ ವಾಸ ಮಾಡುತ್ತಿದ್ದಾರೆ. B. Tech. RVAE Indian Institute of Science, Bangalore ಮತ್ತು Indian Institue of Management, Calcuttaನಿಂದ M.B.A. ಡಿಗ್ರಿ ಪಡೆದರು. ಈಗ management consultant ಆಗಿ ಕೆಲಸ ಮಾಡುತ್ತಿದ್ದಾರೆ. ಸಾಹಿತ್ಯ ಮತ್ತು ಕಲೆಯಲ್ಲಿ ಆಸಕ್ತಿ. ಕನ್ನಡ ಸಾಹಿತ್ಯ ರಂಗ ಸಂಸ್ಥೆಯ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಾರೆ.

Email: gundu.shankar@gmail.com

### ಎಂ. ಜಿ. ಪ್ರಸಾದ್

ಡಾ. ಎಂ. ಜಿ. ಪ್ರಸಾದ್ ಕರ್ನಾಟಕದ ಮಹಾಯೋಗಿಗಳೂ ಹಾಗೂ ಜ್ಞಾನಿಗಳೂ ಆದ ಶ್ರೀರಂಗ ಸದ್ಗುರು ಅವರ ಶಿಷ್ಯರು. ಪ್ರಸಾದ್‌ರವರು ಕಳೆದ ಮೂವತ್ತಾರು ವರ್ಷಗಳಿಂದ ಅಮೆರಿಕಾದ ನ್ಯೂಜೆರ್ಸಿಯಲ್ಲಿನ ಸ್ಟೀವನ್ಸ್ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಲ್ಲಿ ತಾಂತ್ರಿಕ ವಿಭಾಗದಲ್ಲಿ ಪ್ರಾಧ್ಯಾಪರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಶಬ್ದ ವಿಜ್ಞಾನ ಕ್ಷೇತ್ರದಲ್ಲಿ ನೂರಕ್ಕೂ ಮೀರಿ ಲೇಖನಗಳನ್ನು ಬರೆದಿದ್ದಾರೆ. ಅವರು ನಾಲ್ಕು ಸಂಸ್ಥೆಗಳಲ್ಲಿ 'ಫೆಲೋ' ಆಗಿ ಆಯ್ಕೆಗೊಂಡಿದ್ದಾರೆ. ೨೦೧೫ರಲ್ಲಿ ಇವರಿಗೆ ಅತ್ಯುತ್ತಮ ಶಿಕ್ಷಕ ಪ್ರಶಸ್ತಿಯನ್ನು ಕೊಟ್ಟು ಗೌರವಿಸಿದ್ದಾರೆ. ಪ್ರಸಾದ್‌ರವರು ಅನೇಕ ಸಾಂಸ್ಕೃತಿಕ ಮತ್ತು ಧಾರ್ಮಿಕ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಸನಾತನ ಧರ್ಮಕ್ಕೆ ಸಂಬಂಧಿಸಿದಂತೆ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಅನೇಕ ಲೇಖನಗಳನ್ನು ಮತ್ತು ಐದು ಪುಸ್ತಕಗಳನ್ನು ಬರೆದಿದ್ದಾರೆ ಹಾಗೂ ಅನೇಕ ಪ್ರವಚನಗಳನ್ನು ನೀಡಿದ್ದಾರೆ. ಅವರು ಅನೇಕ ಸಂಸ್ಥೆಗಳ ಸಲಹಾ ಸಮಿತಿಯ ಸದಸ್ಯರಾಗಿದ್ದಾರೆ. ಪ್ರಸಾದ್ ಮತ್ತು ಅವರ ಪತ್ನಿ ಗೀತಾ ಸೇರಿ ತರಂಗ ಕಲಾ ಸಂಸ್ಥೆಯ ಮೂಲಕ ಅರವತ್ತಕ್ಕೂ ಮೀರಿ ನಾಟಕಗಳು ಹಾಗೂ ನೃತ್ಯ ರೂಪಕಗಳನ್ನು ಕನ್ನಡ ಮತ್ತು

ಇಂಗ್ಲಿಷ್ ನಲ್ಲಿ ಪ್ರದರ್ಶಿಸಿದ್ದಾರೆ. ಪ್ರಸಾದ್ ರವರಿಗೆ ೨೦೦೯ರಲ್ಲಿ ಅಮೇರಿಕಾದಲ್ಲಿ 'ವಿಶ್ವ ಹಿಂದೂ ರತ್ನ' ಮತ್ತು ೨೦೧೦ ರಲ್ಲಿ ನವದೆಹಲಿಯಲ್ಲಿ 'ಭಾರತ ಗೌರವ' ಪ್ರಶಸ್ತಿಗಳನ್ನು ಕೊಟ್ಟು ಗೌರವಿಸಿದ್ದಾರೆ. ಅವರ ಸಾಂಸ್ಕೃತಿಕ ಚಟುವಟಿಕೆಗಳನ್ನು www.taranga.us ನಲ್ಲಿ ನೋಡಬಹುದು.

Email: mgprasad@comcast.net

## ರವಿ ಗೋಪಾಲರಾವ್

ಮೂಲತಃ ಬೆಂಗಳೂರಿನವರಾದ ರವಿ ಗೋಪಾಲರಾವ್ ಅಮೆರಿಕಾಗೆ ಬಂದದದ್ದು ವಿದ್ಯಾರ್ಥಿಯಾಗಿ. ಯೂನಿವರ್ಸಿಟಿ ಆಫ್ ಪೆನ್ಸಿಲ್ವೇನಿಯದಿಂದ ಡಾಕ್ಟೊರೇಟ್ ಪದವಿ ಪಡೆದು, ಕಳೆದ ಎರಡೂವರೆ ದಶಕಗಳಿಂದ ಸಿಲಿಕಾನ್ ಕಣಿವೆಯಲ್ಲಿ ಶೈಕ್ಷಣಿಕ, ಕನ್ಸಲ್ಟಿಂಗ್ ಮತ್ತು ಐ. ಟಿ. ಉದ್ಯಮದಲ್ಲಿ ತೊಡಗಿದ್ದಾರೆ. ಕನ್ನಡಾಭಿಮಾನಿ ರವಿಯವರು ಕೆಲವು ಸಣ್ಣ ಕತೆ ಹಾಗು ಕವನಗಳನ್ನು ಪ್ರಕಟಿಸಿದ್ದಲ್ಲದೆ ಉತ್ತರ ಕ್ಯಾಲಿಫೋರ್ನಿಯ ಕನ್ನಡ ಕೂಟದ ೨೦೦೪ರ ಸ್ವರ್ಣಸೇತುವಿನ ಪ್ರಧಾನ ಸಂಪಾದಕರಾಗಿ ಅಳಿಲುಸೇವೆ ಸಲ್ಲಿಸಿದ್ದಾರೆ. ನೆಬರಾಸ್ಕ ಕನ್ನಡ ಕೂಟದ ಸ್ಥಾಪಕರಾಗಿ ಮತ್ತು ಅಕ್ಕ ೨೦೧೪ ಸಾಹಿತ್ಯ ವೇದಿಕೆ ಬಿಡುಗಡೆ ಮಾಡಿದ 'ಕಥಾಸಂಭ್ರಮ'ದ ಸಹಸಂಪಾದಕರಾಗಿ ಕೆಲಸ ನಿರ್ವಹಿಸಿದ್ದಾರೆ. ತಮ್ಮ ಬಿಡುವಿನ ವೇಳೆಯಲ್ಲಿ ರವಿಯವರು ಕನ್ನಡ ಪುಸ್ತಕಗಳನ್ನು ಓದುವುದು ಹಾಗು ಸಂಗೀತ ಕೇಳುವ ಹವ್ಯಾಸದೊಂದಿಗೆ ಛಾಯಾಚಿತ್ರ ಮತ್ತು ತರಕಾರಿ ಬೆಳೆಯುವುದರಲ್ಲಿ ಉತ್ಸುಕರಾಗಿರುತ್ತಾರೆ. ಪತ್ನಿ ಪ್ರತಿಭಾ ಮತ್ತು ಇಬ್ಬರು ಪುತ್ರಿಯರೊಂದಿಗೆ ಸ್ಯಾನ್ ಹೋಸೆ ನಗರದಲ್ಲಿ ನೆಲಸಿದ್ದಾರೆ.

## ನಳಿನಿ ಮೈಯ

ಶ್ರೀಮತಿ ನಳಿನಿ ಮೈಯ ಅವರು ಡೇರಿಯನ್, ಇಲಿನಾಯ್ ನಲ್ಲಿ ಪತಿ ಸುಬ್ರಾಯ ಮೈಯ ಅವರೊಡನೆ ನೆಲೆಸಿದ್ದಾರೆ. ವೃತ್ತಿಯಲ್ಲಿ ಆಕ್ಯುಪೇಶನಲ್ ಥೆರಪಿಸ್ಟ್ ಆಗಿದ್ದವರು. ಈಗ ನಿವೃತ್ತರಾಗಿದ್ದಾರೆ. 'ಮರೀಚಿಕೆ ಮತ್ತು ಇತರ ಕಥೆಗಳು' ಎಂಬ ಕಥಾ ಸಂಕಲನವನ್ನು ಪ್ರಕಟಿಸಿದ್ದಾರೆ. ಶಿಕಾಗೊ ನಗರದ ವಿದ್ಯಾರಣ್ಯ ಕನ್ನಡ ಕೂಟದ ಸಕ್ರಿಯ ಸದಸ್ಯೆ. ಕೂಟದ 'ಸಂಗಮ' ಪತ್ರಿಕೆಯ ಸಂಪಾದಕಿಯಾಗಿದ್ದರು. ಕನ್ನಡ ಸಾಹಿತ್ಯ ರಂಗದ ಅನೇಕ ಪುಸ್ತಕಗಳಿಗೆ ಸಂಪಾದಕ ಸಲಹಾ ಮಂಡಳಿಯಲ್ಲಿದ್ದು ಸೇವೆ ಮಾಡಿದ್ದಾರೆ. 'ಕಾರಂತ ಚಿಂತನ' ಮತ್ತು 'ಬೇಂದ್ರೆ ಅಂದ್ರೆ' ಪುಸ್ತಕಗಳಿಗೆ ಮಾನ್ಯ ನಾಗ ಐತಾಳರ ಜೊತೆ ಸಹಸಂಪಾದಕಿಯಾಗಿದ್ದರು. ಕನ್ನಡ ಸಾಹಿತ್ಯ ರಂಗದ ಕಾರ್ಯಕಾರಿ ಸಮಿತಿಯ ಉಪಾಧ್ಯಕ್ಷರಾಗಿದ್ದಾರೆ. ಕನ್ನಡ ಸಾಹಿತ್ಯ ರಂಗದ ಎಂಟನೆಯ ಪ್ರಕಟಣೆ 'ಅವರವರ ಭಕುತಿಗೆ' ಗ್ರಂಥದ ಮುಖ್ಯ ಸಂಪಾದಕಿಯಾಗಿದ್ದಾರೆ.

**ಶ್ರೀನಾಥ್ ಭಲ್ಲೆ**

ಮಾರ್ಚ್ ೨೦೦೦ರಲ್ಲಿ ಅಮೇರಿಕಕ್ಕೆ ಆಗಮನ. ವರ್ಜೀನಿಯಾ ರಾಜ್ಯದ ರಿಚ್ಮಂಡ್ ನಗರದಲ್ಲಿ ವಾಸ. ವೃತ್ತಿಯಲ್ಲಿ ಸಾಫ್ಟ್‌ವೇರ್ ಇಂಜಿನಿಯರ್. ಹವ್ಯಾಸಿ ಬರಹಗಾರ. ಕನ್ನಡದ ವಿವಿಧ ಪ್ರಕಾರಗಳಾದ ನಗೆಹನಿ, ಚುಟುಕು, ಹಾಸ್ಯ ಕವನ, ಗಂಭೀರ ಕವನ, ಪತ್ತೇದಾರಿ ಸಣ್ಣ ಕಥೆಗಳು, ನಾಟಕ, ಪದರಂಗ ಇತ್ಯಾದಿಯಲ್ಲಿ ಪ್ರಯೋಗ. ನಾಟಕ ನಿರ್ದೇಶನ ಹಾಗೂ ನಟನೆಯಲ್ಲಿಯೂ ಸ್ವಲ್ಪ ಅನುಭವ. ರಿಚ್ಮಂಡ್ ಕನ್ನಡ ಸಂಘದ ಅಧ್ಯಕ್ಷನಾಗಿ ಎರಡು ವರ್ಷ ಸೇವೆ ಸಲ್ಲಿಕೆ. ಪತ್ನಿ ಸ್ನೇಹ ಹಾಗೂ ಪುತ್ರ ಶ್ರೇಯಸ್ ಜೊತೆಗಿನ ಪುಟ್ಟ ಸಂಸಾರದ ಸುಖ ಜೀವನ.

Email: srinathbhalle@yahoo.com

**ಸಿಮ್ ಮೂರ್ತಿ**

ಸಿಮ್ ಮೂರ್ತಿ (ಶ್ರೀಕಂಠ ನರಸಿಂಹ ಮೂರ್ತಿ) ೧೯೩೦ರ ದಶಕದಲ್ಲಿ ಜಿಗಣಿಗ್ರಾಮದಲ್ಲಿ ಜನಿಸಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಗಣಿತಶಾಸ್ತ್ರದಲ್ಲಿ ಬಿ.ಎಸ್.ಸಿ.ಆನರ್ಸ್ ಪಡೆದರು. ಟಾಟಾ ಇನ್‌ಸ್ಟಿಟ್ಯೂಟಿನಲ್ಲಿ ಎಲೆಕ್ಟ್ರಿಕಲ್ ಟೆಕ್ನಾಲಜಿ ಡಿಪ್ಲೋಮ ಪದವಿಯನ್ನು ಗಳಿಸಿ ಬೊಂಬಾಯಿನ ಎಲೆಕ್ಟ್ರಿಕ್ ಗ್ರಿಡ್ ಇಲಾಖೆಯ ಕೊಯ್ನಾ ಪ್ರಾಜೆಕ್ಟಿನಲ್ಲಿ ಕೆಲಸ ಶುರು ಮಾಡಿದರು. ಆನಂತರ ಜರ್ಮನಿ, ಇಂಗ್ಲೆಂಡು ದೇಶಗಳಲ್ಲಿ ಹಲವಾರು ವರ್ಷ ಕೆಲಸ ಮಾಡಿ ಭೋಪಾಲ್ ನಗರದಲ್ಲಿ ಇರುವ ಹೆವಿ ಎಲೆಕ್ಟ್ರಿಕಲ್ಸ್ ಎಂಬ ಕಾರ್ಖಾನೆಯಲ್ಲಿ ಡಿಸೈನ್ ಇಂಜಿನಿಯರಾಗಿ ಕೆಲಸ ಮಾಡಿದರು. ತರುವಾಯ ಬೊಂಬಾಯಿನ ವೆಸ್ಟಿಂಗ್‌ಹೌಸ್ ಕಂಪನಿಯಲ್ಲಿ ಕೆಲವು ವರ್ಷ ಕೆಲಸ ಮಾಡಿ ೧೯೬೭ರಲ್ಲಿ ಕೆನಡ ದೇಶಕ್ಕೆ ವಲಸೆ ಬಂದರು. ಕೆನಡಾದಲ್ಲೂ ವ್ಯಾಸಂಗ ಮುಗಿಸಿ, ಜಾಂಬಿಯ ದೇಶದಲ್ಲಿ ಹಲವಾರು ವರ್ಷಗಳು ಕಫ಼ುಯಿ ಪ್ರಾಜೆಕ್ಟಿನಲ್ಲಿ ಸೀನಿಯರ್ ಇಂಜಿನಿಯರ್ ಆಗಿ ಕೆಲಸ ಮಾಡಿ ಕೆನಡಾಕ್ಕೆ ವಾಪಸು ಬಂದರು. ಆಲ್ಬರ್ಟ ಪ್ರಾಂತ್ಯದಲ್ಲಿ ಕೆನಡ ಸರ್ಕಾರದ ನಾರತ್ ವೆಸ್ಟ್ ಮತ್ತು ಯೂಕಾನ್ ಪ್ರಾಂತ್ಯಗಳ ವಿದ್ಯುತ್ ಇಲಾಖೆಯಲ್ಲಿ ಹಲವು ವರ್ಷಗಳು ಸೂಪರ್‌ವೈಸಿಂಗ್ ಇಂಜಿನಿಯರಾಗಿ ಕೆಲಸ ಮಾಡಿದರು. ತರುವಾಯ ಆಲ್ಬರ್ಟ ವಿಶ್ವವಿದ್ಯಾಲಯದಲ್ಲಿ ಪವರ್ ಸಿಸ್ಟಮ್ ಪ್ರೊಟೆಕ್ಶನ್ ಹಾಗೂ ಬ್ರಿಟಿಶ್ ಕೊಲಂಬಿಯಾದ ಇಂಜಿನಿಯರಿಂಗ್ ಕಾಲೇಜಿನಲ್ಲಿ ಡಿಜಿಟಲ್ ಟೆಕ್ನಾಲಜಿ ಬಗ್ಗೆಯೂ ಅಧ್ಯಾಪಕರಾಗಿ ಕೆಲಸ ಮಾಡಿದರು.

೧೯೯೩ರಲ್ಲಿ ನಿವೃತ್ತಿ ಹೊಂದಿದ ಸಿಮ್ ಮೂರ್ತಿಯವರು ಈಗ ಟೊರೊಂಟೊ ನಗರದಲ್ಲಿ ವಾಸವಾಗಿದ್ದಾರೆ. ಟೊರೊಂಟೊ ಕನ್ನಡ ಸಂಘದ ಹಿಂದಿನ ಅಧ್ಯಕ್ಷರಾಗಿಯೂ, ಇಂದಿನ ಸದಸ್ಯರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ.

Email:simmurthy@hotmail.com

**ಎಚ್. ವೈ. ರಾಜಗೋಪಾಲ್**

೧೯೬೦ರ ದಶಕದಲ್ಲೇ ಅಮೇರಿಕಕ್ಕೆ ಬಂದ ರಾಜಗೋಪಾಲ್ ಅವರು ಇಲ್ಲಿನ ಕನ್ನಡ ಸಮಾಜದೊಂದಿಗೆ ನಿಕಟ ಸಂಪರ್ಕ ಹೊಂದಿದ್ದಾರೆ. ಅಲ್ಲದೆ ಅನೇಕ ಭಾರತೀಯ ಸಂಸ್ಥೆಗಳ ಸ್ಥಾಪಕರೂ, ಕಾರ್ಯಮಂಡಲಿಯ ಸದಸ್ಯರೂ ಆಗಿ ಕೆಲಸ ಮಾಡಿದ್ದಾರೆ. ಕನ್ನಡ ಸಾಹಿತ್ಯಕ್ಕೇ ಮೀಸಲಾದ ಅಮೇರಿಕದ ಏಕೈಕ ರಾಷ್ಟ್ರೀಯ ಸಂಸ್ಥೆಯಾದ ಕನ್ನಡ ಸಾಹಿತ್ಯ ರಂಗದ ಸ್ಥಾಪಕ ಸದಸ್ಯರಲ್ಲೊಬ್ಬರು. ಹಲವಾರು ವರ್ಷ ಅದರ ಕಾರ್ಯಕಾರೀ ಸಮಿತಿಯ ಅಧ್ಯಕ್ಷರಾಗಿಯೂ, ಅನಂತರ ಅದರ ಆಡಳಿತ ಮಂಡಲಿಯ ಅಧ್ಯಕ್ಷರಾಗಿಯೂ ಇದ್ದು ಅದರ ಎಲ್ಲ ಕಾರ್ಯಕ್ಷೇತ್ರಗಳಲ್ಲೂ ಸೇವೆ ಸಲ್ಲಿಸಿದ್ದಾರೆ. ಇವರ ಲೇಖನಗಳು ಅಮೆರಿಕದ ಹಾಗೂ ಕರ್ನಾಟಕದ ಹಲವಾರು ಸಂಕಲನಗಳಲ್ಲಿ, ಅಂತರ್ಜಾಲ ತಾಣಗಳಲ್ಲಿ, ವೃತ್ತಪತ್ರಿಕೆಗಳಲ್ಲಿ ಪ್ರಕಾಶಗೊಂಡಿವೆ. ಅವರು ಸಹಸಂಪಾದಕರಾಗಿ ಹೊರತಂದ ಕೃತಿ 'ನಗೆಗನ್ನಡಂ ಗೆಲ್ಗೆ!' ಅನೇಕ ಓದುಗರ, ವಿದ್ವಾಂಸರ ಮೆಚ್ಚುಗೆ ಗಳಿಸಿದೆ. ಅವರ ಇತರ ಪುಸ್ತಕಗಳು: 'ಗಾಂಧಿಯುಗಕ್ಕೆ ಕನ್ನಡಿ' ಎಂಬ ಪ್ರಬಂಧ ಸಂಕಲನ (೨೦೧೧); ಅಮೇರಿಕದ ಮೂಲನಿವಾಸಿಗಳ ಪುರಾಣ ಮತ್ತು ಜಾನಪದ ಕತೆಗಳನ್ನೊಳಗೊಂಡ 'ಸೃಷ್ಟಿ – ನಾಲ್ಕು ಜಗತ್ತುಗಳು' (೨೦೧೪); ಮತ್ತು ತಮ್ಮ ತಾಯಿ ಶ್ರೀಮತಿ ಎಚ್. ವೈ. ಸರಸ್ವತಿಯವರ ಜೀವನ, ದರ್ಶನ ಮತ್ತು ಸಾಧನೆಗಳನ್ನು ಕುರಿತ ಸಂಪಾದಿತ ಕೃತಿ'ಹಲವು ಮಕ್ಕಳ ತಾಯಿ' (೨೦೧೬). ಹೊರನಾಡಿನಲ್ಲಿ ಕನ್ನಡಕ್ಕೆ ಅವರು ಸಲ್ಲಿಸಿರುವ ಸೇವೆಯನ್ನು ಗುರುತಿಸಿ ಕರ್ನಾಟಕ ರಾಜ್ಯ ಸರ್ಕಾರ ೨೦೦೭ರಲ್ಲಿ ಅವರಿಗೆ ಕನ್ನಡ ರಾಜ್ಯೋತ್ಸವ ಪ್ರಶಸ್ತಿಯನ್ನಿತ್ತು ಸನ್ಮಾನಿಸಿದೆ. ಅಲ್ಲದೆ ೨೦೧೩ರಲ್ಲಿ ಆಳ್ವಾಸ್ ವಿಶ್ವ ನುಡಿಸಿರಿ ವಿರಾಸತ್ ತನ್ನ ವಿದೇಶ ವಿಭಾಗದ ಸನ್ಮಾನವನ್ನು ಇತ್ತಿದೆ. ಮೈಸೂರಿನ ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಇಂಜಿನೀರಿಂಗ್, ಬೆಂಗಳೂರಿನ ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಸೈನ್ಸ್, ಮತ್ತು ಪೆನ್ಸಿಲ್ವೇನಿಯಾ ಸ್ಟೇಟ್ ಯೂನಿವರ್ಸಿಟಿಗಳಲ್ಲಿ ಸಿವಿಲ್ ಇಂಜಿನೀರಿಂಗ್ ವಿಭಾಗದಲ್ಲಿ ಕ್ರಮವಾಗಿ B.E.,M.E., ಮತ್ತು Ph.D. ಪದವಿಗಳನ್ನು ಪಡೆದು Raytheon Engineers & Constructors ಕಂಪೆನಿಯಲ್ಲಿ Consulting Engineer ಆಗಿಯೂ, ವಿಲನೋವಾ ವಿಶ್ವವಿದ್ಯಾಲಯದಲ್ಲಿ Adjunct Professor ಆಗಿಯೂ ಕೆಲಸ ಮಾಡಿ ಈಗ ನಿವೃತ್ತರಾಗಿದ್ದಾರೆ. ಕನ್ನಡ ಲೇಖಕಿ, ಜಾನಪದ ಗಾಯಕಿ ಎಂದು ಹೆಸರು ಪಡೆದಿರುವ ಅವರ ಪತ್ನಿ ವಿಮಲಾ ರಾಜಗೋಪಾಲರೊಂದಿಗೆ ಮೀಡಿಯಾ, ಪೆನ್ಸಿಲ್ವೇನಿಯದಲ್ಲಿ ವಾಸವಾಗಿದ್ದಾರೆ.

**ಮೀರಾ ಪಿ. ಆರ್.**

ಭಾಷಾವಿಜ್ಞಾನದಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಸ್ನಾತಕೋತ್ತರ ಪದವಿ ಪಡೆದಿರುವ ಮೀರ ಶಿಕ್ಷಕಿಯಾಗಿ ಹಾಗು ಮೈಸೂರು, ಬೆಂಗಳೂರು ಆಕಾಶವಾಣಿಯಲ್ಲಿ ಹಲವು ವರ್ಷ ಅರೆಕಾಲಿಕ ಉದ್ಘೋಷಕಿಯಾಗಿ ಕೆಲಸ ಮಾಡಿದ್ದಾರೆ. ಕನ್ನಡದ ಹಲವು ನಿಯತಕಾಲಿಕೆಗಳಲ್ಲಿ, ವಿಶೇಷಾಂಕಗಳಲ್ಲಿ ಮತ್ತು ವೆಬ್ ಪೋರ್ಟಲ್‌ಗಳಲ್ಲಿ, ಕನ್ನಡ ಸಾಹಿತ್ಯ

ರಂಗ ಮತ್ತು ಅಮೆರಿಕದ ಕನ್ನಡ ಕೂಟಗಳ ಹಲವು ಪ್ರಕಟಣೆಗಳಲ್ಲಿ ಇವರ ಹಲವು ಕಥೆ, ಕವಿತೆ, ಪ್ರಬಂಧ, ವಿಮರ್ಶೆ, ಅಂಕಣ ಬರಹಗಳು ಪ್ರಕಟವಾಗಿವೆ. ಮಕ್ಕಳ ಸಾಹಿತ್ಯ ಇವರ ವಿಶೇಷ ಪ್ರೀತಿ. 'ಅಕ್ಕ ೨೦೧೦'ರ ಅಂಗವಾಗಿ ಪ್ರಕಟಗೊಂಡ ಮಕ್ಕಳ ವಿಶೇಷ ಸಂಚಿಕೆ 'ಗುಬ್ಬಿಗೂಡು' ಪುಸ್ತಕದ ರೂವಾರಿ. 'ಅಕ್ಕ ೨೦೧೨' ಸಮ್ಮೇಳನದ ಅಂಗವಾಗಿ ಹೊರಬರುತ್ತಿದ್ದ 'ಜಗಲಿ' ವಾರ್ತಾಪತ್ರಿಕೆಯ ಸಂಪಾದಕ ಮಂಡಳಿಯಲ್ಲಿ ಮತ್ತು ಕನ್ನಡ ಸಾಹಿತ್ಯ ರಂಗದ ಪುಸ್ತಕ ಮಾಲೆ-೭ರ ಸಂಪಾದಕ ಮಂಡಲಿಯಲ್ಲಿಯೂ ಕೆಲಸ ಮಾಡಿದ್ದಾರೆ.

ಮೀರ ಅವರು ತಮ್ಮ ಮನೆಯಲ್ಲಿ ಕರ್ನಾಟಕ ಶಾಸ್ತ್ರೀಯ ಮತ್ತು ಲಘು ಸಂಗೀತದ ತರಗತಿಗಳನ್ನು ನಡೆಸುತ್ತಿದ್ದಾರೆ. ಸಾಹಿತ್ಯ, ಸಂಗೀತ, ಚಿತ್ರಕಲೆ, ಸಿನಿಮಾ, ವೆಬ್‌ಡಿಸೈನಿಂಗ್ ಎಲ್ಲವೂ ಇವರ ಹತ್ತು ಹಲವು ಆಸಕ್ತಿಗಳಲ್ಲಿ ಸೇರಿವೆ. ಭಾರತದಿಂದ ಅಮೆರಿಕಾಗೆ ವರ್ಷ ೨೦೦೦ದಲ್ಲಿ ಬಂದ ಇವರು, ಸಧ್ಯಕ್ಕೆ ನ್ಯೂಜೆರ್ಸಿಯ 'ಎಡಿಸನ್' ಎಂಬಲ್ಲಿ ತಮ್ಮ ಪತಿ ಹಾಗು ಮಗನ ಜೊತೆ ನೆಲೆಸಿದ್ದಾರೆ.

**ಶ್ರೀಕಾಂತ್ ಬಾಬು**

ಇವರು ನ್ಯೂಜೆರ್ಸಿಯಲ್ಲಿ ನೆಲೆಸಿದ್ದು, ನ್ಯೂಯಾರ್ಕ್‌ನ CITI Bankನಲ್ಲಿ IT Manager ಆಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಹಾಗೂ ಭಾರತೀಯ ಸಂಗೀತದಲ್ಲಿ ತುಂಬಾ ಆಸಕ್ತಿ. ಆದರೆ ಸಾಹಿತ್ಯ ರಚನೆ ತಮ್ಮ ಹವ್ಯಾಸವಲ್ಲ, ಎನ್ನುತ್ತಲೇ ಉತ್ತಮ ಲೇಖನಗಳನ್ನು ಬರೆಯುತ್ತಿದ್ದಾರೆ.

**ಡಾ. ಗುರುಪ್ರಸಾದ್ ಕಾಗಿನೆಲೆ**

ಹುಟ್ಟಿದ್ದು ಶಿವಮೊಗ್ಗ. ಬೆಳೆದದ್ದು ಮೈಸೂರು ಮತ್ತು ಮಂಡ್ಯ ಜಿಲ್ಲೆಯ ನಾಗಮಂಗಲದಲ್ಲಿ. ಬಳ್ಳಾರಿಯ ಸರಕಾರಿ ವೈದ್ಯಕೀಯ ವಿದ್ಯಾಲಯದಲ್ಲಿ ಎಂ.ಬಿ.ಬಿ.ಎಸ್. ಮತ್ತು ಎಂ.ಡಿ. ಪದವಿ ಪಡೆದು ತುಮಕೂರಿನ ಸಿದ್ಧಾರ್ಥ ವೈದ್ಯಕೀಯ ವಿದ್ಯಾಲಯದಲ್ಲಿ ಉಪನ್ಯಾಸಕರಾಗಿ ಕೆಲಸ. ೧೯೯೫ರಲ್ಲಿ ಅಮೆರಿಕೆಗೆ ವಲಸೆ. ಡೆಟ್ರಾಯ್ಟ್‌ನ ವೇಯ್ನ್‌ಸ್ಟೇಟ್ ವಿಶ್ವವಿದ್ಯಾನಿಲಯ ಹಾಗೂ ವಿಸ್ಕಾನ್ಸಿನ್ ವಿಶ್ವವಿದ್ಯಾನಿಲಯಗಳಲ್ಲಿ ತರಬೇತಿ. ಸದ್ಯಕ್ಕೆ ಮಿನೆಸೊಟಾ ರಾಜ್ಯದ ರಾಚೆಸ್ಟರ್‌ನಲ್ಲಿ ಪತ್ನಿ ಪದ್ಮ ಮತ್ತು ಮಕ್ಕಳಾದ ಪ್ರಣೀತ ಮತ್ತು ಪ್ರಭವರೊಂದಿಗೆ ವಾಸ. ನಾರ್ತ್ ಮೆಮೊರಿಯಲ್ ಆಸ್ಪತ್ರೆಯ ಎಮರ್ಜೆನ್ಸಿ ಮೆಡಿಸಿನ್ ವಿಭಾಗದಲ್ಲಿ ಎಮರ್ಜೆನ್ಸಿ ವೈದ್ಯನಾಗಿ ಕೆಲಸ. ಪ್ರಕಟಿತ ಕೃತಿಗಳು: ನಿರ್ಗುಣ (೨೦೦೩), ಶಕುಂತಲಾ (೨೦೦೭)- ಕಥಾಸಂಕಲನಗಳು: ವೈದ್ಯ, ಮತ್ತೊಬ್ಬ (೨೦೦೫)- ಲೇಖನ ಸಂಗ್ರಹ. ಸಂಪಾದಿತ ಕಥಾಸಂಕಲನ-'ಆಚೀಚೆಯ ಕಥೆಗಳು' (೨೦೦೫). 'ಬಿಳಿಯ ಚಾದರ' (೨೦೦೭) ಮತ್ತು 'ಗುಣ' (೨೦೧೦)- ಕಾದಂಬರಿಗಳು. ಕೆಲವು ಕಥೆಗಳು ಮರಾಠಿ, ತೆಲುಗು ಮತ್ತು ಕೊಂಕಣಿ ಭಾಷೆಗಳಿಗೆ ಅನುವಾದವಾಗಿವೆ.

Email: gkaginele@gmail.com

~ ~ * ~ ~

ಅನುಬಂಧ–೨

# ಕನ್ನಡ ಸಾಹಿತ್ಯ ರಂಗದ ಪ್ರಕಟಣೆಗಳು

**(೧) 'ಕುವೆಂಪು ಸಾಹಿತ್ಯ ಸಮೀಕ್ಷೆ' (೨೦೦೪); ವಸಂತ ಪ್ರಕಾಶನ; ಸಂಪಾದಕರು: ಆಹಿತಾನಲ (ನಾಗ ಐತಾಳ)**

ಕುವೆಂಪು ಸಾಹಿತ್ಯ ಸಮೀಕ್ಷೆ – ಕುವೆಂಪು ಸಾಹಿತ್ಯದ ಹಲವು ಮುಖಗಳನ್ನು ಕುರಿತು ಕಡಲಾಚೆಯ ಕನ್ನಡಿಗರು ಬರೆದ ಲೇಖನಗಳ ಸಂಪುಟ. "ಅಮೆರಿಕದಲ್ಲಿದ್ದೂ ತಮ್ಮ ಕನ್ನಡ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವ ಸಂರಕ್ಷಕ ಕವಚಗಳನ್ನು ಕಂಡುಕೊಳ್ಳುವುದು ಅವರಿಗೆ ಅಗತ್ಯವಾಗಿದೆ. ತಮ್ಮೊಳಗಿನ ಕನ್ನಡತನವನ್ನು ತುಕ್ಕು ಹಿಡಿಯದಂತೆ ಕಾಪಾಡಿಕೊಂಡಿದ್ದಾರೆ. ಹೀಗೆ ತಮ್ಮ ಕನ್ನಡತನವನ್ನು ಉಳಿಸಿಕೊಂಡಿದ್ದರ ಸಂಕೇತವೇ ಈ 'ಕುವೆಂಪು ಸಾಹಿತ್ಯ ಸಮೀಕ್ಷೆ.' ಕುವೆಂಪು ಸಾಹಿತ್ಯ ನಿರ್ಮಿತಿಯನ್ನು ಕುರಿತು ಒಂದು ಒಳ್ಳೆಯ ಸಮೀಕ್ಷೆ ಇದು" ಎಂದು ರಾಷ್ಟ್ರಕವಿ, ದಿವಂಗತ ಜಿ. ಎಸ್. ಶಿವರುದ್ರಪ್ಪನವರು ಅಭಿಪ್ರಾಯಪಟ್ಟಿದ್ದಾರೆ. ಅದೇ ರೀತಿ, ಕನ್ನಡದ ಖ್ಯಾತ ಲೇಖಕ ಪ್ರಭುಶಂಕರರು "ಅನಿವಾಸಿ ಕನ್ನಡಿಗರ ಈ ಕೊಡುಗೆ ಕುವೆಂಪು ಅವರಿಗೆ ಅರ್ಪಿಸುವ ಒಂದು ದೊಡ್ಡ ನಮನ. ಕರ್ನಾಟಕದ ಸಮಕಾಲೀನ ಲೇಖಕರ ಮಟ್ಟಕ್ಕೇನೂ ಕಡಿಮೆ ಇಲ್ಲದ ಲೇಖನಗಳು ಇಲ್ಲಿ ಹೊರಬಂದಿವೆ ಎನ್ನಲು ಹೆಮ್ಮೆಯಾಗುತ್ತದೆ" ಎಂದು ಅಭಿಪ್ರಾಯಪಟ್ಟಿದ್ದಾರೆ. ಕುವೆಂಪು ಸಾಹಿತ್ಯ ಸಮೀಕ್ಷೆಯಲ್ಲಿ ಅಧ್ಯಯನಪೂರ್ಣ ಲೇಖನಗಳನ್ನು ಬರೆದಿರುವ ಅಮೆರಿಕದ ಲೇಖಕರ ಬಗ್ಗೆ ಕರ್ನಾಟಕದ ಕನ್ನಡಿಗರೂ ಹೆಮ್ಮೆಪಡಬೇಕು. ಕುವೆಂಪು ಸಾಹಿತ್ಯದ ವಿವಿಧ ಮುಖಗಳನ್ನು ಆಸಕ್ತಿಯಿಂದ ಚರ್ಚಿಸಿದ ಎಲ್ಲ ಲೇಖಕ ಲೇಖಕಿಯರೂ ತಾವು ಆರಿಸಿಕೊಂಡ ವಸ್ತುವಿನ ಬಗ್ಗೆ ಸಮರ್ಥವೆನಿಸುವ ಗ್ರಹಿಕೆಯನ್ನು ವ್ಯಕ್ತ ಪಡಿಸಿದ್ದಾರೆ ಎಂದು ಮತ್ತೊಬ್ಬ ವಿದ್ವಾಂಸರಾದ ವ್ಯಾಸರಾಯ ಬಲ್ಲಾಳರ ಅನಿಸಿಕೆ.

**(೨) 'ಆಚೀಚೆಯ ಕಥೆಗಳು' (೨೦೦೫); ಅಭಿನವ; ಸಂಪಾದಕರು: ಗುರುಪ್ರಸಾದ್ ಕಾಗಿನೆಲೆ**

ಕನ್ನಡದ ಪ್ರಸಿದ್ಧ ಕಥೆಗಾರ ದಿವಂಗತ ಯಶವಂತ ಚಿತ್ತಾಲರು 'ಆಚೀಚೆಯ ಕಥೆಗಳು' ಬಗ್ಗೆ ಬರೆಯುತ್ತಾ, ಇದನ್ನು "ಕನ್ನಡದಲ್ಲಿ ನಡೆದ ಇತ್ತೀಚಿನ ಆಕರ್ಷಕ

ಪ್ರಯೋಗ" ಎಂದಿದ್ದಾರೆ. "ತಾಯಿ ನೆಲದಿಂದ ದೂರವಾದ, ಕನ್ನಡದ ಜೀವಂತ ಸಂಪರ್ಕ ಅಸಾಧ್ಯವಾದ ಜಾಗದಲ್ಲಿ ಕುಳಿತು ಕೇವಲ ಮಾತೃಭಾಷೆಯ ಪ್ರೀತಿಗಾಗಿ 'ಎಂದೆಂದಿಗೂ ಕನ್ನಡವಾಗಿ'ರುವ ಹಟದಲ್ಲಿ ರಚಿಸಿದ ಈ ಕತೆಗಳು ಕನ್ನಡ ಕಥಾ ಸಾಹಿತ್ಯಕ್ಕೆ ಕಡಲಾಚೆಯ ಕನ್ನಡಿಗರಿತ್ತ ಅಪೂರ್ವ ಕೊಡುಗೆಯಾಗಿದೆ" ಎಂದೂ ಉದ್ಗಾರವೆತ್ತಿದ್ದಾರೆ. ಕನ್ನಡದ ಬರಹಗಾರ್ತಿ ಸುನಂದಾ ಪ್ರಕಾಶ ಕಡಮೆ ಯವರ ಮಾತುಗಳು ಈ ಸಂಪುಟವನ್ನು ಚೆನ್ನಾಗಿ ವಿವರಿಸುತ್ತದೆ. "ಈ ಕೃತಿಯ ಮಾಲೆಯಲ್ಲಿ ಸೇರಿರುವ ಇಪ್ಪತ್ತೆರಡು ಹೊಚ್ಚಹೊಸ ಕತೆಗಳಲ್ಲಿ ಪ್ರತಿಯೊಂದು ಹೂವೂ ಬೇರೆ ಬೇರೆ ರೀತಿಯ ಬರವಣಿಗೆಯನ್ನು ಹೊಂದಿದೆ. ಓದಿ ಮುಗಿಸಿದ ಮೇಲೆ ಇಪ್ಪತ್ತೆರಡು ವಿವಿಧ ಮನಸ್ಸಿನೊಂದಿಗೆ ಒಡನಾಡಿದ, ಅಲ್ಲಿಯ ಪಾತ್ರಗಳೊಂದಿಗೆ ಮೌನ ಸಂವಾದ ನಡೆಸಿದ ಅನುಭವವಾಗುತ್ತದೆ."

**(೩) 'ನಗೆಗನ್ನಡಂ ಗೆಲ್ಗೆ!' (೨೦೦೭); ಅಭಿನವ ಪ್ರಕಾಶನ; ಸಂಪಾದಕರು: ಎಚ್. ಕೆ. ನಂಜುಂಡಸ್ವಾಮಿ ಮತ್ತು ಎಚ್. ವೈ. ರಾಜಗೋಪಾಲ್**

ಶತಾಯುಷಿ ಜಿ. ವೆಂಕಟಸುಬ್ಬಯ್ಯ ಅವರ ಅಭಿಪ್ರಾಯದಲ್ಲಿ–'ಈ ಗ್ರಂಥ ಒಂದು ಸಾಹಿತ್ಯಕ ಚರಿತ್ರೆ ಮತ್ತು ಸಾಹಿತ್ಯದ ಹಾಸ್ಯ ಸಂಕಲನ ಎರಡೂ ಒಂದೆಡೆ ಸೇರಿ ರಚಿಸುವ ಒಂದು ರಮ್ಯ ಲೋಕ! ಇದರಲ್ಲಿ ಲೇಖಕರ ಸಾಹಿತ್ಯದ ರಸಪ್ರಜ್ಞೆ ನಿರಂತರವಾಗಿ ಪ್ರಕಟಗೊಂಡಿದೆ...ಈ ಬೃಹತ್ ಸಂಕಲನ ಕನ್ನಡ ಸಾಹಿತ್ಯದಲ್ಲಿ ಒಂದು ಪ್ರಮುಖ ರೆಕಾರ್ಡ್ ಆಗಿರುತ್ತದೆ ಸದಾಕಾಲ.' ಸಾಹಿತಿ ಮತ್ತು ಪ್ರಸಿದ್ಧ ವಿಮರ್ಶಕ ಪ್ರೊ. ಎಚ್. ಎಸ್. ರಾಘವೇಂದ್ರ ರಾವ್ ಅವರು ಈ ಗ್ರಂಥದ ಬಗ್ಗೆ ನುಡಿಯುತ್ತಾ, "ಕತೆ, ಕವಿತೆ ಮತ್ತು ಕಾದಂಬರಿಗಳಿಗೆ ಅತಿಯಾದ ಮಹತ್ವಕೊಟ್ಟು, ಉಳಿದ ಪ್ರಕಾರಗಳನ್ನು ನಿರ್ಲಕ್ಷಿಸಿರುವ ಕರ್ನಾಟಕದ ನಮಗೆ ಬುದ್ಧಿಕಲಿಸುವಂತೆ, ಈ ಕೃತಿಯು ಪ್ರಕಟವಾಗಿದೆ... ಕನ್ನಡದ ಹಾಸ್ಯ ಸಾಹಿತ್ಯವನ್ನು ಬೆಳೆಸಿದ ಮಹನೀಯರ ಸಾಧನೆಗಳನ್ನು ಬಹುಮಟ್ಟಿಗೆ ಮೆಚ್ಚಿಗೆಯಿಂದ ಅಪರೂಪಕ್ಕೆ ವಿಮರ್ಶಾತ್ಮಕವಾಗಿ ನೋಡಿರುವ ಲೇಖನಗಳು ಈ ಪುಸ್ತಕದ ಮಹತ್ವವನ್ನು ಹೆಚ್ಚಿಸಿವೆ. ಕೈಲಾಸಂ, ರಾಜರತ್ನಂ, ರಾಶಿ, ಬಿ.ಜಿ.ಎಲ್.ಸ್ವಾಮಿ, ಅ.ರಾ.ಸೇ. ಅವರಂತಹ ಹಿರಿಯರಿಂದ ಮೊದಲಾಗಿ ದುಂಡಿರಾಜ್ ಅವರವರೆಗೆ ಈ ಲೇಖನಗಳ ಹರಹಿದೆ. ಕರಾವಳಿ, ಉತ್ತರ ಕರ್ನಾಟಕ, ಜಾನಪದ ಮುಂತಾದವಕ್ಕೆ ವಿಶಿಷ್ಟವಾದ ಹಾಸ್ಯ–ವಿನೋದಗಳ ಸಮೀಕ್ಷೆಯೂ ಇಲ್ಲಿ ನಡೆದಿದೆ. ಇದು ಉಪಯುಕ್ತವಾದ, ಸಂತೋಷ ಕೊಡುವ ಸಂಪುಟ. ನಗೆಗನ್ನಡವು ಇಲ್ಲಿ ಗೆದ್ದಿದೆ" ಎಂದು ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. "ಈ ಕೃತಿಯಲ್ಲಿ ನಗೆಗನ್ನಡ ನಲಿದಿದೆ, ವಿಜೃಂಭಿಸಿದೆ. ಕನ್ನಡದ ಹಾಸ್ಯಾಸಕ್ತರೆಲ್ಲರೂ

ಅಭಿಮಾನದಿಂದ ತಮ್ಮ ಮೆಚ್ಚಿನ ಹಿರಿ ಕಿರಿಯ ಹಾಸ್ಯಸಾಹಿತಿಗಳನ್ನು ಓದಿ ಅವರ ಕುರಿತು ಪ್ರಬುದ್ಧ ಪರಿಚಯವನ್ನು ಮಾಡಿಕೊಂಡು ಕೃತಾರ್ಥ ಭಾವ ತಾಳುವಂತೆ ಪುಸ್ತಕ ಹೊರಬಂದಿದೆ... ಹೊರನಾಡ ಬಂಧುಗಳ ಕನ್ನಡ ಪ್ರೇಮ ಅನುಕರಣೀಯ-ವಾದುದು'' ಎಂದು ಹೆಸರಾಂತ ಹಾಸ್ಯ ಲೇಖಕಿ ಭುವನೇಶ್ವರಿ ಹೆಗಡೆ ಅಭಿಪ್ರಾಯಪಟ್ಟಿದ್ದಾರೆ. 'ಅಪರಂಜಿ'ಯ ಸಂಪಾದಕರಾದ ಶಿವು, ನಿವೃತ್ತ ಇಂಗ್ಲಿಷ್ ಅಧ್ಯಾಪಕರಾದ ಶ್ರೀನಿವಾಸ ಉಡುಪ, ಲೇಖಕಿಯರಾದ ನೀಳಾದೇವಿ, ಎಚ್. ಎಸ್. ಪಾರ್ವತಿ ಮುಂತಾದವರೂ 'ನಗೆಗನ್ನಡಂ ಗೆಲ್ಗೆ!'ಯನ್ನು ಮನಸಾರೆ ಹಾಡಿ ಹೊಗಳಿದ್ದಾರೆ.

**(೪) 'ಕನ್ನಡ ಕಾದಂಬರಿ ಲೋಕದಲ್ಲಿ.....ಹೀಗೆ ಹಲವು...' (೨೦೦೯); ಅಭಿನವ, ಸಂಪಾದಕರು: ಮೈ. ಶ್ರೀ. ನಟರಾಜ**

ಇದು ಕನ್ನಡ ಸಾಹಿತ್ಯ ರಂಗದ ಪುಸ್ತಕ ಮಾಲೆಯ ನಾಲ್ಕನೆಯ ಹೂವು. ೨೦೦೯ರಲ್ಲಿ ಅಮೆರಿಕದ ರಾಜಧಾನಿ ಪ್ರದೇಶದ ಕಾವೇರಿ ಕನ್ನಡ ಸಂಘದ ಆಶ್ರಯದಲ್ಲಿ ನಡೆದ ನಾಲಕ್ಕನೆಯ ಅಧಿವೇಶನದ ಸಂದರ್ಭದಲ್ಲಿ ಪ್ರಕಟವಾದ ಪುಸ್ತಕ ಇದು. "ಇಪ್ಪತ್ತಕ್ಕೂ ಮಿಕ್ಕಿದ ಹಿರಿಕಿರಿಯ, ಪಳಗಿದ ಹಾಗೂ ಉದಯೋನ್ಮುಖ ಬರಹಗಾರರು, ಹವ್ಯಾಸಿಗರು ಹಾಗೂ ಹರಿತ ಓದುಗರ ಮೂಲಕ ಕನ್ನಡದ ಕೆಲ ಮುಖ್ಯ ಕಾದಂಬರಿಗಳ ಕುರಿತು ಇಲ್ಲಿ ಅವಲೋಕನವಿದೆ. ಒಮ್ಮೆಗೆ ಒಟ್ಟಿಗೆ ತೆರೆದುಕೊಂಡ ಈ ರೀತಿಯ ಕಾದಂಬರಿಯ ಅವಲೋಕನವೂ, ಚರ್ಚೆಯೂ ಕನ್ನಡ ಸಾಹಿತ್ಯದ ಮಟ್ಟಿಗೆ ಪ್ರಾಯಶಃ ಪ್ರಪ್ರಥಮ ಎನ್ನಿಸುತ್ತಿದೆ." ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿದ ಕನ್ನಡದ ಖ್ಯಾತ ಕತೆಗಾರ್ತಿ ವೈದೇಹಿ ಅವರು ಈ ಸ್ತುತ್ಯ ಪ್ರಯತ್ನವನ್ನು ಕುರಿತು "ಒಂದು ರೀತಿಯಲ್ಲಿ ಇದು ಗೋಳದ ಇನ್ನೊಂದು ಬದಿಯಲ್ಲಿ ನಡೆಯುತ್ತಿರುವ ಕನ್ನಡದ ಉಸಿರಾಟ, ಅಥವಾ ಪ್ರಾಣಾಯಾಮವೆಂದರೂ ಸರಿಯೆ." ಎಂದು ಉದ್ಗಾರ ತೆಗೆದಿದ್ದಾರೆ. ಅಮೆರಿಕದಲ್ಲಿ ನೆಲೆಸಿರುವ ಬರಹಗಾರರು ಅಭಿವ್ಯಕ್ತಿಗೊಳಿಸಿದ ಕನ್ನಡದ ಇಪ್ಪತ್ನಾಲ್ಕು ಕಾದಂಬರಿಗಳ ಅವಲೋಕನವನ್ನು 'ಸಹೃದಯ ವಿಮರ್ಶೆ' ಎಂಬುದಕ್ಕೆ ಒಂದು ಉತ್ತಮ ಮಾದರಿ ಎಂದಿದ್ದಾರೆ ವೈದೇಹಿ ಅವರು. ಕನ್ನಡದ ಉದ್ದಾಮ ಪಂಡಿತರಾದ ಜಿ. ಎಸ್. ಅಮೂರರ ವಿದ್ವತ್ಪೂರ್ಣ ಮುನ್ನುಡಿಯನ್ನೊಳಗೊಂಡ ಸುಮಾರು ನಾನೂರು ಪುಟಗಳ ಈ ಗ್ರಂಥಕ್ಕೆ ಕನ್ನಡದ ಹಲವಾರು ವಿದ್ವಾಂಸರ ಮೆಚ್ಚುಗೆ ದೊರೆತಿರುವುದು ಅಚ್ಚರಿಯ ಮಾತಲ್ಲ. "ತಮಗೆ ಕನ್ನಡದ ಮೂಲಕ ಒಡಲು ಸೇರಿದ ಸಾಹಿತ್ಯಾನುಭವವನ್ನು ತಮಗೂ ಇತರರಿಗೂ ಅನುಭವಿಸುವಂತೆ ಮಾಡುವ ಸ್ತುತ್ಯ ಯತ್ನವಿದು" ಎಂಬ ವೈದೇಹಿಯವರ ಮಾತುಗಳು ಕನ್ನಡ ಸಾಹಿತ್ಯ ರಂಗದ ಕಿರೀಟದ ಮಣಿಗಳಂತಿವೆ.

**(೫) 'ಮಥಿಸಿದಷ್ಟೂ ಮಾತು' (೨೦೧೧); ಪ್ರಕಾಶಕರು: ಕನ್ನಡ ಸಾಹಿತ್ಯರಂಗ ಮತ್ತು ಅಭಿನವ, ಸಂಪಾದಕರು: ತ್ರಿವೇಣಿ ಶ್ರೀನಿವಾಸ ರಾವ್ ಮತ್ತು ಎಂ. ಆರ್. ದತ್ತಾತ್ರಿ**

ಹಲವಾರು ಉತ್ತಮ ಲಲಿತ ಪ್ರಬಂಧಗಳ ಸಂಪುಟ ಈ "ಮಥಿಸಿದಷ್ಟೂ ಮಾತು" ಸಂಕಲನ. ಈ ಸಂಪುಟದ ಬಗ್ಗೆ ಪ್ರಸಿದ್ಧ ಬರಹಗಾರರಾದ ರಹಮತ್ ತರೀಕೆರೆ ಅವರು ಹೀಗೆ ಬರೆಯುತ್ತಾರೆ: "ಅಮೆರಿಕದ ಬಗ್ಗೆ ಅದರ ಹೊರಗಿರುವ ನಮ್ಮಂತಹವರಿಗೆ ಎರಡು ಅತಿರೇಕದ ಗ್ರಹಿಕೆಗಳಿದ್ದಂತಿವೆ. ಒಂದು ರೆಡ್ಇಂಡಿಯನ್ನರನ್ನು ಕೊಂದು ದೇಶವನ್ನು ಆಕ್ರಮಿಸಿಕೊಂಡು, ಗುಲಾಮಗಿರಿಯನ್ನು ಎಗ್ಗಿಲ್ಲದೆ ಮಾಡುತ್ತ, ತಮ್ಮ ಹಿತಾಸಕ್ತಿಗಳಿಗೆ ಯುದ್ಧಖೋರ ನೀತಿಯನ್ನು ಮಾಡುತ್ತಿರುವ ದೊಡ್ಡಣ್ಣ ಎಂಬುದು: ಇನ್ನೊಂದು ಅಮೆರಿಕವು ತಂತ್ರಜ್ಞಾನ ವಿಜ್ಞಾನದಲ್ಲಿ ಶಿಕ್ಷಣವುಳ್ಳ ಮಂದಿಗೆ ತೆರೆದಿರುವ ಬುವಿಯ ಮೇಲಣ ಸ್ವರ್ಗ ಎಂಬುದು. ಈ ಎರಡನೆಯ ಚಿತ್ರಕ್ಕೆ ಕಾರಣ, ಪ್ರವಾಸಿಗರಾಗಿ ಅಮೆರಿಕಕ್ಕೆ ಹೋಗಿಬಂದವರ ಪ್ರವಾಸ ಕಥನಗಳೂ ಇರಬೇಕು. ಆದರೆ ಈ ಎರಡಕ್ಕೂ ಹೊರತಾಗಿ, ಅಲ್ಲಿಯೇ ಬದುಕುತ್ತಿರುವ ಜನರ ಗ್ರಹಿಕೆಗಳು ಬೇರೆ ಬೇರೆ ತರಹ ಇವೆ ಎಂಬುದನ್ನು ಈ ಕೃತಿ ಸಾದರಪಡಿಸುತ್ತದೆ." "ಅಮೆರಿಕೆಯಲ್ಲಿ ಬಿಡಾರ ಹೂಡಿರುವ ಕನ್ನಡ ಪರಿಸರದ ಸ್ಥಾಯೀ ಮತ್ತು ಸಂಚಾರೀ ಭಾವಗಳ, ವೈವಿಧ್ಯಪೂರ್ಣ ಆಧುನಿಕ ಅಭಿವ್ಯಕ್ತಿಯ ವಿಶಿಷ್ಟ ಸಂಕಲನ ಇದು. ಕಾವ್ಯದ ಧ್ವನಿಶಕ್ತಿಯ ಜೊತೆಗೆ ಕಥನದ ಕುತೂಹಲವನ್ನೂ ಹೊಂದಿರುವ ಈ ಲಲಿತ ನಿಬಂಧಗಳು, ತಮ್ಮ ಅನುಭವಜನ್ಯ ವಿವರಗಳಲ್ಲಿ ಮೈದಾಳುತ್ತಲೇ, ಅದರಾಚೆಗೂ ಚಿಂತನಶೀಲವಾಗಿ ರೆಕ್ಕೆ ಬಿಚ್ಚುವ ರೀತಿ ಭಾವೋದ್ದೀಪಕವಾಗಿದೆ. ಹೊಸ ಆವರಣ, ಜೀವನ ಶೈಲಿಯ ವಿವರ, ಮಾಹಿತಿಗಳಷ್ಟೆ ಪ್ರಬಂಧವಾಗಲಾರವು. ವಿವರಗಳು ಅರಿವಿನೆಡೆಯ ಕಿಟಕಿಗಳೂ, ಕಾಲ್ದಾರಿಗಳೂ ಆದಾಗ ಮಾತ್ರ ಅದು ಸಾರ್ಥಕ ಸಲ್ಲಾಪ" ಎಂಬುದಾಗಿ ಪ್ರಸಿದ್ಧ ಸಾಹಿತಿ ಜಯಂತ ಕಾಯ್ಕಿಣಿ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

**(೬) 'ಬೇರು ಸೂರು' (೨೦೧೩); ವಸಂತ ಪ್ರಕಾಶನ; ಪ್ರಧಾನ ಸಂಪಾದಕ: ಗುರುಪ್ರಸಾದ್ ಕಾಗಿನೆಲೆ**

ವಲಸಿಗರಾಗಿ ಅಥವಾ ವಿದ್ಯಾರ್ಥಿಗಳಾಗಿ ಬಂದು ಅಮೆರಿಕವನ್ನು ತಮ್ಮ ದೇಶವನ್ನಾಗಿಸಿಕೊಂಡು ಅಮೆರಿಕದ ಬದುಕಿನ ಪಾಲಾಗುತ್ತಾ ಗಳಿಸಿದ ಅನುಭವಗಳು ಪಟ್ಟ ಸುಖಗಳು ನೊಂದ ನೋವುಗಳು ಇವೆಲ್ಲವನ್ನೂ ಒಳಗೊಂಡ ವೈವಿಧ್ಯಮಯ ಬರಹಗಳ ಸಂಕಲನವೇ 'ಬೇರು ಸೂರು'.

ಹಿರಿಯರು, ಕಿರಿಯರು, ಉದ್ಯೋಗಪತಿಗಳು, ವೈದ್ಯರು, ಇಂಜಿನಿಯರುಗಳು, ಗೃಹಿಣಿಯರು, ಶಿಕ್ಷಣತಜ್ಞರು–ಅಮೆರಿಕಾವನ್ನೇ ಕರ್ಮಭೂಮಿ ಮಾಡಿಕೊಂಡ ಅನೇಕರು ಅಮೆರಿಕಾ ಅವರಿಗೆ ಹೇಗೆ ಕಾಣಿಸಿದೆ ಎಂದು ಬರೆದಿದ್ದಾರೆ. ವಲಸೆ ಮೂಡಿಸುವ ಬೆರಗು ದೈನಿಕವಾಗುವ ರೂಪಾಂತರ ಕ್ರಿಯೆ ಇಲ್ಲಿನ ಪ್ರತಿ ಲೇಖನಗಳಲ್ಲಿಯೂ ಪಕ್ಕಾಗಿ ಹಾಸುಹೊಕ್ಕಿದೆ. ಆತ್ಮಚರಿತ್ರಕ ಕಥಾನಕಗಳಿಂದ ಹಿಡಿದು ಪ್ರತಿ ವಲಸಿಗನ ಅಸ್ಮಿತೆಯನ್ನು ಪ್ರಶ್ನಿಸುವ ಹಾಗೆಯೇ ಈ ವಲಸೆ ಎಂಬ ಪ್ರಕ್ರಿಯೆಯನ್ನೇ ವಿಶ್ಲೇಷಿಸುವ ಅನೇಕ ಅಧ್ಯಯನಯುಕ್ತ ಮೌಲಿಕ ಲೇಖನಗಳಿವೆ. ಈ ಪುಸ್ತಕದ ವೈಶಿಷ್ಟವೆಂದರೆ ಬಹಳಷ್ಟು ಲೇಖನಗಳು ವಲಸೆಗಾರರ ಹಳವಂಡ, ನಾಸ್ಟಾಲ್ಜಿಯಾವನ್ನು ಮೀರಿ ವಲಸೆಕ್ರಿಯೆಯ ಮೂಲವನ್ನು ಹುಡುಕುತ್ತಾ ಹೋಗುತ್ತವೆ. ವಲಸೆಯ ಸಾಂಸ್ಕೃತಿಕ ಹಾಗೂ ರಾಜಕೀಯ ಆಯಾಮಗಳನ್ನು ಈ ಪುಸ್ತಕ ಚರ್ಚಿಸುತ್ತದೆ.

**(೭) 'ಅನುವಾದ ಸಂವಾದ' ಮತ್ತು (೮) 'A little of taste of Kannada in Englsh' (೨೦೧೫); ಕನ್ನಡ ಸಾಹಿತ್ಯ ರಂಗ ಮತ್ತು ಅಭಿನವ, ಪ್ರಧಾನ ಸಂಪಾದಕ: ಶ್ರೀಕಾಂತ್ ಬಾಬು**

ಕನ್ನಡ ಸಾಹಿತ್ಯ ರಂಗದ ಏಳನೆಯ ಸಮ್ಮೇಳನದ ಮುಖ್ಯ ವಸ್ತು "ಅನುವಾದ". ಈ ಸಮ್ಮೇಳನದಲ್ಲಿ ಎರಡು ಪುಸ್ತಕಗಳನ್ನು ಪ್ರಕಟಿಸಲಾಯಿತು. ಮೊದಲನೆಯದು 'ಅನುವಾದ ಸಂವಾದ'– ಬೇರೆ ಭಾಷೆಗಳಿಂದ ಕನ್ನಡಕ್ಕೆ ಅನುವಾದಿತ ಕೃತಿಗಳು. ಎರಡನೆಯದು 'A little taste of Kannada in English' ಕನ್ನಡದಿಂದ ಇಂಗ್ಲಿಷಿಗೆ ಅನುವಾದಿತ ಕೃತಿಗಳು. ಅಮೆರಿಕಾದ ಕನ್ನಡಿಗರಿಗೆ ಇತರ ಸಂಸ್ಕೃತಿಗಳನ್ನು ಹತ್ತಿರದಿಂದ ನೋಡುವ ಅವಕಾಶವಿದೆ. ಈ ಸಂಸ್ಕೃತಿಗಳ ಸಂಪರ್ಕ ಮತ್ತು ಅವುಗಳ ಸಾಹಿತ್ಯವನ್ನು ಅಭ್ಯಾಸ ಮಾಡುವ ವಿಶೇಷ ಅವಕಾಶವನ್ನು ಉಪಯೋಗಿಸಿಕೊಂಡು ಇತರ ಭಾಷೆಗಳ ಉತ್ತಮ ಕೃತಿಗಳನ್ನು ಕನ್ನಡಕ್ಕೂ ಮತ್ತು ಕನ್ನಡದ ಆಯ್ದ ಕೃತಿಗಳನ್ನು ಇಂಗ್ಲಿಷಿಗೂ ಅನುವಾದಿಸಲು ವಿಪುಲವಾದ ಸೌಲಭ್ಯಗಳಿವೆ. 'ಮಾತೃಭಾಷೆಗೆ ಮತ್ತು ಕನ್ನಡಿಗರಿಗೆ ನಿರಾಯಾಸವಾಗಿ ಕೊಡಬಹುದಾದ ಒಳ್ಳೆಯ ಕೊಡುಗೆ' ಇದು ಎಂದು ನಂಬಿ ಸಾಹಿತ್ಯ ರಂಗದ ಬರಹಗಾರರು ಪ್ರಕಟಿಸಿದ ಗ್ರಂಥಗಳಿವು. ಮೊದಲ ಪುಸ್ತಕದಲ್ಲಿ ಒಟ್ಟು ೩೦ ಅನುವಾದಿತ ಲೇಖನಗಳನ್ನು ಕಥೆ, ಕಾವ್ಯ, ಪ್ರಬಂಧ ಮತ್ತು ನಾಟಕದ ವಿಭಾಗಗಳಲ್ಲಿ ಜೋಡಿಸಲಾಗಿದೆ. ಈ ಪ್ರಯೋಗದಲ್ಲಿ ವಿಶ್ವದ ಅನೇಕ ಶ್ರೇಷ್ಠ ಕೃತಿಗಳ ಅನುವಾದಗಳು ವಿವಿಧ ಭಾಷೆಗಳ ಮೂಲದಿಂದ ಹರಿದುಬಂದಿವೆ. ವೈವಿಧ್ಯಮಯವಾದ ಚಿಂತನೆಗಳು, ವಿಚಾರಗಳು ಅನುವಾದದ ಮೂಲಕ ಕನ್ನಡಿಗರಿಗೆ ಲಭ್ಯವಾಗಿವೆ. ಸಮ್ಮೇಳನದ ಮುಖ್ಯ ಅತಿಥಿಗಳಾಗಿದ್ದ ಪ್ರಧಾನ್ ಗುರುದತ್ತ ಅವರ ಅನುವಾದ ಸಾಹಿತ್ಯವನ್ನು ಕುರಿತಾದ ವಿದ್ವತ್ಪೂರ್ಣ ಭಾಷಣವೂ ಈ ಪುಸ್ತಕದಲ್ಲಿದೆ. ಎರಡನೆಯ ಪುಸ್ತಕ ಕನ್ನಡದ ಕತೆ, ಕವಿತೆ

ಪ್ರಬಂಧ ಮುಂತಾದುವನ್ನು ಕನ್ನಡೇತರರಿಗೆ ಆಂಗ್ಲಭಾಷೆಯ ಮೂಲಕ ತಲುಪಿಸುವ ಒಂದು ಅಪೂರ್ವ ಯತ್ನ. ಒಟ್ಟಿನಲ್ಲಿ ಈ ಎರಡು ಹೊತ್ತಗೆಗಳು ಕನ್ನಡ ಸಾಹಿತ್ಯ ರಂಗ ಕನ್ನಡಾಂಬೆಗೆ ಅರ್ಪಿಸಿದ ಎರಡು ಉತ್ತಮ ಪ್ರಯೋಗಗಳು.

**(೯) 'ರಂಗ ತರಂಗ' ಕನ್ನಡದ ಮುನ್ನಡೆಯ ಮಿಂಚುನೋಟ (೨೦೧೬); ಕನ್ನಡ ಸಾಹಿತ್ಯ ರಂಗ ಮತ್ತು ಅಭಿನವ, ಸಂಪಾದಕರು: ಮೈ. ಶ್ರೀ. ನಟರಾಜ, ನಾಗ ಐತಾಳ ಮತ್ತು ಜ್ಯೋತಿ ಮಹಾದೇವ್**

ಕರ್ನಾಟಕದ ಹೆಮ್ಮೆಯ ಕಬ್ಬನ್ ಉದ್ಯಾನವನದಲ್ಲಿರುವ ರಾಜ್ಯ ಕೇಂದ್ರ ಗ್ರಂಥಾಲಯ (ದಿವಾನ್ ಬಹದ್ದೂರ್ ಶೇಷಾದ್ರಿ ಅಯ್ಯರ್ ಮೆಮೋರಿಯಲ್ ಬಿಲ್ಡಿಂಗ್) ತನ್ನ ನೂರನೇ ವರ್ಷದ ಹಬ್ಬವನ್ನು ಸಂಭ್ರಮದಿಂದ ಆಚರಿಸಿದ ಸುಸಂದರ್ಭದಲ್ಲಿ ಅಮೆರಿಕದ ಕನ್ನಡಿಗರ ಪರವಾಗಿ ಕನ್ನಡ ಸಾಹಿತ್ಯ ರಂಗ ಅರ್ಪಿಸಿದ ಗೌರವದ ನುಡಿಕಾಣಿಕೆಯೇ ಈ ಗ್ರಂಥ ಕುಸುಮ. ಕಳೆದ ಏಳು ವಸಂತ ಸಾಹಿತ್ಯೋತ್ಸವದ ಸಂದರ್ಭದಲ್ಲಿ ಮುಖ್ಯ ಅತಿಥಿಗಳು ಮಾಡಿದ ಭಾಷಣಗಳ ಮಾಲಿಕೆಯೇ ಈ ಗ್ರಂಥದ ವಸ್ತು. ಈ ಗ್ರಂಥದ ಬಗ್ಗೆ ಪ್ರಸಿದ್ಧ ಬರಹಗಾರರೂ ವಿಮರ್ಶಕರೂ ಆದ ಎಲ್.ಎಸ್. ಶೇಷಗಿರಿರಾಯರು ಬೆನ್ನುಡಿಯಲ್ಲಿ ಹೀಗೆ ಬರೆಯುತ್ತಾರೆ: "ವಿವಿಧ ವಿಷಯಗಳ ಮೇಲೆ ಅಧಿಕಾರದಿಂದ ಮಾತಾಡಬಲ್ಲ ವಿದ್ವಾಂಸರ ಸಮೀಕ್ಷೆಗಳು ಕನ್ನಡ ನಾಡಿನಲ್ಲಿರುವ ಕನ್ನಡಿಗರಿಗೆ ಮತ್ತು ವಿದ್ಯಾರ್ಥಿಗಳಿಗೆ ಅಮೂಲ್ಯವಾಗಿವೆ. ಇವು ಕನ್ನಡ ಸಾಹಿತ್ಯದ ಸಾಧನೆಯನ್ನು ಚಿತ್ರಿಸುವುದಲ್ಲದೇ ನಾಡಿನ ಮುಂದಿರುವ ಸವಾಲುಗಳನ್ನು ಗಮನಿಸಿ ಕನ್ನಡದ ಮುನ್ನಡೆಗೆ ದಾರಿಯನ್ನು ಸಿದ್ಧಗೊಳಿಸುವ ಪ್ರಕಟಣೆಗಳು." ತಮ್ಮ ವಿದ್ವತ್ಪೂರ್ಣವಾದ ಮುನ್ನುಡಿಯನ್ನು ಮುಗಿಸುತ್ತಾ, ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಹೀಗೆ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ: "ಈ ಸಂಕಲನ ನಿಸ್ಸಂದೇಹವಾಗಿ ಒಂದು ಪರಾಮರ್ಶನ ಗ್ರಂಥ. ಕನ್ನಡ ಭಾಷೆ, ಸಾಹಿತ್ಯವನ್ನು ಒಟ್ಟಂದದಲ್ಲಿ ಹಿಡಿಯುವ ಪ್ರಯತ್ನ ಇಲ್ಲಿದೆ. ಚರಿತ್ರೆಯನ್ನು ಹೀಗೂ ರೂಪಿಸಬಹುದು ಎಂಬ ಸಾಧ್ಯತೆಯನ್ನು ಈ ಸಂಕಲನ ತೋರಿಸಿಕೊಡುತ್ತದೆ. ಕನ್ನಡ ಸಾಹಿತ್ಯರಂಗಕ್ಕೆ ಅಭಿನಂದನೆಗಳು."

~ ~ * ~ ~

## ಧ್ವನಿಸಾಂದ್ರಿಕೆಯಲ್ಲಿರುವ ಹಾಡುಗಳು

೧. **ಎನ್ನ ಕಾಯವ ದಂಡಿಗೆಯ ಮಾಡಯ್ಯ** – ಬಸವೇಶ್ವರ – ಓಂಕಾರನಾಥ ಹವಾಲ್ದಾರ್
೨. **ಹಸಿವಾದೊಡೆ** – ಅಕ್ಕ ಮಹಾದೇವಿ – ದಿವ್ಯಾ ಶೆಣೈ
೩. **ಮಣಿಯನೆಣಿಸಿ** – ಅಲ್ಲಮಪ್ರಭು – ಓಂಕಾರನಾಥ ಹವಾಲ್ದಾರ್
೪. **ನೀನಲ್ಲದಿನ್ನಾರು** –ಕುಮಾರವ್ಯಾಸ – ಡಾ. ನಾಗರಾಜರಾವ್ ಹವಾಲ್ದಾರ್
೫. **ಮಾಯದ ಸಂಸಾರ** – ಪುರಂದರದಾಸರು – ಡಾ. ನಾಗರಾಜರಾವ್ ಹವಾಲ್ದಾರ್
೬. **ನಾನು ನೀನು ಎನ್ನದಿರು** – ಕನಕದಾಸರು – ಡಾ. ನಾಗರಾಜರಾವ್ ಹವಾಲ್ದಾರ್
೭. **ತರವಲ್ಲ ತಗಿ ನಿನ್ನ ತಂಬೂರಿ** – ಶಿಶುನಾಳ ಷರೀಫರು – ಓಂಕಾರನಾಥ ಹವಾಲ್ದಾರ್
೮. **ಇದುವರೆಗೆ ನೀನೆನ್ನ** – ಕುವೆಂಪು – ಓಂಕಾರನಾಥ ಹವಾಲ್ದಾರ್
೯. **ದೇಹವೊಂದು ದೇವ ವೀಣೆ** – ದ.ರಾ. ಬೇಂದ್ರೆ – ಡಾ. ನಾಗರಾಜರಾವ್ ಹವಾಲ್ದಾರ್
೧೦. **ಕುಡಿ ಹಾಲನು ಬಾಲ** – ಪೆಂಡಕೂರು ರಾಮಕ್ಕ – ಓಂಕಾರನಾಥ ಹವಾಲ್ದಾರ್
೧೧. **ಕೃಷ್ಣನ ಕೊಳಲಿನ ಕರೆ** – ಪು.ತಿ. ನರಸಿಂಹಾಚಾರ್ – ದಿವ್ಯಾ ಶೆಣೈ (ಮೂಲ ಸ್ವರ ಸಂಯೋಜನೆ – ಡಾ. ದೊರೆಸ್ವಾಮಿ ಐಯ್ಯಂಗಾರ್)

**ವಾದ್ಯ ಸಹಕಾರ**
**ತಂಬೂರಿ** – ಆನಂದವರ್ಧಿನಿ ಹವಾಲ್ದಾರ್ ಹಾಗೂ ರೋಹಿಣಿ ಹವಾಲ್ದಾರ್
**ತಬಲಾ** – ಕೇದಾರನಾಥ ಹವಾಲ್ದಾರ್
**ರಿದಂ ಪ್ಯಾಡ್** – ಗೋಪಿ ಶ್ರವಣ್
**ಸಿತಾರ್** – ಶ್ರುತಿ ಕಾಮತ್
**ಕೊಳಲು** – ಶಿವಲಿಂಗ
**ತಾಳ** – ರಾಜೇಶ ಕುಲಕರ್ಣಿ
**ಸ್ವರ ಮಂಡಲ್** – ಸಮೀರ ಹವಾಲ್ದಾರ್

**ಧ್ವನಿ ಸಂಸ್ಕರಣ** – ಮಂಜುನಾಥ ನಾಯ್ಡು
**ಸಂಗೀತ ಸಂಯೋಜನೆ – ಡಾ. ನಾಗರಾಜ ಹವಾಲ್ದಾರ್**

**ಪ್ರಾಯೋಜಕರು:**
ಶೈಲಜ ಮತ್ತು ಗುಂಡುಶಂಕರ್
ನಳಿನಿ ಮತ್ತು ಸುಬ್ರಾಯ ಮೈಯ
ರೋಜಾ ಮತ್ತು ಮಂಜುನಾಥ ಪೆಂಡಕೂರು
ಕನ್ನಡ ಸಾಹಿತ್ಯ ರಂಗ

ಅಮೆರಿಕೆಯ ಕನ್ನಡಿಗರು "ಭಕ್ತಿ" ಎಂಬ ಪರಿಕಲ್ಪನೆಯ ಸುತ್ತ ವಸಂತೋತ್ಸವವನ್ನು ನಡೆಯಿಸುವುದು ಬಹಳ ಒಳನೋಟದ ಮಾತಾಗಿದೆ. ಭಕ್ತಿಯ ದರ್ಶನ ಎಂದರೆ ಅದು ಪರೋಕ್ಷವಾಗಿ ನಾಡು-ನುಡಿಯ ದರ್ಶನ. ನಾಡಿನ ಇತಿಹಾಸದ ದರ್ಶನ. ಭಕ್ತಿಯ ಸಂವೇದನೆಯಿಂದ ಒಂದು ಭಾಷೆ ಪಡೆಯುವ ಆಳ, ಬಾಗು, ಬಳುಕು, ಭಾವ ಶಕ್ತಿ ಇವೆಲ್ಲ ರೋಮಾಂಚಕವಾದ ಸಂಗತಿ... ಭಕ್ತಿಯು ಎಲ್ಲವನ್ನೂ ಕರಗಿಸಬಲ್ಲ ಬೆಂಕಿಯಾಗಿದೆ. ಕರಗದೆ ಹರಿಯುವುದಿಲ್ಲ. ಕರಗದೆ ಬೆಸೆಯುವುದಿಲ್ಲ. ಭಕ್ತಿಯು ಕರಗಿಸುವ, ಕರಗಿಸಿ ಹರಿಯಿಸುವ, ಹರಿಯಿಸಿ ಬೆಸೆಯುವಂತೆ ಮಾಡುವ ಹೃದಯದ ಪವಾಡವಾಗಿದೆ.

– ಲಕ್ಷ್ಮೀಶ ತೊಳ್ಪಾಡಿ

ಇಲ್ಲಿಯ ಪ್ರಬಂಧಗಳನ್ನು ಓದಿದಾಗ ಭಕ್ತಿ ಎಂಬುದು ಎಷ್ಟೊಂದು ರೀತಿಯ ಕಾವ್ಯಾನುಭವಗಳಿಗೆ ಕಾರಣವಾಗಿದೆಯೆಂದರಿವಾಗಿ ಆಶ್ಚರ್ಯವಾಯಿತು... ಸ್ವಯಂ ವಿಚಾರವಂತರೂ, ಪ್ರಬಂಧಕಾರರೂ ಆದ ಈ ಮೂವರು ಸಂಪಾದಿಕೆಯರು (ನಳಿನಿ ಮೈಯ, ಸುಮತಿ ಮುದ್ದೇನಹಳ್ಳಿ, ಕಾವ್ಯಾ ಕಡಮೆ ನಾಗರಕಟ್ಟೆ) ಒಂದು ವಸ್ತುವನ್ನು ಇಟ್ಟುಕೊಂಡು ವಿವಿಧ ಬರಹಗಾರರಿಂದ ಲೇಖನಗಳನ್ನು ಬರೆಯಿಸಿರುವುದು ಸಾಮಾನ್ಯ ಸಂಗತಿಯಲ್ಲ. ಇದೊಂದು ಸಾಂಸ್ಕೃತಿಕ ಸಾಹಸ.

– ಡಾ.ಜಿ.ಎಸ್. ಸಿದ್ಧಲಿಂಗಯ್ಯ



ಕನ್ನಡ ಸಾಹಿತ್ಯ ರಂಗ, ಯು.ಎಸ್.ಎ

ಮುಖಚಿತ್ರ ಚಿತ್ರ: ಗಂಜಂ